|| ಓಂ ||



ಶ್ರೀ ಜಗನ್ನಾಥದಾಸರಾಯರಿಂದ ವಿರಚಿತ

# ಶ್ರೀಮದ್ಹರಿಕಥಾಮೃತಸಾರ

**ಶ್ರೀಮತ್ಸತ್ಯಪರಾಯಣತೀರ್ಥ ಕರಕಮಲ ಸಂಜಾತ**

ಶ್ರೀಮತ್ಸಂಕರ್ಷಣ ಒಡೆಯರವರ

**ಮೂಲ-ಕನ್ನಡ ವ್ಯಾಖ್ಯಾನ ಸಹಿತ**

## ತೃತೀಯ ಸಂಪುಟ

೧೮ ರಿಂದ ೩೨ ಸಂಧಿಗಳು



ಶ್ರೀ ಹರಿವಿಠ್ಠಲ ಪ್ರಕಾಶನ

2–3, ಮೊದಲನೆಯ ಮುಖ್ಯ ರಸ್ತೆ

ನರಸಿಂಹರಾಜ ಕಾಲೊನಿ

ಬೆಂಗಳೂರು–560019

ಶ್ರೀ ಪೈಂಗಳನಾಮ ಸಂವತ್ಸರ ವೈಶಾಖ ಶುದ್ಧ ಚತುರ್ದಶಿ (2 ಮೇ, 1977)
ಶ್ರೀ ಲಕ್ಷ್ಮೀನರಸಿಂಹ ಜಯಂತಿ
ಗ್ರಂಥ ಸಮರ್ಪಣೆ:
ಪ್ರಥಮ ಮುದ್ರಣ: ಪ್ರತಿಗಳು, ೧೦೧೩



ಪ್ರತಿಗಳು ದೊರೆಯುವ ಸ್ಥಳ:
**ಶ್ರೀ ಹರಿವಿಠ್ಠಲ ಪ್ರಕಾಶನ**
2–3, ಮೊದಲನೆಯ ಮುಖ್ಯ ರಸ್ತೆ
ನರಸಿಂಹರಾಜ ಕಾಲೊನಿ, ಬೆಂಗಳೂರು–560019
(ದೂರವಾಣಿ: 63412)

ಬೆಲೆ: 30 ರೂ.



ಮುದ್ರಣ:
**ಪ್ರಭಾ ಮುದ್ರಣಾಲಯ**
22–A, ಡಾ|| ಡಿ. ವಿ. ಗುಂಡಪ್ಪ ರಸ್ತೆ
ಬಸವನಗುಡಿ, ಬೆಂಗಳೂರು–560004

# ಸ್ವಂತ ಮಾತು

ಶ್ರೀ ಜಗನ್ನಾಥದಾಸರಾಯರಿಂದ ವಿರಚಿತವಾದ ಶ್ರೀಮನ್ಮಧ್ವಶಾಸ್ತ್ರಪ್ರಮೇಯ ಗರ್ಭಿತವಾಗಿಯೂ, ಉಪಾಸಕರಿಗೆ ಪರಮೋಪಕಾರಿಯೂ, ಮಹಾಕಾವ್ಯವೆಂದು ಮಾಧ್ವ ವಾಙ್ಮಯದಲ್ಲಿ ಪ್ರಸಿದ್ಧವೂ ಆದ **'ಶ್ರೀಮದ್ಧರಿಕಥಾಮೃತಸಾರ'**ಕ್ಕೆ ಶ್ರೀಮದುತ್ತರಾದಿ ಮಠದ ಪರಂಪರೆಯಲ್ಲಿ ಬಂದ ಶ್ರೀ ಶ್ರೀ ಸತ್ಯಪರಾಯಣತೀರ್ಥಶ್ರೀಪಾದಂಗಳವರ ಕರಕಮಲ ಸಂಜಾತರಾದ ಪರಮವೈರಾಗ್ಯಶಿಖಾಮಣಿಗಳೆಂದು ಪ್ರಖ್ಯಾತರಾದ ಶ್ರೀ ಶ್ರೀ ಸಂಕರ್ಷಣ ತೀರ್ಥಶ್ರೀಪಾದಂಗಳವರು ಸುಮಾರು ನೂರು ವರ್ಷಗಳ ಹಿಂದೆ ಕನ್ನಡವ್ಯಾಖ್ಯಾನಗ್ರಂಥ ವನ್ನು ರಚಿಸಿದರು. ಕನ್ನಡಭಾಷೆಯಾದರೂ ತೆಲುಗುಲಿಪಿಯಲ್ಲಿ ಅರುವತ್ತು ವರ್ಷಗಳ ಹಿಂದೆ ಮದ್ರಾಸಿನಲ್ಲಿ ಅಚ್ಚಾಗಿ ಅತಿಶೀಘ್ರವಾಗಿ ಎಲ್ಲ ಪ್ರತಿಗಳೂ ಮಾರಾಟವಾದ್ದರಿಂದ ಜ್ಞಾನಪಿಪಾಸುಗಳಿಗೆ ಈ ಗ್ರಂಥವು ದೊರಕದೆ ಬಹಳ ನಿರಾಸೆಯಾಗಿತ್ತು. ಈಗಲೂ ಅಲ್ಲಲ್ಲಿ ಕೆಲವು ಮಹನೀಯರಲ್ಲಿ ಈ ಪ್ರತಿ ಉಪಲಬ್ಧವಿದ್ದರೂ ತೆಲುಗುಲಿಪಿಯಾದ್ದರಿಂದ ಆ ಲಿಪಿಯ ಪರಿಚಯವಿಲ್ಲದವರು ಗ್ರಂಥವನ್ನು ಓದಿ ಜ್ಞಾನ ಸಂಪಾದಿಸಲು ಬಹಳ ಶ್ರಮ ಪಡಬೇಕಾಗಿತ್ತು. ಈ ಅಪರೂಪ ವ್ಯಾಖ್ಯಾನಗ್ರಂಥವನ್ನು ಕೆಲವರು ಪೂರ್ಣವಾಗಿ ಹಸ್ತಪ್ರತಿ ಮಾಡಿಕೊಂಡು ಉಪಯೋಗಪಡೆಯುತ್ತಿದ್ದರು. ಅನೇಕರಿಗೆ ಈ ಗ್ರಂಥ ನೋಡಲೂ ಸಹ ದುರ್ಲಭವಾಗಿತ್ತು.

ನನ್ನ ಅಧ್ಯಾತ್ಮಗುರುಗಳಾದ ಶ್ರೀಹರಿವಿಠ್ಠಲರು, ಗ್ರಂಥವನ್ನು ಹಸ್ತಪ್ರತಿ ಮಾಡಿ ಕೊಂಡಿದ್ದ ಅವರ ಸ್ನೇಹಿತರೊಬ್ಬರ ಮನೆಗೆ ಹೋಗಿ ಅದನ್ನು ವ್ಯಾಸಂಗಮಾಡುತ್ತಿದ್ದ ರಂತೆ. ಅದರಲ್ಲಡಗಿರುವ ಅಮೂಲ್ಯವಿಷಯಗಳನ್ನು ನನ್ನ ಪೂಜ್ಯ ಗುರುಗಳಿಂದ ಆಗಾಗ್ಗೆ ಕೇಳುತ್ತಿದ್ದೆ. ಇದರಿಂದ ಪ್ರಚೋದಿತನಾಗಿ, ಶ್ರೀ ಸಂಕರ್ಷಣತೀರ್ಥರ ಈ ಗ್ರಂಥವನ್ನು ವ್ಯಾಸಂಗಮಾಡಿ ಜ್ಞಾನಸಂಪಾದಿಸಬೇಕೆಂಬ ಉತ್ಕಟ ಆಸಕ್ತಿಯಿದ್ದರೂ ಪ್ರತಿಗಳ ಅಭಾವ ದಿಂದ ನಿರಾಶನಾಗಿದ್ದೆ.

ಕಳೆದ ರಾಕ್ಷಸನಾಮಸಂವತ್ಸರದಲ್ಲಿ ನನ್ನ ಮಾನ್ಯ ಮಿತ್ರರಾದ ಶ್ರೀ ಎಸ್. ಬಿ. ಕೃಷ್ಣಮೂರ್ತಿಯವರು ತಮ್ಮಲ್ಲಿದ್ದ ತೆಲುಗು ಲಿಪಿಯ ಮುದ್ರಿತಗ್ರಂಥವನ್ನು ನನಗೆ ಓದಲು ಕೊಟ್ಟರು. ಅಂದು ನನಗಾದ ಆನಂದ ಅಷ್ಟಿಷ್ಟಲ್ಲ. ಮುಂದೆ ಒಂದು ವಾರದಲ್ಲೇ ಬಂದ ಶ್ರೀ ಜಗನ್ನಾಥದಾಸರಾಯರ ಪುಣ್ಯದಿನದಂದು ಗ್ರಂಥಪೂಜಾ ಮಾಡಿ ಹರಿವಾಣಸೇವೆ ಮಾಡಿದೆ. ದೈವಚಿತ್ತ ! ಗ್ರಂಥವನ್ನು ಕನ್ನಡಲಿಪಿಯಲ್ಲಿ ಮುದ್ರಣಮಾಡಬೇಕೆಂದು ಪ್ರೇರಣೆ ಯಾಯಿತು ! ಈ ಪ್ರೇರಣಾನುಸಾರ ಕೈಗೊಂಡ ಪ್ರಯತ್ನಕ್ಕೆ ದೈವಾನುಕೂಲವೂ ಎಷ್ಟರಮಟ್ಟಿಗೆ ಒದಗಿ ಬಂದಿತೆಂದರೆ, ನನ್ನ ತೀರ್ಥರೂಪರ ಸ್ನೇಹಿತರಾದ ದಿವಂಗತ ಹೆಚ್. ಶ್ಯಾಮರಾಯರು ಕನ್ನಡದಲ್ಲಿ ಹಸ್ತಪ್ರತಿ ಮಾಡಿಟ್ಟಿದ್ದನ್ನು ಅವರ ಪುತ್ರರಾದ ಶ್ರೀ ಹೆಚ್. ಎಸ್. ಶ್ರೀನಿವಾಸಮೂರ್ತಿಯವರು ಸಂತೋಷದಿಂದ ಮುದ್ರಣಕ್ಕೆ ಉಪ ಯೋಗಿಸಲು ಕೊಟ್ಟು, ಕಾರ್ಯ ಪ್ರಾರಂಭಮಾಡಲು ಸಹಾಯಕರಾದರು. ತೆಲುಗು ಮುದ್ರಿತಪ್ರತಿಗೂ ಕನ್ನಡ ಹಸ್ತಪ್ರತಿಗೂ ಹೋಲಿಸಿನೋಡಿ ಅವಶ್ಯಕತೆಯಿದ್ದಲ್ಲಿ ಪ್ರತಿಯನ್ನು ಶುದ್ಧಪಡಿಸಿಕೊಂಡು ಪೂಜಾ ಮಾಡಿ ಮಂಗಳಮಾಡಿದ ನಂತರ ಶ್ರೀ ನಳನಾಮಸಂವತ್ಸರದ ಅಕ್ಷಯ ತೃತೀಯಾ ಶುಭದಿನದಂದು ಮುದ್ರಣಕಾರ್ಯ ಪ್ರಾರಂಭವಾಯಿತು.

ಪ್ರಥಮಸಂಧಿಯಾದ ಮಂಗಳಾಚರಣೆಸಂಧಿಯ ಮುದ್ರಣ ಪೂರ್ಣವಾದಮೇಲೆ ಅದನ್ನು ಕರಂಪೂಂಡಿಯಲ್ಲಿ ಬೃಂದಾವನಸ್ಥರಾಗಿರುವ ಶ್ರೀ ಶ್ರೀ ಸಂಕರ್ಷಣತೀರ್ಥರಿಗೂ ಮತ್ತು ಶ್ರೀ ಮಾನವೀಕ್ಷೇತ್ರದಲ್ಲಿ ಒಂದಂಶದಿಂದ ಸ್ತಂಭದಲ್ಲಿರುವ ಶ್ರೀ ಜಗನ್ನಾಥದಾಸರಿಗೂ ಸಮರ್ಪಿಸಿ, ಕೈಗೊಂಡ ಕಾರ್ಯವು ಯಶಸ್ವಿಯಾಗಿ ಪೂರ್ಣಗೊಳ್ಳಲು ಅವರುಗಳ ಅನುಗ್ರಹ, ಆಶೀರ್ವಾದವನ್ನು ಕೋರಿ ಮುದ್ರಣಕಾರ್ಯವನ್ನು ಮುಂದುವರಿಸಿದೆ.

ಹಿಂದಿನ ರಾಕ್ಷಸನಾಮಸಂವತ್ಸರದಲ್ಲಿಯೇ ತೆಲುಗುಪ್ರತಿಗಳ ಮುದ್ರಣಕಾರ್ಯವು ಪೂರ್ಣಗೊಂಡಿದ್ದು, ಪುನರಾವೃತ್ತಿಹೊಂದಿದ ಈ ರಾಕ್ಷಸನಾಮ ಸಂವತ್ಸರದಲ್ಲಿಯೇ ನಮ್ಮ ಶ್ರೀ ಹರಿವಿಠ್ಠಲ ಪ್ರಕಾಶನದ ಮೂಲಕ ಕನ್ನಡ ಲಿಪಿಯಲ್ಲಿ ಗ್ರಂಥವನ್ನು ಮುದ್ರಿಸಲು ಪ್ರೇರಣೆಯಾದುದನ್ನು ಗಮನಿಸಿದಾಗ ಇದು ಶ್ರೀ ಸಂಕರ್ಷಣತೀರ್ಥರ ವ್ಯಾಖ್ಯಾನದ ಪುನರ್ಜನ್ಮವೆಂದರೆ ಅತಿಶಯೋಕ್ತಿಯಾಗಲಾರದು. ಶ್ರೀ ಹರಿವಾಯುಗಳು ನನ್ನಲ್ಲಿ ನಿಂತು ಪ್ರೇರಿಸಿ ಪೂರ್ಣಗೊಳಿಸಿದ ಕಾರ್ಯವೇ ಹೊರ್ತು ಇದರಲ್ಲಿ ನನ್ನ ಸ್ವಂತದ್ದು ಸ್ವಲ್ಪವೂ ಇಲ್ಲ.

ನನ್ನ ಅಧ್ಯಾತ್ಮಗುರುಗಳಾದ ಶ್ರೀ ಹರಿವಿಠ್ಠಲರು ೧೦೮ ಮಂದಿ ತಮ್ಮ ಶಿಷ್ಯರಿಂದ, ತಲಾ ೧೦೮ ರೂ.ಗಳನ್ನು ಮಾತ್ರವೇ ತೆಗೆದುಕೊಂಡು ಕರ್ಜಗಿ ಸ್ಟೇಷನ್ ಬಳಿ ಶ್ರೀ ಹರಿವಿಠ್ಠಲ ಆಶ್ರಮವನ್ನು ಸ್ಥಾಪಿಸಿ, ಅಲ್ಲಿ ಶ್ರೀ ರಾಘವೇಂದ್ರಸ್ವಾಮಿಗಳ ಬೃಂದಾವನವನ್ನು ಪ್ರತಿಷ್ಠೆಮಾಡಿದ್ದಾರೆ. ನಾನೂ ಸಹ ನನ್ನ ಗುರುಗಳ ಮೇಲ್ಪಂಕ್ತಿಯನ್ನನುಸರಿಸಿ ೧೦೮ ಜನ ಚಂದಾದಾರರಿಂದ ತಲಾ ೧೦೮ ರೂ.ಗಳನ್ನು ಕೋರಿ ಮುದ್ರಣಕಾರ್ಯ ಪ್ರಾರಂಭಿಸಲು ಪ್ರಯತ್ನಿಸಿದಾಗ ೧೨೦ ಮಂದಿ ಚಂದಾದಾರರು ಮುಂದೆ ಬಂದು ಹಣ ಒದಗಿಸಿಕೊಟ್ಟರು. ಇದರಿಂದ ಪ್ರಥಮಹಂತದ ಹಣದ ಅವಶ್ಯಕತೆಯು ಪೂರ್ಣಗೊಂಡು, ಸಾಮಾನ್ಯಸದಸ್ಯರಾಗಿ ತಲಾ ೨೫ ರೂ. ಕೊಟ್ಟಿರುವ ಚಂದಾದಾರರ ಹಣದಿಂದ ಯಾವ ಅಡೆತಡೆಗಳೂ ಇಲ್ಲದೆ ಮುದ್ರಣಕಾರ್ಯ ಮುಂದುವರಿದು ಪರಿಸಮಾಪ್ತಿಗೊಂಡಿದೆ. ಮಹಾಪೋಷಕರಾಗಿ ೧೦೮ ರೂ.ಗಳನ್ನು ಕೊಟ್ಟು ಸಹಾಯಮಾಡಿದ ಚಂದಾದಾರರಿಗೆ ಸಲ್ಲಬೇಕಾದ ಗ್ರಂಥದ ಮೌಲ್ಯ ಕಳೆದು ಉಳಿದ ಹಣಕ್ಕೆ ಸಮಮೌಲ್ಯದ ಶ್ರೀದಾಸರಾಯರ ಉಪಾಸನಾಮೂರ್ತಿಯಾದ ಶ್ರೀಲಕ್ಷ್ಮೀನರಸಿಂಹದೇವರ ಭಾವಚಿತ್ರ ಮುದ್ರಿತ ಪ್ರತೀಕವನ್ನು ಶ್ರೀ ಅಹೋಬಿಲದ ಶ್ರೀ ನರಸಿಂಹದೇವರಿಗೆ ಸಮರ್ಪಣೆಮಾಡಿ ಶ್ರೀಹರಿಗುರುಗಳ ವಿಶೇಷ ಅನುಗ್ರಹದ ಕುರುಹಾಗಿ ಅವರಿಗೆ ಕೊಡಲಾಗಿದೆ. ಮಹಾಪೋಷಕರಾದವರಿಗೂ, ಸಾಮಾನ್ಯಸದಸ್ಯರಾದವರಿಗೂ ಆಯುರಾರೋಗ್ಯಐಶ್ವರ್ಯಾದಿಗಳನ್ನೂ, ಜ್ಞಾನ, ಭಕ್ತಿ, ವೈರಾಗ್ಯಗಳನ್ನೂ ಕೊಟ್ಟು ಅನುಗ್ರಹಿಸಲಿ ಎಂದು ಶ್ರೀ ಹರಿವಾಯುಗಳಲ್ಲಿ ಸಾಷ್ಟಾಂಗ ಪ್ರಣಾಮಪೂರ್ವಕ ಪ್ರಾರ್ಥಿಸುವ,

ಶ್ರೀ ಪಿಂಗಳನಾಮ ಸಂವತ್ಸರದ
ವೈಶಾಖಶುದ್ಧ ಚತುರ್ದಶಿ
ಶ್ರೀಲಕ್ಷ್ಮೀನರಸಿಂಹ ಜಯಂತಿ
2-5-1977

**ರಾಣ್ಯ ರಾಜಾರಾವ್**
ಮೊದಲನೇ ಮುಖ್ಯರಸ್ತೆ, ನರಸಿಂಹರಾಜಾ ಕಾಲೋನಿ,
ಬೆಂಗಳೂರು-560019

# ಕೃತಜ್ಞತೆ

ಶ್ರೀ ಹರಿಕಥಾಮೃತಸಾರಕ್ಕೆ ಶ್ರೀ ಶ್ರೀ ಸಂಕರ್ಷಣತೀರ್ಥರ ಕನ್ನಡಲಿಪಿ ಪ್ರಕಾಶನದ ಕಾರ್ಯಕ್ರಮವು ಈ ಮೂರನೇ ಸಂಚಿಕೆಯ ಬಿಡುಗಡೆಯೊಂದಿಗೆ ಮುಕ್ತಾಯವಾಗುತ್ತಿರುವುದಕ್ಕೆ ಹರ್ಷಿಸುತ್ತೇವೆ. ಈ ಕಾರ್ಯಕ್ರಮವು ವೈಯಕ್ತಿಕವಾಗಿರದೆ ಅನೇಕಮಂದಿ ಅಭಿಮಾನಿಗಳ ಸಾಮೂಹಿಕ ಸಹಾಯ, ಸಹಕಾರಗಳಿಂದ ಅತ್ಯಂತ ಯಶಸ್ವಿಯಾಗಿ ಪೂರ್ಣಗೊಂಡಿದೆ. ಈ ಮಹನೀಯರು ಕೇವಲ ಹರಿಗುರುಗಳ ಸೇವಾದೃಷ್ಟಿಯಿಂದ ಉದಾರವಾಗಿ ನೀಡಿದ ನೆರವನ್ನು ಈ ಶುಭಸಂದರ್ಭದಲ್ಲಿ ನೆನೆಸಿ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಲ್ಲಿಸುವುದು ನಮ್ಮ ಆದ್ಯ ಕರ್ತವ್ಯ. ಈ ಗ್ರಂಥದ ಪ್ರಥಮಸಂಚಿಕೆಯ ಪ್ರಕಾಶನಾವಸರದಲ್ಲೇ ಕೃತಜ್ಞತೆಯನ್ನು ಸಲ್ಲಿಸುವ ಉದ್ದೇಶವಿದ್ದಿತಾದರೂ ಇನ್ನೂ ಎರಡು ಸಂಚಿಕೆಗಳು ಹೊರಬರಲಿದ್ದು ಪ್ರಕಾಶನ ಪೂರ್ಣಗೊಳ್ಳಲು ಸಹಾಯಕರಾದ ಮತ್ತು ಆಗುವ ಎಲ್ಲಾ ಅಭಿಮಾನಿಗಳನ್ನೂ ಸ್ಮರಿಸುವ ಸದುದ್ದೇಶದಿಂದ ಈಗ ಆ ಕರ್ತವ್ಯವನ್ನು ನೆರವೇರಿಸುತ್ತಿದ್ದೇವೆ.

ಶ್ರೀಮಾನ್ ಹೆಚ್. ಎಸ್. ಶ್ರೀನಿವಾಸಮೂರ್ತಿ (ನ್ಯಾಷನಲ್ ಹೈಸ್ಕೂಲಿನ ಅಧ್ಯಾಪಕರು, ಎ್. ಆರ್. ಕಾಲೋನಿ, ಬೆಂಗಳೂರು) ಇವರು ತಮ್ಮ ತೀರ್ಥರೂಪರಾದ ದಿವಂಗತ ಹೆಚ್. ಶ್ಯಾಮರಾಯರು ಬರೆದಿಟ್ಟಿದ್ದ ಕನ್ನಡ ಹಸ್ತಪ್ರತಿಯನ್ನು ಕೊಟ್ಟು, ಆಗಾಗ ತಮ್ಮ ಅಮೂಲ್ಯಸಲಹೆಗಳನ್ನು ಇತ್ತು ನೆರವಾಗಿದ್ದಾರೆ.

ಶ್ರೀಯುತರುಗಳಾದ ಎಸ್.ಬಿ. ಕೃಷ್ಣಮೂರ್ತಿಗಳು (ಡಿ.ವಿ.ಜಿ. ರಸ್ತೆ, ಬೆಂಗಳೂರು–4) ಮತ್ತು ಎ್. ವಿ. ಕೃಷ್ಣಮೂರ್ತಿಗಳು (ಗವೀಪುರಂ ಬಡಾವಣೆ, ಬೆಂಗಳೂರು–19) ಇವರು ತಮ್ಮಲ್ಲಿದ್ದ ಶ್ರೀ ಶ್ರೀ ಸಂಕರ್ಷಣತೀರ್ಥರ ತೆಲುಗು ಲಿಪಿಯ ಮುದ್ರಿತಪ್ರತಿಗಳನ್ನು ನಮ್ಮ ಉಪಯೋಗಕ್ಕೆ ಕೊಡುವುದರ ಮೂಲಕ ವಿಶೇಷವಾದ ಸಹಾಯವನ್ನು ಮಾಡಿರುತ್ತಾರೆ.

ಶ್ರೀ ಸಿ. ಕೃಷ್ಣರಾಯರು (ರಮಾಕಾಂತವಿಠಲದಾಸರು, ನಿವೃತ್ತ ಸ್ಟೇಷನ್ ಮಾಸ್ಟರ್, ಹನುಮಂತನಗರ, ಬೆಂಗಳೂರು–19), ಶ್ರೀ ಸಿ. ನಾರಾಯಣರಾಯರು, (ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ಬೆಂಗಳೂರು ಕಂಟೋನ್ಮೆಂಟ್) ಮತ್ತು ಶ್ರೀ ಸೇತುಮಾಧವರಾಯರು (ಕಾರ್ಯದರ್ಶಿಗಳು, ಮಾಧ್ವಸಂಘ, ಮಲ್ಲೇಶ್ವರ) ಈ ಮಹನೀಯರು ಶ್ರೀ ಪದ್ಮನಾಭದಾಸರ ಕನ್ನಡ ವ್ಯಾಖ್ಯಾನದ ಪ್ರತಿಗಳನ್ನು ಕೊಟ್ಟು ಸಹಾಯ ಮಾಡಿದ್ದಾರೆ.

ಶ್ರೀ ವಿ. ಎಸ್. ಶ್ರೀನಿವಾಸಮೂರ್ತಿಗಳು (ಶ್ರೀ ಸೀತಾರಾಮವಿಠಲದಾಸರು), ಎ್. ಆರ್. ಕಾಲೋನಿ, ಬೆಂಗಳೂರು, ಇವರು ಕೊಟ್ಟಿರುವ ಕಮಲಾಪತಿದಾಸರಿಂದ ವಿರಚಿತವಾದ ಹರಿಕಥಾಮೃತಸಾರದ ವಾಖ್ಯಾನದ ಸಂಸ್ಕೃತಲಿಪಿಯಲ್ಲಿರುವ ಪ್ರತಿಯ ಉಪಯೋಗವನ್ನು ಸಾಕಷ್ಟು ಪಡೆದಿದ್ದೇವೆ.

ಶ್ರೀ ಸೇತುಮಾಧವಾಚಾರ್ಯರು (ಸಂಯುಕ್ತಕರ್ನಾಟಕ ಆಫೀಸು, ಬೆಂಗಳೂರು) ಕನಿಷ್ಠಪಕ್ಷ ಆರು ತಿಂಗಳುಗಳು ಪ್ರತಿದಿನವೂ ತಮ್ಮ ಅಮೂಲ್ಯವಾದ ಕಾಲದಲ್ಲಿ ಕೆಲವು

ಗಂಟೆಗಳ ಕಾಲವನ್ನು ತೆಲಗುಲಿಪಿಯ ಮುದ್ರಿತಪ್ರತಿಗೂ ಕನ್ನಡಲಿಪಿಯ ಹಸ್ತಪ್ರತಿಗೂ ಹೋಲಿಸಿನೋಡಲು ವಿನಿಯೋಗಿಸಿ ಈ ಪವಿತ್ರಕಾರ್ಯದಲ್ಲಿ ಪಾಲುಗೊಂಡಿದ್ದಾರೆ.

"ಶ್ರೀ ಜಗನ್ನಾಥದಾಸರಾಯರ ಜೀವನಚರಿತ್ರೆ" (ಶ್ರೀ ಸತ್ಯನಾರಾಯಣಾಚಾರ್, ಮಾಗಡಿ ರೋಡ್, ಬೆಂಗಳೂರು, ಇವರು ರಚಿಸಿ ಮುದ್ರಿಸಿದ್ದು) ಎಂಬ ಪುಸ್ತಕವನ್ನು ಶ್ರೀ ಧೀರೇಂದ್ರಾಚಾರ್ಯರು ನಮ್ಮ ಉಪಯೋಗಕ್ಕೆ ಕೊಟ್ಟಿರುತ್ತಾರೆ.

ಈ ಕೆಳಗೆ ಕಂಡ ಮಹನೀಯರು ಗ್ರಂಥದಲ್ಲಿ ಮುದ್ರಿತವಾಗಿರುವ ವಿವಿಧ ಭಾವಚಿತ್ರಗಳನ್ನೂ, ಪಡಿಯಚ್ಚುಗಳನ್ನೂ ಎರವಲು ಕೊಟ್ಟು ಸಹಾಯಮಾಡಿದ್ದಾರೆ :—

ಶ್ರೀ ಧೀರೇಂದ್ರಾಚಾರ್ಯರು (ಅರ್ಚಕರು, ಮಾನ್ವಿಕ್ಷೇತ್ರ) — ಶ್ರೀ ಜಗನ್ನಾಥದಾಸರ ಸ್ತಂಭ.

ಶ್ರೀ ಅನಂತ ತಡಸರು (ಪೂರ್ಣಪ್ರಜ್ಞವಿದ್ಯಾಪೀಠ, ಬೆಂಗಳೂರು) —ಉಡುಪಿ ಶ್ರೀಕೃಷ್ಣ, ಶ್ರೀಪಾದರಾಜರ ವೃಂದಾವನ, ಶ್ರೀ ವ್ಯಾಸರಾಜರ ವೃಂದಾವನ, ಶ್ರೀ ಪುರಂದರದಾಸರು, ಶ್ರೀ ವಿಜಯದಾಸರ ತಂಬೂರಿ ಮತ್ತು ಗೋಪಾಲಕೃಷ್ಣದೇವರು, ಗೋಪಾಲದಾಸರ ತಂಬೂರಿ ಮತ್ತು ಅವರು ಪೂಜಿಸುತ್ತಿದ್ದ ದೇವರು.

ಶ್ರೀ ಎಂ. ವಿ. ರಾಜಾರಾಯರು, ಜಯನಗರ — ಶ್ರೀ ವಾದಿರಾಜರ ವೃಂದಾವನ.

ಬೆಂಗಳೂರಿನಲ್ಲಿರುವ ದಿವಾನ್ ಕೃಷ್ಣಮೂರ್ತಿಗಳಿಂದ ಕಟ್ಟಿಸಲ್ಪಟ್ಟ ಪ್ರಾಣದೇವರ ಗುಡಿ ಅರ್ಚಕರು —ಶ್ರೀ ಬದರಿಕಾಶ್ರಮದಲ್ಲಿ ವೇದವ್ಯಾಸದೇವರು ಮತ್ತು ಶ್ರೀಮದಾಚಾರ್ಯರು.

ಕಲ್ಯಾಣಿ ಸತ್ಯನಾರಾಯಣರಾಯರು (ಕಲ್ಯಾಣಿ ರಾಘವೇಂದ್ರಸ್ವಾಮಿಗಳ ಮಠ) ಎನ್.ಆರ್. ಕಾಲೋನಿ, ಬೆಂಗಳೂರು) — ಶ್ರೀ ಗೋಪಾಲದಾಸರು ಮತ್ತು ಶ್ರೀ ಜಗನ್ನಾಥದಾಸರು.

ಡಾ|| ಬಿ. ವಿ. ರಾಘವೇಂದ್ರರಾಯರು (ಗಾಂಧಿಬಜಾರ್) — ಶ್ರೀ ಹಯಗ್ರೀವದೇವರು ಮತ್ತು ಶ್ರೀ ವಾದಿರಾಜಸ್ವಾಮಿಗಳು.

ಶ್ರೀ ಸೋಸಲೆ ನಾರಾಯಣಾಚಾರ್ಯರು (ರಾಯರಗುಡಿ, ಮಾಡಲ್‌ಹೌಸ್ ರಸ್ತೆ) — ಶ್ರೀ ವ್ಯಾಸರಾಜಸ್ವಾಮಿಗಳ ದರ್ಬಾರು.

ಶ್ರೀ ಲಕ್ಷ್ಮಣರಾಯರು, ಆರಣಿ — ಶ್ರೀ ಸಂಕರ್ಷಣತೀರ್ಥರ ವೃಂದಾವನ.

ಶ್ರೀ ಭೀಮಸೇನಾಚಾರ್ಯರು, ಅರ್ಚಕರು (ಶ್ರೀ ನರಸಿಂಹದೇವರ ಗುಡಿ, ಬಳ್ಳಾರಿ) — ಶ್ರೀ ಸತ್ಯವರತೀರ್ಥರ ಮತ್ತು ಶ್ರೀ ಸತ್ಯಪರಾಯಣತೀರ್ಥರ ವೃಂದಾವನ.

ಶ್ರೀ ಡಿ. ಭೀಮರಾಯರು (ಶಿವಮೊಗ್ಗ) (ಸೀನಿಯರ್ ಬ್ರಾಂಚ್ ಮ್ಯಾನೇಜರ್, L.I.C.) — ಸತ್ಯಧರ್ಮತೀರ್ಥರ ವೃಂದಾವನ.

ಗಾಂಧಿಬಜಾರ್‌ನಲ್ಲಿರುವ ಈಶ್ವರನ ಗುಡಿಯ ರಾಮಾಶಾಸ್ತ್ರಿಗಳು — ಶಿವಪಂಚಾಯತನದ ಭಾವಚಿತ್ರ.

ಈ ಕೆಳಗೆ ಹೆಸರಿಸಿರುವ ಮಹನೀಯರು ನಮ್ಮ ಪ್ರಕಾಶನಕ್ಕೆ ಚಂದಾದಾರರನ್ನು ಒದಗಿಸಿಕೊಟ್ಟು ತಮ್ಮ ಅಮೂಲ್ಯವಾದ ಸೇವೆ ಮಾಡಿದ್ದಾರೆ.

ಶ್ರೀಯುತರುಗಳಾದ—
ಅನಂತ ತಡಸರು, ಪೂರ್ಣಪ್ರಜ್ಞ ವಿದ್ಯಾಪೀಠ, ಬೆಂಗಳೂರು.
ಹೆಚ್. ಎಸ್. ಶ್ರೀನಿವಾಸಮೂರ್ತಿಗಳು, ಅಧ್ಯಾಪಕರು, ನ್ಯಾಷನಲ್ ಹೈಸ್ಕೂಲು, ಬೆಂಗಳೂರು.
ಆರ್. ಎಸ್. ಬುರ್ಲಿ, ಹೈಕೋರ್ಟ್, ಬೆಂಗಳೂರು.
ಜಿ. ಎಸ್. ಜಾಲವಾಡಿ
ಬಿ. ಎಸ್. ಗುರುರಾಯರು, ನಿವೃತ್ತ ಹೈಸ್ಕೂಲ್ ಹೆಡ್‌ಮಾಸ್ಟರ್.
ಎಸ್. ಜಿ. ರಾಮಚಂದ್ರರಾಯರು, ರೈಲ್ವೆ ಗಾರ್ಡ್, ರೈಲ್ವೆ ಕಾಲೋನಿ, ಯಶವಂತಪುರ.
ಕೆ. ಪದ್ಮನಾಭರಾಯರು, ಸಮೀರಪುರ ಬಡಾವಣೆ, ಕೆಂಪೇಗೌಡನಗರ, ಬೆಂಗಳೂರು.
ಡಿ. ಭೀಮರಾಯರು, ಸೀನಿಯರ್ ಬ್ರ್ಯಾಂಚ್ ಮ್ಯಾನೇಜರ್, L.I.C., ಶಿವಮೊಗ್ಗ.
ಸಿ. ನಾರಾಯಣರಾಯರು, ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ಬೆಂಗಳೂರು ಕಂಟೋನ್ಮೆಂಟ್
ಆರ್. ವೆಂಕಟರಮಣರಾವ್, ಟೆಲಿಫೋನ್ ಎಕ್ಸ್‌ಛೇಂಜ್, ಬೆಂಗಳೂರು.
ಡಿ. ಸೇತುಮಾಧವರಾಯರು, ಕಾರ್ಯದರ್ಶಿ, ಮಾಧ್ವ ಸಂಘ, ಮಲ್ಲೇಶ್ವರ, ಬೆಂಗಳೂರು.
ಎ. ಕೃಷ್ಣಮೂರ್ತಿಗಳು, ಇಂಡಿಯನ್ ಪ್ಲೈವುಡ್ ಇಂಡಸ್ಟ್ರೀಸ್, ಬೆಂಗಳೂರು.
ಕಲ್ಲಯ್ಯನವರು, ಎ.ಪಿ.ಎಸ್. ಕಾಲೇಜು, ಬೆಂಗಳೂರು.
ಯು. ಎಸ್. ರಾಘವೇಂದ್ರರಾಯರು, ಡಿ.ಬಿ.ಆರ್. ಮಿಲ್ಸ್, ಹೈದರಾಬಾದ್.
ಕೆ. ರಘುಪತಿರಾಯರು, ಮ್ಯಾನೇಜರ್, ಹೊಟೇಲ್ ದಾಸಪ್ರಕಾಶ್, ಮದ್ರಾಸು.
ಗೋವಿಂದರಾಯರು, ಮಾನವೀಕ್ಷೇತ್ರ.
ಎಂ. ಕೆ. ಭಾರತೀರಮಣಾಚಾರ್ಯರು, ಹನುಮಂತನಗರ.
ಡಾ|| ಕೆ. ಗೋಕುಲ್‌ನಾಥ್, ಅಧ್ಯಾಪಕರು, ಆಚಾರ್ಯ ಪಾಠಶಾಲೆ, ಬೆಂಗಳೂರು–19.

ಈ ಕೆಳಕಂಡ ಮಹನೀಯರು ತಮ್ಮ ತಮ್ಮ ಸ್ಥಳಗಳಲ್ಲಿ ಗ್ರಂಥದ ಸಂಪುಟಗಳನ್ನು ಬಿಡುಗಡೆಮಾಡಿದ ದಿನ, ವಿಶೇಷ ಕಾರ್ಯಕ್ರಮವನ್ನು ಇಟ್ಟುಕೊಂಡು ಆಯಾ ಊರಿನ ಚಂದಾದಾರರಿಗೆ ಗ್ರಂಥ ವಿತರಣೆ ಮಾಡುವ ಮೂಲಕ ತಮ್ಮಗಳ ಅಪೂರ್ವ ಸಹಕಾರ ವನ್ನಿತ್ತಿದ್ದಾರೆ.

ಶ್ರೀಯುತರುಗಳಾದ—
ಕೆ. ಜಿ. ಹಲಸಗಿಯವರು, ಕಾರ್ಯದರ್ಶಿ, ವಿಠ್ಠಲದೇವರ ಗುಡಿ, ಧಾರವಾಡ.
ಗೋವಿಂದರಾಯರು, ಮಾನವೀಕ್ಷೇತ್ರ.
ಕಾಂತೇಶ ಜೋಷಿಯವರು, ಸದಸ್ಯರು, ಅಖಿಲ ಭಾರತ ಮಾಧ್ವ ಮಹಾಮಂಡಲ, ಗದಗ.
ಆರ್. ಎಸ್. ಕುಲಕರ್ಣಿಯವರು, ಗುಲ್ಬರ್ಗ.
ಗೋಪಾಲ್, ಎಸ್. ಕುಲಕರ್ಣಿಯವರು, ಬಿಜಾಪುರ.
ಎಂ. ಆರ್. ಗೋವಿಂದರಾಯರು (ಶ್ರೀ ಗುರುಗೋವಿಂದವಿಠ್ಠಲದಾಸರು), ಮೈಸೂರು.
ಡಿ. ಭೀಮರಾಯರು, ಶಿವಮೊಗ್ಗ.

ಆರ್. ರಾಮಚಂದ್ರರಾಯರು, ಚಿತ್ರದುರ್ಗ.
ಕೆ. ರಘುಪತಿರಾಯರು, ಹೊಟೇಲ್ ದಾಸಪ್ರಕಾಶ್, ಮದ್ರಾಸು.

ದಾವಣಗೆರೆ ಶ್ರೀ ಸರ್ವಜ್ಞ ಸೇವಾ ಮಂಡಲಿಯ ಶ್ರೀ ಭೀಮರಾಯರು ಮತ್ತು ಚಾಮರಾಜಪೇಟೆಯಲ್ಲಿರುವ ಶ್ರೀ ನಂದಗುಡಿ ಕೃಷ್ಣಮೂರ್ತಿಯವರು ಕೆಲವು ಸಂಧಿಗಳ ಪ್ರಮಾಣಗಳನ್ನು ಮೂಲದಿಂದ ನೋಡಿ ತಿದ್ದಿಕೊಟ್ಟು ಸಹಾಯ ಮಾಡಿದ್ದಾರೆ.

ನಮ್ಮ ಪ್ರಕಾಶನದ ಸಂಪಾದಕಮಂಡಲಿಯ ಸದಸ್ಯರುಗಳು ಆಗಾಗ್ಯೆ ತಮ್ಮ ಅಮೂಲ್ಯವಾದ ಸಲಹೆಗಳನ್ನಿತ್ತು ಈ ಕಾರ್ಯವು ಯಶಸ್ವಿಯಾಗಲು ಮಾರ್ಗದರ್ಶನ ಮಾಡಿದ್ದಾರೆ.

ಮೇಲೆ ಹೇಳಿದ ಮಹನೀಯರುಗಳ ಸಹಾಯ, ಸಹಕಾರ ಮತ್ತು ಶ್ರಮಗಳು ವ್ಯರ್ಥವಾಗದೆ ಸಾರ್ಥಕವಾಗಲು ಮುಖ್ಯಕಾರಣಕರ್ತೃಗಳು ನಮ್ಮ ಚಂದಾದಾರರು. ಇವರಲ್ಲಿ ಕೆಲವರು ೧೦೮ ರೂ.ಗಳನ್ನು ಬಡ್ಡಿರಹಿತ ಠೇವಣಿ ರೂಪವಾಗಿ ಕೊಟ್ಟು ಸಹಕರಿಸಿದ್ದಾರೆ. ಉಳಿದ ಚಂದಾದಾರರು ಮುಂಗಡವಾಗಿಯೇ ಗ್ರಂಥದ ಪೂರ್ಣಮೌಲ್ಯವನ್ನು ಸಲ್ಲಿಸಿ ಸಹಾಯಮಾಡಿದ್ದಾರೆ. ನಮ್ಮಲ್ಲಿ ಪೂರ್ಣವಿಶ್ವಾಸವನ್ನಿತ್ತು ಮುಂಗಡವಾಗಿಯೇ ಧನಸಹಾಯ ಮಾಡಿ ನಮಗಿದ್ದ ಹಣದ ಕೊರತೆಯನ್ನು ಹೋಗಲಾಡಿಸಿ ಗ್ರಂಥಪ್ರಕಾಶನ ಪೂರ್ಣವಾಗುವವರೆಗೂ ಮೌನವಾಗಿ ಸಹಕರಿಸಿದ ನಮ್ಮ ಅಭಿಮಾನಿ ಚಂದಾದಾರರ ತಾಳ್ಮೆಯನ್ನು ಎಷ್ಟು ಸ್ಮರಿಸಿದರೂ ಸ್ವಲ್ಪವೇ. ಇವರೆಲ್ಲಾ ಶ್ರೀ ಶ್ರೀ ಸಂಕರ್ಷಣತೀರ್ಥರ ಮತ್ತು ದಾಸರಾಯರ ವಿಶೇಷ ಅನುಗ್ರಹಕ್ಕೆ ಪಾತ್ರರು.

ದಾಂಡೇಲಿ ಕಾಗದ ಕಾರ್ಖಾನೆಯ ಆಡಳಿತಾಧಿಕಾರಿಗಳು ಉತ್ತಮ ದರ್ಜೆಯ ಕಾಗದವನ್ನು ರಿಯಾಯಿತಿ ದರದಲ್ಲಿ ಒದಗಿಸಿಕೊಟ್ಟು ಸಹಾಯ ಮಾಡಿದ್ದಾರೆ.

ನಮಗೆ ಸಹಾಯ ಮಾಡಿದ ಮಹನೀಯರುಗಳನ್ನು ಹೆಸರಿಸಿದ ಪಟ್ಟಿಯಲ್ಲಿ ಅಕಸ್ಮಾತ್ ಯಾರ ಹೆಸರಾದರೂ ಬಿಟ್ಟುಹೋಗಿದ್ದರೆ ಅವರ ಕ್ಷಮೆ ಕೋರಿ, ಅವರುಗಳ ಅಮೌಲ್ಯ ಸೇವೆಯನ್ನು ಸ್ಮರಿಸುತ್ತೇವೆ.

ಕೊನೆಯದಾಗಿ ಪ್ರಭಾ ಮುದ್ರಣಾಲಯದ ಮಾಲೀಕರಾದ ಶ್ರೀ ಡಿ. ಎಸ್. ಕೃಷ್ಣಾಚಾರ್ಯರು ಮುದ್ರಣಪ್ರತಿಗಳನ್ನು (Proof) ನಾವು ಎಷ್ಟು ಸಲ ತಿದ್ದಿ ಕೊಟ್ಟರೂ ಬೇಸರವಿಲ್ಲದೆ ಶ್ರೀಹರಿವಾಯುಗಳ ಸೇವಾ ಎಂಬ ದೃಷ್ಟಿಯಿಂದ ಗ್ರಂಥವನ್ನು ಅಂದವಾಗಿ ಮುದ್ರಿಸಿಕೊಟ್ಟಿದ್ದಾರೆ. ಇವರ ಮತ್ತು ಇವರ ಮುದ್ರಣಾಲಯದ ಸಿಬ್ಬಂದಿ ವರ್ಗದವರ ಸಹಕಾರವನ್ನು ಕೃತಜ್ಞತೆಯಿಂದ ಸ್ಮರಿಸುತ್ತೇವೆ.

ಶ್ರೀ ಶ್ರೀ ಸಂಕರ್ಷಣತೀರ್ಥಾಂತರ್ಗತ, ಹಾಗೂ ಶ್ರೀ ಜಗನ್ನಾಥದಾಸರಾಯರ ಅಂತರ್ಗತ, ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀ ಸಂಕರ್ಷಣಾಭಿನ್ನ ಜಗನ್ನಾಥ ವಿಠ್ಠಲನು ಮೇಲೆ ಹೇಳಿದ ಸಕಲ ಮಹನೀಯರಿಗೂ ಮತ್ತು ಪರೋಕ್ಷವಾಗಿ ನಮಗೆ ಬೆಂಬಲಿಗರಾದ ಅನೇಕ ಅಭಿಮಾನಿಗಳಿಗೂ ಜ್ಞಾನ, ಭಕ್ತಿ, ವೈರಾಗ್ಯಗಳನ್ನಿತ್ತು ಸಕಲ ಸನ್ಮಂಗಳವನ್ನುಂಟುಮಾಡಲಿ ಎಂದು ಪ್ರಾರ್ಥಿಸುತ್ತೇವೆ.

ಶ್ರೀ ಶ್ರೀ ಸೋಸಲೆ ವ್ಯಾಸರಾಯ ಸಂಸ್ಥಾನದ ಪೀಠಾಧೀಶರಾದ ಶ್ರೀ ಶ್ರೀ ೧೦೦೮ ವಿದ್ಯಾಪಯೋನಿಧಿತೀರ್ಥ ಶ್ರೀಪಾದಂಗಳವರು ಈ ಹರಿಕಥಾಮೃತಸಾರದ ಪ್ರಥಮ ಸಂಪುಟವನ್ನೂ, ಶ್ರೀ ಶ್ರೀ ಮುಳಬಾಗಿಲು ಶ್ರೀಪಾದರಾಜ ಸಂಸ್ಥಾನದ ಪೀಠಾಧೀಶರಾದ ಶ್ರೀ ಶ್ರೀ ೧೦೦೮ ಸತ್ಯನಿಧಿತೀರ್ಥ ಶ್ರೀಪಾದಂಗಳವರು ದ್ವಿತೀಯ ಸಂಪುಟವನ್ನೂ ಮತ್ತು ಶ್ರೀಮದುತ್ತರಾದಿಮಠ ಸಂಸ್ಥಾನದ ಪೀಠಾಧಿಪತಿಗಳಾದ ಶ್ರೀ ಶ್ರೀ ೧೦೦೮ ಸತ್ಯ ಪ್ರಮೋದತೀರ್ಥ ಶ್ರೀಪಾದಂಗಳವರು ತೃತೀಯ ಸಂಪುಟವನ್ನೂ ತಮ್ಮ ಅಮೃತಹಸ್ತ ಗಳಿಂದ ಬಿಡುಗಡೆಮಾಡುವ ಮೂಲಕ ಅನುಗ್ರಹಿಸಿದ್ದಾರೆ. ಈ ಶ್ರೀಪಾದಂಗಳು ತ್ರಯರಿಗೂ ನಮ್ಮ ಹೃತ್ಪೂರ್ವಕವಾದ ಅನೇಕ ಸಾಷ್ಟಾಂಗಪ್ರಣಾಮಗಳನ್ನು ಅತ್ಯಂತ ನಮ್ರತೆಯಿಂದ ಸಲ್ಲಿಸುತ್ತೇವೆ.

ಬೆಂಗಳೂರು

ಶ್ರೀ ನರಸಿಂಹ ಜಯಂತಿ
ಶ್ರೀ ಪೈಂಗಳ ಸಂವತ್ಸರ
ವೈಶಾಖ ಶುದ್ಧ ಚತುರ್ದಶಿ
(ತಾ|| 2–5–1977)

**ರಾಣ್ಯ ರಾಜಾರಾವ್**
ಸಂಚಾಲಕ
ಶ್ರೀಹರಿವಿಠ್ಠಲ ಪ್ರಕಾಶನ



## ಶ್ರೀ ಹರಿವಿಠ್ಠಲ ಪ್ರಕಾಶನ, ಬೆಂಗಳೂರು - 560019

### ಸದಸ್ಯರು

1. **ಡಾ|| ಆರ್. ಕೆ. ರಾಜಾರಾವ್,** ಬೆಂಗಳೂರು–19
2. **ಶ್ರೀ ಅನಂತ ತಡಸ,** ಪೂರ್ಣಪ್ರಜ್ಞನಗರ, ಬೆಂಗಳೂರು–28
3. **ಶ್ರೀ ಡಿ. ಪ್ರಹ್ಲಾದಾಚಾರ್,** ಪೂರ್ಣಪ್ರಜ್ಞನಗರ, ಬೆಂಗಳೂರು–28
4. **ಶ್ರೀ ಹೆಚ್. ಎಸ್. ಶ್ರೀನಿವಾಸಮೂರ್ತಿ,** ಬೆಂಗಳೂರು–19
5. **ಶ್ರೀ ಕೆ. ಎಂ. ಸೇತುಮಾಧವಾಚಾರ್ಯ,** ಬೆಂಗಳೂರು–18
6. **ಶ್ರೀ ಡಿ. ಭೀಮರಾವ್,** ಎಲ್.ಐ.ಸಿ., ಶಿವಮೊಗ್ಗ
7. **ಶ್ರೀ ಎಸ್. ಜಿ. ರಾಮಚಂದ್ರರಾವ್,** ರೈಲ್ವೆಗಾರ್ಡ್, ಬೆಂಗಳೂರು
8. **ಶ್ರೀ ಕೆ. ಪದ್ಮನಾಭರಾವ್,** ಗವೀಪುರಂ ಗುಟ್ಟಹಳ್ಳಿ, ಬೆಂಗಳೂರು
9. **ಶ್ರೀ ಟಿ. ಆರ್. ಶ್ರೀನಿವಾಸಮೂರ್ತಿ,** ಹನುಮಂತನಗರ, ಬೆಂಗಳೂರು-19
10. **ಡಾ|| ಎ. ಎನ್. ಮಾಧವರಾವ್,** ಅಶೋಕನಗರ, ಬೆಂಗಳೂರು–50

# ದುರಿತಪರಿಹಾರಕ ಮಂಗಳಪದಗಳು

## ಶ್ರೀ ಜಗನ್ನಾಥದಾಸ ವಿರಚಿತ ಶ್ರೀ ಲಕ್ಷ್ಮೀನರಸಿಂಹದೇವರ ಸ್ತೋತ್ರ

ಪದ ರಾಗ-ಸಾವೇರಿ, ಆದಿತಾಳ

ನಮೋ ನಮಸ್ತೇ ನರಸಿಂಹದೇವ | ಸ್ಮರಿಸುವವರ ಕಾವ
ಸುಮಹಿತ ನಿನಗೆಣೆ ಲೋಕದೊಳಾವ ತ್ರಿಭುವನ ಸಂಜೀವ ||
ಉಮೆಯರಸನ ಹೃತ್ಕಮಲ | ದ್ಯುಮಣಿ ಮಾರಮಣ
**ಕನಕಸಂಯಮಿವರ ವರದಾ ||** || ಪಲ್ಲವಿ ||

ಕ್ಷೇತ್ರಜ್ಞ ಕ್ಷೇಮಧಾಮ ಭೂಮ | ದಾನವಕುಲ ಭೀಮ |
ಗಾತ್ರ ಸನ್ನುತ ಬ್ರಹ್ಮಾದಿ ಸ್ತೋಮ | ಸನ್ಮಂಗಳ ನಾಮಾ |
ಚಿತ್ರಮಹಿಮ ನಕ್ಷತ್ರ ನೇಮಿ ಸರ್ವತ್ರ | ಮಿತ್ರ ಸುಚರಿತ್ರ ಪವಿತ್ರಾ || ೧ ||

ಅಪರಾಜಿತ ಅನಘಾ ಅನಿರ್ವಿಣ್ಣ್ಯಾ | ಲೋಕೈಕ ಶರಣ್ಯಾ |
ಶಫರಾಕೇತು ಕೋಟಿ ಲಾವಣ್ಯ | ದೈತ್ಯೇಂದ್ರ ಹಿರಣ್ಯ ಕ |
ಶಿಪು ತನಯನ ಕಾಯ್ದ ಪೆನೆನುತಲಿ ನಿ |
ಷ್ಕಪಟ ಮನುಜ ಹರಿ ವಪುಷ ನೀನಾದೆ || || ೨ ||

ತಪನ ಕೋಟಿ ಪ್ರಭಾ ಶರೀರ | ದುರಿತೌಘ ವಿದೂರ |
ಪ್ರಪಿತಾಮಹ ಭಕ್ತಜನ ಮಂದಾರ | ಖಳ ವಿಪಿನ ಕುಠಾರ |
ಕೃಪಣ ಬಂದು ತವ | ನಿಪುಣತನಕೆ ನಾ |
ನುಪಮೆಗಾಣೆ **ಕಾ** | **ಶ್ಯಪಿವರ ವಹನ** || || ೩ ||

ವೇದವೇದಾಂಗ ವೇದವೇದ್ಯ | ಸಾದ್ಧ್ಯಾ ಅಸಾಧ್ಯ |
ಶ್ರೀ ದಾ ಮುಕ್ತಾಮುಕ್ತರಾರಾಧ್ಯ | ಅನುಪಮ ಅನವದ್ಯ ||
ಮೋದಮಯನೆ ಪ್ರಹ್ಲಾದವರದ ನಿತ್ಯೋ |
ದಯ ಮಂಗಳ ಪಾದ ಕಮಲಕೆ || || ೪ ||

ಅನಿಮಿತ್ತ ಬಂಧು **ಜಗನ್ನಾಥ** | **ವಿಠಲನೆ** ಸಾಂಪ್ರತ |
ನಿನಗೆ ಬಿನ್ನೈಪೆಯನಂತಾ | ಲಾಲಿಸುವದು ತಾತಾ ||
ಗಣಣೆ ಇಲ್ಲದವಗುಣವೆಣಿಸದೆ ಪ್ರತಿ |
ಕ್ಷಣಕೆ ಕಥಾಮೃತ ಉಣಿಸು ಕರುಣದೀ || || ೫ ||

|| ಶ್ರೀ ಕೃಷ್ಣಾರ್ಪಣಮಸ್ತು ||

# ಶ್ರೀ ಲಕ್ಷ್ಮೀವೇಂಕಟೇಶದೇವರ ಸ್ತೋತ್ರ

ಪದ ರಾಗ–ಕಾಂಬೋದಿ, ತಾಳ–ತ್ರಿವಿಡಿ

ಆ ವೆಂಕಟಗಿರಿ ನಿಲಯ ನಂಘ್ರಿ ರಾಜೀವಯುಗಳಕಾನಮಿಸುವೆನು |
ಸೇವಿಪ ಜನರಿಗಮರ ತರುವೆನಿಸಿ ಧ | ರಾವಲಯಾಖ್ಯ ದಿವಿಯೊಳಿಸೆವ || || ಪಲ್ಲವಿ ||

ಆವನಂಘ್ರಿಜಲ ನಿಖಿಳ ಜಗತ್ತಿಗೆ ಪಾವನತರವೆಂದೆನಿಸುವದು |
ಶ್ರೀ ವಿಧಿಭವ ಶಕ್ರಾದ್ಯರು ಅವನ | ಸೇವಕ ಜನರೆಂದೆನಿಸುವರು ||
ತಾ ಉತ್ತುಮ ಪುರುಷನೆನಿಸಿ ಜಗವ ಸ | ದಾವ ಕಾಲ ಸಂತೈಸುವನು |
ಜೀವಾಂತರ್ಗತನಾಗಿ ವಿವಿಧ ವೇದಾವಳಿಯಿಂದ ತುತಿಸಿಕೊಂಬ || || ೧ ||

ವಾತನೊಳಗೆ ಅಹಿಪ (ತಿ) ವಿರೋಧಿಸೆ ತವ ಸ | ತ್ವಾತಿಶಯ ತೋರೆಂದೆನುತ |
ಜಾತರೂಪ ಶೈಲಾತ್ಮಜನಪ್ಪಿರೆ | ವೀತಿಹೋತ್ರ ಸಖ ಕಿತ್ತ್ಯೊಗಿಯೆ ||
ವೀತಕರ್ನನಳವಳಿದು ತುತಿಸಲು ನಿ | ಕೇತನ ತ್ರಯಗಳುಳಿದು ವೇಗ |
ಧಾತ ಮಹಿಳೆ ತೀರ್ಥದಿ ಭೂಲಕ್ಷ್ಮೀ ಸ | ಮೇತನಾಗಿ ಮೋದಿಸುತಿಪ್ಪ || || ೨ ||

ಭೂಸುರನೋರ್ವನು ತೋಂಡಮಾನ ಧರ | ಣೀಶನ ಗೃಹದೊಳಿರಿಸ ಸತಿಯಾ |
ಕಾಶಿಗೆ ಪೋಗಲು ವಿಸ್ಮೃತಿಯಲಿ ನೃಪ | ಪೋಷಿಸದಿರೆ ಪಂಚತ್ವವನೂ ||
ಆ ಸರೋಜಮುಖಿ ಐದೆ ದ್ವಿಜವರೋ | ಲ್ಲಾಸದಿ ಕೇಳ್ದ ನಿಜಮಹಿಷಿಯಾ |
ಕ್ಲೇಶದಿ ಭೂಮಿಪ ತುತಿಸೆ ಸಲಿಲದಿ ಸು | ವಾಸನೆಯೊಕ್ಷಣ ತೆಗೆದಿತ್ತ || || ೩ ||

ವೃದ್ಧ ಬ್ರಾಹ್ಮಣನು ತುತಿಸೆ ಸಲಿಲದೊಳ | ಗದ್ದಿ ಕುಮಾರತ್ವವನಿತ್ತಾ |
ಅಧ್ವರನೆಸಗುವ ಋಷಿಗಳ ಮಂತ್ರದ | ಪದ್ಧತಿ ತಿದ್ದಿ ಯಜ್ಞವ ಮಾಡ್ದ ||
ಮಧ್ಯರಾತ್ರಿಯೊಳು ಬೆಸೆಗೊಂಡ ನೃಪನು | ಪದ್ರವ ಕಳೆದಾಯುಧವಿತ್ತು |
ಮೃದ್ಭಾಂಡವ ರಚಿಸುವವಗೊಲಿದವನ ಚೋದ್ಯ | ತೋಂಡಮಾನಗೆ ತೋರ್ದ || ೪ ||

ಮನೋವಾಕ್ಕಾಯದಿ ಬಿಡದೆ ಸೇವಿಸುವ | ಜನರ ಸಂಚಿತ ಕುಕರ್ಮಗಳ |
ಮೊನಿಯ ಮುರಿದು ಆಗಾಮಿ ಫಲಂಗಳ | ಅನುಭವಕೀಯದೇ ಪ್ರಾರಬ್ಧ ||
ಉಣಿಸಲು ಭವದಲಿ ತನ್ನ ಮೂರ್ತಿ ಚಿಂ | ತನೆ ಇತ್ತು ಸ್ವರೂಪಸುಖ |
ಅನುದಿನದಲಿ ವ್ಯಕ್ತಿಯ ಮಾಡಿಸಿ ಕೊ | ಟ್ಟನಿಮಿತ್ತಾಪ್ತನೆನಿಸುತಿಪ್ಪ || || ೫ ||

ಏಕಮೇವ ರತ್ನಾಕರ ಮಂದಿರ | ಆಕೂತಿಜ ಯಜ್ಞಾಕರನೆ |
ಲೋಕವಿಲಕ್ಷಣ ಸೂಕರಾತ್ಮ ಪಿ | ನಾಕಿ ವಿನುತ ಲಕ್ಷ್ಮೀಕಾಂತ ||
ಗೋಕುಲ ಮಂದಿರ ಏಕಾಂತಿಗಳ ನಿ | ರಾಕರಿಸದೆ ಲೋಕೈಕ ಸುಖಾ |
ಶೋಕರಹಿತ ನಿಜಲೋಕವನಿತ್ತು ನಿ | ರಾಕುಲ ಸುಖಗಳ ತಾ ಕೊಡುವ || ೬ ||

ದಿನಪನೊಳಗೆ ವಾಜಿಸಿ ವಸು ತಾ ಎಂ | ದೆನಿಸಿ ಜಯಾಪತಿ ಪ್ರದ್ಯುಮ್ನ |
ಅನಿರುದ್ಧಾದಿ ಚತುರ್ಮೂರ್ತ್ಯಾತ್ಮಕ | ತನಗೆ ತಾನೆ ಪೂಜಕ ಪೂಜ್ಯ ||
ಅನುಪಮನಾಮದಿ ಕರೆಸುತಲಿಹ್ಯ ತ | ನ್ನನು ಈ ಪರಿ ಧೇನಿಸುತಿಪ್ಪ |
ಮನುಜರಿಗೊಲಿದು **ಜಗನ್ನಾಥ ವಿಠ್ಠಲ** | ಜನನ ಮರಣಗಳ ಪರಿಹರಿಪ || ೭ ||

|| ಶ್ರೀ ಗುರುಮಧ್ವೇಶ ಕೃಷ್ಣಾರ್ಪಣಮಸ್ತು ||

(ಈ ಸ್ತೋತ್ರವು ಶ್ರೀ ಹರಿಕಥಾಮೃತಸಾರ ಸಂಧಿ ೨೧—೨೨ ರ ಸಾರರೂಪವಾಗಿದೆ)

# ಶ್ರೀ ಸಂಕರ್ಷಣಕವಚಮ್

ಶ್ರೀರುಕ್ಮಿಣೀಶಚರಣಾಂಬುಜಚಂಚರೀಕಂ ಸಂಪನ್ನಕಾಂತಿಂ ಕವಿಹೃದ್ಯುರುಜಾಗರೂಕಮ್ |
ವೃಂದಾವನಾಂತರಲಸದ್ವಪುಷಾ ಕಲಂಕಸಂಕರ್ಷಣಾಖ್ಯಮಹಿರಾಜಫಣಾಂಕಮೀಡೇ || ೧ ||

|| ಓಂ || ಸಂಕರ್ಷಣಃ ಶಿರಃ ಪಾತು ಫಾಲಂ ಪಾತ್ವಲಿಕೇಕ್ಷಣಃ |
ಸೂನೃತೋಕ್ತಿಃ ಪಾತು ವಕ್ತ್ರಂ ನಾಸಂ ಸೌಗಂಧ್ಯಮಾಲ್ಯಭೃತ್ || ೨ ||

ಸಚ್ಛಾಸ್ತ್ರಃ ಪಾತು ಮೇ ಶ್ರೋತ್ರಂ ನೇತ್ರೇ ಪಾತು ಸುನೇತ್ರವಾನ್ |
ಕಪೋಲಂ ಮೇ ಕೃಪಾಶೀಲಃ ಪಾತ್ವೋಷ್ಠಂ ಭಕ್ತವತ್ಸಲಃ || ೩ ||

ಭ್ರುವೌ ಕಂಠಂ ಭುಜೌ ಪಾತು ಕುಕ್ಷಿಮಂತರ್ನಿರೀಕ್ಷಣಃ |
ವಕ್ಷಃ ಕಕ್ಷಸ್ತನೌ ಪಾತು ನಾಭಿಂ ಪಾತ್ವಭಯಪ್ರದಃ || ೪ ||

ಪಾರ್ಶ್ವಹಸ್ತಾಂಗುಲೀನ್ ಪಾತು ಪಾತು ಪೃಷ್ಠಂ ಯತೀಶ್ವರಃ |
ಜಾನೂರುಜತ್ರುಜಂಘಾಂಘ್ರೀನ್ ಪಾತು ಮೇ ಸಜ್ಜನಾಗ್ರಣೀಃ || ೫ ||

ಕಟಿಂ ಮಧ್ಯಂ ಚ ಜಘನಂ ಮೇಢ್ರೋ ಮಾಂಸಾಸೃಗಂತ್ರಕಾನ್ |
ಪಾತು ಮೇ ಭೂತನಾಥಾಂಶೋ ಬಾಹ್ಯಂ ಯನ್ಮೇ ಗುಹಾಂತರಮ್ || ೬ ||

ಸರ್ವಾಂಗಂ ಪಾತು ಯನ್ನೋಕ್ತಂ ತದುಕ್ತಂ ತನ್ಮಮಾಖಿಲಮ್ |
ಇತೀದಂ ಕವಚಂ ದಿವ್ಯಂ ವೇಂಕಟಾರ್ಯಸಮೀರಿತಮ್ || ೭ ||

ತ್ರಿಕಾಲಂ ಯೋ ಜಪೇತ್ತಸ್ಯ ವಿದ್ಯಾ ಸಂಪದ್ವಿವರ್ಧತೇ |
ಸಂಕರ್ಷಣಾಯೇತಿ ಮಂತ್ರಂ ನಮೋಂತ್ಯಂ ತಾರಸಂಯುತಮ್ || ೮ ||

ಶ್ರೀಂ ಶಂ ಬೀಜದ್ವಯೋಪೇತಂ ಜಪೇದಷ್ಟೋತ್ತರಂ ಶತಮ್ |
ಯ ಏತತ್ ಕವಚಂ ಮಂತ್ರಂ ಸಂಕರ್ಷಣಗುರೋಃ ಸುಧೀಃ || ೯ ||

ಜಪಿತ್ವಾ ಪುಣ್ಯಸಲಿಲಂ ಪಿಬೇದ್ವೃಂದಾವನಂ ಗತಮ್ |
ವ್ಯವಹಾರೇ ಚ ಸಂವಾದೇ ಜಯಸ್ತಸ್ಯ ಭವಿಷ್ಯತಿ || ೧೦ ||

ಮಾರೀಭಯಂ ಚೋರಭಯಂ ನಿರ್ಘಾತಾಗ್ನಿಮಹಾಭಯಮ್ |
ಸರ್ಪಲೂತಕಕೀಟಾದಿಭಯಂ ತಸ್ಯ ನ ವಿದ್ಯತೇ || ೧೧ ||

ಕ್ಷಯಾಪಸ್ಮಾರಪೀಡಾಭಿಃ ಶೀತತಾಪಜ್ವರಾದಿಭಿಃ |
ದುಃಸಹೈಃ ನೇತ್ರರೋಗಾದ್ಯೈಃ ನ ಕಿಂಚಿದಪಿ ಬಾಧಿತಃ || ೧೨ ||

ನಾಮ್ನಸ್ತಸ್ಯ ಕದಾ ಪೀಡಾ ನೇಹಾಮುತ್ರ ಸುಖೀ ಸ ವೈ |
ಧಾರಯೇನ್ಮಂತ್ರವದ್ಯಂತ್ರಂ ಸಾ ವಂಧ್ಯಾ ಪುತ್ರಿಣೀ ಭವೇತ್ || ೧೩ ||

ಗುರೋರ್ವೃಂದಾವನಸ್ಯೈವ ದರ್ಶನೇನ ಮಹಾತ್ಮನಃ |
ಮಾಹಾತ್ಮ್ಯಪಠನೇನೇಷ್ಟಸಿದ್ಧಿಃ ಸ್ಯಾನ್ನಾತ್ರ ಸಂಶಯಃ || ೧೪ ||

ಇತಿ ಶ್ರೀ ವೇಂಕಟಭೂಸುರೇಣ ವಿರಚಿತಂ ಶ್ರೀಸಂಕರ್ಷಣಕವಚಂ ಸಂಪೂರ್ಣಮ್ |

ಶ್ರೀ ಕೃಷ್ಣಾರ್ಪಣಮಸ್ತು

## ಅಥ ಕಲ್ಪತರುಸ್ತೋತ್ರಮ್

ಸಂಕರ್ಷಣಂ ಸಚ್ಚರಣಂ ವರೇಣ್ಯಂ ಅನಾವಿಲಾತ್ಮಾನಮನಿಂದ್ಯಲೀಲಮ್ ।
ಸಂಕೀರ್ತಯಂತಂ ಪರಮಂ ಪುಮಾಂಸಂ ಸಂಕರ್ಷಣಾಖ್ಯಂ ಗುರುರಾಜಮೀಡೇ ॥ ೧ ॥

ಓಂ ಸಂಕರ್ಷಣಯತೀಂದ್ರಾಯ ಶಾಂತಾಯ ಸುಧಿಯೇ ಶ್ರಿಯೇ ।
ದಾಂತಾಯ ಭಜತಾಂ ಕಲ್ಪತರವೇ ಗುರವೇ ನಮಃ ॥ ೨ ॥

ಶಂಕರಂ ನಮತಾಂ ಸಾಕ್ಷಾತ್ ಶಂಕರಾಂಶಮಹರ್ನಿಶಮ್ ।
ಶಂಕರಜ್ಞಾನಮುದ್ರಾಂಕಂ ಸಂಕರ್ಷಣಗುರುಂ ಭಜೇ ॥ ೩ ॥

ಇತಿ ಶ್ರೀ ಸಂಕರ್ಷಣಕಲ್ಪತರುಸ್ತೋತ್ರಂ ಸಂಪೂರ್ಣಮ್

---

## ಅಥ ಶ್ರೀಸಂಕರ್ಷಣನವರತ್ನಮಾಲಿಕಾಸ್ತೋತ್ರಮ್

ಸಂಪದ್ಭೂಭೃದುಪತ್ಯಕಾಚಲತಲಚ್ಛಾಯಾಸ್ಥಲೀಸಂಸ್ಥಿತಂ
ಶಾಂತಂ ಸತ್ಯಪರಾಯಣಾಹ್ವಯಗುರೋಃ ಶ್ರೀಪಾಣಿಪದ್ಮೋದ್ಭವಮ್ ।
ಸತ್ಸಂತುಷ್ಟಯತಿಪ್ರಶಿಷ್ಯಮನಘಂ ಸದ್ಭಕ್ತಸಂಕೀರ್ತಿತಂ
ಶ್ರೀಸಂಕರ್ಷಣತೀರ್ಥಪೂಜ್ಯಚರಣಂ ಸಂರಾಧಯಾಮೋ ವಯಮ್ ॥ ೧ ॥

ಮಿಥ್ಯಾಪ್ರಸ್ಫುಟವಾದಧಿಕ್ಕರಣಕೃನ್ಮಾಯೀಭನಿರ್ಭೇದನ
ನ್ಯಾಯಪ್ರೌಢಗುಹೋದ್ಯದುಕ್ತಿಕಲನಾಕ್ಷ್ವೇಳಾಸಮುಜ್ಜೃಂಭಣಃ ।
ನಸ್ಸಂಕರ್ಷಣಸಂಯಮೀ ನರಹರಿಃ ಶ್ರೀಪಾದಮೂಲಾಶ್ರಯೋ
ಯೋಽವಿದ್ಯಾಗಹನೋತ್ಥಕುಂಭಿಭಯತಃ ಪಾಯಾತ್ ಸ ಪಂಚಾನನಃ ॥ ೨ ॥

ಬಿಭ್ರಾಣಂ ಮಣಿಚಂಕಣತ್ಫಣಿಫಣಾಶ್ರೇಣಿಂ ಲಲಾಟೀಕ್ಷಣಂ
ಶಾಣಾಕರ್ಷಿತಶೋಣರತ್ನಕಿರಣಶ್ರೀಮತ್ಸುನೇತ್ರದ್ವಯಮ್ ।
ಮೂರ್ಧ್ನ್ಯಲಂಕೃತನೇತ್ರಮುನ್ನತಿತಮಂ ಮುದ್ರಾಂಕದೋರಂತರಂ
ಶ್ರೀಕಾಂತಾಧ್ಯುಷಿತಾಂತರಂ ಸ್ಮರ ಗುರುಂ ಸಂಕರ್ಷಣಾಖ್ಯಂ ಯತಿಮ್ ॥ ೩ ॥

ಪ್ರತ್ಯಬ್ದಂ ಸವಿಶೇಷಭೂಷಣಗಣೈಃ ದಿವ್ಯಾಭಿಷೇಕೈರ್ದ್ವಿಜೈಃ
ಪಂಚಮ್ಯಾಂ ತು ಸಮರ್ಚ್ಯತೇ ದ್ವಿಜವರೈಃ ಸನ್ಮಾರ್ಗಶೀರ್ಷೇ ಸಿತೇ ।
ಯಃ ಪೂರ್ವೋತ್ತರವಾಸರೋತ್ಸವಯುತೋ ನಶ್ಶ್ರೇಯಸೇ ಸುಶ್ರವಾಃ
ಭೂಯಾತ್ ಭೂಸುರಹರ್ಷದಾಯಕಮತಿಃ ಸಂಕರ್ಷಣಾಖ್ಯೋ ಯತಿಃ ॥ ೪ ॥

ಪ್ರಾಂಚತ್ಪಂಚಮುಖಾಂಜನೇಯಕರುಣಾಪಾಣಿಂ ದಯಾಽಪಾಂಗದಂ
ಸಂಪ್ರಾಪ್ತಾಚಲಭಕ್ತಿಸುವ್ರತತಪೋವೈರಾಗ್ಯಭಾಗ್ಯಾಕರಃ |
ಶ್ರೀಗೋಪಾಲಕರಂಗವಿಠ್ಠಲಪದಧ್ಯಾನಪ್ರಪೂತಾತ್ಮಕೋ
ನಸ್ಸಂಕರ್ಷಣತೀರ್ಥಪೂಜ್ಯಚರಣೋ ದದ್ಯಾತ್ ಸದಾ ಮಂಗಲಮ್ || ೫ ||

ಯದ್ವೃಂದಾವನದರ್ಶನಾತ್ ಗ್ರಹಮಹಾಪೀಡಾಚ್ಯುತಿಂ ವಾಽಭಯಂ
ಯತ್ಸತ್ಕೃತ್ಯಾ ಜ್ವರಕುಕ್ಷಿಗೋಲವಿಲುಠದ್ಗುಲ್ಮಾದಿಬಾಧಾಪಹಮ್ |
ಯನ್ಮಂತ್ರಾರ್ಥನಿಷೇವಣಾಚ್ಚ ಸುದೃಶಂ ಪ್ರಾಪ್ನೋತ್ಯಲಂ ಮಾನವಃ
ಸೋ ಜೀಯಾದಿಹ ಬಾಹುದಾತಟವಸನ್ ಸಂಕರ್ಷಣಾಖ್ಯೋ ಗುರುಃ || ೬ ||

ಪೂರ್ಣಪ್ರಜ್ಞಮತಾಮೃತಾಂಬುಧಿಕಲಾಪೂರ್ಣೇಂದವೇ ಬಾಹುದಾ
ಹ್ರದಿನ್ಯುತ್ತಮಯಾಂತುತೀರವಿಲಸದ್ಬೃಂದಾವನಾವಾಸಿನೀ |
ಶ್ರೀಸಂಪದ್ಗಿರಿನಾರಸಿಂಹವಿಮಲಕ್ಷೇತ್ರಾವನೀದೇವತಾ
ತ್ರಾತ್ರೇ ತೇ ನತಯಃ ಶುಭಾಯ ಜಗತಾಂ ಸಂಕರ್ಷಣಸ್ವಾಮಿನೇ || ೭ ||

ಸಂತಾಪಾನ್ ಶಮಯನ್ ಸುಧಾಮಯದೃಶಾ ಶಾಂತಸ್ಸತಾಮಾದರಾತ್
ರೌದ್ರಶ್ಚಶ್ವದುಪದ್ರವಾಂಶ್ಚ ವಿವಿಧಾನ್ ವಿದ್ರಾವಯನ್ನರ್ಥಿನಾಮ್ |
ಸರ್ವಜ್ಞೋಽತ್ರ ವಿವರ್ಧತೇ ಸುರುಚಿರಪ್ರೇಕ್ಷಾಸಟೋ ಹಿ ಸ್ಫುಟಾ
ಕೋಟೀಭಿಸ್ಸಮಲಂಕೃತಃ ಸುವಪುಷಾ ಸಂಕರ್ಷಣಾರ್ಯಾಗ್ರಣೀಃ || ೮ ||

ಯದ್ವೃಂದಾವನಕಲ್ಪನಾರ್ಥಮವನೌ ಗುಪ್ತೈರ್ದ್ವಿಜೈಃ ಶೋಧಿತೇ
ದಿವ್ಯೌಜಃ ಸುಮುಖಂ ವಿವರ್ಧಿತನಖಂ ಪ್ರೇಂಖಚ್ಛಿಖಂ ಪ್ರೇಯಸಃ |
ಸಚ್ಛೇಲಚ್ಛವಿತಾಂಗಮೇತದಿತಿ ಯತ್ಸಂಪಾದಿತಂ ತದ್ವಪುಃ
ಸಂಕೀರ್ಣಂ ರುಚಿಸಂಕುಲಂ ಕಲಯತಾಂ ಸಂಕರ್ಷಣಾಖ್ಯಂ ಮಹಃ || ೮ ||

ಶ್ರೀಸಂಕರ್ಷಣತೀರ್ಥಪೂಜ್ಯಚರಣಂ ಶ್ರೀರತ್ನಮಾಲ್ಯಾಂಕಿತಂ
ಸ್ತೋತ್ರಂ ವೇಂಕಟಭೂಸುರೇಣ ಭಣಿತಂ ಗೋದಾತಟೀವಾಸಿನಾ |
ನಕ್ತಂ ವಾ ಯದಿ ವಾ ದಿವಾ ದ್ವಿಜಚಯೈಃ ಶ್ರೇಯೋರ್ಥಿಭಿಃ ಸುಧ್ರುವಂ
ಶ್ರೋತವ್ಯಂ ಪಠಿತವ್ಯಮಿಷ್ಟಸುಖದಂ ಸದ್ಭಕ್ತಿಮುಕ್ತಿಪ್ರದಮ್ || ೯ ||

ಇತಿ ಶ್ರೀಮತ್ಕವಿಕುಲತಿಲಕ ಶ್ರೀಮದ್ವಾಗೀಶತೀರ್ಥಕರಕಮಲಸಂಜಾತ
ಶ್ರೀಮದ್ವಾದಿರಾಜತೀರ್ಥಗುರುಪ್ರಸಾದಿತಬೋಧಾಂಕುರಮನೋಕಣ
ವೇಂಕಟರಮಣಭೂಸುರೇಣ ಫಣಿತಂ ಶ್ರೀ ಸಂಕರ್ಷಣ
ನವರತ್ನಮಾಲಿಕಾಸ್ತೋತ್ರಂ ಸಂಪೂರ್ಣಮ್

# ಅಥ ಶ್ರೀಸಂಕರ್ಷಣಮಂಗಲಾಷ್ಟಕಮ್

ಶ್ರೀವಿದ್ಯುತ್ಕಮುನೀಯಕೃಷ್ಣ ಜಲದಪ್ರೋದ್ಯದ್ದಯೋದಾರವಾಕ್-
ಧಾರಾಪೂರಿತಧೀರಸದ್ದ್ವಿಜವಿಹಾರಾಧಾರಬೋಧಾಶಯಃ ।
ಸಾದ್ಗುಣ್ಯಗ್ರಥಿತಾತ್ಮವಿದ್ವಿಜಯತೇ ಸದ್ಯಸ್ಸನಸ್ಯುಚ್ಯತೇ
ದದ್ಯಾನ್ಮಂಗಲಮಾಶ್ರಿತಾಮರತರುಃ ಸಂಕರ್ಷಣಾಖ್ಯೋ ಗುರುಃ ॥ ೧ ॥

ಸಂಸ್ತುತ್ವಾ ಸ್ತುತಿಭಿಃ ಪ್ರಣಮ್ಯ ಶಿರಸಾ ಸಮ್ಯಕ್ ಪರಿಕ್ರಮ್ಯ ಯಂ
ಶಾಂತಸ್ವಾಂತಮನುಸ್ಮರನ್ನಭಿಮತಾನ್ ಆಪುಃ ಸಮಸ್ತಾ ನರಾಃ ।
ಸೌಮ್ಯಃ ಕಿಲ್ಬಿಷಹನ್ಮರೋ ಲಸತಿ ನಃ ಸಂಪದ್ಗಿರಿಪ್ರಾಂತರೇ
ದದ್ಯಾನ್ಮಮಂಗಲಮಾಶ್ರಿತಾಮರತರುಃ ಸಂಕರ್ಷಣಾಖ್ಯೋ ಗುರುಃ ॥ ೨ ॥

ವಂದಾರುಸ್ಥಿತಿವೇದಪಾಠನಿನದಬೃಂದಾವನೇ ಭೂಧ್ಯುಷತ್-
ಬೃಂದಾಭ್ಯರ್ಚಿತಸೂನದಾಮತುಲಸೀಭೂಷಾವಿಶೇಷೈಃ ಸಮಮ್ ।
ಕಾಂತ್ಯಾ ಹೇಮಸರೂಪಕಲಿತೋ ಭ್ರಾಜತ್ಯಸೌ ಯಸ್ಸ ನೋ
ದದ್ಯಾನ್ಮಂಗಲಮಾಶ್ರಿತಾಮರತರುಃ ಸಂಕರ್ಷಣಾಖ್ಯೋ ಗುರುಃ ॥ ೩ ॥

ಯಃ ಕೌಪೀನಸರಾಟ್‌ಫಣಾಂಕಿತಮಿದಂ ತ್ರಯ್ಯಕ್ಷಮಂಸೇ ಜ್ವಲತ್-
ಫಾಲಾಕ್ಷಂ ಮಮ ದರ್ಶಯನ್ನಿತಿ ಜಟಾಜೂಟಂ ವಹನ್ ರಾಜತೇ ।
ಸ್ವಪ್ನೇಸ್ವಾತ್ಮವಿದಾಂ ನಿಬೋಧ್ಯ ಸತತಂ ಸ್ವಾಲಂಕ್ರಿಯಾಭಿಸ್ಸ ನೋ
ದದ್ಯಾನ್ಮಂಗಲಮಾಶ್ರಿತಾಮರತರುಃ ಸಂಕರ್ಷಣಾಖ್ಯೋ ಗುರುಃ ॥ ೪ ॥

ಕಾಷಾಯಂ ವಸನಂ ಕಮಂಡಲುಮುರಸ್ಕಂಜಾಕ್ಷಮಾಲ್ಯಂ ಮುಖೇ
ಸಾಂಗಾರಾಕ್ಷತಪುಂಡ್ರಮೂರ್ಧ್ವರಚಿತಂ ಚಕ್ರಾದಿಮುದ್ರಾಂಕಿತಮ್ ।
ದಂಡಂ ಪಾಣಿತಲೇ ವಹನ್ ಸುಮಹಸಾ ಸಂಶೋಭಿತೋ ಯಸ್ಸ ನೋ
ದದ್ಯಾನ್ಮಂಗಲಮಾಶ್ರಿತಾಮರತರುಃ ಸಂಕರ್ಷಣಾಖ್ಯೋ ಗುರುಃ ॥ ೫ ॥

ಆರ್ತಾನಾಂ ಅಭಯಪ್ರದಾನಸುಕೃತಾವಧ್ಯಾತ್ಮಸಂಬೋಧನೇ
ನಮ್ರೀಭಾವಸಮೀಯುಷಾಂ ಸುವಿದುಷಾಂ ಸಮ್ಮಾನನೈಕವ್ರತಮ್ ।
ಪ್ರತ್ಯೂಹಾದ್ರಿಕದಂಬಭೇದಸದೃಶಃ ಪ್ರಜ್ಞಾಚಣೋ ಯಸ್ಸ ನೋ
ದದ್ಯಾನ್ಮಂಗಲಮಾಶ್ರಿತಾಮರತರುಃ ಸಂಕರ್ಷಣಾಖ್ಯೋ ಗುರುಃ ॥ ೬ ॥

ತುಷ್ಯನ್ ಶಿಷ್ಯಜನೈಃ ಸಮಂ ಪ್ರತಿದಿನಂ ಸಂತರ್ಪಯಿಷ್ಯನ್ನಯಂ
ಸತ್ರಾಮತ್ರಸುಭೋಜ್ಯಭೋಜನಚಯಂ ಸತ್ರಂ ಪ್ರಕಲ್ಪ್ಯ ತ್ರಯೀ ।
ಪ್ರಾತರ್ಯತ್ರ ದಿನತ್ರಯಂ ಕಲಯತಿ ಸ್ವಾರಾಧನೇ ಯಸ್ಸ ನೋ
ದದ್ಯಾನ್ಮಂಗಲಮಾಶ್ರಿತಾಮರತರುಃ ಸಂಕರ್ಷಣಾಖ್ಯೋ ಗುರುಃ ॥ ೭ ॥

ಭೇರೀಕಾಹಲಿಕಾರವೈಃ ಬಹುವಿಧೈಃ ವಾದ್ಯೈಸ್ತ್ವನ್ಯೈಶ್ಚಾಮರೈಃ
ಛತ್ರಾದ್ಯೈರುಪಹಾರಧೂಪನಿಚಯೈಃ ದೀಪೋಚ್ಚಯೈಃ ಪಾಯಸೈಃ |
ಭಾಗ್ಯೈರ್ಭೂರಿವಿಧಾರ್ಚನೈಃ ಕಲಯತೇ ಸ್ವಾರಾಧನೇ ಯಸ್ಸ ನೋ
ದದ್ಯಾನ್ಮಂಗಲಮಾಶ್ರಿತಾಮರತರುಃ ಸಂಕರ್ಷಣಾಖ್ಯೋ ಗುರುಃ || ೮ ||

ಇತ್ಯಾಖ್ಯಾತಂ ಸುಮಂಗಲಾಷ್ಟಕಮಿದಂ ಗೋದಾತಟೇವಾಸಿನಾ
ಶಸ್ತಂ ವೇಂಕಟಭೂಸುರೇಣ ಕವಿನಾ ಕಲ್ಯಾಣಸಂಪದ್ಧನಮ್ |
ಕಲ್ಯಾಣಾಗಮಕಾರಣಂ ಪ್ರಪಠತಾಂ ಕಾಲತ್ರಯೇ ಸದ್ಗುರೋಃ
ಶ್ರೀಸಂಕರ್ಷಣತೀರ್ಥಪೂಜ್ಯಚರಣಶ್ರೀಮತ್ಪ್ರಸಾದಾತ್ ಸದಾ || ೯ ||

ಇತಿ ಶ್ರೀಮತ್ಕವಿಕುಲತಿಲಕ ಶ್ರೀಮದ್ವಾಗೀಶತೀರ್ಥಕರಕಮಲಸಂಜಾತ
ಶ್ರೀಮದ್ವಾದಿರಾಜತೀರ್ಥಗುರುಪ್ರಸಾದಿತಬೋಧಾಂಕುರಮನೋಕಣ
ವೇಂಕಟರಮಣಭೂಸುರೇಣ ಭಣಿತಂ ಸಂಕರ್ಷಣ–
ಮಂಗಲಾಷ್ಟಕಂ ಸಂಪೂರ್ಣಮ್ ||

ಶ್ರೀಕೃಷ್ಣಾರ್ಪಣಮಸ್ತು



## ಮನವಿ

ಶ್ರೀ ಸಂಕರ್ಷಣ ಒಡೆಯರವರ ವೃಂದಾವನಕ್ಕೆ ಹೋಗಲಿಚ್ಛಿಸುವವರು, ಕಾಟಪಾಡಿ ಯಿಂದ ನಾಲ್ಕು ಮೈಲಿ ದೂರದಲ್ಲಿರುವ ವೇಲೂರಿಗೆ ಹೋಗಿ, ಅಲ್ಲಿಂದ ವೇಲೂರು–ತಿರುವಣ್ಣಾಮಲೈ ಮಧ್ಯದಲ್ಲಿರುವ ಪೋಳೂರಿನಲ್ಲಿ ಇಳಿದು, ಅಲ್ಲಿಂದ ಬೇರೆ ಬಸ್ಸಿನಲ್ಲಿ ಕರಂಪೂಂಡಿಗೆ ಹೋಗಬೇಕು. ಪೋಳೂರಿನಿಂದ ಕರಂಪೂಂಡಿಗೆ ಐದು ಮೈಲಿ. ಬಸ್ಸು ಬಹುದಾನದಿಯ ಸೇತುವೆಯ ಹತ್ತಿರ ನಿಲ್ಲುತ್ತದೆ. ಅಲ್ಲಿಂದ ಅರ್ಧಮೈಲಿ ನಡೆದುಕೊಂಡು ಹೋಗಬೇಕು. ಈಗ ಶ್ರೀ ಡಬ್ಲ್ಯು. ಸುಬ್ಬರಾಯರೆಂಬುವರು ಪೂಜೆಯನ್ನು ಮಾಡು ತ್ತಿದ್ದಾರೆ. ಆರಾಧನೆ ಮಾರ್ಗಶಿರ ಶುದ್ಧ ಪಂಚಮೀ ಬರುತ್ತದೆ. ಆರಾಧನೆಗೆ ಧನಸಹಾಯ ಮಾಡುವವರು ಶ್ರೀ ಡಬ್ಲ್ಯು. ಸುಬ್ಬರಾವ್, ಕರಂಪೂಂಡಿ (ಪೋಳೂರು ಮಾರ್ಗ), ಉತ್ತರ ಆರ್ಕಾಟ್ ಜಿಲ್ಲಾ, ತಮಿಳುನಾಡು. ಈ ವಿಳಾಸಕ್ಕೆ ಕಳುಹಿಸಬೇಕು. ಬೇರೆ ಯಾವ ವರಮಾನವೂ ಇಲ್ಲದೆ ಇರುವುದರಿಂದ, ಶ್ರೀ ಸಂಕರ್ಷಣ ಒಡೆಯರವರ ವ್ಯಾಖ್ಯಾನವನ್ನು ಯಾರು ಯಾರು ಓದುತ್ತಿದ್ದಾರೆಯೋ ಅವರುಗಳು ಯಥಾಶಕ್ತಿ ದ್ರವ್ಯಸಹಾಯ ಮಾಡಬೇಕಾಗಿ ಈ ಮೂಲಕ ಪ್ರಾರ್ಥಿಸುತ್ತೇವೆ.

**ರಾಣ್ಯ ರಾಜಾರಾವ್**
ಶ್ರೀಹರಿವಿಠ್ಠಲ ಪ್ರಕಾಶನ

# ವಿಷಯಾನುಕ್ರಮಣಿಕೆ



## ಸೂಚನೆ

ಭಾವಚಿತ್ರಗಳ ಪೈಕಿ ಶ್ರೀ ಜಯತೀರ್ಥರ ವೃಂದಾವನದ ನಂತರ ಶ್ರೀ ಗೋಪಾಲದಾಸರ ಚಿತ್ರ, ಆಮೇಲೆ ಶ್ರೀ ಜಗನ್ನಾಥದಾಸರ ಚಿತ್ರ ಇಡಬೇಕಾಗಿತ್ತು. ಪ್ರಮಾದದಿಂದ ಅದಲುಬದಲಾಗಿದೆ.

॥ ಶ್ರೀ ಲಕ್ಷ್ಮೀನರಸಿಂಹ ಪ್ರಸನ್ನ ॥

# ಸ್ತುತಿ ರತ್ನ ಮಾಲಾ

## ಶ್ರೀ ಗುರುಶ್ರೀಶವಿಠಲರಿಂದ ರಚಿತವಾದುದು

(ಕುಂಟೋಜಿದಾಸರು)

ಭಾನುಕೋಟಿ ತೇಜ, ಲಾವಣ್ಯಮೂರುತಿ, ಶ್ರೀ ವೆಂಕಟೇಶನೇ, ನಮೋನಮೋ,
ಶ್ರೀನಿವಾಸ ದಯಾನಿಧೆ ।

ಶೇಷಾಚಲನಿವಾಸ, ದೋಷದೂರನೆ, ಭಕ್ತಪೋಷಕ, ಶ್ರೀಕಾಂತ, ನಮೋ ನಮೋ,
ಶ್ರೀನಿವಾಸ ದಯಾನಿಧೆ ।

ನೀಲಮೇಘಶ್ಯಾಮ, ಪಾಲಸಾಗರಶಯನ, ಶ್ರೀಲಕುಮೀಶನೆ, ನಮೋ ನಮೋ,
ಶ್ರೀನಿವಾಸ ದಯಾನಿಧೆ ।

ಖಗರಾಜವಾಹನ, ಜಗನೊಡೆಯನೆ, ನಿನ್ನ ಅಗಣಿತ ಮಹಿಮೆಗೆ, ನಮೋ ನಮೋ,
ಶ್ರೀನಿವಾಸ ದಯಾನಿಧೆ ।

ಶಂಖಚಕ್ರಧರ, ವೆಂಕಟರಮಣ್ಯಕಳಂಕಮೂರುತಿದೇವ, ನಮೋ ನಮೋ,
ಶ್ರೀನಿವಾಸ ದಯಾನಿಧೆ ।

ಪನ್ನಂಗಶಯನನೆ, ನಿನ್ನಂಥ ದೇವರು ಇನ್ನುಂಟೆ, ಅಜಭವಸುರವಂದ್ಯಾ
ಶ್ರೀನಿವಾಸ ದಯಾನಿಧೆ ।

ಸೃಷ್ಟಿ ಇಲ್ಲದಲೆ ಒತ್ತಟ್ಟಿಗಿದ್ದವರನ್ನು ಸೃಷ್ಟಿಸಿ ಜೀವರ ಸಲಹುವೀ,
ಶ್ರೀನಿವಾಸ ದಯಾನಿಧೆ ।

ತನುಮನ ಕರಣಗಳನು ಕೊಟ್ಟು ಅನಿಮಿಷರನು ಅಭಿಮಾನಿಗಳೆನಿಸಿದೀ,
ಶ್ರೀನಿವಾಸ ದಯಾನಿದೆ ।

ದೀನವತ್ಸಲ, ನಿನ್ನಾಧೀನದೊಳಗಿಟ್ಟು ಜ್ಞಾನ ಕರ್ಮಗಳ ಮಾಡಿಸುವಿಯೋ
ಶ್ರೀನಿವಾಸ ದಯಾನಿಧೆ ।

ಕ್ಷಣ ಬಿಡದಲೆ ಭಕ್ತಜನರ ರಕ್ಷಿಸುವಿ, ದುರ್ಜನರಿಗೆ ದುರ್ಲಭನೆನಿಸುವೀ,
ಶ್ರೀನಿವಾಸ ದಯಾನಿಧೆ ।

ವೈಷಮ್ಯ ನೈರ್ಘೃಣ್ಯ ಲೇಶವಿಲ್ಲವರ, ಉಪಾಸನದಂತೆ ಫಲಗಳೀವೀ
ಶ್ರೀನಿವಾಸ ದಯಾನಿಧೆ ।

ಒಂದೇ ರೂಪದಿ, ಬಹುಮಂದಿಯೊಳಗಿದ್ದು, ಬಂಧಮೋಕ್ಷಪ್ರದನೆನಿಸುವೀ
ಶ್ರೀನಿವಾಸ ದಯಾನಿಧೆ ।

ಜ್ಞಾನಿಗಳರಸ, ಅಜ್ಞಾನಿಗಳೊಳು ನಾ ಅಜ್ಞಾನಿ, ಸುಜ್ಞಾನವ ಪಾಲಿಸೋ
ಶ್ರೀನಿವಾಸ ದಯಾಸಿಧೆ ।

ನಂಬಿದೆ ನಾ ನಿನ್ನ ಬಿಂಬ ಮೂರುತಿ ಎನ್ನ ಡಿಂಬದೊಳಗೆ ಪೊಳೆ ಅನುದಿನ,
ಶ್ರೀನಿವಾಸ ದಯಾನಿಧೆ ।

ನಿನ್ನ ಹೊರತು ಎನಗನ್ಯರಿಂದೇನಯ್ಯ, ನಿನ್ನ ಸ್ತುತಿಪ ಸುಖಕ್ಕೆಣೆಗಾಣೇ,
ಶ್ರೀನಿವಾಸ ದಯಾನಿಧೆ |
ಘನ್ನ ಮಹಿಮ ಎನಗಿನ್ನೊಂದು ಬಯಕಿಲ್ಲ, ನಿನ್ನ ಧ್ಯಾನದೊಳಿಡು ಮರಿಯದೇ,
ಶ್ರೀನಿವಾಸ ದಯಾನಿಧೆ |
ದುರ್ಜನ ಸಂಗ ವಿವರ್ಜ ಮಾಡಿಸಿ, ಸಾಧುಸಜ್ಜನರ ಸೇವೆಯೊಳಗಿಡೋ,
ಶ್ರೀನಿವಾಸ ದಯಾನಿಧೆ |
ಏಸು ಜನ್ಮಗಳೀಯೆ ಲೇಸು ಚಿಂತೆಯು ಇಲ್ಲ, ದಾಸನೆಂದೆನಿಸು ದಾಸ್ಯವನಿತ್ತು,
ಶ್ರೀನಿವಾಸ ದಯಾಸಿಧೆ |
ಎನ್ನಪ್ಪ ಎನ್ನಣ್ಣ ಎನ್ನ ಕಾಯ್ವ ದೇವ, ನಿನ್ನ ವಿಸ್ಮರಣೆಯ ಕೊಡದಿರೊ,
ಶ್ರೀನಿವಾಸ ದಯಾನಿಧೆ |
ಮನಸಿನ ಚಂಚಲವನು ತೊಲಗಿಸಿ, ಪಾದವನಜದಲ್ಲಿರಿಸಯ್ಯ ಜಿತವಾಗಿ,
ಶ್ರೀನಿವಾಸ ದಯಾಸಿಧೆ |
ಕರಣಗಳಿಂದ ಆಚರಿಸುವ ವಿಷಯ, ಶ್ರೀಹರಿ ನಿನ್ನ ಸೇವೆಯಾಗಲಿ ಸ್ವಾಮಿ,
ಶ್ರೀನಿವಾಸ ದಯಾನಿಧೆ |
ಹರಿಯೇ ಸರ್ವೋತ್ತಮ, ಸುರರೆಲ್ಲ ದಾಸರು, ತಾರತಮ್ಯ ಭೇದಜ್ಞಾನವನೀಯೋ,
ಶ್ರೀನಿವಾಸ ದಯಾನಿಧೆ |
ಬುದ್ಧಿಪೂರ್ವಕ ಗುರು ಮಧ್ವಮತವ, ತಿಳಿದಿದ್ದವನೆ ಜ್ಞಾನವೃದ್ಧನೋ,
ಶ್ರೀನಿವಾಸ ದಯಾನಿಧೆ |
ಗುರುಗಳ ಕರುಣ ಸುಸ್ಥಿರವಾಗಿದ್ದವರಿಗೆ, ಹರಿ ನಿನ್ನನುಗ್ರಹವಾಗುವುದೋ,
ಶ್ರೀನಿವಾಸ ದಯಾನಿಧೆ |
ನಿನ್ನವರಲ್ಲದೆ ಅನ್ಯರು ಬಲ್ಲರೆ ಘನ್ನಮತದ ಸುಖ ಸವಿಯನ್ನೂ,
ಶ್ರೀನಿವಾಸ ದಯಾನಿಧೆ |
ನಿನ್ನ ಚಿತ್ತಕೆ ಬಂದುದೆನ್ನ ಚಿತ್ತಕೆ ಬರಲಿ, ಅನ್ಯಥ ಬಯಕೆಯ ಕೊಡದಿರೋ,
ಶ್ರೀನಿವಾಸ ದಯಾನಿಧೆ |
ಸ್ತುತಿರತ್ನಮಾಲಾ ಸಂಸ್ತುತಿಸಿ ಹಿಗ್ಗುವರಿಗೆ, ಪ್ರತಿದಿನ ಸುಖ ಅಭಿವೃದ್ಧಿಯೋ,
ಶ್ರೀನಿವಾಸ ದಯಾನಿಧೆ |
ಗುರುಗಳು ಮಧ್ವರಾಯರು, ಮೂರು ಲೋಕಕ್ಕೆ ಧೊರೆ ಗುರುಶ್ರೀಶವಿಠಲ ನಮೋ
ಶ್ರೀನಿವಾಸ ದಯಾನಿಧೆ |

|| ಶ್ರೀ ಕೃಷ್ಣಾರ್ಪಣಮಸ್ತು ||

ಶ್ರೀ ಜಗನ್ನಾಥದಾಸರಾಯರ ಉಪಾಸನಾಮೂರ್ತಿ

## ಶ್ರೀ ಲಕ್ಷ್ಮೀನರಸಿಂಹ ದೇವರು



ನರಸಿಂಹೋಽಖಿಲಾಜ್ಞಾನಮತಧ್ವಾಂತದಿವಾಕರಃ |
ಜಯತ್ಯಮಿತಸಜ್ಜ್ಞಾನಸುಖಶಕ್ತಿಪಯೋನಿಧಿಃ ||

## ಶ್ರೀ ಹಯಗ್ರೀವ ದೇವರು



ಹಯಗ್ರೀವ ದಯಾಸಿಂಧೋ ಬಂಧೋ ಸಜ್ಜನಸಂತತೇಃ |
ತ್ರಯೀಗ್ರೀವ ನಮಶ್ಚಾಂದ್ರಸಾಂದ್ರಕಾಂತಿಸಮಾಂಶುಮಾನ್ ||

## ಶ್ರೀ ಧನ್ವಂತರಿರೂಪೀ ನಾರಾಯಣ ದೇವರು



ಧನ್ವಂತರೇಂಗರುಚಿಧನ್ವಂತರೇರಿತರುಧನ್ವಂಸ್ತರೀಭವ ಸುಧಾ
ಭಾನ್ವಂತರಾವಸಥಮನ್ವಂತರಾಧಿಕೃತತನ್ವಂತರೌಷಧಿನಿಧೇ |
ಧನ್ವಂತರಂಗಶುಗುಧನ್ವಂತಮಾಜಿಷು ವಿತನ್ವನ್ನಮಾಬ್ಧಿ ತನಯಾ
ಸೂನ್ವಂತಕಾತ್ಮಹೃದತನ್ವಂತರಾವಯುವತನ್ವಂತರಾರ್ತಿಜಲಧೌ ||

## ಶ್ರೀ ಪಾಂಡುರಂಗವಿಠ್ಠಲ ದೇವರು



ಪಾಪಾವಲೀಪಾಟನಪಟ್ವಪಾಂಗಃ
ಶ್ರೀಪಾಣಿಪದ್ಮಾಂಚಿತಜಾನುಜಂಘಃ |
ಗೋಪಾಲಬಾಲಃ ಕೃಪಯಾ ಸ್ವಯಂ ನಃ
ಶ್ರೀಪಾಂಡುರಂಗೋ ಭವತು ಪ್ರಸನ್ನಃ ||

## ಶ್ರೀ ಸೀತಾರಾಮಚಂದ್ರ ದೇವರು



ರಾಮಾಯ ರಾಮಭದ್ರಾಯ ರಾಮಚಂದ್ರಾಯ ವೇಧಸೇ |
ರಘುನಾಥಾಯ ನಾಥಾಯ ಸೀತಾಯಾಃ ಪತಯೇ ನಮಃ ||

## ಉಡುಪಿ ಶ್ರೀಕೃಷ್ಣ ದೇವರು



ಕೃಷ್ಣಂ ವಂದೇ ಮಂಥಪಾಶಧರಂ ದಿವ್ಯಾರ್ಭಕಾಕೃತಿಮ್ |
ಶಿಖಾಬಂಧತ್ರಯೋಪೇತಂ ಭೈಷ್ಮೀಮಧ್ವಕರಾರ್ಚಿತಮ್ ||

## ಶ್ರೀ ಶ್ರೀನಿವಾಸ ದೇವರು



ಕಲ್ಯಾಣಾದ್ಭುತಗಾತ್ರಾಯ ಕಾಮಿತಾರ್ಥಪ್ರದಾಯಿನೇ |
ಶ್ರೀಮದ್ವೇಂಕಟನಾಥಾಯ ಶ್ರೀನಿವಾಸಾಯ ತೇ ನಮಃ ||

## ಶ್ರೀ ಪದ್ಮಾವತೀ ದೇವಿಯರು



ಬ್ರಹ್ಮಾದ್ಯಾಃ ವಿಬುಧಶ್ರೇಷ್ಠಾಃ ಬ್ರಹ್ಮಣ್ಯಾದ್ಯಾಃ ಸುರಾಂಗನಾಃ |
ಯಾಂ ಪೂಜಯಂತೇ ಸೇವಂತೇ ಸಾ ಮಾಂ ಪಾತು ರಮಾ ಸದಾ ||

ಶ್ರೀ ಬದರಿಕಾಶ್ರಮ, ಶ್ರೀ ವೇದವ್ಯಾಸ ದೇವರು—ಶ್ರೀಮದಾಚಾರ್ಯರು



ವಿಜ್ಞಾನರೋಚಿಃಪರಿಪೂರಿತಾಂತರ್ಬಾಹ್ಯಾಂಡಕೋಶಂ ಹರಿತೋಪಲಾಭಂ |
ತರ್ಕಾಭಯೇತಂ ವಿಧಿಶರ್ವಪೂರ್ವಗೀರ್ವಾಣವಿಜ್ಞಾನದಮಾನತೋಽಸ್ಮಿ ||

ಶ್ರೀಮದಾನಂದತೀರ್ಥಾರ್ಯಪಾದಪಂಕಜರೇಣವಃ |
ಪವಿತ್ರಯಂತು ಮಾಂ ನಿತ್ಯಂ ಪಾಪಪಾಟನಪಂಡಿತಾಃ ||

## ಶ್ರೀ ಮಹಾಲಕ್ಷ್ಮೀ ದೇವಿಯರು



ಅಂಬಾಂ ಪೀತಾಂಬರಶ್ರೋಣೀಂ ಲಂಬಾಲಕಲಸನ್ಮುಖೀಮ್ ।
ಬಿಂಬಾಧರೋಷ್ಠೀಂ ಕಸ್ತೂರಿಜಂಬಾಲತಿಲಕಾಂ ಭಜೇ ॥

## ಶ್ರೀ ಮುಖ್ಯಪ್ರಾಣದೇವರು



ಜ್ಞಾನೇ ವಿರಾಗೇ ಹರಿಭಕ್ತಿಭಾವೇ ಧೃತಿಸ್ಥಿತಿಪ್ರಾಣಬಲೇಷು ಯೋಗೇ ।
ಬುದ್ಧೌ ಚ ನಾನ್ಯೋ ಹನುಮತ್ಸಮಾನಃ ಪುಮಾನ್ ಕದಾಚಿತ್ ಕ್ವ ಚ ಕಶ್ಚನೈವ ॥

## ಅವತಾರತ್ರಯ ವಾಯುದೇವರು

ಹನುಮ-ಭೀಮ-ಮಧ್ವ



ಪ್ರಥಮೋ ಹನುಮನ್ನಾಮ ದ್ವಿತೀಯೋ ಭೀಮ ಏವ ಚ ।
ಪೂರ್ಣಪ್ರಜ್ಞ ಸ್ತೃತೀಯಸ್ತು ಭಗವತ್ಕಾರ್ಯಸಾಧಕಃ ॥

## ಶ್ರೀ ಸರಸ್ವತೀ ದೇವಿಯರು



ಸರಸ್ವತೀಂ ನಮಸ್ಯಾಮಿ ಚೇತನಾನಾಂ ಹೃದಿ ಸ್ಥಿತಾಮ್ ।
ಕಂಠಸ್ಥಾಂ ಪದ್ಮಯೋನೇಸ್ತು ಹಿಮಾಕರಪ್ರಿಯಾಂ ಸದಾ ॥

## ಶಿವಪಂಚಾಯತನ



ಹರ ಶಂಭೋ ಮಹಾದೇವ ವಿಶ್ವೇಶಾಮರವಲ್ಲಭ |
ಶಿವ ಶಂಕರ ಸರ್ವಾತ್ಮನ್ ನೀಲಕಂಠ ನಮೋಽಸ್ತು ತೇ ||

## ಶ್ರೀ ಜಯತೀರ್ಥರ ವೃಂದಾವನ
(ಟೀಕಾಕೃತ್ಪಾದರು)
(ಮಳಖೇಡ)



ಚಿತ್ರೈಃ ಪದೈಶ್ಚ ಗಂಭೀರೈರ್ವಾಕ್ಯೈರ್ಮಾನೈರಖಂಡಿತೈಃ ।
ಗುರುಭಾವಂ ವ್ಯಂಜಯಂತೀ ಭಾತಿ ಶ್ರೀಜಯತೀರ್ಥವಾಕ್ ॥
(ಆರಾಧನೆ—ಆಷಾಢ ಕೃಷ್ಣ ಪಂಚಮಿ)

## ಶ್ರೀ ಜಗನ್ನಾಥದಾಸವರ್ಯರು



ಜಲಜೇಷ್ಟನಿಭಾಕಾರಂ ಜಗದೀಶಪದಾಶ್ರಯಮ್
ಜಗತೀತಲವಿಖ್ಯಾತಂ ಜಗನ್ನಾಥಗುರುಂ ಭಜೇ |
ದಾಸವರ್ಯಂ ದಯಾಯುಕ್ತಂ ದೂರೀಕೃತದುರಾಶಿಷಂ
ಹರಿಕಥಾಮೃತವಕ್ತಾರಂ ಜಗನ್ನಾಥಗುರುಂ ಭಜೇ ||

# ಶ್ರೀ ಗೋಪಾಲದಾಸವರ್ಯರು




ಆಗತಾದಿತ್ರಿಕಾಲಜ್ಞಂ ಆಗಮಾರ್ಥವಿಶಾರದಮ್ |
ತ್ಯಾಗಭೋಗಸಮಾಯುಕ್ತಂ ಭಾಗಣ್ಣಾರ್ಯಗುರುಂ ಭಜೇ ||

## ಕರ್ಜಗಿ ಶ್ರೀ ಹರಿವಿಠ್ಠಲಾಶ್ರಮ ಸ್ಥಾಪಕರು



| ಜನನ | ಶ್ರೀ ಹರಿವಿಠ್ಠಲ | ಹರಿಪದಪ್ರಾಪ್ತಿ |
|---|---|---|
| 14-2-1914 | (ವಿ. ಎಸ್. ಜೋಷಿಯವರು) | 30-8-1971 |
| ಶಿವರಾತ್ರಿ | | ಶ್ರೀ ಜಗನ್ನಾಥದಾಸರ ಪುಣ್ಯದಿನ |

|| ಓಂ ಶ್ರೀ ಗುರುಭ್ಯೋ ನಮಃ ಹರಿಃ ಓಂ ||

# ಹದಿನೆಂಟನೆಯ ಸಂಧಿ

## ಸರ್ವಸ್ವಾತಂತ್ರ್ಯ ಸಂಧಿ

**ಹರಿಕಥಾಮೃತಸಾರ ಗುರುಗಳ ।**
**ಕರುಣದಿಂದಾಪನಿತು ಪೇಳುವೆ ।**
**ಪರಮ ಭಗವದ್ಭಕ್ತರಿದನಾದರದಿ ಕೇಳುವುದು || ಪ ||**

ಈ ಸಂಧಿಯಲ್ಲಿ ಶ್ರೀ ಪರಮಾತ್ಮ ಸರ್ವಸ್ವತಂತ್ರ ಎಂತಲೂ, ಜೀವ ಪರಾಧೀನ ಎಂತಲೂ ವಿಚಾರವನ್ನ ಹೇಳತಾರೆ.

**ಶ್ರೀನಿವಾಸನ ಚರಿತೆಗಳ ಪರ ।**
**ಮಾನುರಾಗದಿ ಬೆಸಗೊಳಲು ಮುನಿ ।**
**ಶೌನಕಾದ್ಯರಿಗರುಪಿದನು ಸೂತಾರ್ಯ ದಯದಿಂದ ||**

ಶ್ರೀ ಪರಮಾತ್ಮನ ಮಹಾಮಾಹಾತ್ಮ್ಯವನ್ನ ಕೇಳಬೇಕು ಎಂತ ಕುತೂಹಲ ಯುಕ್ತರಾದ ನೈಮಿಷಾರಣ್ಯ ನಿವಾಸಿಗಳಾದ ಶೌನಕಾದಿ ಋಷಿಗಳಿಗೆ, ಸೂತಪುರಾಣಿಕರು ಅಂತಃಕರಣದಿಂದ ಉಪದೇಶ ಮಾಡತಾರೆ.

**ಮೂಲ :**

**ಪಚನ ಭಕ್ಷಣ ಗಮನ ಭೋಜನ ।**
**ವಚನ ಮೈಥುನ ಶಯನ ವೀಕ್ಷಣ ।**
**ಅಚಲನ ಚಲನ ಪ್ರಯತ್ನವು ಸಾಧ್ಯವೇ ಜನಕೆ ||**
**ಶುಚಿಸದನ ದಯದಿಂದೆ ಜೀವರ ।**
**ನಿಚಯದೊಳು ತಾನಿಂತು ಮಾಡುವ ।**
**ಉಚಿತಾನುಚಿತ ಕರ್ಮಗಳನೆಂದರಿದು ಕೊಂಡಾಡು || ೧ ||**

**ಟೀಕಾ :**

" ತೇನ ವಿನಾ ತೃಣಮಪಿ ನ ಚಲತಿ " ಎಂಬ ವಚನಾನುಸಾರ ಶ್ರೀ ಪರಮಾತ್ಮನ ವ್ಯತಿರಿಕ್ತ ಚರಾಚರಗಳು ಚಲಿಸಲಾರವು ಎಂತ ಹೇಳತಾರೆ.

ಪಚನ–ಭೋಜನೋಪಯೋಗವಾದ ವ್ರೀಹ್ಯಾದಿ ದ್ರವ್ಯಗಳ ಪಾಕಮಾಡೋಣ (ಭೋಜನಮಾಡಿದ ಪದಾರ್ಥ ಜೀರ್ಣಕ್ಕೆ ಬರುವುದಕ್ಕೆ ಪಚನ ಎಂತಲೂ ಹೇಳಬಹುದು),

ಭೋಜನ–ಆ ಪದಾರ್ಥಗಳ, ವದನದಲ್ಲಿ ಹಸ್ತದ್ವಾರಾ ಸೇರಿಸೋಣ, ಭಕ್ಷಣ–ಆ ಸೇರಿದ ಪದಾರ್ಥಗಳ ದಂತದಿಂದ ಅಗಿದು ಉದರದಲ್ಲಿ ಸೇರುವಂತೆ ನುಂಗೋಣ, ಗಮನ–ಪಾದ ಗಳಿಂದ ನಡಿಯೋಣ, ವಚನ–ವಾಗಿಂದ್ರಿಯದಿಂದ ಮಾತನಾಡೋಣ, ಶಯನ–ಮಲ ಗೋಣ, ಮೈಥುನ–ಸ್ತ್ರೀಸಂಭೋಗ ಮಾಡೋಣ, ವೀಕ್ಷಣ–ನೇತ್ರಗಳಿಂದ ನೋಡೋಣ, ಅಚಲನ–ದೇಹೇಂದ್ರಿಯಾದಿಗಳ ಕದಲಿಸದೆ ಇರೋಣ. ಚಲನ–ದೇಹೇಂದ್ರಿಯಾದಿಗಳ ಅಲ್ಲಾಡಿಸೋಣ, ಪ್ರಯತ್ನವು – ಇತ್ಯಾದಿ ಅನೇಕ ವಿಷಯಗಳ ಕುರಿತು ಪ್ರಯತ್ನ ಮಾಡೋಣ, ಜನಕೆ–ಈ ವ್ಯಾಪಾರಗಳು ಜೀವರಿಗೆ, ಸಾಧ್ಯವೇ–ಪರಮಾತ್ಮನ ವ್ಯತಿರಿಕ್ತ ಸಾಧ್ಯವಾಗೋದೇ (ಅಂದರೆ ಸಾಧ್ಯವಾಗಲಾರದು) ದರ್ಪಣದಲ್ಲಿ ಪ್ರತಿಫಲಿಸುವ ಪ್ರತಿ ಬಿಂಬ, ದರ್ಪಣವನ್ನು ನೋಡತಕ್ಕ ಬಿಂಬಾಧೀನ ಹ್ಯಾಂಗೊ ತದ್ವತ್, ಬಿಂಬ, ಪರಮಾತ್ಮ; ಪ್ರತಿಬಿಂಬ, ಜೀವರು. ಆದ್ದರಿಂದ ಈ ದೃಷ್ಟಾಂತಾನುಸಾರ, ಜೀವರು ಈಶಾಧೀನರಾದ ಪ್ರಯುಕ್ತ, ಶ್ರೀ ಪರಮಾತ್ಮನ ವ್ಯತಿರಿಕ್ತ ಪೂರ್ವೋಕ್ತ ವ್ಯಾಪಾರಗಳು ಮಾಡೋದಕ್ಕೆ ಸಾಧ್ಯವಿಲ್ಲ. ಬಿಂಬಕ್ರಿಯಾದ್ವಾರಾ, ಪ್ರತಿಬಿಂಬಕ್ರಿಯಾ ಆಗಬೇಕು, ತದ್ವ್ಯತಿರಿಕ್ತ ಜೀವರಿಗೆ ಪೃಥಕ್ ವ್ಯಾಪಾರವಿಲ್ಲ. ಶುಚಿಸದನ–ಪ್ರಕೃತಿಸಂಬಂಧವಿಲ್ಲದೆ ಶುಚಿರ್ಭೂತರಾಗಿ ಇರತಕ್ಕ ರಮಾದೇವೇರೇ ಮನಿಯಾಗಿ ಉಳ್ಳವ ಜೀವಾಂತರ್ಗತನಾದ ಪರಮಾತ್ಮ; ಜೀವಾಂತರ್ಗತದಲ್ಲಿ ರಮಾದೇವೇರು; ಈ ರಮಾಂತರ್ಗತ ಶ್ರೀಪರಮಾತ್ಮ ಎಂತ ಅರ್ಥ. ಅನಂತರ ಸ್ಥೂಲದೇಹದಲ್ಲಿ ಶುಚಿನಾಮಕ ವಾಯ್ವಂತರ್ಗತ ಪರಮಾತ್ಮ ಇರೋವನಾಗಿದ್ದಾನೆ. ದಯದಿಂದ–ಈ ಪರಮಾತ್ಮನ ದಯದಿಂದ, ಜೀವರ ನಿಚಯ ದೊಳು–ಪ್ರಾಣಿಗಳ ಸ್ವರೂಪದಲ್ಲಿ, ಬಾಹ್ಯ ಸ್ಥೂಲದೇಹದಲ್ಲಿ, ಈ ಉಭಯವಿಧವಾದ ಅನೇಕ ಸಮೂಹದಲ್ಲಿ, ತಾ ನಿಂತು – ಉಭಯ ರೂಪಗಳಿಂದ ತಾನು ಇದ್ದವನಾಗಿ, ಮಾಡುವ–ಜೀವರ ಸ್ವರೂಪದಲ್ಲಿ ಇಚ್ಛಾರೂಪವಾದ ಪ್ರೇರಣೆಗಳ ಜೀವೇಂದ್ರಿಯಗಳಿಗೆ ಮಾಡುವ; ಆ ಪ್ರೇರಣೆಯನ್ನೂ, ಅನಾದಿಕರ್ಮವನ್ನೂ ಅನುಸರಿಸಿ, ಉಚಿತಾನುಚಿತ– ಪುಣ್ಯಕರ್ಮಗಳ, ಪಾಪಕರ್ಮಗಳ, ಸ್ಥೂಲದೇಹೇಂದ್ರಿಯಗಳ ದ್ವಾರಾ, ಕರ್ಮಗಳನು– ಈ ಉಭಯವಿಧ ಕರ್ಮಗಳನ್ನೂ ಬಿಂಬಕ್ರಿಯಾದ್ವಾರಾ ತಾನೂ ಮಾಡಿ, ತದ್ದ್ವಾರಾ ಜೀವದೇಹದಿಂದ ಮಾಡಿಸೋವನಾಗತಾನೆ, ಎಂದರಿದು – ಜೀವ ಅಸ್ವತಂತ್ರ, ಪರ ಮಾತ್ಮ ಸ್ವತಂತ್ರ ಎಂತ ತಿಳದು, ಪೂರ್ವೋಕ್ತ ಅನುಸಂಧಾನದಿಂದ ಕರ್ಮಗಳ ಮಾಡತಾ, ಕೊಂಡಾಡು–ಮಹಾಮಾಹಾತ್ಮ್ಯೆಯನ್ನ ಹೊಗಳತಾ ಇರೋವನಾಗು ಎಂತ ಭಾವ.

**ತಾ||** ಜೀವರ ಅಂತರ್ಗತದಲ್ಲಿ ರಮಾಮಧುಸೂದನರು ಇರುತ್ತಾರೆ. ರಮಾ ದೇವೇರಿಂದ ಉಪಾಸ್ಯಮಾನನಾದ ಶ್ರೀಪರಮಾತ್ಮ ತಥಾ ರಮಾದೇವೇರು ಇವರಿಬ್ಬರ ಪ್ರೇರಣಾದಿಂದ ಜೀವರಲ್ಲಿ ಇಚ್ಛಾ ಉತ್ಪತ್ತಿಯಾಗಿ, ತದನಂತರ, ಸ್ಥೂಲದೇಹದಲ್ಲಿ ಶ್ರೀ ವಾಯುದೇವರ ಅಂತರ್ಗತಪ್ರೇರಣೆ. ಈ ವಾಯುದೇವರಿಂದ ಪ್ರೇರಣೆಯಾಗಿ ಪೂರ್ವೋಕ್ತ ಕಾರ್ಯಗಳು ನಡಿಯತವೆ ಎಂತ ಅರ್ಥ.

ಪ್ರಮಾಣ :– “ ಪಚನಂ ಗಮನಂ ಭಕ್ಷಂ ಭುಕ್ತಿರಿತ್ಯಾದಿಕರ್ಮಸು | ದೃಶ್ಯತೇ ಯತ್ನಸಾಧ್ಯಸ್ತು ದೇವಂ ತತ್ರಾಪಿ ಚಿಂತಯೇತ್ || ಕರ್ತುರಿಚ್ಛಾವಿಘಾತಾದ್ಯೈರ್ಲಿಂಗೈಸ್ಸಮ್ಯಕ್ ವಿವೇಕಿಭಿಃ || ” ಎಂಬ ಪ್ರಮಾಣಾರ್ಥ ವಿವರಿಸಿತು.

**ವಿಶೇಷಾರ್ಥ :–** ನೈಮಿಷಾರಣ್ಯ ಎಂದರೆ, ನಿಮಿಷನಾಮ್ನಾ ಋಷಿಣಾ ಯತ್ರ ತಪಶ್ಚರಣಂ, ತತ್ಸಂಬಂಧಾತ್ ನೈಮಿಷೇ, ತಸ್ಮಿನ್ ನೈಮಿಷಾರಣ್ಯೇ | ಶುನಕಸ್ಯಾಪತ್ಯಂ ಪುಮಾನ್ ಶೌನಕಃ, ರೋಮಹರ್ಷಣಾಪತ್ಯಂ ಪುಮಾನ್ ರೋಮಹರ್ಷಣಿಃ ಸೂತಃ ಋಷಿಃ ತ್ರಿಕಾಲಜ್ಞಾನದರ್ಶನಃ ಅಥವಾ ಮಂತ್ರದ್ರಷ್ಟಾ ವಾ ||

**ವಿಷ್ಟರವಶ್ರವ ದೇಹದೊಳಗೆ ಪ್ರ |**
**ವಿಷ್ಟನಾಗಿ ನಿರಂತರದಿ ಬಹು |**
**ಚೇಷ್ಟೆಗಳ ಮಾಡುತಿರೆ ಕಂಡು ಸಜೀವಿ ಎನುತಿಹರು ||**
**ಹೃಷ್ಟರಾಗುವರವನ ನೋಡಿ ಕ |**
**ನಿಷ್ಠರೆಲ್ಲರು ಸೇವೆ ಮಾಳ್ಪರು |**
**ಬಿಟ್ಟ ಕ್ಷಣದಲಿ ಕುಣಪವೆಂದರಿದನುಪೇಕ್ಷಿಪರು || ೨ ||**

ಶ್ರೀ ಪರಮಾತ್ಮ ಸರ್ವಚೇಷ್ಟಕನೆಂತ ಹೇಳತಾರೆ.

ವಿಷ್ಟರಶ್ರವ–ವಿಷ್ಟರವೆಂಬ ಸಿಂಹಾಸನಾದಿ ಪದವಿಗಳನ್ನು ಕೊಡುವ (ಕೀರ್ತಿ ಉಳ್ಳ ದೇವರು), ದೇಹದೊಳಗೆ–ಲಿಂಗ, ಅನಿರುದ್ಧ ದೇಹದಿಂದ ವಿಶಿಷ್ಟನಾದ ಜೀವನಿಂದ ಸಹಿತ ನಾಗಿ ಸ್ಥೂಲದೇಹದೊಳಗೆ, ಪ್ರವಿಷ್ಟನಾಗಿ–ಪ್ರವೇಶಮಾಡಿದವನಾಗಿ, ನಿರಂತರದಿ–ಪ್ರತಿಕ್ಷಣಕಾಲದಲ್ಲೂ, ಬಹುಚೇಷ್ಟೆಗಳ–ಅಸ್ವತಂತ್ರನಾದ ಪ್ರಕಾಶತೋ ವ್ಯಾಪ್ತನಾದ, ಜೀವಾಧಿಷ್ಠಿತನಾಗಿ, ತದ್ದ್ವಾರಾ ಜಡಪ್ರಕೃತಿಯಿಂದ ನಿರ್ಮಿತವಾದ ಸ್ಥೂಲದೇಹೇಂದ್ರಿಯಾದಿಗಳಿಂದ ಒಂದೊಂದೂ ಇಂದ್ರಿಯದ್ವಾರಾ, ಅನೇಕ ಪ್ರಕಾರವಾದ ಕಾರ್ಯಗಳು, ಮಾಡುತಿರೆ–ಬಿಂಬಕ್ರಿಯಾದ್ವಾರಾ ಜೀವನು ಮಾಡುತ್ತಿರಲಾಗಿ, ಕಂಡು–ದೇಹಾಂತರ್ಗತ ಜೀವನನ್ನೂ ಪರಮಾತ್ಮನನ್ನೂ ಕಾಣದೆ, ಪರಿದೃಶ್ಯಮಾನವಾದ ದೇಹವನ್ನ ನೋಡಿ, ಸಜೀವಿ ಎನುತಿಹರು–ಜೀವನಿಂದಲೂ, ಜೀವಶಬ್ದವಾಚ್ಯ ಪರಮಾತ್ಮನಿಂದಲೂ ಸಹಿತವಾಗಿ ದೇಹ ಬದುಕಿದೆ ಎಂತ ಅನುತಿಹರು, ಅವನ ನೋಡಿ–ಈ ಪ್ರಕಾರ ದೇಹಧಾರಿಯಾದವನ ಸ್ಥೂಲದೇಹವ ನೋಡಿ, ಹೃಷ್ಟರಾಗುವರು–ಸಂತೋಷಹೊಂದುವರು, ಕನಿಷ್ಠರೆಲ್ಲರು–ವಯಸ್ಸಿನಿಂದಲೂ ಜ್ಞಾನದಿಂದಲೂ ಜಾತಿಭೇದದಿಂದಲೂ ಅವರರಾದವರೆಲ್ಲರೂ, ಸೇವೆ ಮಾಳ್ಪರು–ತಾರತಮ್ಯಾನುಸಾರ ಆ ಸ್ಥೂಲದೇಹಕ್ಕೆ ಸೇವಾ ಮಾಡುವರು. ಬಿಟ್ಟ ಕ್ಷಣದಲಿ–ದೇಹಗತನಾದ ಪರಮಾತ್ಮ ಜೀವನ್ನ ತೆಗೆದುಕೊಂಡು ದೇಹವನ್ನ ಬಿಟ್ಟು ಹೊರಗೆ ಬಂದ ಕ್ಷಣದಲ್ಲಿ, ಕುಣಪವೆಂದರಿದು–ಪೂರ್ವೋಕ್ತ ಸೇವಾ ಮಾಡತಕ್ಕ ಎಲ್ಲರೂ ಈ ಶರೀರ ಶವ, ಪ್ರಯೋಜನವಿಲ್ಲ ಎಂತ ಅಂದವರಾಗಿ, ಅದನು–ಆ ಶವಶರೀರವನ್ನು, ಉಪ–ಸಮೀಪದಲ್ಲಿ ಇದ್ದು, ಈಕ್ಷಿಪರು–ನೋಡೋವರಾಗತಾರೆ. ಅಷ್ಟೇ ಹೊರ್ತು,

ಪೂರ್ವೋದೋಪಾದಿಯಲ್ಲಿ ಸಂತೋಷಪಡೋಣವೂ ಸೇವಾದಿಗಳ ಮಾಡೋಣವೂ ಇಲ್ಲದೆ ಉಪೇಕ್ಷಾ ಮಾಡಿಬಿಡತಾರೆ.

**ತಾ||** ಅಂತರ್ಗತನಾದ ಪರಮಾತ್ಮ ಇರೋವರಿಗೂ ಆ ದೇಹಕ್ಕೆ ಮರ್ಯಾದಾ, ಅನಂತರ ಇಲ್ಲ ಎಂಬುದು ಪ್ರಸಿದ್ಧವಾಯಿತು. ಆದ್ದರಿಂದ ಸರ್ವಮರ್ಯಾದಾ ಅಂತರ್ಗತ ನಾದ ಪರಮಾತ್ಮಗೆ ಸರ್ವರೂ ಮಾಡಿದ್ದಾಯಿತು, ದೇಹಕ್ಕೆ ಮಾಡಿದ್ದಾಗಲಿಲ್ಲ, ಇದರನ್ನ ಜ್ಞಾಪಕದಲ್ಲಿ ಇಟ್ಟು ಅಂತರ್ಗತ ಪರಮಾತ್ಮನ ಸೇವಾ ಎಂತ ಅನುಸಂಧಾನ ಮಾಡಿದರೆ, ಸರ್ವವೂ ಸಾರ್ಥಕವಾಗಿ ಫಲಪ್ರದವಾಗತದೆ ಎಂತ ತಾತ್ಪರ್ಯ.

**ಕ್ರೀಡೆಗೋಸುಗ ಅವರವರ ಗತಿ ।**
**ನೀಡಲೋಸುಗ ದೇಹಗಳ ಕೊ ।**
**ಟ್ಟಾಡುವನು ಸ್ವೇಚ್ಛೆಯಲಿ ಬ್ರಹ್ಮೇಶಾದ್ಯರೊಳು ಪೊಕ್ಕು ॥**
**ಮಾಡುವನು ವ್ಯಾಪಾರ ಬಹುವಿಧ ।**
**ಮೂಢದೈತ್ಯರೊಳಿದ್ದು ಪ್ರತಿದಿನ ।**
**ಕೇಡುಲಾಭಗಳಿಲ್ಲವಿದನರಿ ಆವಕಾಲದಲಿ ॥ ೩ ॥**

ಜೀವರಿಗೆ ಸ್ಥೂಲದೇಹ ಕೊಡುವುದಕ್ಕೆ ಕಾರಣ ಹೇಳತಾರೆ.

ಅವರವರ ಗತಿ–ಅಸೃಜ್ಯರಾಶಿಗತರಾದ ಜೀವರಿಗೆ ಅವರವರ ಸ್ವರೂಪಗತಿಯನ್ನು, ನೀಡಲೋಸುಗ – ಕೊಡುವುದಕ್ಕೋಸ್ಕರವಾಗಿ, ಕ್ರೀಡೆಗೋಸುಗ – ಸ್ವರೂಪಗತಿಯನ್ನ ಐದಬೇಕಾದರೆ ಅವರವರಿಗೆ ಅನಾದಿಯಿಂದ ಇರತಕ್ಕ ಭೋಗದಿಂದ ನಾಶವಾಗತಕ್ಕ ಅನಾದಿ ಪ್ರಾರಬ್ಧಕರ್ಮಭೋಗರೂಪವಾದ ಆಟಗಳ ಆಡೋದಕ್ಕೋಸ್ಕರ, ದೇಹಗಳ ಕೊಟ್ಟು–ಅನಾದಿಲಿಂಗೋಪಾದಾನದಿಂದ ಅನಿರುದ್ಧಶರೀರವೇನು, ತದನ್ಯ ಮೂಲ ಜಡ ಪ್ರಕೃತಿ ದೆಶೆಯಿಂದ ಸಂಸೃಷ್ಟ ಸ್ಥೂಲದೇಹವೇನು, ಈ ಪ್ರಕಾರ ಸರ್ವ ಪ್ರಾಣಿಗಳಿಗೆ ದೇಹಗಳ ಕೊಟ್ಟು, ಬ್ರಹ್ಮೇಶಾದ್ಯರೊಳು ಪೊಕ್ಕು–ಬ್ರಹ್ಮ, ರುದ್ರ ಮೊದಲಾದ ತೃಣಾಂತ ತ್ರಿವಿಧ ಜೀವರ ಸ್ಥೂಲದೇಹದಲ್ಲಿ ಪ್ರವೇಶಮಾಡಿ, ಸ್ವೇಚ್ಛೆಯಲಿ–ಆಯಾ ಪ್ರಾಣಿಗಳ ದೇಹದಲ್ಲಿ ಅನ್ಯ ಪ್ರೇರಣೆ ಇಲ್ಲದೇನೆ, ಪರಮಾತ್ಮ ತನ್ನ ಇಚ್ಛಾನುಸಾರ ತಾನು, ಆಡುವನು–ದೇಹೇಂದ್ರಿಯಾದಿಗಳಿಂದ ಕರ್ಮರೂಪವಾದ ವ್ಯಾಪಾರಗಳ ಮಾಡಿಸುತ್ತ, ದೇಹದಲ್ಲಿ ಸಂಚಾರಮಾಡುವನು. ಬಹುವಿಧ–ಜೀವರು ಅನೇಕವಿಧರು. ಅವರವರ ಸ್ವರೂಪಯೋಗ್ಯತಾ ಅನೇಕವಿಧ. ಅವರವರ ಅನಾದಿಕರ್ಮ ಅನೇಕವಿಧವಾದ್ದರಿಂದ, ಅದರಂತೆ, ವ್ಯಾಪಾರ–ಕರ್ಮ ವ್ಯಾಪಾರಗಳ ಬಹುವಿಧವಾಗಿ, ಮಾಡುವನು–ಇದ್ದದ್ದರನ್ನ, ತನ್ನ ಕ್ರಿಯಾದ್ವಾರಾ, ವ್ಯಾಪ್ತನಾದ ಜೀವನ ದ್ವಾರಾ, ಸ್ಥೂಲದೇಹೇಂದ್ರಿಯಾದಿಗಳಲ್ಲಿ ವ್ಯಕ್ತಮಾಡುವನು (ಇದು ಮುಕ್ತಿಯೋಗ್ಯರ ವಿಚಾರ). ಮೂಢ ದೈತ್ಯರೊಳಿದ್ದು– ಸ್ವರೂಪಸ್ವಭಾವವೇ ಅಜ್ಞಾನಸ್ವರೂಪರಾದ ದುಷ್ಟರಾದ ದೈತ್ಯರಲ್ಲೂ ಪೂರ್ವೋಕ್ತ

ಪ್ರಕಾರ ಬಹುವಿಧ ಇರೋದಾಗಿ ಅದೆ; ಇದರಲ್ಲಿ ನಿತ್ಯಸಂಸಾರಿಗಳೂ ಅಂತರ್ಭೂತರು; ಇವರಲ್ಲೂ ಅದೇಪ್ರಕಾರ ಇರೋದಾಗಿ ಅದೆ. ಉಭಯವಿಧ ದೈತ್ಯಸಾಂಕೇತರಾದವರು ಸ್ಥೂಲದೇಹಗಳಲ್ಲಿ ಇದ್ದು ನಾನಾವಿಧ ಕರ್ಮಗಳ, ಪ್ರತಿದಿನ–ಪ್ರತಿದಿನದಲ್ಲೂ ಮಾಡು ವನು, ಕೇಡು–ತಮೋಯೋಗ್ಯರಲ್ಲಿ ಇರತಕ್ಕ ಪರಮಾತ್ಮಗೆ, ಆ ತಮೋಯೋಗ್ಯರಿಗೆ ಆಗತಕ್ಕ ದುಃಖಾದಿಗಳು ಏನು, ಲಾಭಗಳಿಲ್ಲ-ಮುಕ್ತಿಯೋಗ್ಯರಲ್ಲಿ ಇರತಕ್ಕ, ಪರಮಾತ್ಮಗೆ, ಆ ಮುಕ್ತಿಯೋಗ್ಯರಿಗೆ ಆಗತಕ್ಕ ಸಂತೋಷಾದಿಗಳು ಏನು, ಇವೆರಡೂ ಅಲ್ಲಲ್ಲಿ ಇರತಕ್ಕ ಪರಮಾತ್ಮಗೆ ಸಂಬಂಧಿಸೋದಿಲ್ಲ, ಸ್ವಾನಂದಪೂರ್ಣವಾಗಿ ಇರುತ್ತಾನಾದ್ದರಿಂದ. ಆವಕಾಲ ದಲಿ–ಸದಾ ಸರ್ವಕಾಲದಲ್ಲಿ, ಇದನು ಅರಿ–ಇದನ್ನ ತಿಳಿ. ಈ ಪ್ರಕಾರ ಅನುಸಂಧಾನ ಮಾಡಿ, ಭಗವದುಪಾಸನಮಾಡಬೇಕು ಎಂತ ತಾತ್ಪರ್ಯ.

ಪ್ರಮಾಣ :– "ಸ ಏವ ಕ್ರೀಡನಾರ್ಥಾಯ ಜೀವಾನಾಂ ಗತಿಹೇತವೇ | ದೇಹ ಯೋಗೇನ ಸಂಸೃಜ್ಯ ತೇಷು ಚಾಪ್ಯವಿಶತ್ಸ್ವಯಂ ||" ಎಂತಲೂ "ಸೋಽಯಂ ವಿಹಾರ ಇಹ ಮೇ ತನುಭೃತ್ಸ್ವಭಾವಸಂಭೂತಯೇ ಭವತಿ ಭೂತಿಕೃದೇವ ಭೂತ್ಯಾಃ ||" ಎಂಬುವ ತಾತ್ಪರ್ಯಾರ್ಥಗಳ ವಿವರಿಸಿತು.

**ಅಕ್ಷರೇಢ್ಯನು ಬ್ರಹ್ಮವಾಯು |**
**ತ್ರ್ಯಕ್ಷಸುರಪಸುರಾಸುರರೊಳ |**
**ಧ್ಯಕ್ಷನಾಗಿದ್ದೆಲ್ಲರೊಳು ವ್ಯಾಪಾರ ಮಾಡುತಿಹ ||**
**ಅಕ್ಷಯನು ಸತ್ಯಾತ್ಮಕ ಪರಾ |**
**ಪೇಕ್ಷೆಯಿಲ್ಲದೆ ಸರ್ವರೊಳಗೆ ವಿ |**
**ಲಕ್ಷಣನು ತಾನಾಗಿ ಲೋಕವ ರಕ್ಷಿಸುತಲಿಪ್ಪ || ೪ ||**

ಶ್ರೀ ಪರಮಾತ್ಮ ಲೋಕ ರಕ್ಷಿಸುತ್ತಾನೆ ಎಂತ ಹೇಳತಾರೆ.

ಅಕ್ಷರ – ಮೂಲಜಡಪ್ರಕೃತ್ಯಾತ್ಮಕ ತ್ರಿಗುಣಜನ್ಯ ಸ್ಥೂಲದೇಹದಿಂದ ನಾಶವಿಲ್ಲ ದಂಥ, ಇನ್ನೂ ಅನಾದ್ಯನಂತಕಾಲಕ್ಕೂ ಶಶ್ವದೇಕಪ್ರಕಾರವಾಗಿ, ನಿತ್ಯಯೌವ್ವನೆಯರಾದ ಶ್ರೀ ಲಕ್ಷ್ಮೀದೇವೇರಿಂದ, ಈಢ್ಯನು–ಸ್ತುತ್ಯನಾದ ಶ್ರೀ ಪರಮಾತ್ಮನು, ಬ್ರಹ್ಮ ವಾಯು– ಬ್ರಹ್ಮದೇವರು, ವಾಯುದೇವರು, ತ್ರ್ಯಕ್ಷ–ತ್ರಿನೇತ್ರ ಉಳ್ಳವರು ರುದ್ರದೇವರು, ಸುರಪ– ಇಂದ್ರದೇವರು, ಸುರ–ದೇವತೆಗಳು (ಸುರ ಶಬ್ದದಿಂದ ತೃಣಾಂತ ಮುಕ್ತಿಯೋಗ್ಯ ಜೀವರೂನೂ), ಅಸುರರೊಳು–ಅಸುರಶಬ್ದದಿಂದ ತೃಣಾಂತ ದೈತ್ಯರು, ನಿತ್ಯಸಂಸಾರಿ ಗಳು, ಈ ತ್ರಿವಿಧಸಮೂಹಗಳಲ್ಲಿ, ಅಧ್ಯಕ್ಷನಾಗಿ–ಯಜಮಾನನಾಗಿ, ಎಲ್ಲರೊಳು–ಎಲ್ಲಾ ಜೀವರ ಸ್ವರೂಪದೊಳೂ, ಅವರ ಸ್ಥೂಲದೇಹದೊಳೂ, ಇದ್ದು–ಬಿಂಬನಾಗಿ ಇದ್ದು, ವ್ಯಾಪಾರ–ಸ್ವರೂಪದಲ್ಲಿ ಜೀವರಿಗೆ ಇಚ್ಛಾರೂಪವಾದ ವ್ಯಾಪಾರ, ಸ್ಥೂಲದೇಹದಲ್ಲಿ ಇಂದ್ರಿಯಾದಿಗಳಲ್ಲಿ ಕ್ರಿಯಾರೂಪ ವ್ಯಾಪಾರ, ಮಾಡುತಿಹ–ಜೀವರ ಕಡಿಯಿಂದ

ಮಾಡಿಸೋ ನಿಮಿತ್ತ, ಆದಿಯಲ್ಲಿ ತಾನು ಕ್ರಿಯಾಮಾಡಿ, ತದ್ದ್ವಾರಾ, ಜೀವರ ದ್ವಾರಾ, ದೇಹೇಂದ್ರಿಯಾದಿಗಳಿಂದ ಮಾಡಿಸುತ್ತಾ ಇರೋವನಾಗಿದ್ದಾನೆ. ಅಕ್ಷಯನು–ಮೂಲ ಜಡಪ್ರಕೃತ್ಯಾತ್ಮಕ ತ್ರಿಗುಣಜನಿತ ಸ್ಥೂಲದೇಹದಿಂದ ನಾಶವಿಲ್ಲದಂಥಾ, ಇನ್ನೂ ಅನಾದ್ಯ ನಂತಕಾಲಕ್ಕೂ ಶಶ್ವದೇಕಪ್ರಕಾರನಾಗಿ ಇರುವ (ಸೂರ್ಯನ ಪ್ರಭಾದಿಂದ ಚಂದ್ರನ ಪ್ರಭಾ ನಾಶ ಐದಿದಂತೆ ನಾಶರಹಿತವಾದ ಪ್ರಭಾ ಉಳ್ಳವನು), ಸತ್ಯಾತ್ಮಕ–ಸತ್ಯವಾದ ವ್ಯವಸ್ಥೆ ಉಳ್ಳವನು, ಪರಾಪೇಕ್ಷೆಯಿಲ್ಲದೆ–ಅನ್ಯರಾದ ಬ್ರಹ್ಮಾದಿಗಳ ಸಹಾಯ ಇಲ್ಲದೆ ಸ್ವತಂತ್ರನಾಗಿ ಸರ್ವವ್ಯಾಪಾರಗಳ, ಸರ್ವರೊಳಗೆ–ಸಮಸ್ತರಲ್ಲಿ, ವಿಲಕ್ಷಣನು–ಸರ್ವಜೀವ ಸ್ವರೂಪದಲ್ಲಿ ಜೀವಾಪೇಕ್ಷಯಾ ವಿಲಕ್ಷಣನು ವಿಶೇಷಾಕಾರದಿಂದ ತತ್ತ್ವೇಶರ ಲಕ್ಷಣನು, ತಾನಾಗಿ–ತನಗೆ ತಾನೇ ಆಗಿ, ಲೋಕವ–ಜೀವರ ಸಮುದಾಯವ, ರಕ್ಷಿಸುತಲಿಪ್ಪ–ಅವರವರ ಅನಾದಿಸ್ವರೂಪಯೋಗ್ಯತಾನುಸಾರ, ಅನಾದಿಕರ್ಮಾನುಸಾರ ರಕ್ಷಿಸುತ್ತ, ಜೀವ ದೇಹಗಳಿಗೆ ಬಿಂಬನಾಗಿ ಇದ್ದಾನೆ ಎಂತ ತಾತ್ಪರ್ಯ.

**ಶ್ರೀ ಸರಸ್ವತಿ ಭಾರತೀ ಗಿರಿ ।**
**ಜಾ ಶಚೀ ರತಿ ರೋಹಿಣೀ ಸಂ ।**
**ಜ್ಞಾ ಶತರೂಪಾದ್ಯಖಿಳಸ್ತ್ರೀಯರೊಳು ಸ್ತ್ರೀರೂಪ ॥**
**ವಾಸವಾಗಿದ್ದೆಲ್ಲರಿಗೆ ವಿ ।**
**ಶ್ವಾಸ ತನ್ನಲಿ ಕೊಟ್ಟು ಅವರಭಿ ।**
**ಲಾಷೆಗಳ ಪೂರೈಸುತಿಪ್ಪನು ಯೋಗ್ಯತೆಗಳರಿತು ॥ ೫ ॥**

ಸ್ತ್ರೀಜೀವರಲ್ಲಿ ಬಿಂಬರೂಪವಿಚಾರ ಹೇಳತಾರೆ.

ಶ್ರೀ–ಮೂಲರೂಪೀ ನಾರಾಯಣದೇವರ ಪತ್ನಿಯರಾದ ಶ್ರೀದೇವೇರು, ಭೂದೇವೇರು, ದುರ್ಗಾದೇವೇರು, ಇನ್ನೂ ಅಂಭ್ರಣೀ, ಸೀತಾ, ರುಕ್ಮಿಣೀ ಅವತಾರರಾದ ಲಕ್ಷ್ಮೀದೇವೇರು, ಸರಸ್ವತಿ–ಬ್ರಹ್ಮದೇವರ ಪತ್ನಿ ಸರಸ್ವತೀದೇವೇರು, ಭಾರತೀ–ವಾಯುದೇವರ ಪತ್ನಿ ಭಾರತೀದೇವೇರು, ಗಿರಿಜಾ–ರುದ್ರದೇವರ ಪತ್ನಿ ಪಾರ್ವತೀದೇವೇರು, ಶಚೀ–ಇಂದ್ರದೇವರ ಪತ್ನಿ ಶಚೀದೇವೇರು, ರತಿ–ಮನ್ಮಥನ ಪತ್ನಿ ರತೀದೇವೇರು, ರೋಹಿಣೀ–ಚಂದ್ರದೇವರ ಪತ್ನಿ ರೋಹಿಣೀ ದೇವೇರು, ಸಂಜ್ಞಾ – ಸೂರ್ಯದೇವರ ಪತ್ನಿ ಸಂಜ್ಞಾ ದೇವೇರು, ಶತರೂಪಾ – ಸ್ವಾಯಂಭುವಮನು ಪತ್ನಿ ಶತರೂಪಾದೇವೇರು ಆದಿ–ಇವರೇ ಮೊದಲಾದ, ಅಖಿಳ ಸ್ತ್ರೀಯರೊಳು–ಸಮಸ್ತರಾದ ತ್ರಿವಿಧ ಸ್ತ್ರೀ ಜೀವರ ಸ್ವರೂಪದೊಳು, ಹಾಗೂ ಬಾಹ್ಯಸ್ಥೂಲದೇಹದೊಳು, ಸ್ತ್ರೀರೂಪ – ಸ್ತ್ರೀರೂಪದಿಂದ ಬಿಂಬರೂಪೀ ಪರಮಾತ್ಮ, ವಾಸವಾಗಿದ್ದು–ಆವಾಸನಾಗಿದ್ದು, ಎಲ್ಲರಿಗೆ–ಸ್ವರೂಪ ಸ್ವಭಾವದಲ್ಲಿ ಮುಕ್ತಿಯೋಗ್ಯರಾದ ಯಾವತ್ತೂ ಸ್ತ್ರೀಯರಿಗೆ, ತನ್ನಲ್ಲಿ–ಬಿಂಬರೂಪ ಸ್ತ್ರೀರೂಪಿಯಾದ ಪರಮಾತ್ಮ ತನ್ನಲ್ಲಿ, ವಿಶ್ವಾಸ–ತಮ್ಮ ಬಿಂಬರೂಪಿಯಾದ ಪರಮಾತ್ಮ ಸರ್ವೋತ್ತಮ ಎಂತಲೂ, ತಾವುಗಳು ಭೃತ್ಯರು ಎಂತಲೂ, ತಮಗೂ ಈ ಬಿಂಬರೂಪೀ

ಪರಮಾತ್ಮಗೂ ಭೇದ ಎಂತಲೂ, ತಾರತಮ್ಯವದೆ ಎಂತಲೂ, ಏತಾದೃಶ ಜ್ಞಾನವನ್ನು ಅನುಸರಿಸಿದ ಭಕ್ತಿವಿಶ್ವಾಸವನ್ನು, ಕೊಟ್ಟು–ಇದ್ದದ್ದರನ್ನ ಅಭಿವ್ಯಕ್ತಿ ಮಾಡಿಕೊಟ್ಟು, ಅವರಭಿಲಾಷೆಗಳ–ಭಗವದಪರೋಕ್ಷ ಆಗಬೇಕೆಂಬ ಇಚ್ಛಾವನ್ನ, ಯೋಗ್ಯತೆಗಳರಿತು–ದಾರ ದಾರ ಯೋಗ್ಯತಾಕ್ಕೆ ದಾವ ರೀತಿಯಾದ ಅಪರೋಕ್ಷ ಕೊಡಬೇಕೋ ಆ ಯೋಗ್ಯತೆಗಳನ್ನ ಅರಿತು, ಪೂರೈಸುತಿಪ್ಪನು–ಸಾಧನ ಪೂರ್ತಿ ಮಾಡಿಸಿ ಅಪರೋಕ್ಷ ಕೊಟ್ಟು ಅವರ ಇಚ್ಛಾವನ್ನ ಪೂರ್ಣಮಾಡುತ್ತಾ, ಜೀವದೇಹಾಂತರ್ಗತನಾಗಿ ಇದ್ದಾನೆ ಎಂತ ತಾತ್ಪರ್ಯ.

ಪ್ರಮಾಣ :– "ಲಕ್ಷ್ಮೀ ಸರಸ್ವತೀಂದ್ರಾಣೀ ಗಾಯತ್ರೀತ್ಯಾದಿ ನಾಮಭಿಃ। ನಾನಾಲಿಂಗೋ ನೈಕರೂಪೋ ವೇದೇಷು ಸ್ತೂಯತೇ ಹರಿಃ। ಪುರುಷರೂಪೋ ಹರಿಃ ಸಾಕ್ಷಾತ್ ಸ್ತ್ರೀರೂಪೇ ಬಿಂಬರೂಪವಾನ್ ॥" ಇತಿ.

**ಕೋಲುಕುದುರೆಯ ಮಾಡಿ ಆಡುವ ।**
**ಬಾಲಕರ ತೆರನಂತೆ ಲಕುಮಿ ।**
**ಲೋಲ ಸ್ವಾತಂತ್ರ್ಯಗುಣವ ಬ್ರಹ್ಮಾದ್ಯರೊಳಗಿಟ್ಟು ॥**
**ಲೀಲೆಗೈವನು ತನ್ನವರಿಗನು ।**
**ಕೂಲನಾಗಿದ್ದೆಲ್ಲಕಾಲದಿ ।**
**ಖುಲ್ಲರಿಗೆ ಪ್ರತಿಕೂಲನಾಗಿಹ ಪ್ರಕಟನಾಗದಲೆ ॥ ೬ ॥**

ಜೀವರ ಸ್ವರೂಪಭೂತಸ್ವಾತಂತ್ರ್ಯವಿಚಾರ ಹೇಳತಾರೆ.

ಕೋಲುಕುದುರೆಯ ಮಾಡಿ–ಬಿದಿರುಕೋಲನ್ನು ಕುದರಿಯಾಗಿ ಮಾಡಿಕೊಂಡು, ಆಡುವ–ಆಟಗಳ ಆಡತಕ್ಕ, ಬಾಲಕರ ತೆರನಂತೆ–ಮಕ್ಕಳೋಪಾದಿಯಲ್ಲಿ, (ಅಂದರೆ ಬ್ರಹ್ಮಾದಿ ತೃಣಾಂತ ತ್ರಿವಿಧ ಜೀವರಿಗೆ, ಕೋಲುಕುದರಿಗೆ ಸದೃಶವಾದ ಅನಾದಿ ಸ್ವರೂಪ ಭೂತಸ್ವಾತಂತ್ರ್ಯ ಇರೋದಾಗಿ ಅದೆ). ಆ ಸ್ವಾತಂತ್ರ್ಯಕ್ಕೂ ಈಶ್ವರನ ಸ್ವಾತಂತ್ರ್ಯಕ್ಕೂ ಭೇದ. ಜೀವರ ಸ್ವರೂಪಭೂತ ಸ್ವಾತಂತ್ರ್ಯದಲ್ಲಿ ಪರಮಾತ್ಮ ತದ್ವಾಚ್ಯನಾಗಿ ಬಿಂಬನಾಗಿ ಇದ್ದಾನೆ; ಅದು ಅನಾದಿಯೇ, ಮಧ್ಯಕಾಲದಲ್ಲಿ ಪ್ರವೇಶವಾದದ್ದಲ್ಲ. ಜೀವನ ಸ್ವಾತಂತ್ರ್ಯಗತ ಪರಮಾತ್ಮನ ಸ್ವಾತಂತ್ರ್ಯ, ಬಾಲಕರು ಚಲಿಸಿದರೆ ಕೋಲುಕುದರಿ ಚಲಿಸುತ್ತದೆ, ಇಲ್ಲದಿದ್ದರೆ ಇಲ್ಲ. ತದ್ವತ್ ಕೋಲುಕುದರಿ ಸದೃಶ ಜೀವರ ಸ್ವಾತಂತ್ರ್ಯ; ಬಾಲಕರ ಸದೃಶ, ಜೀವರ ಸ್ವಾತಂತ್ರ್ಯಗತ ಸ್ವಾತಂತ್ರ್ಯಶಬ್ದವಾಚ್ಯ ಪರಮಾತ್ಮ. ಈ ಪರಮಾತ್ಮ ಚಲಿಸಿದರೆ ಜೀವರ ಸ್ವಾತಂತ್ರ್ಯಕ್ಕೆ ವ್ಯಾಪಾರ, ಇಲ್ಲದಿದ್ದರೆ ಇಲ್ಲ. ಇದು ಮೋಕ್ಷದಲ್ಲಿ ಸ್ವರೂಪಾಭಿವ್ಯಕ್ತಿಕಾಲದ ವಿಚಾರ. ಸ್ಥಿತಿಕಾಲದಲ್ಲಿ ಸ್ಥೂಲದೇಹದಿಂದ ತ್ರಿಗುಣಕಾರ್ಯಗಳ ನಡಿಸೋ ನಿಮಿತ್ತ, ಆ ಜೀವನ ಸ್ವರೂಪಭೂತ ಸ್ವಾತಂತ್ರ್ಯದಲ್ಲಿ, ಸೃಷ್ಟಿಕಾಲದಲ್ಲಿ ಪರಮಾತ್ಮ ಸ್ವಾತಂತ್ರ್ಯಶಬ್ದವಾಚ್ಯನಾಗಿ ಪ್ರವೇಶವು. ಈ ತ್ರಿಗುಣಕಾರ್ಯಗಳಲ್ಲೂ ಕೋಲು

ಕುದುರಿ ದೃಷ್ಟಾಂತವೇ ; ಪರಮಾತ್ಮಗೂ ಅವನ ಸ್ವಾತಂತ್ರ್ಯಕ್ಕೂ ಅತ್ಯಂತ ಅಭೇದ ; ಪರಮಾತ್ಮನೇ ಸ್ವತಂತ್ರ, ಸ್ವಾತಂತ್ರ್ಯವೇ ಪರಮಾತ್ಮ ; ಎಲ್ಲಾನೂ ಸಾಕಾರಗಳೇ ; ಈ ಪ್ರಕಾರ ಕೋಲುಕುದರಿಬಾಲಕರೋಪಾದಿಯಲ್ಲಿ, ಲಕುಮೀಲೋಲ–ಲಕ್ಷ್ಮೀದೇವೇರಿಂದ ಸಹಿತನಾಗಿ ಆಕಿಗೆ ಸಂತೋಷಪಡಿಸೋದಕ್ಕೋಸ್ಕರ ಏಕಾಂತವಿಹಾರವುಳ್ಳ ಪರಮಾತ್ಮ, ತ್ರಯ–ತ್ರಿವಿಧಜೀವರಿಗೆ ತ್ರಿವಿಧವಾದ, ಸ್ವಾತಂತ್ರ್ಯ–ಸ್ವತಂತ್ರರೂಪವಾದ, ಗುಣವ–ಗುಣವನ್ನ, ಬ್ರಹ್ಮಾದ್ಯರೊಳಗಿಟ್ಟು–ಬ್ರಹ್ಮಾದಿ ತೃಣಾಂತ ಜೀವರಲ್ಲಿ, ಹಾಂಗೇ ಲಕ್ಷ್ಮೀದೇವೇರಲ್ಲೂ ಇಟ್ಟವನಾಗಿ, ಎಲ್ಲ ಕಾಲದಿ–ಸ್ಥಿತಿಕಾಲದಲ್ಲಿ ಪ್ರವಿಷ್ಟ ಸ್ವಾತಂತ್ರ್ಯದಿಂದಲೂ, ಮೋಕ್ಷದಲ್ಲಿ ಪ್ರವಿಷ್ಟವಲ್ಲದ ಅನಾದಿಯಾದ ಬಿಂಬರೂಪ ಸ್ವಾತಂತ್ರ್ಯದಿಂದಲೂ, ಸದಾ ಸರ್ವಕಾಲದಲ್ಲೂ, ತನ್ನವರಿಗನುಕೂಲನಾಗಿದ್ದು–ಸ್ವಾಮಿಭೃತ್ಯನ್ಯಾಯ ಸ್ವರೂಪಸ್ವಭಾವ ದಲ್ಲಿ ಇದ್ದ ತನ್ನ ಭಕ್ತರಾದವರಿಗೆ ಅವರವರ ಸ್ವರೂಪಸ್ವಭಾವದ ಯೋಗ್ಯತಾ ತಾರ ತಮ್ಯಾನುಸಾರ ಅನುಕೂಲನಾಗಿದ್ದು, ಲೀಲೆಗೈವನು–ಸಾಧನರೂಪವಾದ ಕರ್ಮಗಳ ಮಾಡಿಸೋ ನಿಮಿತ್ತ, ಬಿಂಬಕ್ರಿಯಾರೂಪವಾದ ಆಟಗಳ ಆಡುವನು. ಆಡಿ, ಸಾಧನ ಪೂರ್ತಿಮಾಡಿಸಿ, ಪ್ರತ್ಯಕ್ಷನಾಗಿ ಅವರ ಕೂಡ ತಾನೂನೂ ಅವರ ಯೋಗ್ಯತಾನುಸಾರ ನಡೀತಾನೆ. ಖುಲ್ಲರಿಗೆ–ಭಗವಂತನಾದ ತನ್ನಲ್ಲಿ ದ್ವೇಷಮಾಡತಕ್ಕ ಸ್ವರೂಪಸ್ವಭಾವವುಳ್ಳ ದೈತ್ಯರಲ್ಲಿ ಸ್ವಾತಂತ್ರ್ಯವಿಚಾರ ಪೂರ್ವೋಕ್ತಪ್ರಕಾರವೇ ; ಇವರಕಡಿಯಿಂದ ಸ್ವರೂಪ ವನ್ನು ಅನುಸರಿಸಿದ ದುಸ್ಸಾಧನೆಗಳ ಮಾಡಿಸಿ ಇವರಿಗೆ, ಪ್ರಕಟನಾಗದಲೆ–ಬಿಂಬ ನಾದರೂ ಸ್ವಾಮಿಭೃತ್ಯನ್ಯಾಯ ಸ್ವರೂಪದಲ್ಲಿ ಇಲ್ಲದವರಾದ್ದರಿಂದ, ಇವರಿಗೆ ಅಪರೋಕ್ಷ ನಾಗದೆ, ಪ್ರತಿಕೂಲನಾಗಿಹ–ಅನುಕೂಲ ಇಲ್ಲದವನಾಗಿ ದುಃಖಕರವಾದ ಅಂಧಂ ತಮಸ್ಸನ್ನ ಸೇರಸತಾನೆ. ಜೀವರು ಅನಾದಿ, ಅವರ ಯೋಗ್ಯತೆಯೂ ಅನಾದಿ ; ಈಶ್ವರ ನಿಂದ ರಚಿತವಲ್ಲ ; ಆದ್ದರಿಂದ ಪರಮಾತ್ಮ ನಿರ್ದೋಷನೆಂತ ತಾತ್ಪರ್ಯ.

**ಸೌಪರ್ಣಿವರವಹನ ನಾನಾ ।**
**ರೂಪನಾಮದಿ ಕರೆಸುತವರ ಸ ।**
**ಮೀಪದಲ್ಲಿದ್ದಖಿಳವ್ಯಾಪಾರಗಳ ಮಾಡುವನು ॥**
**ಪಾಪಪುಣ್ಯಗಳೆರಡು ಅವರ ಸ್ವ ।**
**ರೂಪಗಳನನುಸರಿಸಿ ಉಣಿಸಿ ಪ ।**
**ರೋಪಕಾರಿ ಪರೇಶ ಪೂರ್ಣಾನಂದ ಜ್ಞಾನಘನ ॥ ೭ ॥**

ಪಾಪಪುಣ್ಯಗಳ, ಯೋಗ್ಯತಾನುಸಾರ ಉಣಿಸತಾನೆ ಎಂತ ಹೇಳತಾರೆ.

ಸೌಪರ್ಣಿವರವಹನ–ಸೌಪರ್ಣೀದೇವೇರ ಪತಿಯಾದ ಗರುಡದೇವರು ಭುಜದಲ್ಲಿ ವಹಿಸಿಕೊಂಡಂಥಾ ಶ್ರೀ ನಾರಾಯಣದೇವರು, ನಾನಾರೂಪನಾಮದಿ–ನಾನಾವಿಧವಾದ ಜೀವರ ಸ್ವರೂಪಗಳ ಆಯಾ ಸ್ವರೂಪಕ್ಕೆ ಅನುಸರಿಸಿದ ನಾಮಗಳುಳ್ಳ ಜೀವಸ್ವರೂಪ ಗಳಲ್ಲಿ, ನಾನಾರೂಪದಿಂದಲೂ, ಅದೇ ಪ್ರಕಾರ ಹೆಸರಿನಿಂದಲೂ, ಕರೆಸುತ–ಕರಿಸಿದವ

ನಾಗಿ, ಅವರ–ಆಯಾ ಪ್ರಾಣಿಗಳ, ಸಮೀಪದಲ್ಲಿದ್ದು–ಬಿಂಬನಾಗಿ ಅವಿಯೋಗನಾಗಿ ಅಂತರ್ಗತನಾಗಿ ಇದ್ದು, ಇಚ್ಛಾದಿಗಳ ಹುಟ್ಟಿಸಿ, ಆ ಇಚ್ಛಾವನ್ನ ಅನುಸರಿಸಿ, ಅಖಿಳ ವ್ಯಾಪಾರಗಳ–ಸ್ಥೂಲದೇಹೇಂದ್ರಿಯಗಳಲ್ಲಿ ಬಿಂಬನಾಗಿದ್ದು, ಆಯಾ ಇಂದ್ರಿಯಗಳಿಂದ ಏನು ವ್ಯಾಪಾರಗಳು ಮಾಡಬೇಕೋ ಆ ಸಮಸ್ತ ವ್ಯಾಪಾರಗಳ, ಮಾಡುವನು–ಬಿಂಬ ಕ್ರಿಯಾದ್ವಾರಾ ಜೀವನಿಂದ ಮಾಡಿಸುತ್ತಾನೆ. ಪಾಪಪುಣ್ಯಗಳೆರಡು–ಆಯಾ ಜೀವರ ದೇಹೇಂದ್ರಿಯಾದಿಗಳಿಂದ ಮಾಡಲ್ಪಟ್ಟ ಪಾಪಪುಣ್ಯಗಳೆರಡು. ಈ ಎರಡರಿಂದ, ಪರೋಪಕಾರಿ–ಪೂರ್ವೋಕ್ತರಾದ, ತನಗೆ ಅನ್ಯರಾದ, ತನ್ನ ಅಧೀನರಾದ ಜೀವರಿಗೆ, ಆಯಾ ಜೀವರ ಸ್ವರೂಪಯೋಗ್ಯತಾನುಸಾರ ಸಾಧನೆ ಪೂರ್ತಿಮಾಡಿಸಿ, ಲಿಂಗಭಂಗ ರೂಪವಾದ ಉಪಪಕಾರವನ್ನು ಮಾಡುವಂಥ, ಪರೇಶ–ಅನ್ಯರಾದ ರಮಾಬ್ರಹ್ಮಾದಿ ತೃಣಾಂತ ತ್ರಿವಿಧ ಜೀವರಿಗೆ ಸ್ವಾಮಿಯಾದ, ಪೂರ್ಣ–ಸ್ವಲ್ಪಕೂಡಾ ಕಡಿಮೆ ಇಲ್ಲದ, ಸಂಪೂರ್ಣವಾಗಿ ನಿಬಿಡೀಕೃತವಾದ ಅಸದೃಶವಾದ, ಆನಂದ–ಸಂತೋಷವೇನು, ಜ್ಞಾನ–ಜ್ಞಾನವೇನು, ಘನ–ಗಂಭೀರನಾದಂಥಾವ (ಅಂದರೆ, ಪ್ರಳಯೋದಕದೋಪಾದಿಯಲ್ಲಿ ಅಂತ, ಅರ್ಥ), ಇಂಥಾ ಪರಮಾತ್ಮ, ಪಾಪಪುಣ್ಯಗಳ, ಅವರ ಸ್ವರೂಪಗಳನನುಸರಿಸಿ–ಅವರವರ ಸ್ವರೂಪಗಳನ್ನು ಅನುಸರಿಸಿ ಇರತಕ್ಕದ್ದನ್ನ, ಉಣಿಪ–ಉಣಿಸೋವನಾಗತಾನೆ.

**ತಾ||** ಮಿಥ್ಯಾಜ್ಞಾನವೇ ಪಾಪ, ಭೇದಜ್ಞಾನವೇ ಪುಣ್ಯ; ಇವು ಎರಡೂ ಅವರವರ ಸ್ವರೂಪವನ್ನನುಸರಿಸಿ ಇರುತ್ತವೆ. ಏತಾದೃಶಜ್ಞಾನವನ್ನ ಅನುಸರಿಸಿ ದೈತ್ಯರು ಮಾಡಿದ ಯಾವತ್ತೂ ಕರ್ಮಗಳು, ಪಾಪವೇ ಆಗಿ ಅವರಿಗೆ ಪಾಪಫಲವೇ ಕೊಡತಾನೆ. ಭೇದಜ್ಞಾನಿಗಳು ಮಾಡಿದ ಯಾವತ್ತೂ ಕರ್ಮಗಳು ಪುಣ್ಯವೇ ಆಗಿ, ಅವರಿಗೆ ಪುಣ್ಯ ಫಲವೇ ಕೊಡತಾನೆ, ಇದು ಲಿಂಗಭಂಗಾನಂತರ ಎಂತ ತಾತ್ಪರ್ಯ.

**ಅಹರನಿದ್ರಾಮೈಥುನಗಳಹ |**
**ರಹರ ಬಯಸಿ ಬಳಲುವವ ಲಕ್ಷ್ಮಿ |**
**ಮಹಿತನ ಮಹಾಮಹಿಮೆಗಳನೆಂತರಿವ ನಿತ್ಯದಲಿ ||**
**ಅಹಿಕ ಸೌಖ್ಯವ ಮರೆದು ಮನದಲಿ |**
**ಗ್ರಹಿಸಿ ಶಾಸ್ತ್ರಾರ್ಥಗಳ ಪರಮೋ |**
**ತ್ಸಹದಿ ಕೊಂಡಾಡುತಲಿ ಮೈಮರೆದವರಿಗಲ್ಲದಲೆ || ೮ ||**

ಶ್ರೀ ಪರಮಾತ್ಮನ ಮಹಿಮಾವನ್ನ ದಾರು ತಿಳೀತಾರೆ, ದಾರು ತಿಳಿಯೋದಿಲ್ಲ ಎಂಬ ಉಭಯರ ವಿಚಾರ ಹೇಳುತಾರೆ.

ಅಹರ – ಸರ್ವದಾ ಜಿಹ್ವಾಚಾಪಲ್ಯದಿಂದ ಅತಿಶಯವಾದ ಭೋಜನವೇನು, ನಿದ್ರಾ–ಅಹೋರಾತ್ರಿಗಳಲ್ಲಿ ನಿದ್ರಾ ಏನು, ಮೈಥುನಗಳ–ಗುಹ್ಯಚಾಪಲ್ಯದಿಂದ ಸ್ವಸ್ತ್ರೀ ಅಥವಾ ಪರಸ್ತ್ರೀಸಂಭೋಗವೇನು, ಇತ್ಯಾದಿಗಳ, ಅಹರಹರ–ಹಗಲುರಾತ್ರಿಯಲ್ಲೂ,

ಬಯಸಿ–ಅಪೇಕ್ಷಾಮಾಡಿದವನಾಗಿ, ಬಳಲುವವ–ಅದರಲ್ಲೇ ಲೋಲನಾಗಿ ಆಯಾಸಬಡ ತಕ್ಕವ, ಲಕ್ಷ್ಮಿಸಮಹಿತನ–ರಮಾದೇವೇರಿಂದ ಉಪಾಸ್ಯಮಾನನಾದ ಶ್ರೀ ನಾರಾಯಣ ದೇವರ, ಮಹಾಮಹಿಮೆಗಳನು–ವಿಸ್ತಾರವಾಗಿನ್ನೂ, ಶ್ರೇಷ್ಠವಾಗಿನ್ನೂ ಇರುವ ಮಾಹಾತ್ಮ್ಯಗಳ, ಎಂತರಿವ–ಹ್ಯಾಂಗೆ ತಿಳಿವ (ಅಂದರೆ ಶುದ್ಧವಾಗಿ ತಿಳಿಯಲಾರನು, ಆದರೆ ದಾರು ತಿಳಿಯತಾರೆ ಅಂದರೆ), ನಿತ್ಯದಲಿ–ಪ್ರತಿದಿನ, ಪ್ರತಿಕ್ಷಣದಲ್ಲೂ, ಅಹಿಕ ಸೌಖ್ಯವ ಮರೆದು– ಪೂರ್ವೋಕ್ತ ಅಹರ, ನಿದ್ರಾ, ಮೈಥುನಸುಖಗಳಲ್ಲಿ ಆಶಾ ತ್ಯಾಗಮಾಡಿ, ಅಹಂಮಮತಾದಿಗಳ ಬಿಟ್ಟು, ಅಹಿಕ ವಿಷಯದಲ್ಲಿ ಹ್ಯಾಂಗೆ ಇರತಾನೋ, ಹಾಂಗೆ ಪರಮಾತ್ಮನಲ್ಲಿ ತೈಲಧಾರೆಯಂತೆ ಮನಸ್ಸುಮಾಡಿ, ಶಾಸ್ತ್ರ–ಗುರುಗಳ ಮುಖದಿಂದ ಸಚ್ಛಾಸ್ತ್ರಗಳ ಓದಿ, ಅರ್ಥಗಳ–ಆ ಓದಿದ್ದರನ್ನ ಅರ್ಥಾವಲೋಕನದಿಂದ, ಮನದಲಿ ಗ್ರಹಿಸಿ–ಮನಸ್ಸಿನಲ್ಲಿ ಮನನಮಾಡಿ, ಆದರಂತೆ ಅನುಷ್ಠಾನಮಾಡುತ್ತಾ, ಪರಮೋತ್ಸಹದಿ–ಅತ್ಯಂತ ಸಂತೋಷದಿಂದ, ಕೊಂಡಾಡುತಲಿ–ಶ್ರೀ ಪರಮಾತ್ಮನ್ನ ಕೊಂಡಾಡುತ್ತಾ, ಮೈಮರೆದವರಿಗಲ್ಲದಲೆ–ಆನಂದೋದ್ರೇಕದಿಂದ ಶರೀರದಲ್ಲಿ ಸ್ಮರಣೆ ಇಲ್ಲದವನು ದಾವನೋ, ಅವನೇ ಭಗವದ್ಭಕ್ತನು ಹೊರ್ತು ಅನ್ಯರು ಅಲ್ಲ ಎಂತ ಭಾವ.

**ತಾ||** ಭಗವನ್ಮಹಿಮಾ ಅರಿತು ತದನುಷ್ಠಾನವುಳ್ಳವ ವಿಷಯವಿರಕ್ತನಾಗತಾನೆ. ಮಹಿಮಾ ತಿಳಿಯದವ, ತಿಳಿದೂ ಅನುಷ್ಠಾನ ಇಲ್ಲದವ, ದೇವರನ್ನು ಮರೆತು ಅಹಂಕಾರ ಯುಕ್ತನಾಗಿ ವಿಷಯಾಸಕ್ತನಾಗಿ ಇರತಾನೆ. ತಿಳಿಯದವನಕಿಂತಲೂ ತಿಳಿದವ ಉತ್ತಮ ; ಬರೀ ತಿಳಿದವನಕಿಂತಲೂ ಅನುಷ್ಠಾನಮಾಡತಕ್ಕವ ಉತ್ತಮ. ಈ ಜನ್ಮದಲ್ಲಿ ಶಾಸ್ತ್ರ ಶ್ರವಣವಿಲ್ಲದೆ ಅಲ್ಪಸಂಸ್ಕಾರದಿಂದ ಅನುಷ್ಠಾತೃವಾಗುತ್ತಾನೆ. ಜನ್ಮಾಂತರಗಳಲ್ಲಿ ಶಾಸ್ತ್ರ ಶ್ರವಣಾದಿಗಳ ಬಹುವಿಧದಲ್ಲಿ ಮಾಡಿ, ಪಾಠಪ್ರವಚನ, ವಿಧ್ಯುಕ್ತ ಆಚಾರದಿಂದ ಅನುಷ್ಠಾನಮಾರ್ಗಾವಲಂಬನ ಮಾಡಿ, ಆ ವಾಸನಾದಿಂದ ವರ್ತಮಾನ ಜನ್ಮದಲ್ಲಿ ಅಲ್ಪ ಸಂಸ್ಕಾರದಿಂದ ವಿರಕ್ತನಾಗಿ, ಅನುಷ್ಠಾನಪರನಾಗಿ ಇರತಾನೆ ಎಂತ ತಾತ್ಪರ್ಯ.

**ಬಂಧಮೋಕ್ಷಪ್ರದನ ಜ್ಞಾನವು ।**
**ಮಂದಮತಿಗಳಿಗೆಂದು ದೊರೆವುದು ।**
**ಬಿಂದುಮಾತ್ರ ಸುಖಾನುಭವ ಪರ್ವತಕೆ ಸಮದುಃಖ ॥**
**ಎಂದು ತಿಳಿಯದಲನ್ಯದೈವಗ ।**
**ಳಿಂದ ಸುಖವಾಪೇಕ್ಷಿಸುವರು ಮು ।**
**ಕುಂದನಾರಾಧನೆಯ ಬಿಟ್ಟವಗುಂಟೆ ಮುಕ್ತಿಸುಖ ॥ ೯ ॥**

ಶ್ರೀ ಪರಮಾತ್ಮನ ಬಿಟ್ಟವಗೆ ಮುಕ್ತಿ ಸುಖವಿಲ್ಲಾ ಎಂತ ಹೇಳತಾರೆ.

ಬಂಧ–ಅನಾದಿಯಿಂದ ಜೀವಗೆ ಬಂಧರೂಪವಾದ ಲಿಂಗದೇಹಾಖ್ಯ ಬಂಧವನ್ನ, ಮೋಕ್ಷ–ಪರಿಹಾರಮಾಡಿ, ಪ್ರದನ–ಜೀವನ ಸ್ವರೂಪವೇನು, ತದ್ಗತ ಆನಂದವೇನು ಅಭಿ

ವ್ಯಕ್ತಮಾಡಿ ಭೋಗಪ್ರದನಾದ ಪರಮಾತ್ಮನ, ಜ್ಞಾನವು–ತಾರತಮ್ಯ ಪಂಚಭೇದ ಪೂರ್ವಕವಾಗಿ ಸರ್ವೋತ್ತಮತ್ವಾದಿಗುಣಗಳ ಜ್ಞಾನವು, ತದನುಷ್ಠಾನವು, ಮಂದಮತಿ ಗಳಿಗೆ–ವಿಷಯಾಸಕ್ತರಾಗಿ ವಿಷಯಭೋಗಗಳು ಶಾಶ್ವತವೆಂದು ತಿಳಿದು ಅಶಾಶ್ವತ ಎಂಬೋದು ಪ್ರತ್ಯಕ್ಷ ಕಣ್ಣಿಂದಾ ನೋಡತಾ ಇದ್ದೂನೂ, ಅದರ ವಿಚಾರ ಮನನಮಾಡದೆ ವಿಷಯಾಸಕ್ತರಾದ (ಓದಿ ಇರುವ, ಓದದೇ ಇರುವ ಈ ಉಭಯವಿಧರಾದ ಮಂದಮತಿ ಗಳಿಗೆ, ಇನ್ನೂ ಪೂರ್ವಾಪರವಿಚಾರ ಇಲ್ಲದವರಿಗೆ), ಎಂದು ದೊರೆವ್ರದು–ಭಗವನ್ಮಹಿಮಾ ಏನು, ತದ್ವಿಷಯಕವಾದ ಸುಖವೇನು ಯಾವಾಗ ಸಿಕ್ಕೋದಾಗತದೆ? (ಸಿಕ್ಕಲಾರದು ಎಂತ ಭಾವ), ವಿಷಯಾಸಕ್ತರಾಗಿ ಇದ್ದವರಿಗೆ ಇದರಲ್ಲಿ ಇರತಕ್ಕ ಸುಖ ಎಂಥಾದ್ದೆಂದರೆ, ಬಿಂದುಮಾತ್ರ ಸುಖಾನುಭವ–ಒಂದು ಉದಕ ಬಿಂದುಮಾತ್ರ ಸುಖ, ಪರ್ವತಕೆ ಸಮ ದುಃಖ–ಮೇರುಪರ್ವತಕ್ಕೆ ಸಮಾನದುಃಖ ; ಅಂದರೆ ಅತ್ಯಲ್ಪ ಸುಖ, ಅತ್ಯಧಿಕ ದುಃಖ ಇರೋದಾಗಿ ಅದೆ. (ಮತ್ತು ರೇತೋಬಿಂದು ಪತನಸುಖ, ನಿಮಿಷಕಾಲದ ಸುಖ ; ತಜ್ಜನಿತಸಂಸಾರ, ಮೇರುತುಲ್ಯವಾದ ದುಃಖ ; ಇದರನ ಭೋಗಸತಾ, ದುಃಖ ಪ್ರತ್ಯಕ್ಷ ದಲ್ಲಿ ಅನುಭವಮಾಡುತ್ತಲೂ, ಅದರ ಕಾರಣ ವಿಚಾರಮಾಡದೇನೆ, ಬಾರಿಬಾರಿಗೂ ಆ ಬಿಂದುಸುಖಕ್ಕಾಗಿ ಮಹಾಪ್ರಯತ್ನಮಾಡತಾರೇ ಹೊರ್ತು, ಮೇರುತುಲ್ಯ ದುಃಖಪರಿಹಾ ರಕ್ಕೆ ಯತ್ನಮಾಡೋದಿಲ್ಲ ; ಸರ್ವದುಃಖಕ್ಕೂ ಮೂಲಕಾರಣ "ಅಹಂ" "ಮಮತಾ" ಎಂಬುವು ಎರಡು), ಎಂದು ತಿಳಿಯದಲೆ–ಎಂಬುದರನ್ನ ತಿಳಿಯದೆ ದುಃಖಗಳ ಭೋಗ ಮಾಡತಾ ಮತ್ತು, ಅನ್ಯದೈವಗಳಿಂದ–ತಮಗೆ ಪ್ರಾಪ್ತವಾಗಿ ಭೋಗಿಸುತ್ತಾ ಇರುವ ವಿಷಯಜನ್ಯ ದುಃಖವ, ಈಶ್ವರಗೆ ಅನ್ಯರಾದ ದೇವತೆಗಳಾದ ಬ್ರಹ್ಮವಾಯ್ವಾದಿ ದೇವತೆಗಳ ಅಂತರ್ಗತ ಪರಮಾತ್ಮನ್ನ ತಿಳಿಯದೆ, ಆಯಾ ಅನ್ಯದೇವತೆಗಳಿಂದಲೇ ತಮಗೆ ದುಃಖ ಪರಿಹಾರವಾಗಿ, ಸುಖವಾಗತದೆ ಎಂತ ಭಾವನಮಾಡಿ, ಸುಖವಾಪೇಕ್ಷಿಸುವರು– ಸುಖವನ್ನ ಅಪೇಕ್ಷಿಸುವವರು ಆಗತಾರೆ. ಮುಕುಂದನಾರಾಧನೆಯ–ಮೋಕ್ಷಪ್ರದನಾದ ಶ್ರೀ ಪರಮಾತ್ಮನ ಆರಾಧನೆಯನ್ನ, ಬಿಟ್ಟವಗೆ–ಬಿಟ್ಟು ಅನ್ಯದೇವತೆಗಳನ್ನ ಮಾತ್ರ ಪೂಜಾದಿಗಳ ಮಾಡಿದವಗೆ, ಮುಕ್ತಿಸುಖ–ದುಃಖರೂಪಬಂಧನ ಪರಿಹಾರವಾಗಿ ಸ್ವರೂಪ ಸುಖಭೋಗ ಎಂಬುದು, ಉಂಟೇ–ಉಂಟಾ? (ಎಂದರೆ, ಶುದ್ಧವಾಗಿ ಇಂದಿಗೂ ಇಲ್ಲ).

**ವಿಶೇಷಾರ್ಥ** :– ನೀಚಾಧಿಷ್ಠಾನದಲ್ಲಿ ಅಂತರ್ಗತನ ತಿಳಿದೂನೂ ಪೂಜಾದಿಗಳು ನಿಷೇಧ. ಉತ್ತಮಾಧಿಷ್ಠಾನದಲ್ಲಿ ಅಂತರ್ಗತನ ತಿಳಿಯದೆ ಪೂಜಾದಿಗಳು ಮಾಡ ಕೂಡದು. ಮುಖ್ಯವಾಗಿ ಸರ್ವತ್ರ ಪರಮಾತ್ಮನ ವ್ಯಾಪ್ತಿ ತಿಳೀಬೇಕು ಎಂತ ತಾತ್ಪರ್ಯ.

**ರಾಜ ತನ್ನಾಮಾತ್ಯ ಕರುಣದಿ ।**
**ನೈಜಜನರಿಗೆ ಕೊಟ್ಟು ಕಾರ್ಯ ನಿ ।**
**ಯೋಜಿಸುವ ಮಾನಾಪಮಾನವ ಮಾಳ್ಪ ತೆರನಂತೆ ॥**

**ಶ್ರೀ ಜನಾರ್ದನ ಸಕಲರೊಳಗಪ ।**
**ರಾಜಿತನು ತಾನಾಗಿ ಸರ್ವಪ್ರ ।**
**ಯೋಜನವ ಮಾಡಿಸುತ ಮಾಡುವ ಫಲಕೆ ಗುರಿಮಾಡಿ ॥ ೧೦ ॥**

ಸರ್ವಕರ್ಮವೂ ಜೀವನಿಂದ ಮಾಡಿಸಿ ಆ ಕರ್ಮಫಲಕ್ಕೆ ಜೀವರನ ಗುರಿ ಮಾಡಸ ತಾನೆ ಎಂತ ಹೇಳತಾರೆ.

ರಾಜ–ಭೂಪಾಲಕನಾದ ಅರಸು, ಅಮಾತ್ಯ–ಮಂತ್ರಿ, ಜನರಿಗೆ–ಇನ್ನೂ ತನ್ನ ಸೇವಾ ಮಾಡುವ ಭೃತ್ಯ ಜನರಿಗೆ, ತನ್ನ–ರಾಜನಾದ ತನ್ನ, ನೈಜ–ಸ್ವಕೀಯವಾದ ರಾಜ ತಂತ್ರ ನಡಿಸತಕ್ಕ ಅಧಿಕಾರಸ್ವಾತಂತ್ರ್ಯವನ್ನ ಅವರವರ ಯೋಗ್ಯತಾನುಸಾರ, ಕರುಣದಿ–ದಯೆಯಿಂದ, ಕೊಟ್ಟು–ತನ್ನ ಮುಖದಿಂದ ಶಬ್ದಮೂಲಕವಾಗಿ ತೆಗೆದು ಆಯಾ ಮಂತ್ರಿ, ಭೃತ್ಯ ಜನರಲ್ಲಿ ಇಟ್ಟು, ಕಾರ್ಯ ನಿಯೋಜಿಸುವ–ಹೀಂಗೆ ಇಟ್ಟಮಾತ್ರಕ್ಕೆ ತಮ್ಮ ತಮ್ಮ ಮನಸ್ಸಿನ ಕಾರ್ಯಗಳ ಮಾಡೋದಕ್ಕೆ ಅಧಿಕಾರಿಗಳಿಗೆ ಆಗೋದಿಲ್ಲ. ಅಧಿಕಾರ ಹೊಂದಿ ದವರು ಎಂತ ಮಾತ್ರವೇ ಕರಸತಾರೆ. ಇವರಿಗೆ ರಾಜನಾದವ, ಪುನಃ ದಾವ ಕಾಲದಲ್ಲಿ ದಾವ ಕಾರ್ಯ ಮಾಡಬೇಕೆಂದು ಆಜ್ಞಾರೂಪವಾದ ವರ್ಣಾತ್ಮಕ ಶಬ್ದಗಳ, ಮಂತ್ರಿ, ಭೃತ್ಯರ ಶ್ರವಣೇಂದ್ರಿಯದಿಂದ ಮನಸ್ಸಿನಲ್ಲಿ ಪ್ರವೇಶ ಮಾಡಸತಾನೋ ಆಗ್ಗೆ ಆ ಕಾರ್ಯ ದಲ್ಲಿ ಪ್ರವರ್ತಿಸುತ್ತಾರೆ. ಇಂಥಾ ಪ್ರೇರಣೆಯಿಂದ ಕಾರ್ಯ ಮಾಡಿದ ಮಂತ್ರಿ, ಭೃತ್ಯರಿಗೆ ರಾಜನಾದವನು, ಮಾನ–ಯೋಗ್ಯರಾದ ತನ್ನ ಆಜ್ಞಾ ವಹಿಸಿದ ಭೃತ್ಯರಿಗೆ ಮರ್ಯಾದಾ (ತಥಾ ಜೀವನವು), ಅಪಮಾನವ–ಅಯೋಗ್ಯರಾಗಿ ತನ್ನ ಆಜ್ಞಾಕ್ಕೆ ಸರಿಯಾಗಿ ನಡಿಯದೆ ಇರುವ ಮಂತ್ರಿ, ಭೃತ್ಯರಿಗೆ ಅವಮಾನ (ಶಿಕ್ಷೆಯನ್ನು), ಮಾಳ್ಪ–ಮಾಡೋವನಾಗತಾನೆ, ಮತ್ತು, ಫಲಕೆ ಗುರಿಮಾಡಿ–ರಾಜಾಜ್ಞಾದಿಂದ ಯುದ್ಧಾದಿ ಕರ್ಮವೇನು, ಗ್ರಾಮ ಗ್ರಾಮ ಸಂಚಾರವೇನು, ಇತ್ಯಾದಿ ಕರ್ಮಗಳ ಮಾಡತಾರೆ. ಯುದ್ಧದಲ್ಲಿ ಆಗತಕ್ಕ ಛೇದ ಖೇದಾದಿಗಳು, ಮಾರ್ಗಾಯಾಸ ಮೊದಲಾದ ದುಃಖಗಳು ಭೃತ್ಯರಿಗೆ ಆಗತವೆ, ರಾಜಗೆ ಇಲ್ಲ. ರಾಜ ಸುಖಿಯಾಗೇ ಇರತಾನೆ. ದುಃಖ ಹೊಂದತಕ್ಕವರು ಮಂತ್ರಿ, ಭೃತ್ಯರು, ತೆರನಂತೆ–ಇದು ಹ್ಯಾಂಗೋ ಇದರಂತೆ, ಮಹಾರಾಜನಾದ ಗುಣಪೂರ್ಣನಾದ ಪರ ಮಾತ್ಮ, ಸರ್ವರಿಗೆ ತನ್ನ ಸ್ವಾತಂತ್ರ್ಯ ಕೊಟ್ಟು, ತದ್ದ್ವಾರಾ ಕರ್ಮವ್ಯಾಪಾರಗಳ ಬಿಂಬಕ್ರಿಯಾ ದ್ವಾರಾ ಮಾಡಿಸಿ, ಆಯಾ ಕರ್ಮಫಲಕ್ಕೆ ಆಯಾ ಜೀವರನ್ನ ಗುರಿಮಾಡಿ ಸುಖಪೂರ್ಣನಾಗಿ ಇರುತ್ತಾನೆ. ದುಷ್ಟಭೃತ್ಯರಾದ ಅಸುರರಿಗೆ, ವಿದುರನ ಮನೆಯಲ್ಲಿ ಪಾಲುಂಡು ದುರ್ಯೋಧನನ್ನ ಅವಮಾನ ಮಾಡಿದಂತೆ ಮಾಡತಾನೆ. ಶ್ರೀಜನಾರ್ದನ–ದುಷ್ಟಜನಮರ್ದನನಾದ ಪರಮಾತ್ಮ, ಸಕಲರೊಳಗೆ–ಸಮಸ್ತರಾದ ತ್ರಿವಿಧಜೀವರೊಳು ಬಿಂಬನಾಗಿಯೂ, ಸ್ವತಂತ್ರರೂಪದಿಂದ ಪ್ರವೇಶನಾಗಿಯೂ, ಅಪರಾಜಿತನು ತಾನಾಗಿ–ದಾವದರಿಂದಲೂ, ದಾರಿಂದಲೂ ಅಪಜಯಹೊಂದದೆ, ತಾನೇ ತಾನಾಗಿ ಜೀವರಲ್ಲಿ ಇದ್ದು ಕೊಂಡು, ಸರ್ವಪ್ರಯೋಜನವ–ಆಯಾ ಜೀವರಿಂದ ಆಗಬೇಕಾದ ಸ್ವರೂಪ ಅನುಸರಿ

ಸಿನ್ನೂ, ಅನಾದಿಕರ್ಮ ಅನುಸರಿಸಿನ್ನೂ ಸ್ಥೂಲದೇಹದಿಂದ ಆಗಬೇಕಾದ ಯಾವತ್ತೂ ಕರ್ಮರೂಪವಾದ ಪ್ರಯೋಜನಗಳ, ಮಾಡುವ–ತನ್ನ ಕ್ರಿಯಾದ್ವಾರಾ ಮಾಡುವ ಮತ್ತು, ಜೀವರುಗಳಿಂದ ಮಾಡಿಸುತ–ಜೀವರುಗಳ ದೇಹದ್ವಾರಾ ಮಾಡಿಸುತ್ತಾ, ಫಲಕೆ ಗುರಿಮಾಡಿ–ಆಯಾ ಕರ್ಮಫಲಕ್ಕೆ ಜೀವರನ್ನ ಗುರಿಮಾಡಿ ಕರ್ಮಗಳ ಮಾಡಸತಾನೇ ಹೊರ್ತು ಆಯಾ ಕರ್ಮಫಲ ತನ್ನ ಭೋಗಕ್ಕಾಗಿ ಮಾಡಿಸೋದಿಲ್ಲ. ಪರಮಾತ್ಮಗೆ ಅಂಥಾ ಕರ್ಮವೂ ಇಲ್ಲ, ಅಂಥಾ ಭೋಗವೂ ಇಲ್ಲ. ಇದಕ್ಕೆ ಪೂರ್ವದೃಷ್ಟಾಂತವೇ ಎಂತ ತಾತ್ಪರ್ಯ.

**ವಾಸುದೇವ ಸ್ವತಂತ್ರವ ಸರೋ ।**
**ಜಾಸನಾದ್ಯಮರಾಸುರರಿಗೀಯ ।**
**ಲೋಸುಗರ್ಧವ ತೆಗೆದದರೊಳರ್ಧವ ಚತುರ್ಭಾಗ ॥**
**ಗೈಸಿ ಒಂದನು ಶತವಿಧದ್ವಿಪಂ ।**
**ಚಾಶತಾಬ್ಜ ಜಗಷ್ಟ ಚತ್ವಾ ।**
**ರಿಂಶದನಿಲನಿಗಿತ್ತ ವಾಣೀಭಾರತೀಗರ್ಧ ॥ ೧೧ ॥**

ಸರ್ವಸ್ವಾತಂತ್ರ್ಯವಿಭಾಗಕ್ರಮವನ್ನ ಹೇಳತಾರೆ.

ವಾಸುದೇವ–ಗುಣಪೂರ್ಣನಾದ ವಾಸುದೇವನಾದ ಶ್ರೀ ಲಕ್ಷ್ಮೀನಾರಾಯಣ ದೇವರು, ಸ್ವತಂತ್ರವ – ದತ್ತಸ್ವಾತಂತ್ರ್ಯವಿಭಾಗಕಾಲದಲ್ಲಿ ತನ್ನಲ್ಲಿ ಇಟ್ಟುಕೊಂಡ ೧೩೨-೩/೪ ಸ್ವಾತಂತ್ರ್ಯಗುಣಗಳೊಳಗೆ ಸ್ವಗತಸ್ವಾತಂತ್ರ್ಯವಿಭಾಗಕ್ಕಾಗಿ ಒಂದು ಗುಣ ಹೋಗತಾ, ಉಳಿದ ೧೩೧-೩/೪ ಸ್ವಾತಂತ್ರ್ಯದೊಳಗೆ, ಸರೋಜಾಸನಾದಿ–ಬ್ರಹ್ಮ ದೇವರೇ ಮೊದಲಾದ, ಅಮರ–ತೃಣಾಂತ ಮುಕ್ತಿಯೋಗ್ಯರಿಗೆ, ಅಸುರರಿಗೆ–ತಮೋ ಯೋಗ್ಯರು ಮತ್ತು ನಿತ್ಯಸಂಸಾರಿಗಳಿಗೆ, ಈಯಲೋಸುಗ-ಕೊಡೋದಕ್ಕಾಗಿ ಪೂರ್ವೋಕ್ತ ೧೩೧-೩/೪ ಗುಣಗಳೊಳಗೆ, ತೆಗೆದು–ಒಂದು ಗುಣವನ್ನ ತೆಗೆದು, ವಿಭಾಗಮಾಡಿ ಇರುವ ದಿಕ್ಪ್ರದರ್ಶನದಿಂದ (ಇದರ ವಿಭಾಗಕ್ಕೂ ಒಂದು ಗುಣ ಎಂತ ಅರ್ಥ.) ಈ ಒಂದು ಗುಣ ವನ್ನ, ಅರ್ಧ–ಅರ್ಧಾರ್ಧವಾಗಿ ಮಾಡಿದ. ಅದರೊಳು–ಈ ಒಂದು ಅರ್ಧದೊಳು, ಅರ್ಧವ–ಅರ್ಧಭಾಗ ಮಾಡಿದರೆ (ಅಂದರೆ ಕಾಲುಭಾಗವಾಯಿತು), ಚತುರ್ಭಾಗಗೈಸಿ– ಈ ಕಾಲುಭಾಗವನ್ನ ನಾಲ್ಕು (ಅಂದರೆ ೧/೧೬ ) ಭಾಗ ಮಾಡಿ, ಒಂದನು–ಆ ಭಾಗ ಗಳಲ್ಲಿ ಒಂದನ್ನು ತೆಗೆದುಕೊಂಡು, ಶತವಿಧಗೈಸಿ–ನೂರು ಭಾಗ ಮಾಡಿ, ದ್ವಿಪಂಚಾಶತ್– ಐವತ್ತೆರಡು ಗುಣವನ್ನು, ಅಬ್ಜಜಗೆ–ಬ್ರಹ್ಮದೇವರಿಗೆ, ಅಷ್ಟಚತ್ವಾರಿಂಶತ್–ನಲವತ್ತೆಂಟು ಗುಣವನ್ನು, ಅನಿಲನಿಗೆ–ವಾಯುದೇವರಿಗೆ (ಅಂತೂ ನೂರು ಗುಣಗಳು ಸರಿಯಾಯಿತು), ವಾಣೀಭಾರತೀಗರ್ಧ– ವಾಣೀ–ಸರಸ್ವತೀದೇವೇರಿಗೆ, ಬ್ರಹ್ಮದೇವರ ೫೨ ಗುಣದೊಳಗೆ, ಒಂದೊಂದು ಗುಣದೊಳಗೆ ಅರ್ಧಾರ್ಧ ಪ್ರಕಾರ ಅಂಶವಿಭಾಗ ಮಾಡಿ, ೨೬ ಗುಣ ಸರಸ್ವತಿದೇವರಿಗೂ, ಭಾರತೀಗೆ–ಭಾರತೀದೇವೇರಿಗೆ, ವಾಯುದೇವರ ೪೮ ಗುಣದೊಳಗೆ

ಪೂರ್ವೋಕ್ತಪ್ರಕಾರ ಅಂಶ ವಿಭಾಗಮಾಡಿ, ೨೪ ಗುಣಗಳ ಭಾರತೀದೇವೇರಲ್ಲೂ ಅರ್ಧ = ಈ ಪ್ರಕಾರ ಅರ್ಧಾಂಶವನ್ನು ಇತ್ತ–ಕೊಡೋವನಾದ (ಇದು ಪಕ್ವಕಾಲದಲ್ಲಿ ಕಾರ್ಯ ಮಾಡತಕ್ಕದ್ದು). ಇದಕ್ಕೆ ವಿವರ—

೧೩೧ ೩/೪ ಗುಣದೊಳಗೆ ತೆಗೆದ ಗುಣ ಒಂದು ೧

ಎರಡು ಅರ್ಧಗಳಾಗಿ ಮಾಡಿದ ಅಂದರೆ .... ೧/೨, ೧/೨

ಈ ಒಂದು ಅರ್ಧದೊಳಗೆ ಎರಡು ಅರ್ಧ ಅಂದರೆ ೧/೪, ೧/೪

ಈ ಕಾಲುಭಾಗದೊಳಗೆ ಒಂದು ಕಾಲನ್ನು ನಾಲ್ಕು
ಭಾಗ ಮಾಡಿದ ಅಂದರೆ .... ೧/೧೬, ೧/೧೬, ೧/೧೬, ೧/೧೬

ಈ ೧/೧೬ ಭಾಗ ನೂರು ಭಾಗಮಾಡಿ ಬ್ರಹ್ಮದೇವರಿಗೆ ೫೨ ಗುಣ ಕೊಟ್ಟ.

ವಾಯುದೇವರಿಗೆ ನೂರು ಗುಣದಲ್ಲಿ ಉಳಿದ ೪೮ ಗುಣಗಳನ್ನ ಕೊಟ್ಟ.

ಅಂತು ೫೨ + ೪೮ = ೧೦೦ ನೂರುಭಾಗ ಆಯಿತು.

ಅಂದರೆ ೧ ಗುಣದೊಳಗೆ ೧೬ ಭಾಗ ಮಾಡಿ, ಅದರ ಪೈಕಿ ಒಂದು ಗುಣದ ವಿಭಾಗ ಹೇಳಿದಂತಾಯಿತು. ಇನ್ನು ೧೫ ಭಾಗ ಉಳಿದಿದೆ.

ಈ ನೂರರ ಒಳಗೆ ಸರಸ್ವತಿಗೆ ಬ್ರಹ್ಮನ ಗುಣದಲ್ಲಿ ಅರ್ಧ ಅಂದರೆ ೨೬ ಗುಣ
ಭಾರತೀದೇವೇರಿಗೆ ವಾಯುದೇವರ ಗುಣದಲ್ಲಿ ಅರ್ಧ ಅಂದರೆ ೨೪ ಗುಣ

ಅಂತು ೫೦ ಗುಣ

**ದ್ವಿತಿಯಪಾದವ ತೆಗೆದುಕೊಂಡದ ।**
**ಶತವಿಭಾಗವ ಮಾಡಿ ತಾ ವಿಂ ।**
**ಶತಿ ಉಮೇಶನೊಳಿಟ್ಟು ಇಂದ್ರನೊಳೈಧಿಕ ಹತ್ತು ॥**
**ರತಿಪನೊಳಗಿನಿತಿಟ್ಟಖಿಳ ದೇ ।**
**ವತೆಗಳೊಳಗೀರೈದು ಜೀವ ।**
**ಪ್ರತತಿಯೊಳು ದಶವೈದಧಿಕನಾಲ್ವತ್ತು ದೈತ್ಯರೊಳು ॥ ೧೨ ॥**

ಅವಶಿಷ್ಟ ವಿಭಾಗಕ್ರಮುವನ್ನ ಹೇಳತಾರೆ.

ದ್ವಿತೀಯಪಾದವ–ಪೂರ್ವೋಕ್ತ ಎರಡನೇದಾದ (೧/೧೬), ಪಾದವನ್ನ, ತೆಗೆದು ಕೊಂಡು–ತೆಗೆದುಕೊಂಡವನಾಗಿ, ಅದ–ಆ (೧/೧೬) ಭಾಗವನ್ನ, ಶತವಿಭಾಗವ ಮಾಡಿ–ನೂರುಭಾಗ ಮಾಡಿ, ಅದರೊಳಗೆ, ತಾವಿಂಶತಿ–ತಾನು ಇಪ್ಪತ್ತುಗುಣವನ್ನ, ಉಮೇಶನೊಳಿಟ್ಟು–ಪಾರ್ವತೀಪತಿ ರುದ್ರದೇವರಲ್ಲಿ ಇಟ್ಟವನಾಗಿ, ಇಂದ್ರನೊಳು–ಇಂದ್ರದೇವರಲ್ಲಿ, ಐದಧಿಕಹತ್ತು–ಹದಿನೈದು ಗುಣ ಇಡೋವನಾದ, ರತಿಪನೊಳಗೆ–ಮನ್ಮಥನಲ್ಲಿ, ಇನಿತು–

ಇಂದ್ರನಲ್ಲಿ ಎಷ್ಟು ಗುಣ ಇಟ್ಟನೋ, ಅಷ್ಟುಮಾತ್ರವೇ ತದಂಶಗಳ ತೆಗೆದು (೧೫ ಗುಣ) ಮತ್ತು, ಅಖಿಳದೇವತೆಗಳೊಳಗೆ–ಸಮಸ್ತರಾದ ದೇವತೆಗಳಲ್ಲಿ, ಈರೈದು–ಹತ್ತುಗುಣಗಳ, ಜೀವಪ್ರತತಿಯೊಳು ದಶವ – ಜೀವಸಮೂಹದಲ್ಲಿ ಹತ್ತು, ಐದಧಿಕ ನಾಲ್ವತ್ತು– ನಾಲ್ವತ್ತೈದು, ದೈತ್ಯರೊಳು–ತಮೋಯೋಗ್ಯರು ಹಾಂಗೂ ನಿತ್ಯಸಂಸಾರಿಗಳಲ್ಲಿ, ಇಟ್ಟ– ಈ ರೀತಿ ಇಡೋವನಾದ ಅಂತು ನೂರು ಗುಣ ಸರಿ ಆಯಿತು. (ಇಂದ್ರಕಾಮರಲ್ಲಿ ಇಟ್ಟಿದ್ದು ೧೫ ಗುಣ. ಹೆಚ್ಚು ಅಲ್ಲ. ಇಂದ್ರದೇವರಲ್ಲಿ ಇಟ್ಟ ಸ್ವಾತಂತ್ರ್ಯದೊಳಗೆ ೧೫ ಗುಣಾಂಶವನ್ನು ತೆಗೆದು ಮನ್ಮಥನಲ್ಲಿ ಇಟ್ಟ. ಆ ಹದಿನೈದು ಗುಣ ಬ್ಯಾರೆ ಅಲ್ಲ. ಸೇರಿಸಿದರೆ ಹೆಚ್ಚಾಗುತ್ತದೆ. ಇಂದ್ರ, ಕಾಮರಲ್ಲಿ ಇಟ್ಟಿದ್ದು ಈ ಪ್ರಕಾರ ಅಂತ ತಾತ್ಪರ್ಯ.)

**ಕಾರುಣಿಕ ಸ್ವಾತಂತ್ರ್ಯಯತ್ವವ ।**
**ಮೂರುವಿಧಗೈಸೆರಡು ತನ್ನೊಳು ।**
**ನಾರಿಗೊಂದನು ಕೊಟ್ಟ ಸ್ವಾತಂತ್ರ್ಯವ ಸರ್ವರಿಗೆ ॥**
**ಧಾರುಣಿಪ ತನ್ನನುಗರಿಗೆ ವ್ಯಾ ।**
**ಪಾರ ಕೊಟ್ಟು ಗುಣಾಗುಣಗಳ ವಿ ।**
**ಚಾರ ಮಾಡುವ ತೆರದಿ ತ್ರಿಗುಣ ವ್ಯಕ್ತಿಯನೆ ಮಾಳ್ಪ ॥ ೧೩ ॥**

ಇನ್ನೂ ಅವಶಿಷ್ಟ ಸ್ವಾತಂತ್ರ್ಯವಿಭಾಗವನ್ನೇ ಹೇಳತಾರೆ.

ಕಾರುಣಿಕ–ಸೃಷ್ಟ್ಯಾದಿ ಸರ್ವಕಾರ್ಯಗಳಿಗೆ ಮೂಲಕಾರಣನಾದ ನಾರಾಯಣ ದೇವರು, ಸ್ವಾತಂತ್ರ್ಯಯತ್ವವ–ಸ್ವಾತಂತ್ರ್ಯವನ್ನ ತ್ರಿವಿಧಜೀವರಿಗೆ ಭಾಗಮಾಡಿಕೊಟ್ಟದ್ದು ಹೋಗತಾ, ಅವಶಿಷ್ಟ ಉಳದಿರುವ ಮುಕ್ಕಾಲು ಅರಕಾಲು ಭಾಗವನ್ನ, ಮೂರುವಿಧ ಗೈಸಿ–ಮೂರು ಭಾಗ ಮಾಡಿ, ಎರಡು ತನ್ನೊಳು–ಎರಡು ಭಾಗ ಅಂದರೆ, ೯ ಆಣೆ, ೪ ಪೈ ಭಾಗ ಪರಮಾತ್ಮನಾದ ತನ್ನಲ್ಲಿ ಇಟ್ಟುಕೊಂಡು, ನಾರಿಗೊಂದನು–ಒಂದು ಭಾಗ ಅಂದರೆ ೪ ಆಣೆ, ೮ ಪೈ ಭಾಗ ಲಕ್ಷ್ಮೀದೇವೇರಿಗೆ, ಕೊಟ್ಟ–ಕೊಡೋವನಾದ. ಅಂತು ೩ ಭಾಗ ಸರಿ ಆಯಿತು.

೧೩೧–೩/೪ ಗುಣದೊಳಗೆ, ೧ ತೆಗೆದು, ೧/೨, ೧/೨ ಮಾಡಿ, ಇದರನ್ನ ೧/೪, ೧/೪ ಮಾಡಿ, ಇದರನ್ನ ೧/೮, ೧/೮ ಮಾಡಿ, ಇದರನ್ನ ೨೦೦ ಭಾಗ ಮಾಡಿ, ಈ ೨೦೦ ಭಾಗವನ್ನ ೫೨ ಬ್ರಹ್ಮನಲ್ಲಿ, ೪೮ ವಾಯುದೇವರಲ್ಲಿ, ೨೦ ರುದ್ರನಲ್ಲಿ, ೧೫ ಇಂದ್ರ, ಕಾಮರಲ್ಲಿ, ೧೦ ದೇವತೆಗಳಲ್ಲಿ, ೧೦ ಜೀವರಲ್ಲಿ, ೪೫ ಕಲ್ಯಾದಿ ದೈತ್ಯರಲ್ಲಿ.
ಅಂತು ೨೦೦ ಆಯಿತು.

೧/೨ ಅರ್ಧಭಾಗ → ೧
೧/೪ ಕಾಲುಭಾಗ → ೧
೩/೪ ಮುಕ್ಕಾಲುವರಿ → ೧
ಇದರನ್ನ ಮೂರು ಭಾಗ ಮಾಡಿ, ೨ ಭಾಗ ತನ್ನೊಳಗೆ, ೧ ಭಾಗ ರಮಾದೇವೇರಲ್ಲಿ. ಅಂತು ೩ ಭಾಗ ಆಯಿತು.

ಸ್ವಾತಂತ್ರ್ಯವ–ಪೂರ್ವೋಕ್ತ ಪ್ರಕಾರ ತ್ರಿವಿಧಜೀವರಿಗೆ ತ್ರಿವಿಧಪ್ರಕಾರ ಸ್ವಾತಂತ್ರ್ಯವ, ಸರ್ವರಿಗೆ–ಸಮಸ್ತಜೀವರಿಗೆ ಕೊಟ್ಟು, ವಿಭಾಗವಮಾಡಿಕೊಟ್ಟಿದ್ದಾನೆ. ಇದಕ್ಕೆ ದೃಷ್ಟಾಂತ. ಧಾರುಣಿಪ–ಭೂಪಾಲಕನಾದ ರಾಜ, ತನ್ನ ಅನುಗರಿಗೆ–ತನ್ನಿಂದ ಅಧಿಕಾರರೂಪವಾದ ಸ್ವಾತಂತ್ರ್ಯ ಹೊಂದಿ ಅನುಸರಿಸಿದ ಭೃತ್ಯರಿಗೆ, ವ್ಯಾಪಾರ ಕೊಟ್ಟು–ಅವರವರ ಯೋಗ್ಯತಾನುಸಾರ ಮಾಡತಕ್ಕ ಕಾರ್ಯಗಳ ವ್ಯವಸ್ಥಾ ಮಾಡಿಕೊಟ್ಟು, ಗುಣಾಗುಣಗಳ–ಗುಣದಾವದು, ದೋಷ ದಾವದು ಎಂತ, ವಿಚಾರಮಾಡುವ ತೆರದಿ–ವಿಚಾರಮಾಡುವುದಕ್ಕೋಸ್ಕರ ಲಿಖಿತರೂಪವಾದ ನಿಬಂಧನಿಗಳ ಮಾಡಿ, ತದ್ದ್ವಾರಾ, ಗುಣಾವಗುಣಗಳ ಆಗಾಗ್ಗೆ ತಿಳಿಸುವ ತೆರದಂತೆ, ಗುಣಾವಗುಣಗಳ ತಿಳಿಸೋದಕ್ಕೋಸ್ಕರ, ವೇದೋಕ್ತಾನುಸಾರ ಶಾಸ್ತ್ರಪುರಾಣರೂಪವಾದ ಶಾಸನಗಳ ನಿರ್ಮಾಣಮಾಡಿ, ತ್ರಿಗುಣವ್ಯಕ್ತಿಯನೆಮಾಳ್ಪ–ತ್ರಿವಿಧವಾದ ಸ್ವಾತಂತ್ರ್ಯಗುಣಗಳ ದ್ವಾರಾ, ಸತ್ತ್ವಜೀವರಲ್ಲಿ ವಿದ್ಯಮಾನವಾದ ಸತ್ತ್ವಸಂಬಂಧವಾದ ತಾರತಮ್ಯ ಪಂಚಭೇದಜ್ಞಾನ ಮುಕ್ತಿಯೋಗ್ಯ ಜೀವರಲ್ಲಿ, ರಾಜಸ ಜೀವರಾದ ನಿತ್ಯಸಂಸಾರಿಗಳಲ್ಲಿ, ವಿದ್ಯಮಾನವಾದ ರಜಸ್ಸಂಬಂಧವಾದ ತಾರತಮ್ಯಶೂನ್ಯವಾದ ಪಂಚಭೇದಜ್ಞಾನ, ತಮೋಯೋಗ್ಯರಲ್ಲಿ ವಿದ್ಯಮಾನವಾದ ತಮೋಗುಣಸಂಬಂಧವಾದ ತಾರತಮ್ಯ ಪಂಚಭೇದದಿಂದ ಶೂನ್ಯವಾದ ಮಿಥ್ಯಾಜ್ಞಾನ, ಏತಾದೃಶ ತ್ರಿಗುಣಗಳ, ತತ್ಕಾರ್ಯಗಳ ಲಿಂಗಗತ ಗುಣತ್ರಯಗಳ ದ್ವಾರಾ, ತದ್ಗತ ಅನಾದಿಕರ್ಮ ದ್ವಾರಾ, ಸ್ಥೂಲದೇಹದಲ್ಲಿ ವ್ಯಕ್ತಮಾಡಿ, ತದ್ದ್ವಾರಾ ಗುಣಾವಗುಣಗಳ ತಿಳಕೋತಕ್ಕ ಶಾಸನರೂಪವಾದ ಶಾಸ್ತ್ರಗಳ ತಿಳಿಸಿಕೊಟ್ಟು, ತನ್ನಿಂದ ರಚಿತವಲ್ಲದ ಅನಾದಿಸ್ವರೂಪ ಸ್ವಭಾವದ ಯೋಗ್ಯತಾನುಸಾರ ಸಾಧನ ಪೂರ್ತಿಮಾಡಿಸಿ, ಲಿಂಗಭಂಗ ಐದಿಸಿ, ಸ್ವರೂಪ ವ್ಯಕ್ತಮಾಡಿ ತ್ರಿವಿಧರಿಗೆ ತ್ರಿವಿಧಸ್ವರೂಪವನುಸರಿಸಿ ಸುಖ, ದುಃಖ ಮಿಶ್ರಣ ವ್ಯಕ್ತಮಾಡಿ ಕೊಡೋವನಾಗತಾನೆ.

ದತ್ತಸ್ವಾತಂತ್ರ್ಯ, ಸ್ವಗತಸ್ವಾತಂತ್ರ್ಯ, ಸರ್ವಸ್ವಾತಂತ್ರ್ಯ ಮೊತ್ತ ವಿವರ :

| ಸಂಖ್ಯಾ | ವಿವರ | ದತ್ತಸ್ವಾತಂತ್ರ್ಯ ಗುಣ | ಸ್ವಗತಸ್ವಾತಂತ್ರ್ಯ ಗುಣ | ಸರ್ವಸ್ವಾತಂತ್ರ್ಯ ಗುಣ |
|---|---|---|---|---|
| ೧ | ಶ್ರೀ ನಾರಾಯಣದೇವರು | ೧೩೨–೩/೪ | ೨ | ೨ |
| ೨ | ರಮಾದೇವೇರು | ೬೭–೧/೪ | ೧ | ೧ |
| ೩ | ಬ್ರಹ್ಮದೇವರು | ೫೨ | ೫–೧/೪ | ೫೨ |
| ೪ | ವಾಯುದೇವರು | ೪೮ | ೩–೩/೪ | ೪೮ |
| ೫ | ರುದ್ರದೇವರು | ೨೦ | ೨ | ೨೦ |
| ೬ | ಇಂದ್ರ, ಕಾಮರು | ೧೫ | ೧–೧/೨ | ೧೫ |
| ೭ | ತತ್ತ್ವದೇವತೆಗಳು | ೧೦ | ೧ | ೧೦ |
| ೮ | ಸರ್ವಸುಜೀವರಲ್ಲಿ | ೧೦ | ೧ | ೧೦ |
| ೯ | ಕಲ್ಯಾದಿಗಳಲ್ಲಿ | ೪೫ | ೪–೧/೨ | ೪೫ |
| | ಅಂತು | ೪೦೦ | ೨೨ | ೨೦೩ |

ಅಂತು ಒಟ್ಟು ಮೊತ್ತ ೬೨೫ ಆಯಿತು.

**ಶ್ರೀ ಪರಮಾತ್ಮ ತನ್ನಲ್ಲಿರುವ ಅಪಾರ ಸ್ವಾತಂತ್ರ್ಯ ಗುಣದಲ್ಲಿ, ಅಸ್ವತಂತ್ರ ಜೀವರಾಶಿಗಳಿಗೆ ಕೊಡಲು ತೆಗೆದ "ದತ್ತಸ್ವಾತಂತ್ರ್ಯ" ೧೩೨-೩/೪ ಗುಣವಿಭಾಗದ ಕ್ರಮ.**

೩೨-೩/೪ ೧ ರಲ್ಲಿ, ಗುಣ ಸ್ವಗತಸ್ವಾತಂತ್ರ್ಯಕ್ಕೆ ಹೋಗತಾ ಉಳಿದದ್ದು ೧೩೧-೩/೪ ಗುಣ. ಇದರಲ್ಲಿ ಒಂದು ಗುಣವನ್ನ ತೆಗೆದು ಈ ಕೆಳಗೆ ಕಂಡಂತೆ ವಿಭಾಗ ಮಾಡಿದನು.

[೧೬ನೇ ಸಂಧಿ, ಶ್ಲೋಕಗಳು ೨ ಮತ್ತು ೩ ಹಾಗೂ ೧೮ನೇ ಸಂಧಿ, ಶ್ಲೋಕಗಳು ೧೧, ೧೨ ಮತ್ತು ೧೩]



**ಪುಣ್ಯಕರ್ಮಕೆ ಸಹಯುವಾಗುವ ।**
**ಧನ್ಯರಿಗೆ ಕಲ್ಯಾದಿದೈತ್ಯರ ।**
**ಪುಣ್ಯಫಲಗಳನೀವ ದಿವಿಜರ ಪಾಪಕರ್ಮಫಲ ।**
**ಅನ್ಯಕರ್ಮವ ಮಾಳ್ಪರಿಗೆ ಅನು ।**
**ಗುಣ್ಯಜನರಿಗೆ ಕೊಡುವ ಬಹುಕಾ ।**
**ರುಣ್ಯಸಾಗರನೀ ತೆರದಿ ಭಕ್ತರನಸಂತೈಪ ॥ ೧೪ ॥**

ಪುಣ್ಯಪಾಪಗಳ, ಒಬ್ಬರದು ಮತ್ತೊಬ್ಬರಿಗೆ ಕೊಡತಾನೆ ಅಂತ ಹೇಳತಾರೆ.

ಪುಣ್ಯಕರ್ಮಕೆ–ಶ್ರೀ ಪರಮಾತ್ಮಗೆ ಪ್ರೀತಿಕರವಾದ ಪುಣ್ಯಕರ್ಮಕ್ಕೆ, ಸಹಯುವಾಗುವ–ಸಹಾಯುವಾಗಿ ಇರತಕ್ಕವರು ದಾರೋ ಅವರೇ ಧನ್ಯರು, ಧನ್ಯರಿಗೆ–ಅಂಥಾ ಪುಣ್ಯಾತ್ಮರಿಗೆ, ಕಲ್ಯಾದಿ ದೈತ್ಯರ–ಕಲಿಯೇ ಮೊದಲಾದ ಭಗವದ್ದ್ವೇಷಿಗಳ, ಪುಣ್ಯಫಲಗಳನೀವ–ಪುಣ್ಯಫಲಗಳ ಕೊಡತಾನೆ. (ದೈತ್ಯರ ಸ್ವರೂಪವೇ ಪಾಪಸ್ವರೂಪ ಆದ ಕಾಲಕ್ಕೂ, ಅವರವರಿಗೆ ಸ್ವರೂಪಕ್ಕೆ ಅನ್ಯಥಾವಾದ ಅನಾದಿಕರ್ಮ, ಲಿಂಗದೇಹದಲ್ಲಿ ಇರೋದಾಗಿ ಅದೆ. ಅದರಲ್ಲಿ ಪುಣ್ಯ, ಪಾಪ, ನಾನಾವಿಚಿತ್ರವಾದ ಕರ್ಮಗಳೂ ಅವೆ. ಕರ್ಮವನ್ನ ಅನುಸರಿಸೇ, ಸ್ಥಿತಿಕಾಲದಲ್ಲಿ ಸ್ಥೂಲದೇಹೇಂದ್ರಿಯಾದಿಗಳಿಂದ ಪಾಪಪುಣ್ಯಗಳೆರಡೂ, ಬಿಂಬಕ್ರಿಯಾದ್ವಾರಾ ಆಗತಾ ಇರತವೆ. ಈ ರೀತ್ಯಾ ಕಲ್ಯಾದಿ ದೈತ್ಯರಿಂದ ಆದ ಪುಣ್ಯಕರ್ಮಫಲಗಳ ಸಜ್ಜನರಿಗೆ ಕೊಡತಾನೆ), ದಿವಿಜರ–ದೇವತೆಗಳ ಆರಂಭ ಮಾಡಿ ತೃಣಾಂತ ಮುಕ್ತಿಯೋಗ್ಯರ (ಋಜುಗಳ ವ್ಯತಿರಿಕ್ತ), ಪಾಪಕರ್ಮಫಲ–ಮುಕ್ತಿಯೋಗ್ಯರ ಸ್ವರೂಪ, ಪುಣ್ಯಸ್ವರೂಪವಾದ ಕಾಲಕ್ಕೂ, ಪೂರ್ವೋಕ್ತ ಪ್ರಕಾರ, ಪುಣ್ಯಪಾಪಾತ್ಮಕ ಅನಾದಿ ಜಡಕರ್ಮ ಒಂದು, ಇರೋದಾಗಿ ಅದೆ. ಅದನ್ನನುಸರಿಸಿ ಪರಮಾತ್ಮ ಸ್ಥೂಲದೇಹೇಂದ್ರಿಯಗಳಿಂದ ಬಿಂಬಕ್ರಿಯಾದ್ವಾರಾ ಪುಣ್ಯಪಾಪಗಳೆರಡೂ ಮಾಡಿಸುತ್ತಾ, ಇಂಥಾ ಕರ್ಮಜನ್ಯ ಪಾಪವನ್ನು, ಅನ್ಯಕರ್ಮವ ಮಾಳ್ಪರಿಗೆ–ಪರಮಾತ್ಮಗೆ ಪ್ರೀತಿಕರವಲ್ಲದ ಅನ್ಯವಾದ ಪಾಪಕರ್ಮ ಮಾಡತಕ್ಕ ಕಲ್ಯಾದಿ ದೈತ್ಯರಿಗೆ, ಅನುಗುಣ್ಯಜನರಿಗೆ–(ದೈತ್ಯರಿಗೆ) ಅನುಕೂಲರಾಗಿ ಇರತಕ್ಕ ಜನರಿಗೆ, ಕೊಡುವ–ಕೊಡತಾನೆ. (ಇದರಲ್ಲಿ ಅನುಸಂಧಾನ ಭೇದದಿಂದಲೂ, ಭಾವಭೇದದಿಂದಲೂ ಅವಾಂತರವಿಚಾರ ಬಹಳವದೆ. ಎಲ್ಲಾದಕ್ಕೂ ಪರಿಯವಸಾನ ತಾತ್ಪರ್ಯವಿದು), ಬಹುಕಾರುಣ್ಯಸಾಗರನು–ಸ್ವರೂಪಸ್ವಭಾವದಲ್ಲಿ ಭಗವದ್ಭಕ್ತಿಯುಳ್ಳ ಜನರಿಗೆ ಬಹಳವಾದ ಅಂತಃಕರುಣಾಸಮುದ್ರನಾದ ಪರಮಾತ್ಮ, ಈತೆರದಿ–ಈ ಪೂರ್ವೋಕ್ತಪ್ರಕಾರ ಪುಣ್ಯಫಲಗಳ ತಂದುಕೊಟ್ಟು, ಭಕ್ತರನ ಸಂತೈಪ–ತನ್ನ ಭಕ್ತರಿಗೆ ಸಹಾಯವಾದ ಸ್ವಾರ್ಜಿತ ಪುಣ್ಯ ಒಂದು, ಅನ್ಯ ಪುಣ್ಯ ಒಂದು, ಈ ಎರಡರನ್ನ ಘಟನಾ ಮಾಡಿಕೊಟ್ಟು ಸಂರಕ್ಷಣೆ ಮಾಡತಾನೆ. ತದನ್ಯರಿಗೆ, ಇದಕ್ಕೆ ವಿಪರೀತ ಫಲ ಕೊಟ್ಟು ಅವರನ್ನ ದಂಡಿಸುತ್ತಾನೆ.

ಪ್ರಮಾಣ :–

ಪುಣ್ಯಕರ್ಮಸಹಾಯಾ ಯೇ ಪುಣ್ಯಾತ್ಮಾನಸ್ತು ಯೇ ನರಾಃ |
ದೈತ್ಯಭಾಗಗತಾತ್ ಪುಣ್ಯಾತ್ ತೇಭ್ಯೋಂಶಂ ದದತೇ ಹರಿಃ || ೧ ||
ಪಾಪಕರ್ಮಸಹಾಯಾ ಯೇ ಪಾಪಾತ್ಮಾನಸ್ತು ಯೇ ನರಾಃ |
ದೇವಭಾಗಗತಾತ್ಪಾಪಾತ್ ತೇಭ್ಯೋಂಶಂ ದದತೇ ಹರಿಃ || ೨ ||

**ನಿರುಪಮಗೆ ಸರಿಯುಂಟು ಎಂದು |**
**ಚ್ಚರಿಸುವವ ತದ್ಭಕ್ತರೊಳು ಮ |**
**ತ್ಸರಿಸುವವ ಗುಣಿಗುಣಗಳಿಗೆ ಭೇದಗಳ ಪೇಳುವವ ||**
**ದರಸುದರ್ಶನಊರ್ಧ್ವ ಪುಂಡ್ರವ |**
**ಧರಿಸಿದವರೊಳು ದ್ವೇಷಿಸುವ ಹರಿ |**
**ಚರಿತೆಗಳ ಕೇಳದಲೆ ಲೋಗರ ವಾರ್ತೆ ಕೇಳುವವ || ೧೫ ||**

ಪೂರ್ವೋಕ್ತ ದೈತ್ಯರ ಸ್ವಭಾವ ಮತ್ತು ಅವರ ಲಕ್ಷಣವನ್ನ ಹೇಳತಾರೆ.

ನಿರುಪಮಗೆ–ಉಪಮಾನ, ಸಮಾನರಹಿತನಾದ ಸರ್ವೋತ್ತಮನಾದ ಪರಮಾತ್ಮಗೆ, ಸರಿಯು–ಉಪಮಾನರಾದವರು, ಸಮಾನರಾದವರು ಬ್ರಹ್ಮರುದ್ರಾದಿಗಳೆಂತಲೂ (ಬ್ರಹ್ಮ, ವಿಷ್ಣು, ಶಿವ ಈ ಮೂರು ಮಂದಿಯೂ ತಮ್ಮ ತಮ್ಮೊಳಗೆ ಸಮರೆಂತಲೂ), ಉಂಟು ಎಂದುಚ್ಚರಿಸುವವ–ಈ ಪ್ರಕಾರ ಪ್ರತಿಪಾದನ ಮಾಡತಕ್ಕವ, ತದ್ಭಕ್ತರೊಳು–ಸತ್ಯವಾಗಿ ಸರ್ವೋತ್ತಮನಾದ ವಿಷ್ಣುವನ್ನು ಸರ್ವೋತ್ತಮನೆಂದು ತಿಳಿದು, ಆ ವಿಷ್ಣುವಿನಲ್ಲಿ ಭಕ್ತಿ ಮಾಡತಕ್ಕ ಭಕ್ತರಲ್ಲಿ, ಮತ್ಸರಿಸುವವ–ಮತ್ಸರ (ಹೊಟ್ಟೇಕಿಚ್ಚು) ದ್ವೇಷಾದಿಗಳ ಮಾಡ ತಕ್ಕವ, ಗುಣಿ–ಮಂಗಳಕರಗಳಾದ, ಪರಿಪೂರ್ಣಗಳಾದ, ಅಸದೃಶ ಗುಣೋಪೇತನಾದ ಪರಮಾತ್ಮನಿಗೂ, ಗುಣಗಳಿಗೆ–ಆ ಪರಮಾತ್ಮನ ಅಪ್ರಾಕೃತ ಗುಣಗಳಿಗೂ, ಭೇದಗಳ ಪೇಳುವವ–ಭೇದವುಂಟು ಎಂತ ಹೇಳತಕ್ಕವ, ದರಸುದರ್ಶನ–ಶಂಖ, ಚಕ್ರ, ಗದಾ, ಪದ್ಮ, ನಾರಾಯಣ ಎಂಬ ಪಂಚಮುದ್ರೆಗಳಾದ, ವಿಷ್ಣು ಆಯುಧಗಳ ಚಿನ್ಹವೇನು, ಊರ್ಧ್ವಪುಂಡ್ರವ–ಗೋಪೀಚಂದನದಿಂದಲೂ, ಗಂಧದಿಂದಲೂ, ದ್ವಾದಶನಾಮಗಳು (ಇನ್ನೂ ದೇವರಿಗರ್ಪಿಸಿದ ನಿರ್ಮಾಲ್ಯಧಾರಣ ತುಲಸೀ ಮೊದಲಾದುವುಗಳ), ಧರಿಸಿದವ ರೊಳು–ದೇಹದಲ್ಲಿ ಧಾರಣಮಾಡಿಕೊಂಡು ಹರಿನಾಮೋಚ್ಚಾರಣಾದಿ ಸತ್ಕರ್ಮಾನುಷ್ಠಿತ ರಾದವರಲ್ಲಿ, ದ್ವೇಷಿಸುವ–ಅಂತಃ, ದ್ವೇಷವೂ, ಬಹಿಃ, ಅವರಿಗೆ ವಿರೋಧಕಾರ್ಯಗಳ ಮಾಡುತ್ತಲೂ, ಹರಿಚರಿತೆಗಳ–ಭಾರತಾದಿ ಪುರಾಣಗಳ ನಿಂದಾ, ಶ್ರೀ ಮಧ್ವಶಾಸ್ತ್ರ, ಟೀಕಾಟಿಪ್ಪಣಿ, ಇನ್ನೂ ಪುರಂದರದಾಸರು ಮೊದಲಾದ ಭಗವದ್ಭಕ್ತರಿಂದ ಕೃತವಾದ ಕವಿತಾಗಳ ನಿಂದಾ ಮಾಡುತ್ತ, ಇವುಗಳನ್ನು ಕೇಳದಲೆ–ದ್ವೇಷದಿಂದ ಕೇಳಧಾಂಗೆ, ಲೋಗರ ವಾರ್ತೆ ಕೇಳುವವ–ವಿಷಯಾಸಕ್ತರಾದ ಜನರು ಐಹಿಕಸಂಬಂಧವಾಗಿನ್ನೂ,

ಪಾಪರೂಪವಾಗಿಯೂ ಇರತಕ್ಕ ಕಥೆಗಳು, ಇವುಗಳನ್ನ ಕೇಳುತ್ತಾ, ನೀಚರ ಸೇವಾದಿಂದ ಕೇವಲ ಡಾಂಭಿಕರಾಗಿ, ಮದಾಂಧರಾಗಿ ಇರತಕ್ಕವರು ದೈತ್ಯರು ಎಂತ ತಿಳಿಯಬೇಕು.

ಪ್ರಮಾಣ :–

ಸ ಏವಾಹಂತ ದುಷ್ಕರ್ಮಜ್ಞಾಪಕಂ ತತ್ಪ್ರಮಾಣಕಂ । ತಸ್ಯ ನಿಂದಾ ತದೀಯಸ್ಯ ಭಕ್ತಸ್ಯಾಪಿ ವಿನಿಂದನಂ । ಶಂಖಚಕ್ರಾದಿತಲ್ಲಿಂಗಧಾರಿಣಾಂ ದ್ವೇಷಿಣಂ ತಥಾ । ಏವ ಮಾದಿರ್ಹರಿದ್ವೇಷಸ್ತತ್ವಳೋ ದೈತ್ಯ ಉಚ್ಯತೇ ॥ ಎಂಬ ಪ್ರಮಾಣಾರ್ಥ ವಿವರಿಸಿತು.

**ಏವಮಾದಿದ್ವೇಷವುಳ್ಳ ಕು ।**
**ಜೀವರೆಲ್ಲರು ದೈತ್ಯರೆಂಬರು ।**
**ಕೋವಿದರ ವಿಜ್ಞಾನಕರ್ಮವ ನೋಡಿ ನಿಂದಿಪರು ॥**
**ದೇವದೇವನ ಬಿಟ್ಟು ಯಾವ ।**
**ಜ್ಜೀವಪರಿಯಂತರದಿ ತುಚ್ಛರ ।**
**ಸೇವೆಯಿಂದುಪಜೀವಿಸುವರಜ್ಞಾನಕೊಳಗಾಗಿ ॥ ೧೬ ॥**

ಇನ್ನೂ ದೈತ್ಯರ ಸ್ವಭಾವವನ್ನೂ ಅವರ ಲಕ್ಷಣವನ್ನೂ ಹೇಳತಾರೆ.

ಕೋವಿದರ–ತಾರತಮ್ಯ ಪಂಚಭೇದಸಹಿತವಾದ ವಿಷ್ಣು ಸರ್ವೋತ್ತಮನೆಂದು ಹೇಳತಕ್ಕ ಜ್ಞಾನಿಗಳ, ವಿಜ್ಞಾನ–ವಿಶೇಷವಾದ ಜ್ಞಾನಪೂರ್ವಕವಾಗಿ ವಿಷ್ಣು ಪ್ರೀತಿಕರ ವಾಗಿ ಮಾಡತಕ್ಕ, ಕರ್ಮವ ನೋಡಿ–ಕಾರ್ಯಗಳನ್ನ ನೋಡೋವರಾಗಿ, ನಿಂದಿಪರು– ದ್ವೇಷದಿಂದ, ಆಯಾ ಕರ್ಮಗಳ, ಕರ್ಮಮಾಡತಕ್ಕವರ ನಿಂದಾಮಾಡತಾರೆ. ದೇವ ದೇವನ ಬಿಟ್ಟು–ದೇವತೆಗಳಿಗೆ ಸ್ವಾಮಿಯಾದ ಶ್ರೀ ವಿಷ್ಣುವಿನ ಬಿಟ್ಟು, ಯಾವಜ್ಜೀವ ಪರಿಯಂತರದಿ–ಜನ್ಮಾರಭ್ಯ ಮರಣಾಂತವರಿಗೂ, ತುಚ್ಛರ ಸೇವೆಯಿಂದ–ಶ್ರೀ ಪರಮಾತ್ಮನ ಸೇವಾ ಆಗಲಿ, ಅವನ ಭಕ್ತರ ಸೇವಾ ಆಗಲಿ ಮಾಡಿ ಜೀವನ ಮಾಡೋ ಇಚ್ಛಾರಹಿತ ರಾಗಿ, ಭೇದ, ತಾರತಮ್ಯ ಜ್ಞಾನವಿಲ್ಲದೆ ಭಗವನ್ಮಹಿಮಾ ಅರಿಯದ, ನೀಚಜಾತಿಯವ ರಾದ ಮನುಷ್ಯರ ಸೇವೆಯಿಂದ, ಅಜ್ಞಾನಕೊಳಗಾಗಿ–ಸ್ವರೂಪಸ್ವಭಾವವನ್ನನುಸರಿಸಿದ ಅಜ್ಞಾನಕ್ಕೆ ಒಳಗಾಗಿ (ಇನ್ನೂ ಅಜ್ಞಾನಿಯಾದ ಮನುಷ್ಯರ ಮಾತಿಗೆ ವಶರಾಗಿ), ಉಪಜೀವಿಸುವರು–ಉದರಪೋಷಣೆಗಾಗಿ ಉಪಪತ್ತಿಮಾಡಿಕೊಂಡು ಜೀವನಮಾಡುತ್ತಾ, ಭೂಮಿಗೆ ಭಾರವಾಗಿ ಬದುಕಿ ಇರುವರು. (ಕಿಂ ತೇನ ಜಾತಮಾತ್ರೇಣ ಭೂಭಾರೇಣಾನ್ನ ಶತ್ರುಣಾ ಎಂತ), ಏವಮಾದಿ–ಇತ್ಯಾದಿ ಗುಣಗಳಿಂದ ಸಹಿತರಾಗಿ, ದ್ವೇಷವುಳ್ಳ–ವಿಷ್ಣು, ವೈಷ್ಣವರಲ್ಲಿ ದ್ವೇಷವುಳ್ಳ, ಕುಜೀವರೆಲ್ಲರು – ಅಸುರಸ್ವಭಾವವುಳ್ಳ ಮನುಷ್ಯಜೀವರು, ದೈತ್ಯರೆಂಬರು–ತಮೋಯೋಗ್ಯರು ಎಂತ ಹೇಳತಾರೆ. (ಶ್ರುತಿ ಸ್ಮೃತಿಗಳು ಈ ಪ್ರಕಾರ ಇರುವದ್ದರಿಂದ.)

**ಕಾಮಲೋಭಕ್ರೋಧಮದಹಿಂ ।**
**ಸಾಮಯಾನೃತ ದಂಭಕಪಟ ತ್ರಿ ।**
**ಧಾಮನವತಾರಗಳಭೇಧ ಅಪೂರ್ಣಸುಖಬದ್ಧ ॥**
**ಆಮಿಷನಿವೇದಿತವಭೋಜ್ಯತಿ ।**
**ತಾಮಸಾನ್ನವನುಂಬ ತಾಮಸ ।**
**ಶ್ರೀಮದಾಂಧರ ಸಂಗದಿಂದಲಿ ತಮನೆ ವರ್ಧಿಪುದು ॥ ೧೭ ॥**

ತಾಮಸನಾದ ಭಗವದ್ದ್ವೇಷಿಗೆ ತಮಃಸಾಧನ ಅಭಿವೃದ್ಧಿಯಾಗಿ ಸಾಧನ ಪೂರ್ತಿ ಆಗತಕ್ಕ ಕ್ರಮವನ್ನ ಹೇಳತಾರೆ.

ತಾಮಸ – ತಮೋಯೋಗ್ಯಸ್ವರೂಪನಾದ ಭಗವದ್ದ್ವೇಷಿಯಾದ ಅಸುರನಾದ ತಾಮಸನು, ಕಾಮ–ಅಹಂ ಬ್ರಹ್ಮ, ಪರಬ್ರಹ್ಮನಾಗತೇನೇ ಎಂಬ ಅಪೇಕ್ಷಾವೇನು, ಲೋಭ–ಪರಮಾತ್ಮನ ಪೂಜಾ, ತದ್ಭಕ್ತರ ಪೂಜಾಗಳ ಮಾಡದೆ ಇರತಕ್ಕ ಲೋಭವೇನು, ಕ್ರೋಧ – ದೇವರಲ್ಲಿ, ತದ್ಭಕ್ತರಲ್ಲಿ ಕೋಪಮಾಡೋಣವೇನು, ಮದ – ಭಗವದ್ಭಕ್ತರ ಕಂಡರೆ ವಂದನಾದಿ ಮರ್ಯಾದಾ ಮಾಡದೆ ಉನ್ಮತ್ತನಾಗಿರೋಣವೇನು, ಹಿಂಸಾ–ಭಗವದ್ಭಕ್ತರ ಮನಃಕ್ಲೇಶಪಡಿಸೋಣ, ಆಮಯ–ಸರ್ವದಾ ರೋಗ ಬಂದವನೋಪಾದಿಯಲ್ಲಿ ತೋರುತ್ತಾ ಇರೋಣವೇನು, ಅನೃತ–ಸರ್ವದಾ ಅಪದ್ಧಮಾತುಗಳ ಆಡತಾ ಇರೋಣವೇನು (ಇನ್ನೂ ಜಗನ್ಮಿಥ್ಯಾ ಎಂತ ಹೇಳತಾ ಇರೋಣ), ದಂಭ–ಸರ್ವವೂ ತನಗೆ ತಿಳದೇ ಇದೆ ಎಂಬುವ ಪಟಾಟೋಪವೇನು, ಕಪಟ–ಆಂತರಿಕ ಮನಸ್ಸಿನಿಂದ ಭಗವದ್ಭಕ್ತರ ದುಃಖಪಡಿಸೋಣ (ಹಾಂಗೆ ಬಾಹ್ಯದಲ್ಲಿ ಅತಿ ಪ್ರೀತಿ ತೋರಿಸಿ ನಂಬಿಕೆ ಹುಟ್ಟಿಸಿ ಕೆಡಿಸೋಣ), ತ್ರಿಧಾಮನ–ಶ್ವೇತದ್ವೀಪಾದಿ ಮೂರು ಮನಿವುಳ್ಳ ಶ್ರೀ ವಿಷ್ಣುವಿನ, ಅವತಾರಗಳ ಭೇದ–ಮೂಲರೂಪಕ್ಕೂ, ಅವತಾರರೂಪಗಳಿಗೂ ಪರಸ್ಪರ ಭೇದಗಳ ಹೇಳೋಣ, ಅಪೂರ್ಣಸುಖ–ಶ್ರೀ ಪರಮಾತ್ಮ ಸಂಪೂರ್ಣಸುಖನಲ್ಲ ಎಂತಲೂನೂ, ಬದ್ಧ–ಸುಖದುಃಖಾದಿಗಳಿಂದಲೂ, ಲಿಂಗದೇಹದಿಂದಲೂ ಬದ್ಧ ಎಂತಲೂನು ಹೇಳೋಣವೇನು, ಆಮಿಷ–ತಮೋಯೋಗ್ಯ ದೇವತೆಗಳಾದ ಎಲ್ಲಮ್ಮ, ಎಕ್ಕಲಾತಮ್ಮ ಮೊದಲಾದ ಅನ್ಯ ದೇವತೆಗಳ ಭಜನ, ತತ್ಪ್ರಸಾದ ಮಾಂಸಾದಿಗಳನ್ನ, ಭೋಜ್ಯ – ಭೋಜನ ಮಾಡೋಣವೇನು, ಅತಿತಾಮಸಾನ್ನವನುಂಬ–ಶಾಸ್ತ್ರತಃ ನಿಷೇಧಮಾಡಿದ ಪಲ್ಲಾಂಡು, ನುಗ್ಗೀಕಾಯಿ, ವೃಂತಾಕ ಇನ್ನೂ ಅನೇಕ ನಿಷಿದ್ಧ ಪದಾರ್ಥಗಳ, ಅನಿವೇದಿತವ–ಇನ್ನೂ ದೇವರಿಗೆ ಸಮರ್ಪಣಮಾಡದೆ ಇದ್ದ ಅನಿಷಿದ್ಧ ಪದಾರ್ಥಗಳ (ಇತರ ಮತಸ್ಥರಾದ ಮಾಯಾವಾದಿಗಳಿಂದ ಪಕ್ವಮಾಡಿದ ಅಡಿಗಿ, ಭಕ್ಷ್ಯ ಮೊದಲಾದುವು), ಭೋಜನ ಮಾಡೋಣವೇನು, ಶ್ರೀಮದಾಂಧರ ಸಂಗದಿಂದಲಿ–ಐಶ್ವರ್ಯವೇ ಶಾಶ್ವತವೆಂದು ನಂಬಿ ಮದಾಂಧರಾಗಿ ಇರೋಣವೇನು (ಇನ್ನೂ ಸ್ತ್ರೀ ಮದಾಂಧರ ಎಂದರೆ, ಅನ್ಯರಾದ ಸ್ತ್ರೀಗಳ ಸಂಭೋಗ ಸರ್ವದಾ ಮಾಡುವರ ಸ್ನೇಹಮಾಡಿ, ತಾನೂನೂ ಸರ್ವದಾ ಪರಸ್ತ್ರೀಯರ

ಸಂಗ ಅಪೇಕ್ಷಿತನಾಗಿ ಇರೋಣ, ಇತ್ಯಾದಿ ಕಾರ್ಯಗಳ ಮಾಡೋಣದರ ದಶಿಯಿಂದ (ತಮೋಯೋಗ್ಯರಾದವರಿಗೆ), ತಮವೆ ವರ್ಧಿಪುದು—ತಮಸ್ಸಾಧನ ಆಗತಾ ಬಂದು ಲಿಂಗಭಂಗ ಕಾಲಕ್ಕೆ ಅಂಧಂತಮಸ್ಸಿಗೆ ಸಾಧನ ಪೂರ್ತಿ ಆಗತದೆ.

**ವಿಶೇಷಾರ್ಥ :**—ಶ್ರೀ ಭಗವಂತನ ಪ್ರೀತಿಕರವಾದ ಪುಣ್ಯಕರ್ಮಕ್ಕೆ ಸಹಾಯವಾಗುವ ಭಗವದ್ಭಕ್ತರಿಗೆ ಮೇಲೆ ಹೇಳಿದಂಥ ಅಸುರರು, ತಮ್ಮ ತಮ್ಮ ಅನಾದಿ ಜಡ ಕರ್ಮವನ್ನನುಸರಿಸಿ ದೇವರಿಂದ ಪ್ರೇರಿತರಾಗಿ ಮಾಡಲ್ಪಟ್ಟ ಪುಣ್ಯಕರ್ಮಫಲಗಳ, ಕೊಡೋವನಾಗತಾನೆ. ಪುಣ್ಯಭೋಗ, ಅಸುರರ ಸ್ವಭಾವವಲ್ಲ. ಇದರಿಂದ ಅವರಿಗೆ ಪ್ರಯೋಜನವೇನೆಂದರೆ, ಐಹಿಕದಲ್ಲಿ ಮಹಾಸುಖ, ಬಲ, ಪೌರುಷ, ಐಶ್ವರ್ಯ ಕೊಟ್ಟು, ಅವರನ್ನ ಮೋಹಯುಕ್ತರನ್ನಾಗಿ ಮಾಡಿ, ತಮಃಪ್ರಾಪ್ತಿಕಾಲಕ್ಕೆ ಪುಣ್ಯ ಲೇಶವೂ ಇರದಂತೆ ಮಾಡಿ, ಉಳಿದಿರುವ ಸಮಸ್ತಫಲಗಳ ದೇವತೆಗಳಿಗೆ ಕೊಟ್ಟು, ಭಕ್ತರ ಪಾಪಗಳ ಈ ದೈತ್ಯರಿಗೆ ಭೋಗಕ್ಕೆ ಕೊಡತಾನೆ.

ಪ್ರಮಾಣ :—ದಂಭೋ ಮಾನೋ ಮದೋ ಹಿಂಸಾ ಪೌರುಷ್ಯಂ ಕಪಟಾನೃತಂ | ಜಾಯಂತೇ ತಮಸೋ ವೃದ್ಧಿಃ ಕಲಿಸ್ತತ್ರಾಧಿದೇವತಾ | ತಾಮಸಾನ್ನಸ್ಯ ಭೋಗೇನ ತಾಮಸಾನಾಂ ಚ ಸಂಗತಃ| ತಾಮಸೇನ ಸ್ವಭಾವೇನ ತಮೋವೃದ್ಧಿಃ ಪ್ರಜಾಯತೇ|| ಇತಿ.

**ಜ್ಞಾನಭಕ್ತಿವಿರಕ್ತಿವಿನಯ ಪು |**
**ರಾಣಶಾಸ್ತ್ರಶ್ರವಣ ಚಿಂತನ |**
**ದಾನಶಮದಮ ಯಜ್ಞ ಸತ್ಯಾಹಿಂಸ ಭೂತದಯ |**
**ಧ್ಯಾನ ಭಗವನ್ನಾಮಕೀರ್ತನ |**
**ಮೌನ ಜಪತಪವ್ರತ ಸುತೀರ್ಥ |**
**ಸ್ನಾನ ಮಂತ್ರಸ್ತೋತ್ರ ವಂದನ ಸಜ್ಜನರ ಗುಣವು || ೧೮ ||**

ಸಜ್ಜನರ ಗುಣವು—ಮುಕ್ತಿಯೋಗ್ಯರಾದವರ ಗುಣಗಳು ದಾವವೆಂದರೆ ಮುಕ್ತಿಯೋಗ್ಯರ ಸ್ವಭಾವವನ್ನೂ, ಅವರ ಲಕ್ಷಣವನ್ನೂ ಹೇಳತಾರೆ.

ಜ್ಞಾನ—ಹರಿಸರ್ವೋತ್ತಮ, ವಾಯುಜೀವೋತ್ತಮ, ತಾರತಮ್ಯ ಪಂಚಭೇದ ಜ್ಞಾನ, ಜಗತ್ಸತ್ಯತ್ವಪ್ರತಿಪಾದಕವಾದ ಜ್ಞಾನ, ಭಕ್ತಿ—ತಾರತಮ್ಯಾನುಸಾರ ಬ್ರಹ್ಮಾದಿ ಸಮಸ್ತರಲ್ಲಿ, ಸ್ವಜನ ಪರಜನರಿಗಿಂತಲೂ, ಅವರಲ್ಲಿ ವಿಶೇಷ ಸ್ನೇಹಮಾಡೋಣ (ವಿಷ್ಣು ಭಕ್ತೇರೇವ ಸರ್ವಸಾಧನೋತ್ತಮತ್ವಂ ಪರೋಕ್ಷಾಪರೋಕ್ಷಜ್ಞಾನಯೋಃ ಜ್ಞಾನಿನೋಪಿ ಮೋಕ್ಷಂ ಚ ತದಧೀನತ್ವಂ ಚ ಎಂತಲೂ, ದೇವಾನಾಂ ತಾತ್ತ್ವಿಕಸಂಜ್ಞಾನಾಂ ಸತ್ತ್ವೇ ಭಗವತೀ ಏಕಮನಸಃ ಏಕಾಗ್ರತಯಾsನ್ಯವ್ಯಾಪಾರಮಂತರೇಣಾಂತಃಕರಣಸ್ಯ ಯಾ ವೃತ್ತಿಃ ಸಾ ಭಕ್ತಿರಿತ್ಯುಚ್ಯತೆ ಎಂತಲೂ, ಈ ಪ್ರಕಾರ ಭಕ್ತಿ, ಭಗವದ್ದ್ವೇಷಿಗಳಲ್ಲಿ ದ್ವೇಷ), ವಿರಕ್ತಿ—ದಾರಾ, ಪುತ್ರಾದಿಗಳಲ್ಲಿ, ಪಾಂಚಭೌತಿಕ ತನ್ನ ದೇಹದಲ್ಲಿ, ದ್ರವ್ಯಾದಿಗಳಲ್ಲಿ

ಹೇಯತಾಬುದ್ಧಿ ಇರುವುದು, ವಿನಯ – ತಾರತಮ್ಯಾನುಸಾರವಾಗಿ ಭಗವದ್ಭಕ್ತರಲ್ಲಿ ವಣಂಗಿ (ಭಕ್ತಿಪೂರ್ವಕವಾದ ನಮ್ರತೆ) ಇರೋಣ, ಪುರಾಣ–ವೇದವ್ಯಾಸದೇವರಿಂದ ಕೃತವಾದ ಪುರಾಣ, ಇನ್ನೂ ಭಗವದ್ಭಕ್ತರಾದ ವಾಲ್ಮೀಕ್ಯಾದಿ ಋಷಿಗಳಿಂದ ಕೃತವಾದ ಪುರಾಣಗಳ, ಶಾಸ್ತ್ರ–ಶ್ರೀಮಧ್ವಾಚಾರ್ಯರಿಂದ ಕೃತವಾದ ಗ್ರಂಥಗಳ, ಇನ್ನೂ ಟೀಕಾ ಟಿಪ್ಪಣಿಗಳ, ಹರಿಸರ್ವೋತ್ತಮ, ವಾಯುಜೀವೋತ್ತಮನೆಂದು, ಅನ್ಯಮತ ನಿರಾಕರಣ ಪೂರ್ವಕವಾಗಿ ಇರುವ ಸಚ್ಛಾಸ್ತ್ರಗಳ, ಶ್ರವಣ–ಇವುಗಳನ್ನ ಶ್ರವಣೇಂದ್ರಿಯದ್ವಾರಾ ಕೇಳೋಣ, ಚಿಂತನ – ಈ ಕೇಳಿದ್ದರನ್ನ ಸದಾ ಮನಸ್ಸಿನಿಂದ ಆಲೋಚಿಸುತ್ತಾ ತದನುಷ್ಠಾತೃವಾಗಿ ಇರೋಣ. ದಾನ–ಸತ್ಪಾತ್ರದಲ್ಲಿ ದ್ರವ್ಯ, ಅನ್ನ, ವಿದ್ಯಾದಾನ ಮಾಡೋಣ (ಅನ್ಯರಿಗೆ ಹಿತೋಪದೇಶರೂಪವಾದ ದಾನ) ಶಮ–ಭಗವದ್ಭಕ್ತರಲ್ಲಿ ಅತಿ ಶಾಂತನಾಗಿ ಇರೋಣ, ದಮ–ಇಂದ್ರಿಯಗಳು ವಿಷಯಾಸಕ್ತವಾಗದಂತೆ ನಿಗ್ರಹಮಾಡಿ ಪರಮಾತ್ಮನಲ್ಲಿ ಆಸಕ್ತಿಯಿಂದ ಇರೋಣ, ಯಜ್ಞ–ಶ್ರೀಹರಿಪ್ರೀತ್ಯರ್ಥವಾಗಿ, ಜ್ಯೋತಿಷ್ಟೋಮಾದಿ ಯಜ್ಞಗಳೇನು, ಔಪಾಸನ, ವೈಶ್ವದೇವ, ಬಲಿಹರಣ, ಅಧ್ಯಾತ್ಮಯಜ್ಞಗಳೇನು, ಸತ್ಯ–ವೇದಗಳಿಗೆ ವಿರುದ್ಧಾರ್ಥ ಹೇಳದೆ ತಾನು ಅನೃತವಾಡದೆ ಇರೋಣ, ಅಹಿಂಸ–ಭಗವದ್ಭಕ್ತರ ಮನಃಕ್ಲೇಶಪಡಸದೆ ಇರೋಣ, ಭೂತದಯ–ಸಮಸ್ತ ಪ್ರಾಣಿಗಳಲ್ಲಿ ಪರಮಾಂತಃಕರಣದಿಂದ ಇರೋಣ, ಧ್ಯಾನ–ಹೃದಯಾಕಾಶದಲ್ಲಿ ಶ್ರೀ ಪರಮಾತ್ಮನ ಮೂರ್ತಿ ಧ್ಯಾನಮಾಡೋಣ, ಭಗವನ್ನಾಮಕೀರ್ತನ – ಭಗವನ್ನಾಮೋಚ್ಚಾರಣ, ಬಾಹ್ಯಾಂತರದಲ್ಲಿ ಮಾಡತಾ ಇರೋಣ, ಮೌನ–ಉಪಯುಕ್ತವಿಲ್ಲದೆ ಇರುವ, ಮಾತುಗಳ ಆಡದೆ ಯಥೋಚಿತ ಮಾತನಾಡುತ್ತಲೂ, ದುರ್ಜನರ ಸಂಗಡ ಮಾತುಗಳ ಆಡಧಾಂಗೂನೂ ಇರೋಣ, ಜಪ–ಜನ್ಮದಲ್ಲಿ ಮಾಡಿದ ಪಾಪಗಳನ್ನ ನಾಶನಮಾಡುವ ಗಾಯತ್ರೀ ಮೊದಲಾದ ಜಪಗಳು, ಮಾತುಗಳು, ಯಾವತ್ತೂ ಅಜಾದಿ ಭಗವನ್ನಾಮಗಳೆಂದು, ಅನುಸಂಧಾನಮಾಡಿ, ಜಪಸಾಂಕೇತದಿಂದ ಉಚ್ಚಾರಮಾಡೋಣ, ತಪ–ಪ್ರಪಂಚದಲ್ಲಿ ನಡೀತಕ್ಕ ನಾನಾವಿಚಿತ್ರ ವ್ಯಾಪಾರಗಳೇನು, ದೇಹೇಂದ್ರಿಯಾದಿಗಳಿಂದ ಭಿನ್ನಭಿನ್ನ ವ್ಯಾಪಾರಗಳೇನು, ಮಾಡಿಸತಕ್ಕ ಪರಮಾತ್ಮನ ಮಾಹಾತ್ಮ್ಯವನ್ನ ಸರ್ವದಾ ಆಲೋಚನಿಮಾಡೋಣವೇನು (ತಪ, ಎಂದರೆ ಆಲೋಚನಿ), ವ್ರತ–ಏಕಾದಶಿ, ವಿಷ್ಣು ಪಂಚಕ, ಚಾಂದ್ರಾಯಣಾದಿ ವ್ರತಗಳ ಮಾಡೋಣವೇನು (ಪರಮಾತ್ಮನ ಸತ್ಯ ಸಂಕಲ್ಪಕ್ಕೆ ಅನ್ಯಥಾ ನಡಿಯೋದಿಲ್ಲ ಎಂಬುವ ದಾರಢ್ಯವ್ರತವೇನು), ಸುತೀರ್ಥಸ್ನಾನ–ಪುರಾಣಪ್ರಸಿದ್ಧಗಳಾದ ಗಂಗಾನದಿ ತೀರ್ಥಸ್ನಾನಗಳು, ಮಹಾಕ್ಷೇತ್ರಗಳ ಸಂದರ್ಶನ, ಭಕ್ತರ ಸಂದರ್ಶನಾರ್ಥ ಯಾತ್ರಾದಿಗಳೇನು, ಮಂತ್ರ–ಉಪದಿಷ್ಟ ಗುರುಗಳ ನಾಮವನ್ನ ಮಂತ್ರತ್ವೇನ, ಜಪ, ವೇದಾಧ್ಯಯನ ಸೂಕ್ತಪಠನಾದಿಗಳು, ಸ್ತೋತ್ರ–ಇನ್ನೂ ಪರಮಾತ್ಮನ ಗುಣಗಾನ ಮಾಡೋಣವು, ವಂದನ–ಶ್ರೀಹರಿಗುರುಗಳು, ಭಗವದ್ಭಕ್ತರುಗಳಿಗೆ ವಂದನ, ಸಜ್ಜನರ ಗುಣವು–ಈ ಪೂರ್ವೋಕ್ತ ಗುಣಗಳು ಮುಕ್ತಿಯೋಗ್ಯರ ಗುಣಗಳು. ಇವರಿಗೆ ಸ್ವರೂಪತಃ ಪಾಪವಿಲ್ಲ, ಆದರೂ, ಅನಾದಿ ಜಡಕರ್ಮವಶಾತ್ ಪಾಪ

ಗಳ ಮಾಡಿದರೂ, ಈ ಪಾಪಕರ್ಮಕ್ಕೆ ಸಹಾಯವಾಗತಕ್ಕ ಅಸುರರಿಗೆ ವಿಭಾಗಮಾಡಿ ಕೊಟ್ಟು ಸರ್ಷಪಮಾತ್ರ, ಪಾಪಕರ್ಮ ಮಾಡಿದ ಅಧಿಕಾರಿಗೆ ಕೊಟ್ಟು, ತದ್ವತ್ ದೈತ್ಯರ ಪುಣ್ಯ ಇವರಿಗೆ ಸೇರಿಸಿ ಪುಣ್ಯ ಅಭಿವೃದ್ಧಿಮಾಡುತಾನೆ.

ಪ್ರಮಾಣ :— ತಿತಿಕ್ಷವಃ ಕಾರುಣಿಕಾಃ ಸುಹೃದಃ ಸರ್ವದೇಹಿನಾಂ । ಅಜಾತ ಶತ್ರವಃ ಶಾಂತಾಃ ಸಾಧವಃ ಸಾಧುಭೂಷಣಾಃ ॥ ಮಯ್ಯನನ್ಯೇನ ಭಾವೇನ ಭಕ್ತಿಂ ಕುರ್ವಂತಿ ಯೇ ದೃಢಾಃ । ಮತ್ಕೃತೇ ತ್ಯಕ್ತಕರ್ಮಾಣಸ್ತ್ಯಕ್ತಸ್ವಜನಬಾಂಧವಾಃ ॥ ಮದಾ ಶ್ರಯಾ ಕಥಾಮೃಷ್ಟಾ ಶೃಣ್ವಂತಿ ಕಥಯಂತಿ ಚ । ತಪಂತಿ ವಿವಿಧಾಂಸ್ತಾಪಾನ್ನೈಕಾತ್ಮಾ ಗತಚೇತಸಃ । ತ ಏತೇ ಸಾಧವಸ್ಸಾಧ್ವೀ ಸರ್ವಸಂಗವಿವರ್ಜಿತಾಃ ॥ ಎಂತ ಕಪಿಲದೇವರ ವಚನಗಳು.

**ಲೇಶ ಸ್ವಾತಂತ್ರ್ಯಗುಣವನು ಪ್ರ ।**
**ವೇಶಗೈಸಿದ ಕಾರಣದಿ ಗುಣ ।**
**ದೋಷಗಳು ತೋರುವುವು ಸತ್ತ್ವಾಸತ್ತ್ವಜೀವರೊಳು ॥**
**ಶ್ವಾಸ ಭೋಜನ ಪಾನ ಶಯನವಿ ।**
**ಲಾಸ ಮೈಥುನ ಗಮನ ಹರ್ಷ ।**
**ಕ್ಲೇಶ ಸ್ವಪ್ನ ಸುಷುಪ್ತಿ ಜಾಗ್ರತಿಯಹವು ಚೇತನಕೆ ॥ ೧೯ ॥**

ಜೀವರಿಗೆ ಸರ್ವವಿಷಯಕ ಜ್ಞಾನ ಆಗುವುದಕ್ಕೆ ಕಾರಣ ಹೇಳುತಾರೆ.

ಸತ್ತ್ವ— ಸತ್ತ್ವಗುಣಪ್ರಾಚುರ್ಯರಾದ ಸ್ವರೂಪಸ್ವಭಾವವುಳ್ಳ ಮುಕ್ತಿಯೋಗ್ಯ ಜೀವರು, ಅಸತ್ತ್ವ—ತಮೋಗುಣಪ್ರಾಚುರ್ಯರಾದ ಸ್ವರೂಪಸ್ವಭಾವವುಳ್ಳ ತಮೋ ಯೋಗ್ಯ ಜೀವರು ಹಾಂಗೇ ರಜೋಗುಣಪ್ರಾಚುರ್ಯವಾದ ಸ್ವರೂಪಸ್ವಭಾವವುಳ್ಳ ನಿತ್ಯಸಂಸಾರಿ ಜೀವರು ಇವರಿಬ್ಬರೂ ಅಸತ್ತ್ವರೆಂತಲೇ ಕರಸತಾರೆ. ಇವರು ಅಸೃಜ್ಯ ರಾಶಿಯಲ್ಲಿ ಇರಲಾಗಿ ಅವರವರ ಸ್ವರೂಪಭೂತ ಸ್ವಾತಂತ್ರ್ಯದಲ್ಲಿ ಬಿಂಬರೂಪಿ ಪರಮಾತ್ಮ ಇದ್ದಾನೆ. ತದ್ವ್ಯತಿರಿಕ್ತ, ದತ್ತಸ್ವಾತಂತ್ರ್ಯಪ್ರವೇಶ ಎಂಬುದು ಅನಾದಿ ಜಡಕರ್ಮಗಳ ಸ್ಥೂಲದೇಹೇಂದ್ರಿಯಾದಿಗಳಿಂದ ಮಾಡಿಸಿ, ಅವರವರ ಸಾಧನ ಪೂರ್ತಿಮಾಡಿಸೋ ಉದ್ದಿಶ್ಯ ಪ್ರವೇಶವು, ಜೀವರೊಳು—ಈ ಸತ್ತ್ವಾಸತ್ತ್ವ ಜೀವರೊಳು, ಸ್ವಾತಂತ್ರ್ಯಗುಣ ವನು—ಶ್ರೀ ಪರಮಾತ್ಮ ಸ್ವಗತಸ್ವಾತಂತ್ರ್ಯ, ದತ್ತಸ್ವಾತಂತ್ರ್ಯ, ಸರ್ವಸ್ವಾತಂತ್ರ್ಯ ಈ ಮೂರು ಸ್ವಾತಂತ್ರ್ಯಗುಣಗಳನ್ನು ಸೃಷ್ಟಿ ಪ್ರಾರಂಭದಲ್ಲಿ, ಪ್ರವೇಶಗೈಸಿದ ಕಾರಣದಿ— ಪ್ರವೇಶಮಾಡಿಸಿದ ಕಾರಣದಿಂದ, ಲೇಶ—ಅತ್ಯಂತ ಲೇಶವಾದ, ಅತಿಪರಮಾಣುವಾದ ಸ್ವರೂಪಗಳುಳ್ಳ, ಜೀವರಿಗೆ, ಗುಣದೋಷಗಳು—ಸುಗುಣ ದುರ್ಗುಣ, ಪಾಪ ಪುಣ್ಯ, ಇತ್ಯಾದಿ ಗುಣದೋಷಗಳು, ತೋರುವುವು—ಪ್ರವಿಷ್ಟನಾದ ಸ್ವಾತಂತ್ರ್ಯಶಬ್ದವಾಚ್ಯನಾದ ಪರಮಾತ್ಮ, ತನ್ನ ಗುಣಗಳ ದ್ವಾರಾ, ಜೀವರ ಅನಾದಿಸ್ವರೂಪಭೂತವಾದ ಸ್ವಾತಂತ್ರ್ಯ

ಗುಣಗಳಿಗೆ ಯಾವಾಗ್ಗೆ ತಿಳಿಸತಾನೇ ಆಗ್ಗೆ, ಪ್ರಾಣಿಗಳಿಗೆ ಗುಣಾಗುಣಗಳು ಅವರವರ ಮನೋಇಂದ್ರಿಯಕ್ಕೆ ತೋರೋವಾಗತವೆ. ಈ ಪ್ರವಿಷ್ಠವಾದ ಸ್ವಾತಂತ್ರ್ಯಗುಣತ್ರಯ ಗಳಿಂದಲೇ ಪ್ರಾಣಿಗಳಿಗೆ ಸ್ಥೂಲದೇಹದ್ವಾರಾ, ಶ್ವಾಸ–ಮೂಗಿನಿಂದ ಉಸಿರಾಡೋಣ ವೇನು, ಭೋಜನ–ಜಡಪದಾರ್ಥಗಳ ಭೋಜನವೇನು, ಪಾನ–ಜಡೋದಕ ಕುಡಿಯೋಣ ವೇನು, ಶಯನ–ಮಲಗೋಣವೇನು, ವಿಲಾಸ–ಆಟಗಳ ಆಡೋಣವೇನು, ಮೈಥುನ– ಸ್ತ್ರೀಸಂಭೋಗವೇನು, ಗಮನ–ಸಂಚಾರವೇನು, ಹರುಷ–ಸಂತೋಷವೇನು, ಕ್ಲೇಶ– ದುಃಖವೇನು, ಸ್ವಪ್ನ–ಸ್ವಪ್ನಾವಸ್ಥೆಯೇನು, ಸುಷುಪ್ತಿ–ನಿದ್ರಾವಸ್ಥೆಯೇನು, ಜಾಗ್ರತಿಯು– ಎಚ್ಚರಿಕೆ ಅವಸ್ಥೆಯೇನು (ಇವೇ ಮೊದಲಾದ ವ್ಯಾಪಾರಗಳು), ಚೇತನಕ್ಕೆ ಅಹವು– ಜೀವನಿಗೆ ಆಗೋವಾಗತವೆ. ಇವು ಯಾವತ್ತೂ, ಕೊಡಲ್ಪಟ್ಟ ಸ್ವಾತಂತ್ರ್ಯದಿಂದ ಆಗತವೆ ಎಂತ ತಾತ್ಪರ್ಯ.

**ವಿಶೇಷಾರ್ಥ :**–ಜಡಾಧಿಷ್ಠಾನರಹಿತವಾದ, ಪೃಥಕ್ಕಾಗಿ ಜೀವನ ಚಿದೇಂದ್ರಿಯ ಗಳ ವ್ಯಾಪಾರ, ಚಿನ್ಮನಸ್ಸಿನ ವ್ಯಾಪಾರ. ಆ ಚಿನ್ಮನಸ್ಸನ್ನು ಆಶ್ರಯಿಸಿ ಇರುವ ಚಿದಾತ್ಮಕ ಸ್ವಾತಂತ್ರ್ಯದ ವ್ಯಾಪಾರ, ಮೋಕ್ಷದಲ್ಲೆ ಹೊರ್ತು, ಸ್ಥಿತಿಕಾಲದಲ್ಲಿ ಇಲ್ಲ. ಜೀವರಿಗೆ ಅನಾದಿಭೂತವಾದ ತ್ರಿಗುಣಾತ್ಮಕ ಜಡರೂಪವಾದ ಲಿಂಗದೇಹ ಆವರಕವಾಗಿ ಬಂಧಕ ರೂಪದಿಂದ ಇರೋದಾಗಿ ಅದೆ. ಅದರಲ್ಲಿ ಜಡೇಂದ್ರಿಯ, ಜಡಮನಸ್ಸು, ಜಡಸ್ವಾತಂತ್ರ್ಯ ಅವೆ. ತದ್ದ್ವಾರಾ ಜೀವನ ಸ್ವರೂಪಸ್ವಾತಂತ್ರ್ಯಸ್ವರೂಪೇಂದ್ರಿಯಗಳು ಸ್ಥೂಲದೇಹದಲ್ಲಿ ಪ್ರವಿಷ್ಠಗಳಾಗಿ ವ್ಯಾಪಾರಗಳು ಆಗತವೆ.

ಪ್ರಮಾಣ :–ಸ್ವಾತಂತ್ರ್ಯಲೇಶದಾನೇನ ಜೀವಾ ಜಗತಿ ಭುಂಜತೇ | ಭುಂಕ್ತೇ ಗಿಳತಿ ಪಾನಾದಿ ಕರೋತ್ಯಪಿ ಚ ಗಚ್ಛತಿ | ಹಿನಸ್ತಿ ಪಾತಿ ಚ ಬ್ರೂತೇ ತಿಷ್ಠತ್ಯುಪವಿಶತ್ಯಪಿ | ಅಹಂಕಾರಸಮಾವಿಷ್ಟಃ ಸರ್ವಕರ್ತೇತಿ ಮನ್ಯತೇ | ಅಜ್ಞಾನೇನ ವಿಮೂಢಾತ್ಮಾ ನ ಜಾನಾತಿ ಪರಾತ್ಪರಂ | ವಿಧೀನಾಂ ಚ ನಿಷೇಧಾನಾಂ ಪಾತ್ರಂ ತಸ್ಮಾದಯಂ ಸ್ಮೃತಃ || ಎಂಬ ಅರ್ಥಗಳ ವಿವರಿಸಿದಂತಾಯಿತು.

**ಅರ್ಥ ತನ್ನೊಳಗಿರಿಸಿ ಉಳಿದೊಂ |**
**ದರ್ಥವ ವಿಭಾಗಗೈಸಿ ವೃಜಿ |**
**ನಾರ್ದನನು ಪೂರ್ವದಲಿ ಸ್ವಾತಂತ್ರ್ಯವ ಕೊಟ್ಟಂತೆ ||**
**ಸ್ವರ್ಧುನೀಪಿತ ಕೊಡುವವರ ಸುಖ |**
**ವೃದ್ಧಿಗೋಸುಗ ಬ್ರಹ್ಮವಾಯುಕ |**
**ಪರ್ದಿ ಮೊದಲಾದವರೊಳಿದ್ದವರ ಯೋಗ್ಯತೆಯನರಿತು || ೨೦ ||**

ಪೂರ್ವೋಕ್ತ ಸಂಗತಿಯನ್ನ ಸಿಂಹಾವಲೋಕನ ನ್ಯಾಯದಿಂದ ಮತ್ತೂ ಹೇಳತಾರೆ.

ಅರ್ಥ–ಸರ್ವಸ್ವಾತಂತ್ರ್ಯ ವಿಭಾಗಕ್ಕಾಗಿ ತನ್ನಲ್ಲಿ ಇರತಕ್ಕ ದತ್ತಸ್ವಾತಂತ್ರ್ಯವಿಭಾಗ ಗುಣಗಳು ೧೩೨-೩/೪ ರ ಒಳಗೆ ಸ್ವಗತಸ್ವಾತಂತ್ರ್ಯ ವಿಭಾಗಕ್ಕಾಗಿ ಒಂದು ಗುಣ ಹೋಗತಾ ಉಳಿದ ೧೩೧-೩/೪ ಒಳಗೆ ಸರ್ವಸ್ವಾತಂತ್ರ್ಯ ವಿಭಾಗಕ್ಕಾಗಿ ಒಂದು ಗುಣ ತೆಗೆದುಕೊಂಡ. ಈ ಒಂದರನ್ನ ಅರ್ಧರ್ಧವಾಗಿ ಎರಡು ಅರ್ಧಗಳು ಮಾಡೋವನಾದ. ಅದರಲ್ಲಿ ಒಂದು ಅರ್ಧ ತೆಗೆದುಕೊಂಡು, ವಿಭಾಗಗೈಸಿ–ಈ ಅರ್ಧವನ್ನ ಕಾಲು ಕಾಲಾಗಿ ಎರಡು ಭಾಗ ಮಾಡಿ, ಅದರೊಳಗೆ ಒಂದು ಕಾಲು ಭಾಗವನ್ನ ತೆಗೆದುಕೊಂಡು, ಅದರನ್ನ ಎರಡು ಅರಕಾಲುಗಳಾಗಿ ವಿಭಾಗಮಾಡಿ, ಆ ಎರಡು ಅರಕಾಲುನಾಗೆ ಒಂದು ಅರಕಾಲನ್ನು ತೆಗೆದುಕೊಂಡು ಅದರನ್ನ ೨೦೦ ಭಾಗ ಮಾಡಿ, ವೃಜಿನಾರ್ದನನು–ಶ್ರೀ ಪರಮಾತ್ಮ, ಪೂರ್ವದಲಿ–ಪ್ರಥಮತಃ ಹೇಳಿದ, ಸ್ವಾತಂತ್ರಯವ–ದತ್ತಸ್ವಾತಂತ್ರ್ಯ ತ್ರಿವಿಧ ಜೀವರಿಗೆ ಮೂರು ಪ್ರಕಾರ ಸ್ವಾತಂತ್ರ್ಯವ, ಕೊಟ್ಟಂತೆ–ವಿಭಾಗ ಮಾಡಿ, ಬ್ರಹ್ಮಗೆ ೫೨, ವಾಯು ದೇವರಿಗೆ ೪೮ ಎಂತಲೂ, ಈ ಪ್ರಕಾರ ಕೊಟ್ಟೋಪಾದಿಯಲ್ಲಿ, ಈ ಸರ್ವಸ್ವಾತಂತ್ರ್ಯವೂ ಕೊಟ್ಟು, ಉಳಿದ–ವಿಭಾಗ ಮಾಡಿದ್ದು ಹೋಗತಾ ಉಳದಿರುವ ಕಾಲೇ ಅರಕಾಲು ಭಾಗ ವನ್ನ, ಒಂದರ್ಧವ–ವಿಭಾಗಕ್ಕೆ ಬಾರದೇ ನಿಂತಿರುವ ಒಂದು ಅರ್ಧ, ಅಂತು ಮುಕ್ಕಾಲೇ ಅರಕಾಲು ಭಾಗವನ್ನ, ತನ್ನೊಳಗಿರಿಸಿ–ತನ್ನೊಳಗೆ ೨ ಭಾಗ ಎಂದರೆ ೯ ಆಣೆ ೪ ಪೈ ರಮಾದೇವೇರಲ್ಲಿ ಒಂದು ಭಾಗ ಎಂದರೆ ೪ ಆಣೆ ೮ ಪೈ ಅಂತು ಮುಕ್ಕಾಲೇ ಅರಕಾಲು ಭಾಗವನ್ನ ಇಟ್ಟುಕೊಂಡನು. ಸ್ವರ್ಧುನೀಪಿತ–ಗಂಗಾಪಿತನಾದ ತ್ರಿವಿಕ್ರಮ ದೇವರು, ಬ್ರಹ್ಮ, ವಾಯು, ಕಪರ್ದಿ–ಬ್ರಹ್ಮದೇವರು, ವಾಯುದೇವರು, ರುದ್ರದೇವರು, ಮೊದ ಲಾದವರೊಳಿದ್ದು–ಮೊದಲಾದ ದೇವತೆಗಳೊಳು (ದೈತ್ಯರೊಳು) ಸ್ವಾತಂತ್ರ್ಯಶಬ್ದವಾಚ್ಯ ನಾಗಿದ್ದು, ಅವರ–ಆಯಾ ದೇವತೆಗಳ (ದೈತ್ಯರ) ಸುಖವೃದ್ಧಿಗೋಸುಗ–ದೇವತೆಗಳಿಗೆ ಸುಖ ಅಭಿವೃದ್ಧಿ, (ದೈತ್ಯರಿಗೆ ದುಃಖ ಅಭಿವೃದ್ಧಿ) ಆಗೋದಕ್ಕೋಸ್ಕರವಾಗಿ ಸ್ವಾತಂತ್ರ್ಯ ರೂಪದಿಂದ ಪ್ರವೇಶಮಾಡಿ, ಅವರ ಯೋಗ್ಯತೆಯನರಿತು–ಆಯಾ ಪ್ರಾಣಿಗಳ ಸ್ವರೂಪ ಯೋಗ್ಯತಾಗಳ ಅರಿತವನಾಗಿ, ಕೊಡುವ–ದೇವತೆಗಳಿಗೆ ಸುಖವೃದ್ಧಿಮಾಡಿ ಭೋಗಕ್ಕೆ ಕೊಡೋವನಾಗತಾನೆ. ತನ್ನಲ್ಲಿ–ರಮಾದೇವೇರಲ್ಲಿ ಇಡಲ್ಪಟ್ಟ ಸ್ವಾತಂತ್ರ್ಯದಿಂದ ಜಗ ತ್ಕಾರ್ಯ ನಡಸೋದಕ್ಕೆ ಇಟ್ಟುಕೊಂಡಿದ್ದಾನೆ ಎಂತ ತಾತ್ಪರ್ಯ.

**ಹಲಧರಾನುಜ ಮಾಳ್ಪ ಕೃತ್ಯವ ।**
**ತಿಳಿಯದಾಹಂಕಾರದಿಂದೆ ।**
**ನ್ನುಳಿದು ವಿಧಿಯು ನಿಷೇಧಪಾತ್ರರು ಇಲ್ಲ ಎಂಬುವಗೆ ॥**
**ಫಲಗಳ ದ್ವಯ ಕೊಡುವ ದೈತ್ಯರ ।**
**ಕಲುಷಕರ್ಮವ ಬಿಟ್ಟು ಪುಣ್ಯವ ।**
**ಸೆಳದು ತನ್ನೊಳಗಿಟ್ಟು ಕ್ರಮದಿಂ ಕೊಡುವ ಭಕ್ತರಿಗೆ ॥ ೨೦ ॥**

ದೈತ್ಯರಿಗೆ ಫಲದ್ವಯಗಳ ಕೊಡತಾನೆ ಎಂತ ಹೇಳತಾರೆ.

ಹಲಧರಾನುಜ–ನೇಗಿಲು ಆಯುಧನಾದ ಬಲರಾಮದೇವರ ತಮ್ಮನಾದ ಶ್ರೀಕೃಷ್ಣ, ಮಾಳ್ಪ ಕೃತ್ಯವ–ದೇಹೇಂದ್ರಿಯಾದಿಗಳಲ್ಲಿ ಬಿಂಬನಾಗಿ ಇದ್ದು ಮಾಡತಕ್ಕ ತನ್ನ ಕ್ರಿಯಾ ದ್ವಾರಾ, ಜೀವನಾದವನ ದೇಹೇಂದ್ರಿಯಾದಿಗಳಿಂದ ಮಾಡಿಸತಕ್ಕ ವ್ಯಾಪಾರರೂಪವಾದ ಕರ್ಮವ, ತಿಳಿಯದೆ–ದೇಹಧಾರಿಯಾದ ಜೀವನು, ತಿಳಿಯದೆ, ಅಹಂಕಾರದಿಂದ–ಅಹಂ ಕಾರದಿಂದ ಯುಕ್ತನಾಗಿ, ಎನ್ನುಳಿದು–ನನ್ನ ಹೊರತು, ಪಾತ್ರರು–ಸತ್ಪಾತ್ರರು, ಇಲ್ಲ ಎಂಬುವಗೆ–ಬ್ಯಾರೆ ಇಲ್ಲ, ನಾನೇ ದೇವರು, ನಾನೇ ಸತ್ಪಾತ್ರ, ನನ್ನ ವ್ಯತಿರಿಕ್ತ ಬ್ಯಾರೆ ದೇವರೇ ಇಲ್ಲ ಎಂಬ ತರ್ವೋಯೋಗ್ಯನಾದವಗೆ, ಫಲದ್ವಯಗಳ ಕೊಡುವ–ಎರಡು ಪ್ರಕಾರವಾದ ದುಃಖಫಲಗಳ ಕೊಡೋವನಾಗತಾನೆ. (ಆ ಎರಡು ಫಲಗಳು ದಾವ ವೆಂದರೆ), ದೈತ್ಯರ–'ಅಹಂ ಬ್ರಹ್ಮ' ಎಂಬ ದೈತ್ಯರಿಂದ ಮಾಡಲ್ಪಟ್ಟ, ನಿಷೇಧ–ಶಾಸ್ತ್ರ ದಿಂದ ನಿಷಿದ್ಧವಾದ 'ಅಹಂ ಬ್ರಹ್ಮ' ಎಂಬ ಪಾಪಕರ್ಮವೇನು, ಕಲುಷಕರ್ಮವ– ತದನ್ಯವಾದ ಇತರ ಪಾಪಕರ್ಮಗಳೇನು, ಈ ಉಭಯಕರ್ಮಸಮೂಹವ, ಬಿಟ್ಟು– ಅವರಲ್ಲೇ ಬಿಟ್ಟು, ಭಗವದ್ಭಕ್ತರು ಮಾಡಿದ ಪಾಪಕರ್ಮಗಳನ್ನ, ಅವರಲ್ಲಿ ಇದ್ದದ್ದರನ್ನ ತೆಗೆದು, ಅದರನ್ನ ದೈತ್ಯರಲ್ಲಿ ಇಟ್ಟು, ಅಂತು ಎರಡು, ಎರಡು ಪ್ರಕಾರ ದುಃಖಗಳ ಕೊಡುವನು, ವಿಧಿಯು–ಅನಾದಿಕರ್ಮವನುಸರಿಸಿ, ಶಾಸ್ತ್ರವಿಧಿಯನ್ನು ಅನುಸರಿಸಿ ದೈತ್ಯರು ಮಾಡಿದ, ಪುಣ್ಯವ ಸೆಳೆದು–ಪುಣ್ಯಫಲಗಳನ್ನು ತೆಗೆದುಕೊಂಡು, ತನ್ನೊಳಗಿಟ್ಟು–ತನ್ನ ಸ್ವಾಧೀನದಲ್ಲಿ ಇಟ್ಟುಕೊಂಡವನಾಗಿ, ಭಕ್ತರಿಗೆ–ತನ್ನ ಭಕ್ತರಿಗೆ, ಕ್ರಮದಿಂ ಕೊಡುವ– ದಾರದಾರಿಗೆ ಎಷ್ಟೆಷ್ಟು ವಿಭಾಗಮಾಡಿ ಕೊಡಬೇಕೋ, ಅವರವರ ಯೋಗ್ಯತಾ ತಾರತಮ್ಯಾನುಸಾರ ಕೊಡತಾನೆ. ಭಕ್ತರು ತಾವು ಮಾಡಿದ ಪುಣ್ಯ ಒಂದು, ದೈತ್ಯರ ಪುಣ್ಯ ಒಂದು, ಅಂತು ಎರಡು, ಇಬ್ಬರಿಗೂ ಎರಡುಪ್ರಕಾರ ಸುಖಫಲಗಳ ಕೊಡತಾನೆ. ಮುಕ್ತಿಯೋಗ್ಯರಾದಕಾಲಕ್ಕೂ ಅಹಂಮಮತಾದಿಗಳಿಂದ ಮಾಡಿದ ಸತ್ಕಾರ್ಯವನ್ನ ಅವರಿಗೆ ಸರ್ಷಪಮಾತ್ರ ನಿಲ್ಲಿಸಿ, ಉಳದದ್ದು ಪರಮಾತ್ಮ ಅಪಹರಿಸಿ, ಬಿಂಬಕ್ರಿಯಾನು ಸಂಧಾನ ಉಳ್ಳವರಿಗೆ ಸೇರಿಸಿ, ಅವರ ಪಾಪಗಳ ದೈತ್ಯರಿಗೆ ಕೊಡತಾನೆ.

ಪ್ರಮಾಣ :– ಯೇ ಸ್ಯುರ್ವಿಧಿನಿಷೇಧೇಭ್ಯೋ ಬಹಿರ್ಭೂತಾಃ ಸುರಾದಯಃ | ತೇಷಾಂ ಸುಖಸ್ಯ ಭೋಕ್ತಾರೋ ವಿಷ್ಣ್ವಾದ್ಯಾ ಭಾಗಶೋಖಿಲಾಃ || ದೈತ್ಯಾನಾಂ ತತ್ರ ನೈವಾಸ್ತಿ ಪುಣ್ಯಕರ್ಮವಿಭಾಗಕಃ | ಪುಣ್ಯಭಾಗಂ ಹರತ್ಯೇಷಾಂ ಸ್ವಯಮೇವ ಜನಾರ್ದನಃ ||

**ತೋಯಜಾಪ್ತನ ಕಿರಣ ವೃಕ್ಷ |**
**ಚ್ಛಾಯ ವರ್ತಿಸುವಂತೆ ಕಮಲದ |**
**ಳಾಯತಾಕ್ಷನು ಸರ್ವರೊಳು ವ್ಯಾಪಿಸಿದ ಕಾರಣದಿ ||**
**ಹೇಯ ಸದ್ಗುಣ ಕರ್ಮ ತೋರ್ಪವು |**
**ನ್ಯಾಯಕೋವಿದರಿಗೆ ನಿರಂತರ |**
**ಶ್ರೀಯರಸ ಸರ್ವೋತ್ತಮೋತ್ತಮನೆಂದು ಪೇಳುವರು || ೨೨ ||**

ಭಗವದ್ಭಕ್ತರು, ಪರಮಾತ್ಮ ಸರ್ವೋತ್ತಮ ಎಂತಲೂ, ಬಿಂಬಕ್ರಿಯಾದ್ವಾರಾ ಪ್ರತಿಬಿಂಬಕ್ರಿಯಾ ನಡಿಯತದೆ ಎಂತಲೂ ಹೇಳತಾರೆಂತ, ಹೇಳುತ್ತಾರೆ.

ತೋಯಜಾಪ್ತನ ಕಿರಣ – ಉದಕದಲ್ಲಿ ಜನಿತ ಕಮಲಗಳಿಗೆ ಸ್ನೇಹಿತನಾದ ಸೂರ್ಯನ ಕಿರಣಗಳ ದೆಶೆಯಿಂದ, ವೃಕ್ಷಛಾಯ–ನಾನಾವಿಧಗಳಾದ ವೃಕ್ಷಗಳ ನೆರಳುಗಳು, ವರ್ತಿಸುವಂತೆ–ಹ್ಯಾಂಗೆ ತಿರಗತವೋ ಹಾಂಗೆ (ವೃಕ್ಷ ಸದೃಶ ಜೀವರು ; ಛಾಯಾ ಸದೃಶ ಜೀವರ ಅನಾದಿಸ್ವರೂಪಭೂತ ಸ್ವಾತಂತ್ರ್ಯ ; ಆ ಛಾಯಾ, ಕಾಲಭೇದದಿಂದ ಸ್ಥಾನಭೇದಗಳಲ್ಲಿ ಸಂಚರಿಸಿದಂತೆ, ಜೀವರ ಸ್ವರೂಪಭೂತಸ್ವಾತಂತ್ರ್ಯದಿಂದ ದೇಹೇಂದ್ರಿಯಾದಿಗಳಿಂದ ಮಾಡತಕ್ಕ ವ್ಯಾಪಾರ), ಕಮಲದಳಾಯತಾಕ್ಷನು–ಪುಂಡರೀಕಾಕ್ಷನಾದ ಪರಮಾತ್ಮನೆಂಬೋ ಸೂರ್ಯ, ಸರ್ವರೊಳು–ಸರ್ವವೃಕ್ಷಸದೃಶರಾದ ಬ್ರಹ್ಮಾದಿ ತೃಣಾಂತ ತ್ರಿವಿಧರಾದ ಸರ್ವ ಪ್ರಾಣಿಗಳೊಳಗೆ ಛಾಯಾಸದೃಶವಾಗಿ ಇರುವ ಸ್ವರೂಪಭೂತ ಸ್ವಾತಂತ್ರ್ಯ, ಇವರೊಳು, ವ್ಯಾಪಿಸಿದ ಕಾರಣದಿ–ಸೂರ್ಯನ ಕಿರಣಗಳು ಛಾಯಾವನ್ನ ವ್ಯಾಪಿಸಿದ ಕಾರಣದಿಂದ, ಛಾಯಾಕ್ಕೆ ಹ್ಯಾಂಗೆ ಪ್ರವೃತ್ತಿ ಉಂಟಾಯಿತೋ ತದ್ವತ್, ಪರಮಾತ್ಮನೆಂಬ ಸೂರ್ಯನ ಕಿರಣಗಳಿಗೆ ಸದೃಶವಾದ ಪರಮಾತ್ಮನ ಸ್ವಾತಂತ್ರ್ಯ ಛಾಯಾಸದೃಶರಾದ ಜೀವರ ಸ್ವರೂಪಭೂತಸ್ವಾತಂತ್ರ್ಯದಲ್ಲಿ ವ್ಯಾಪಿಸಿದ ಕಾರಣದಿಂದ, ವೃಕ್ಷಛಾಯಾವತ್ ಛಾಯಾಸದೃಶವಾದ ಜೀವರ ಸ್ವಾತಂತ್ರ್ಯಕ್ಕೆ ಪ್ರವೃತ್ತಿ ಉಂಟಾಯಿತು. ತತ್ಪೂರ್ವದಲ್ಲಿ ವೃಕ್ಷಛಾಯಾಕ್ಕೆ ವ್ಯಕ್ತವಿಲ್ಲದೇ ದಾವ ರೀತ್ಯಾ ಇತ್ತೋ ಅದೇ ರೀತ್ಯಾ, ಛಾಯಾಸದೃಶವಾದ ಜೀವನ ಸ್ವಾತಂತ್ರ್ಯ, ಅನಭಿವ್ಯಕ್ತ ಆಗಿತ್ತು. ಸೂರ್ಯನ ಕಿರಣಗಳು ಹ್ಯಾಂಗೆ, ಹ್ಯಾಂಗೆ ಚಲಿಸಿದರೆ ಅದರಂತೆ ಜೀವರ ಸ್ವಾತಂತ್ರ್ಯ ಚಲಿಸುತ್ತದೆ. ಈ ರೀತ್ಯಾ ಬಿಂಬಕ್ರಿಯಾದ್ವಾರಾ ದೇಹೇಂದ್ರಿಯಾದಿಗಳಿಂದ ಕರ್ಮ ವ್ಯಾಪಾರಗಳು ನಡಿಯೋವಾಗತವೆ. ಹೇಯ–ಕೆಟ್ಟಗುಣಗಳುಳ್ಳ ತಮೋಯೋಗ್ಯರು ತಥಾ ನಿತ್ಯಸಂಸಾರಿಗಳು, ಸದ್ಗುಣ–ಸತ್ತ್ವಗುಣವುಳ್ಳ ಮುಕ್ತಿಯೋಗ್ಯರು (ಈ ಉಭಯರಲ್ಲಿ), ಕರ್ಮ ತೋರ್ಪವು–ಬಿಂಬಕ್ರಿಯಾದ್ವಾರಾ ಪ್ರತಿಬಿಂಬಕ್ರಿಯಾ ನಡದು ತದ್ದ್ವಾರಾ ದೇಹೇಂದ್ರಿಯಾದಿಗಳಿಂದ ದ್ವಂದ್ವಕರ್ಮಗಳು ತೋರೋವಾಗತವೆ. ಬಿಂಬಕ್ರಿಯಾ ಇವನ ಕಣ್ಣಿಗೆ ಕಾಣದಿರುವರಿಂದ, ಸರ್ವಕರ್ಮವೂ ತಾನೇ ಮಾಡಿದಂತೆ ತೋರುತ್ತದೆ. ನಿರಂತರ–ಸದಾ ಸರ್ವಕಾಲವೂ, ಕೋವಿದರಿಗೆ – ಸಚ್ಛಾಸ್ತ್ರಾಭಿಜ್ಞರಾದ ಭಗವದ್ಭಕ್ತರಿಗೆ, ನ್ಯಾಯ–ನ್ಯಾಯವಾದ ಬಿಂಬಕ್ರಿಯಾದ್ವಾರಾ ಪ್ರತಿಬಿಂಬಕ್ರಿಯಾ ಎಂಬ ಅನುಸಂಧಾನ ದೃಢವಾಗಿ ಇದ್ದು ಅದರಂತೆ ಆಚರಣೆಯು ಇರುತ್ತದೆ. ಶ್ರೀಯರಸ – ರಮಾಪತಿಯಾದ ಶ್ರೀ ಪರಮಾತ್ಮನು, ಸರ್ವೋತ್ತಮ–ಅಸ್ವತಂತ್ರಚೇತನರಾದ ಬ್ರಹ್ಮಾದಿ ಸರ್ವದೇವತೆಗಳಿಗಿಂತಲೂ ಉತ್ತಮರಾದ ರಮಾದೇವೇರು ಇವರಿಗಿಂತ, ಉತ್ತಮನೆಂದು–ಬಿಂಬನಾದ ಶ್ರೀ ಪರಮಾತ್ಮ ಉತ್ತಮನೆಂದು, ಪೇಳುವರು–ಭಕ್ತರಾದವರು ಹೇಳತಾರೆ. ದೈತ್ಯರು ಹೀಂಗೆ ಹೇಳೋದಿಲ್ಲ ಅವರವರ ಸ್ವಭಾವ ಅಂಥಾದ್ದೇ. ತ್ರಿವಿಧ ಜೀವರಗೂ ಸ್ಥಿತಿಕಾಲದಲ್ಲೂ,

ಮೋಕ್ಷಾನಂತರದಲ್ಲೂ ಬಿಂಬಕ್ರಿಯಾ ಹೊರ್ತು ಪ್ರತಿಬಿಂಬರಾದ ಜೀವರಿಗೆ ಪೃಥಕ್ಕಾಗಿ ಕ್ರಿಯಾವಿಲ್ಲವೆಂತ ತಾತ್ಪರ್ಯ.

**ಮೂಲಕಾರಣ ಪ್ರಕೃತಿಯೆನಿಪ ಮ ।**
**ಹಾಲಕುಮಿ ಎಲ್ಲರೊಳಗಿದ್ದು ಸು ।**
**ಲೀಲೆ ಗೈಯುತ ಪುಣ್ಯಪಾಪಗಳರ್ಪಿಸಲು ಪತಿಗೆ ॥**
**ಪಾಲಗಡಲೊಳು ಬಿದ್ದ ಜಲ ಕೀ ।**
**ಲಾಲವೆನಿಪುದೆ ಜೀವಕೃತ ಕ ।**
**ರ್ಮಾಳಿ ತದ್ವತು ಶುಭವು ಎನಿಪುವು ಎಲ್ಲಕಾಲದಲಿ ॥ ೨೩ ॥**

ಭಗವದ್ಭಕ್ತರಾದವರು ದ್ವಂದ್ವಕರ್ಮಗಳ ಭಗವದರ್ಪಣೆಮಾಡಬೇಕೆಂತಲೂ, ಹಾಂಗೆ ಅರ್ಪಿಸೋಣದರಿಂದ ಪಾಪಕರ್ಮ, ಶುಭಕರ್ಮ ಆಗತದೆ ಎಂತ ಹೇಳತಾರೆ.

ಮೂಲ – ಸ್ಥೂಲದೇಹದಿಂದ ಕರ್ಮಗಳ ಮಾಡೋದಕ್ಕೆ ಇಚ್ಛಾರೂಪವಾದ ಪ್ರೇರಣಾದಿಗಳ ಪರಮಾತ್ಮ ಮಾಡಬೇಕಾದರೆ ಪ್ರಥಮತಃ ಅನಾದಿಲಿಂಗಾಂತರ್ಗತನಾದ ಅಣುವಾದ ಜೀವನೇ ಮೂಲ. ಇಲ್ಲಿ ಪ್ರಥಮತಃ ಮೂಲಭೂತನಾದ ಜೀವಾಂತರ್ಗತ ನಾದ ಬಿಂಬ, ಜೀವೇಂದ್ರಿಯಾದಿಗಳಿಗೆ ಪ್ರೇರಿಸುತ್ತಾನೆ. ಅದಕ್ಕೆ ಎರಡನೇದಾದ ಮೂಲ, ಜೀವರ ಲಿಂಗಗತ ಅನಾದಿಕರ್ಮ ; ಮೂರನೇದು, ಜೀವನ ಪ್ರಯತ್ನ ; ಮೂರೂ ಮೂಲ ಭೂತಗಳು. ಇವು ಮೂರಕ್ಕೆ ಪ್ರೇರಣಮಾಡೋದಕ್ಕೆ, ಕಾರಣ – ಕಾರಣನಾದ ಜೀವಾಂತರ್ಗತ ಬಿಂಬರೂಪಿ ಪರಮಾತ್ಮ. ಈ ಪರಮಾತ್ಮ, ಪ್ರಕೃತಿಯೆನಿಪ–ಪ್ರಕೃತಿ ಎನಿಸತಕ್ಕ, ಮಹಾಲಕುಮಿ–ಅಸ್ವತಂತ್ರ ಚೇತನರೊಳಗೆ ಶ್ರೇಷ್ಠಳಾದ ಲಕ್ಷ್ಮೀದೇವೇರಿಂದ ಸಹಿತನಾಗಿ, ಎಲ್ಲರೊಳಗಿದ್ದು–ಬ್ರಹ್ಮಾದಿ ತೃಣಾಂತ ತ್ರಿವಿಧ ಜೀವರ ಅಣುಸ್ವರೂಪದೊಳ ಗಿದ್ದು, ಸ್ಥೂಲದೇಹದಿಂದ ಮಾಡತಕ್ಕ ಕರ್ಮಗಳಿಗೆ, ಆದಿಯಲ್ಲಿ ಜೀವನ ಸ್ವರೂಪೇಂದ್ರಿಯ ಗಳಿಗೆ ಇಚ್ಛಾ ಉಂಟುಮಾಡಿ, ಪರಂಪರಾದಿಂದ ಸ್ಥೂಲದೇಹದಲ್ಲಿ ಪ್ರಕಾಶತೋ ವ್ಯಾಪ್ತ ನಾದ ಆ ಜೀವಗೆ ಇಚ್ಛಾ ಹುಟ್ಟಿಸಿ, ಸುಲೀಲೆ ಗೈಯುತ–ಸ್ಥೂಲೇಂದ್ರಿಯಾದಿಗಳಲ್ಲಿ ತದಾ ಕಾರನಾಗಿ ಸ್ಥೂಲತ್ವೇನ ಬಿಂಬನಾಗಿದ್ದು, ನಿರ್ದೋಷನಾದ ಸ್ಥೂಲಾಕಾರಬಿಂಬ, ತನ್ನ ಕ್ರಿಯಾರೂಪವಾದ ಆಟಗಳ ಆಡಿಸುತ್ತಾ ಇರ್ತಾನೆ. ಈ ಪ್ರಕಾರವಾದ ಕರ್ಮಗಳ, ಜೀವನಾದವ ದೇಹದಿಂದ ಮಾಡತಾನೆಂಬೋ ಅನುಷ್ಠಾನ, ಅಹಂಮಮತಾದಿಗಳ ತ್ಯಾಗ ಪೂರ್ವಕವಾಗಿ ಮಾಡುತ್ತಾ, ಪತಿಗೆ–ಲಕ್ಷ್ಮೀದೇವೇರಿಗೆ ಪತಿಯಾದ ತನಗೆ (ಬಿಂಬನಾದ ಪರಮಾತ್ಮಗೆ), ಪುಣ್ಯಪಾಪಗಳರ್ಪಿಸಲು–ಪುಣ್ಯವೆಂಬೋ ಕ್ಷೀರ, ಪಾಪವೆಂಬೋ ಉದಕ ಎರಡೂ ಅರ್ಪಣೆಮಾಡಿದರೆ, ಎರಡೂ ಪುಣ್ಯಗಳೇ ಆಗುತ್ತವೆ. ಇದಕ್ಕೆ ದೃಷ್ಟಾಂತ. ಪಾಲಗಡಲೊಳು–ಕ್ಷೀರಸಮುದ್ರದೊಳು, ಬಿದ್ದ–ಬೀಳಲ್ಪಟ್ಟ, ಜಲ–ಆ ಕ್ಷೀರಸಮುದ್ರದಲ್ಲಿ ಬಿದ್ದ ಜಲ, ಕೀಲಾಲವೆನಿಪುದೆ–ಜಲವೆಂತ ಕರಿಸೋದೇ ? ಅದು ಕ್ಷೀರರೂಪವಾದ

ಪುಣ್ಯವೇ ಆಗೋದಾಗತದೆ. ತದ್ವತ್, ಜೀವಕೃತ–ಬಿಂಬಕ್ರಿಯಾ, ಪ್ರತಿಬಿಂಬಕ್ರಿಯಾ ಅನುಸಂಧಾನದಿಂದ, ಅಹಂಮಮತಾದಿಗಳಿಂದ ರಹಿತರಾಗಿ ಜೀವರಿಂದ ಮಾಡಲ್ಪಟ್ಟ, ಕರ್ಮಾಳಿ – ಪಾಪಪುಣ್ಯಗಳೆಂಬ ಪಂಙ್ತಿಗಳು, ತದ್ವತು – ಕ್ಷೀರಸಮುದ್ರಸದೃಶನಾದ ಪರಮಾತ್ಮಗೆ ಕ್ಷೀರಸದೃಶ ಪುಣ್ಯ, ಉದಕಸದೃಶ ಪಾಪ ಎರಡನ್ನೂ ಅರ್ಪಿಸಲು, ಪೂರ್ವೋಕ್ತ ದೃಷ್ಟಾಂತದೋಪಾದಿಯಲ್ಲಿ, ಶುಭವು ಎನಿಪುವು–ಪಾಪಪುಣ್ಯಗಳೆರಡೂ ಶುಭ ಫಲ ಕೊಡತಕ್ಕ ಕರ್ಮಗಳು ಎಂತಲೇ ಎನಿಸೋವಾಗತವೆ. ಆದ್ದರಿಂದ, ಎಲ್ಲಕಾಲದಲಿ– ಸದಾಕಾಲದಲ್ಲಿ ಅಹಂಮಮತಾದಿಗಳ ಬಿಟ್ಟು, ಬಿಂಬಕ್ರಿಯಾನುಸಂಧಾನಮಾಡುತ್ತಾ, ದ್ವಂದ್ವಕರ್ಮಗಳ ಅರ್ಪಿಸೋವನಾಗಬೇಕು.

ಪ್ರಮಾಣ :–ಕ್ಷೀರಾಬ್ಧೌ ಪತಿತಂ ತೋಯಂ ಯಥಾ ಕ್ಷೀರತ್ವಮಶ್ನುತೇ । ಜೀವ ಕರ್ಮ ಸುಖಂ ತದ್ವದ್ಧರಾವಾನಂದತಾಂ ಭಜೇತ್ । ಸುಖಮೂರ್ತಿರಯಂ ವಿಷ್ಣುಃ ಇತಿ ಶ್ರುತಿಷು ಗೀಯತೇ ॥ ಎಂಬ ಪ್ರಮಾಣಾರ್ಥ ವಿವರಿಸಿತು.

**ಜ್ಞಾನ ಸುಖಬಲಪೂರ್ಣವಿಷ್ಣುವಿ ।**
**ಗೇನ ಮಾಳ್ಪವು ತ್ರಿಗುಣಕಾರ್ಯಕೃ ।**
**ಶಾನುವಿನ ಕ್ರಿಮಿಕವಿದು ಭಕ್ಷಿಪುದುಂಟೆ ಲೋಕದೊಳು ॥**
**ಈ ನಳಿನಜಾಂಡವನು ಬ್ರಹ್ಮೇ ।**
**ಶಾನಮುಖ್ಯಸುರಾಸುರರ ಕಾ ।**
**ಲಾನಳನವೋಲ್ ನುಂಗುವವಗೀ ಪಾಪಗಳ ಭಯವೆ ॥ ೨೪ ॥**

ದ್ವಂದ್ವಕರ್ಮ ಭಗವದರ್ಪಣ ಮಾಡೋಣದರಿಂದ, ಪರಮಾತ್ಮಗೆ ಏನಾದರೂ ಬಾಧಕವು ಉಂಟೇ ಎಂದರೆ, ಬಾಧಕ ಒಂದೂ ಇಲ್ಲಾ ಎಂತ ಹೇಳತಾರೆ.

ಜ್ಞಾನಸುಖಬಲಪೂರ್ಣ–ಸಮಾನರಹಿತವಾದ ಜ್ಞಾನವೇನು, ಸುಖವೇನು, ಬಲ ವೇನು, ಇವುಗಳೇ ಶರೀರವಾಗಿವುಳ್ಳ, ಇವುಗಳಿಂದಲೇ ಪರಿಪೂರ್ಣನಾದ, ವಿಷ್ಣುವಿಗೆ– ವ್ಯಾಪ್ತನಾದ ಶ್ರೀ ಪರಮಾತ್ಮಗೆ, ತ್ರಿಗುಣಕಾರ್ಯ–ಜೀವರು ಮಾಡತಕ್ಕ, ಜೀವರಿಂದ ಅರ್ಪಿತವಾದ ತ್ರಿಗುಣಜನಿತವಾದ ಪಾಪಪುಣ್ಯಕರ್ಮಗಳು, ಏನ ಮಾಳ್ಪವು–ಏನಾದರೂ ಬಾಧಿಸೋವೇ ಎಂದರೆ ಬಾಧಿಸಲಾರವು, ಎಂಬೋಣದರಿಂದ ಜೀವರಿಗೇನು, ಪರಮಾತ್ಮ ಅಸದೃಶಮಹಿಮನಾದ್ದರಿಂದ ಅವಗೇನು, ಉಭಯರಿಗೂ ತದ್ಬಾಧಾ ಇಲ್ಲ ಎಂತ ಅರ್ಥ ; ಇದಕ್ಕೆ ದೃಷ್ಟಾಂತ :—ಲೋಕದೊಳು – ಪ್ರಪಂಚದಲ್ಲಿ, ಕೃಶಾನುವಿನ – ಅಗ್ನಿಯನ್ನ, ಕ್ರಿಮಿಕವಿದು–ಚದುಲು (ಗೆಜ್ಜಲು) ಹುಳು ಸುತ್ತಿಕೊಂಡು, ಭಕ್ಷಿಪುದುಂಟೇ–ಭಕ್ಷಿಸೋದು ಉಂಟಾ ಹ್ಯಾಂಗೆ, ಅಂದರೆ ಇಲ್ಲಾ ಎಂತ ತಾತ್ಪರ್ಯ. (ಇದರಂತೆ ಪಾಪಸಂಕೇತವಾದ ಚದುಲು ಹುಳುಗಳು, ಅಗ್ನಿಸಾಂಕೇತನಾದ ಪರಮಾತ್ಮನ್ನ ಸೇರೋಣದರಿಂದ ಭಸ್ಮವಾಗಿ, ಜೀವ, ಪರಮಾತ್ಮ ಇಬ್ಬರಿಗೂ ಬಾಧಿಸೋದಿಲ್ಲ. ಅರ್ಪಿಸಿದವಗೆ ದೋಷವೂ ಇಲ್ಲ.

ಪರಮಾತ್ಮನಲ್ಲಿ ಇರುವ ಪತಿತಪಾವನನೆಂಬೋ ಗುಣೋಪಾಸನಮಾಡಿ, ಅಧಿಕ ಫಲವೇ ಹೊಂದತಾನೆ. ಮತ್ತು ಈ ನಳಿನಜಾಂಡವನು–ಈ ವರ್ತಮಾನ ಬ್ರಹ್ಮಾಂಡವನ್ನು, ಬ್ರಹ್ಮೇಶಾನಮುಖ್ಯ–ಬ್ರಹ್ಮ, ರುದ್ರ ಇವರೇ ಮೊದಲಾದ, ಸುರ–ದೇವತೆಗಳ, ತೃಣಾಂತ ಮುಕ್ತಿಯೋಗ್ಯ ಜೀವರ, ಅಸುರರ–ತಮೋಯೋಗ್ಯ, ನಿತ್ಯಸಂಸಾರಿ ತೃಣಾಂತಜೀವರ, ಕಾಲಾನಳನವೋಲ್–ಇವರನ್ನ ಪ್ರಳಯಕಾಲದ ಅಗ್ನಿ, ನಿಷಿದ್ಧಾನಿಷಿದ್ಧಗಳ ಭಸ್ಮಮಾಡಿ, ತದ್ಭಯವಿಲ್ಲದೆ ಅಶುಭಗಳನ್ನುಕೂಡಾ ಪವಿತ್ರಮಾಡತವೆ. ಇಂಥಾ ಅಗ್ನಿಸದೃಶನಾದ ಪರಮಾತ್ಮ, ಈ ಪಾಪಗಳ–ಈ ತನ್ನ ಭಕ್ತರು ಕೊಟ್ಟ ಪಾಪಸಮೂಹಗಳ, ನುಂಗುವವಗೆ–ನುಂಗತಕ್ಕ (ನಾಶಮಾಡತಕ್ಕ) ಪರಮಾತ್ಮಗೆ, ಭಯವೇ–ಪಾಪಗಳ ತನಗೆ ಅರ್ಪಿಸತಾರೆ ಎಂತ ಭಯವೇನಾದರೂ ಉಂಟೇ ಎಂದರೆ, ಸರ್ವಾತ್ಮನಾ ಇಲ್ಲ ಎಂತ ತಾತ್ಪರ್ಯ. ಪತಿತಪಾವನ ಶಬ್ದದಿಂದಲೇ ಪಾಪಗಳ ಅರ್ಪಿಷಿದರೆ ಅದರನ್ನ ಸ್ವೀಕಾರ ಮಾಡಿ, ಜೀವರನ್ನ ಶುದ್ಧರನ್ನಾಗಿ ಮಾಡತಾನೆ ಎಂತ; ಇದು ಒಂದು ದೃಷ್ಟಾಂತ.

**ಮೋದ ಶಿರ ದಕ್ಷಿಣಪಕ್ಷ ಪ್ರ ।**
**ಮೋದ ಉತ್ತರಪಕ್ಷನೆಂದು ಋ ।**
**ಗಾದಿ ಶ್ರುತಿಗಳು ಪೇಳುವುವು ಆನಂದಮಯ ಹರಿಗೆ ॥**
**ಮೋದ ವೈಷಿಕ ಸುಖವಿಶೇಷ ಪ್ರ ।**
**ಮೋದ ಪಾರತ್ರಿಕಸುಖಪ್ರದ ।**
**ನಾದಕಾರಣದಿಂದ ಮೋದ ಪ್ರಮೋದ ಎನಿಸುವನು ॥ ೨೫ ॥**

ಜ್ಞಾನಪೂರ್ವಕದಿಂದ ದ್ವಂದ್ವಕರ್ಮ ಅರ್ಪಣೆಮಾಡಿದವರಿಗೆ ಐಹಿಕದಲ್ಲೇನು, ಉಭಯತ್ರ ಸುಖಗಳ ಕೊಡತಕ್ಕವ ಪರಮಾತ್ಮನೇ ಎಂತ ಹೇಳತಾರೆ.

ಆನಂದಮಯ ಹರಿಗೆ–ಆನಂದವೇ ಶರೀರವಾಗಿ ಆನಂದದಿಂದ ಪೂರ್ಣನಾದ ಬಿಂಬರೂಪಿಯಾದ ಪರಮಾತ್ಮಗೆ, ಮೋದ–ಮೋದ ಎನತಕ್ಕದ್ದೇ, ಶಿರ–ಶಿರಸ್ಸಿಗೆ, ದಕ್ಷಿಣ ಪಕ್ಷ–ದಕ್ಷಿಣಭಾಗವಾಗಿ ಅದೆ. ಪ್ರಮೋದ–ಪ್ರಮೋದ ಎಂಬುದೇ, ಉತ್ತರಪಕ್ಷ–ಶಿರಸ್ಸಿಗೆ ಉತ್ತರಭಾಗವಾಗಿ ಅದೆ. ಎಂದು–ಎಂತಲೂ, (ಮತ್ತು), ಮೋದ–ಮೋದ ಎಂಬುದೇ, ವೈಷಿಕಸುಖವಿಶೇಷ – ವಿಶೇಷ ವಿಶೇಷವಾಗಿ ವಿಷಯಾದಿಗಳಿಂದ ಆಗತಕ್ಕ ಸುಖ, ಪ್ರಮೋದ–ಪ್ರಮೋದ ಎಂಬುದೇ, ಪಾರತ್ರಿಕಸುಖ–ಪರಲೋಕಗಳಾದ ಶ್ವೇತದ್ವೀಪಾದಿ ಮೂರುಸ್ಥಾನಗಳಲ್ಲಿ ಲಿಂಗಭಂಗಾನಂತರ ಭೋಗಮಾಡತಕ್ಕ ಸುಖ. ಪ್ರದನು–ಈ ಎರಡುವಿಧ ಸುಖಗಳನ್ನು ಜೀವರಿಗೆ ಕೊಡತಾನೆ. ಆದಕಾರಣದಿಂದ–ಈ ಕಾರಣದ ದೆಶೆಯಿಂದ ಪರಮಾತ್ಮ, ಮೋದಪ್ರಮೋದ–ಮೋದ ಎಂತಲೂ, ಪ್ರಮೋದ ಎಂತಲೂ, ಎನಿಸುವನು–ಈ ಪ್ರಕಾರ ಕರಿಸೋವನಾಗತಾನೆ, ಎಂತ, ಋಗಾದಿ ಶ್ರುತಿಗಳು–ಋಗ್ವೇದಾದಿ ಶ್ರುತಿಗಳು (ತೈತ್ತರೇಯೋಪನಿಷತ್ತಿನಲ್ಲಿ), ಪೇಳುವುವು–ಹೇಳೋವಾಗತವೆ.

ಪ್ರಮಾಣ :- ವಿಷ್ಣುರಹಸ್ಯೇ. "ಸುಖಮೂರ್ತಿರಯಂ ವಿಷ್ಣುಃ ಇತಿ ಶ್ರುತಿಷು ಗೀಯತೇ| ಅಯಮಸ್ಯ ಶಿರೋ ಮೋದೋ ದಕ್ಷಿಣಃ ಪಕ್ಷ ಉಚ್ಯತೇ | ಪ್ರಮೋದ ಉತ್ತರಃ ಪಕ್ಷಃ ಆತ್ಮಾ ಆನಂದ ಈರಿತಃ | ವಸ್ತುವಿಜ್ಞಾನಜಂ ಸೌಖ್ಯಮಾನಂದ ಇತಿ ಕೀರ್ತಿತಃ | ಮೋದೋ ವಿಶೇಷಜಂ ಸೌಖ್ಯಂ ಪ್ರಮೋದಃ ಸಂಪ್ರಕೀರ್ತಿತಃ | ಮೋದೋ ವಿಶೇಷಜಂ ಸೌಖ್ಯಂ ತತ್ರ ವಸ್ತುವಿಶೇಷತಃ | ಯಸ್ಮಾದ್ವಿಶೇಷತಃ ಸೌಖ್ಯಂ ಉಪಕಾರಕೃತೇ ಯತ್ಸಾತ್ತ್ವಸುಖಂ ತತ್ಪ್ರಿಯಮುಚ್ಯತೇ |" ದಕ್ಷಿಣಾಯನ ಸಾಂಕೇತದಿಂದ ದಕ್ಷಿಣಪಕ್ಷಕ್ಕೆ ಎಡಭಾಗ ಸಾಂಕೇತವೂ, ಉತ್ತರಾಯಣ ಸಾಂಕೇತದಿಂದ ಉತ್ತರಪಕ್ಷ ಬಲಭಾಗ ಸಾಂಕೇತವೂ. ಈ ಸಾಂಕೇತವನ್ನನುಸರಿಸಿ ಮೋದ ಎಂಬುದು ದಕ್ಷಿಣಪಕ್ಷ ಎಂತಲೂ, ಪ್ರಮೋದ ಉತ್ತರಪಕ್ಷ ಎಂತಲೂ ಸಾಂಕೇತ. ಮೂಲರೂಪಿ ಶ್ರೀ ನಾರಾಯಣನ ಶಿರದ ದಕ್ಷಿಣ ಪಾರ್ಶ್ವದಿಂದ ಅಂಶಗಳು ಹೊರಟು ಜೀವನ ದಕ್ಷಿಣಭಾಗದಲ್ಲಿ ಪ್ರವೇಶವಾಗಿ ಅವೆ. ಅದೇ ಪ್ರಕಾರ ಪರಮಾತ್ಮನ ಶಿರದ ಉತ್ತರಪಾರ್ಶ್ವದಿಂದ ಅಂಶಗಳು ಹೊರಟು ಜೀವನ ಉತ್ತರ ಪಾರ್ಶದಲ್ಲಿ ಪ್ರವೇಶವಾಗಿ ಅವೆ. ಮೋದರೂಪವಾದ ವೈಷಯಿಕ ಸುಖ, ದಕ್ಷಿಣಭಾಗಗತ ರೂಪಗಳಿಂದಲೂ, ಪ್ರಮೋದರೂಪವಾದ ಸುಖ, ಉತ್ತರಭಾಗಗತ ರೂಪದಿಂದಲೂ ಕೊಡತಾನೆ. ವೈಷಯಿಕ ಸುಖಸಾಧನ, ದಕ್ಷಿಣಭಾಗಗತ ರೂಪಗಳಿಂದಲೂ, ಪ್ರಮೋದ ಸುಖಸಾಧನ, ಉತ್ತರಭಾಗಗತ ರೂಪಗಳಿಂದಲೂ, ಮಾಡಿಸಿ, ಮೋದಪ್ರಮೋದಗಳ ಕೊಡತಾನೆ. ೧) ಮೋದ, (ದಕ್ಷಿಣ, ಬಲಭಾಗ), ವೈಷಯಿಕಸುಖ ಪುರುಷರಿಗೆ, ೨) ಪ್ರಮೋದ, (ಉತ್ತರ, ಎಡಭಾಗ) ಪರಲೋಕಸುಖ ಸ್ತ್ರೀಯರಿಗೆ, ಇದರ ವ್ಯತ್ಯಾಸ ದಿಂದಲೇ ಪುರುಷರಿಗೆ ಶ್ಲೋಕದಲ್ಲಿ ಉಕ್ತವಾದ ದಕ್ಷಿಣೋತ್ತರಗಳು ಸ್ತ್ರೀಗಳ ವಿವಕ್ಷಾ. ಅಸುರರಿಗೆ, ನಿತ್ಯಸಂಸಾರಿಗಳಿಗೆ ವೈಷಯಿಕಸುಖ, ಇರೋದಾಗಿ ಅದೆ, ಪ್ರಮೋದಸುಖಕ್ಕೆ ಪ್ರತ್ಯಾಮ್ನಾಯ ಅಂಧಂತಮ ದುಃಖಪ್ರದವೆಂದು ತಾತ್ಪರ್ಯ.

**ಎಂದಿಗಾದರು ವೃಷ್ಟಿಯಿಂದ ವ |**
**ಸುಂಧರೆಯೊಳಿಪ್ಪಖಿಳಜಲದಿಂ |**
**ಸಿಂಧು ವೃದ್ಧಿಯನೈದುವುದೆ ಬಾರದಿರೆ ಬರಿದಹುದೆ ||**
**ಕುಂದುಕೊರತೆಗಳಿಲ್ಲದಿಹ ಸ್ವಾ |**
**ನಂದ ಸಂಪೂರ್ಣಸ್ವಭಾವಗೆ |**
**ಬಂದು ಮಾಡುವುದೇನು ಕರ್ಮಾಕರ್ಮ ಜನ್ಯಫಲ || ೨೬ ||**

ಕರ್ಮಾಕರ್ಮಗಳೆರಡೂ ಜೀವಪರಮಾತ್ಮರು ಉಭಯರೂ ಸೇರಿ ಮಾಡಿದಾಗ್ಯೂ ಫಲಭೋಗ ಜೀವಗೇ ಹೊರ್ತು, ಪರಮಾತ್ಮಗೆ ಇಲ್ಲ ಎಂತ ಹೇಳತಾರೆ.

ವೃಷ್ಟಿಯಿಂದ-ಮಳೆಯಿಂದ ಸುರಿಸಲ್ಪಟ್ಟ, ವಸುಂಧರೆಯೊಳಿಪ್ಪ-ಭೂಮಿಯೊಳು ಇರತಕ್ಕ, ಅಖಿಳ ಜಲದಿಂ-ಸಮಸ್ತವಾದ ನದೀಜಲಗಳು ಸಮುದ್ರ ಸೇರೋಣದರಿಂದ, ಎಂದಿಗಾದರು-ಧಾವ ಕಾಲದಲ್ಲಾದರೂ, ಸಿಂಧು-ಸಮುದ್ರವು (ಪೂರ್ವದ ಸ್ಥಿತಿಗಿಂತಲೂ),

ವೃದ್ಧಿಯನ್ನೈದುವದೆ–ಜಲದಿಂದ ಅಭಿವೃದ್ಧಿಯಾಗುವದೇ? ಬಾರದಿರೆ–ನದ್ಯಾದಿ ಉದಕಗಳು ಸಮುದ್ರಕ್ಕೆ ಬಂದು ಸೇರದೆ ಇದ್ದರೆ, ಬರಿದಹುದೆ–ಸಮುದ್ರದಲ್ಲಿ ಉದಕವಿಲ್ಲದೇ ಬರೀದಾಗತದೆಯೇ (ಎಂದರೆ, ಉದಕಗಳು ಬರೋಣದರಿಂದ ಅಭಿವೃದ್ಧಿಯೂ, ಬಾರದೇ ಇರೋಣದರಿಂದ ಕೊರತೆಯಾಗಿ, ಒಣಗಿ ಹೋಗೋಣವಾಗಲಿ, ಎರಡೂ ಇಲ್ಲದೇ ತನ್ನ ಸ್ವಭಾವವಾದ ಉದಕದಿಂದ ಪೂರ್ಣವಾಗಿರುತ್ತದೆ) ಇದರೋಪಾದಿಯಲ್ಲಿ, ಸ್ವಾನಂದ ಸಂಪೂರ್ಣ–ಸಮುದ್ರಸದೃಶನಾದ ಪರಮಾತ್ಮ, ಸಮುದ್ರಗತ ಜಲಸದೃಶ ಸ್ವಕೀಯವಾದ ಜ್ಞಾನ, ಆನಂದ, ಬಲ ಇವುಗಳಿಂದ ಪೂರ್ಣನಾಗಿ ಇದ್ದಾನೆ. ಸ್ವಭಾವಗೆ–ಇಂಥಾ ಸಮುದ್ರದೃಷ್ಟಾಂತದೋಪಾದಿಯಲ್ಲಿ ಸ್ವಭಾವವುಳ್ಳ ಪರಮಾತ್ಮಗೆ, ಕರ್ಮ–ನದೀಜಲಗಳು ಸಮುದ್ರ ಸೇರೋದಕ್ಕೆ ಸದೃಶವಾಗಿ, ಅಧಿಕಾರಿಗಳು ಭಗವದರ್ಪಣಮಾಡಿದ ಪುಣ್ಯ ಕರ್ಮಗಳು, ಜನ್ಯಫಲ–ಈ ಪುಣ್ಯ ಕರ್ಮಗಳಿಂದ ಜನಿತವಾದ ಫಲಗಳು, ಪರಮಾತ್ಮನೆಂಬೋ ಸಮುದ್ರ ಸೇರೋಣದರಿಂದ, ಪರಮಾತ್ಮನ ಆನಂದ ಅಭಿವೃದ್ಧಿ ಆಗೋಣವೇನು, ಅರ್ಪಣೆರೂಪದಿಂದ ಪರಮಾತ್ಮನಲ್ಲಿ ಸೇರಿಸದೇ ಹೋದರೆ, ಕೊರತೆಗಳು – ಆನಂದ ಮಾಹಾತ್ಮ್ಯ ಕಡಿಮೆ ಆಗೋಣವೇನು, ಅಕರ್ಮ–ಪಾಪಕರ್ಮ (ತಜ್ಜನ್ಯಕರ್ಮ ಅರ್ಪಿಸೋಣದರಿಂದ ಅದು ಪರಮಾತ್ಮನಲ್ಲಿ ಸೇರಿ ಮಾಹಾತ್ಮ್ಯ ಆನಂದಗಳ ಕೆಡಿಸಿ), ಕುಂದು–ಸಮುದ್ರಸದೃಶನಾದ ಪರಮಾತ್ಮನಲ್ಲಿ ಆನಂದ ಮಾಹಾತ್ಮ್ಯಗಳು ಇಲ್ಲದಂತೆ ಆಗೋಣವೇನು, ಇವು ಎರಡೂ ಇಲ್ಲ, ಮತ್ತು, ಸಮುದ್ರದೋಪಾದಿಯಲ್ಲಿ, ಕುಂದುಕೊರತೆಗಳು, ಇಲ್ಲದಿಹ–ಇಲ್ಲದೇ ಸ್ವಕೀಯವಾದ ಆನಂದಾಖ್ಯ ಜಲದಿಂದ ಪೂರ್ಣವಾಗಿ ಇರತಕ್ಕ ಸಮುದ್ರಸದೃಶ ಪರಮಾತ್ಮನಲ್ಲಿ, ಭಕ್ತರಾದವರಿಂದ ಕೊಡಲ್ಪಟ್ಟ ಕರ್ಮಾಕರ್ಮಗಳು, ತಜ್ಜನ್ಯ ಫಲಗಳ, ಬಂದು–ಪರಮಾತ್ಮನೆಂಬೋ ಸಮುದ್ರದಲ್ಲಿ ಬಂದು ಸೇರಿ, ಮಾಡುವದೇನು–ಮಾಡತಕ್ಕ ಕಾರ್ಯವೇನೂ ಇಲ್ಲ (ಸಮುದ್ರದಲ್ಲಿ ನದಿಗಳು ಏಕದೇಶದಲ್ಲಿ ಸೇರಿಕೊಂಡು ಇದ್ದಂತೆ ಪರಮಾತ್ಮನಲ್ಲಿ ಅವುಗಳೂನೂ ಒಂದು ಪ್ರದೇಶದಲ್ಲಿ ಇರುತ್ತವೆ). ಎಂದರೆ ದ್ವಂದ್ವಕರ್ಮಗಳ ಅರ್ಪಣೆ ಮಾಡೋಣದರಿಂದ ಫಲಭೋಜನ, ಪ್ರಯೋಜನ ಜೀವರಿಗೇ ಹೊರ್ತು, ಪರಮಾತ್ಮಗೆ ಏನೂ ಇಲ್ಲ. ಅದರ ಸಾಧಕಬಾಧಕಗಳು ಈಶ್ವರಗೆ ಇಲ್ಲ ಎಂತ ತಾತ್ಪರ್ಯ.

ಪ್ರಮಾಣ :–ಭೂಮಿಸ್ಥಿತಂ ಜಲಂ ನೇತುಮಬ್ಧಿಂ ಪ್ರತಿ ನ ಯತ್ಯತೇ ಸ್ವಭಾವೇನ ಗತೇ ತಸ್ಮಿನ್ ಸಮುದ್ರೋ ನೈವ ವರ್ಧತೇ । ನೋ ನತಾ ತದಭಾವೇನ ತದ್ವಿಷ್ಣೋಸ್ಸ್ಯ ಸುಖಸ್ಯಚ ॥ ಎಂಬ ಅರ್ಥ ವಿವರಿಸಿತು.

**ದೇಹವೃಕ್ಷದೊಳೆರಡುಪಕ್ಷಿಗ ।**
**ಳಿಹವು ಎಂದಿಗೂಬಿಡದೆ ಪರಮು ।**
**ಸ್ನೇಹದಿಂದಲಿ ಕರ್ಮಜಫಲಗಳುಂಬ ಜೀವಖಗ ॥**

**ಶ್ರೀಹರಿಯು ತಾ ಸಾರಭೋಕ್ತನು ।**
**ದ್ರೋಹಿಸುವ ಕಲ್ಯಾದಿ ದೈತ್ಯ ಸ ।**
**ಮೂಹಕೀವ ವಿಶಿಷ್ಟ ಪಾಪಕ್ಲೇಶವೆಲ್ಲರಿಗೆ ॥ ೨೭ ॥**

ಕರ್ಮಜನ್ಯ ಫಲಗಳು :–ಜೀವ ಭುಕ್ತ, ಪರಮಾತ್ಮ ಭುಕ್ತ ಎರಡಕ್ಕೂ ಭೇದವೂನೂ, ಅದಕ್ಕೆ ಅನುಸರಿಸಿದ ' ದ್ವಾಸುಪರ್ಣ ' ಶ್ರುತ್ಯರ್ಥವೂ ಹೇಳತಾರೆ.

ಶ್ರುತಿ ಡಾವದೆಂದರೆ:–ದ್ವಾಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ । ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋ ಅಭಿಚಾಕಶೀತಿ ॥ ಇದಕ್ಕೆ ಪದ್ಯರೂಪದಿಂದ ಅರ್ಥ.

ದೇಹವೃಕ್ಷದೊಳು–ಸ್ಥೂಲದೇಹವೆಂಬ ವೃಕ್ಷದಲ್ಲಿ, ಎರಡು ಪಕ್ಷಿಗಳಿಹವು–ಅಪೂರ್ಣನಾದ ಜೀವಾಖ್ಯ ಪಕ್ಷಿ, ಒಂದು, ಗುಣಪೂರ್ಣನಾದ ಪರಮಾತ್ಮನೆಂಬೋ ಪಕ್ಷಿ ಇನ್ನೊಂದು. ಅಂತು ಎರಡು ಪಕ್ಷಿಗಳು ಅಂಗಾಂಗಿಭಾವದಿಂದ ಇರೋವಾಗಿ ಅವೆ. (ಮತ್ತೊಂದು ಅರ್ಥ ಏನೆಂದರೆ, ಪಕ್ಷಿಗಳಂತೆ ಮೇಲೆ ಹೊರಟುಹೋಗುವದ್ದರಿಂದ, ಜೀವ ಪರಮಾತ್ಮರಿಗೆ ಪಕ್ಷಿಗಳೆಂತ ಹೆಸರು.) ಎಂದಿಗೂ ಬಿಡದೆ–ಅನಾದ್ಯನಂತಕಾಲಕ್ಕೂ ವಿಯೋಗವಿಲ್ಲದೆ, ಪರಮಸ್ನೇಹದಿಂದಲಿ—ಪರಮ–ಸರ್ವೋತ್ತಮನಾದ ಪರಮಾತ್ಮ, ಸ್ನೇಹದಿಂದಲಿ–ವಿಯೋಗವಿಲ್ಲದೆ ಅಂದರೆ, ವಿಯೋಗರಹಿತವಾದ ಲಕ್ಷಣೋಪೇತ ಸ್ನೇಹದಿಂದ ಇದ್ದಾನೆ. ಜೀವಖಗ–ದೇಹಾಖ್ಯ ವೃಕ್ಷಗತ ಪಕ್ಷಿದ್ವಯಗಳೊಳಗೆ ಅಪೂರ್ಣನಾದ ಜೀವ ಎನ್ನತಕ್ಕ ಪಕ್ಷಿ, ಕರ್ಮಜ–ತ್ರಿಗುಣಜನಿತ ಅನಾದಿಕರ್ಮವನ್ನನುಸರಿಸಿ ದೇಹೇಂದ್ರಿಯಾದಿಗಳೆಂಬ ಶಾಖಾದಿಂದ ಜನಿತವಾದ, ಪುಷ್ಪಗಳೆಂಬೋ ಕರ್ಮಗಳಿಂದ ಜನಿತವಾದ, ಫಲಗಳುಂಬ–ಶುಭಾಶುಭಗಳೆಂಬ ಫಲಗಳ ಭೋಜನಮಾಡತಾನೆ. ಶ್ರೀಹರಿಯು–ಶ್ರೀದೇವೇರಿಂದ ಸಹಿತನಾದ, ಸ್ವಾಖ್ಯಐಶ್ವರ್ಯದಿಂದ ಪೂರ್ಣನಾದ ಹರಿನಾಮಕ ಸರ್ವೋತ್ತಮನಾದ ಪಕ್ಷಿಸಾಂಕೇತನಾದ ಪರಮಾತ್ಮ, ತಾ ಸಾರಭೋಕ್ತನು–ತಾನು ಜೀವಭುಕ್ತ ಫಲಗಳ ಭೋಜನಮಾಡದೆ ಜೀವಭುಕ್ತ ಫಲಗಳಲ್ಲಿ ವಿದ್ಯಮಾನಗಳಾದ, ತನಗೆ ಅಭಿನ್ನಗಳಾದ, ತನಗೆ ಸ್ವಾಖ್ಯಗಳಾದ, ಸಾರಭೂತಗಳಾದ ಫಲಗಳ ಭೋಗಮಾಡುವನು. ಜೀವಸಾಂಕೇತ ಪಕ್ಷಿಗಳು ತ್ರಿವಿಧ. ಈಶಸಾಂಕೇತ ಪಕ್ಷಿ (ಒಂದು), ತ್ರಿವಿಧ ಪಕ್ಷಿಗಳೊಳಗೆ ಈಶನಲ್ಲಿ ದ್ರೋಹಚಿಂತನಸ್ವರೂಪಸ್ವಭಾವದಲ್ಲಿವುಳ್ಳ ಪಕ್ಷಿಸಮೂಹಗಳು (ಒಂದು), ದ್ರೋಹಚಿಂತನರಹಿತವಾದ ಪಕ್ಷಿಸಮೂಹ (ಒಂದು), ಅಂತು ಮೂರು, ದ್ರೋಹಿಸುವ–ಸರ್ವೋತ್ತಮನಾದ ಶ್ರೀ ಪರಮಾತ್ಮನು ಸರ್ವೋತ್ತಮನಲ್ಲ ಎಂತಲೂ, ನಾನೇ ಸರ್ವೋತ್ತಮ ಎಂತಲೂ, ಈ ರೀತ್ಯಾ ದ್ರೋಹಿಸುವ, ಕಲ್ಯಾದಿ ದೈತ್ಯಸಮೂಹಕೆ–ಕಲಿ ಮೊದಲಾದ ದೈತ್ಯರ ಗುಂಪಿಗೆ, ವಿಶಿಷ್ಟ–ಸಮಸ್ತವಾದ, ಪಾಪಕ್ಲೇಶ–ಪಾಪಫಲಗಳೇನು, ದುಃಖಗಳೇನು, ಎಲ್ಲರಿಗೆ–ಭಗವದ್ಭಕ್ತಿಯುಳ್ಳ ಮುಕ್ತಿಯೋಗ್ಯರಾದ ಎಲ್ಲಾ ಭಕ್ತರಿಗೆ

ವಿಶಿಷ್ಟ ಪುಣ್ಯಫಲ, ಆನಂದ ಇವುಗಳೇನು, ಮಿಶ್ರಜ್ಞಾನಿಗಳಾದ ನಿತ್ಯಸಂಸಾರಿಗಳಿಗೆ ಸುಖದುಃಖಾತ್ಮಕವಾದ ಏಕಕಾಲಾವಚ್ಛೇದೇನ, ಕಷ್ಟಸುಖ ಫಲವೇನು, ಈವ–ಪರಿ ಯವಸಾನಕ್ಕೆ ಕೊಡತಾನೆ. ಪರಿಯವಸಾನವಾದ ಜೀವನ್ಮುಕ್ತದಶಾದಲ್ಲಿ, ದೈತ್ಯರ ಪುಣ್ಯ ಯಾವತ್ತೂ ತನ್ನ ಭಕ್ತರಿಗೆ, ಈ ಭಕ್ತರ ಪಾಪ ಯಾವತ್ತೂ ದೈತ್ಯರಿಗೆ ಕೊಟ್ಟುಬಿಡ ತಾನೆ. ಪ್ರಾರಬ್ಧಕರ್ಮ ಅವರವರಿಗೆ ಭೋಗ. ಲಿಂಗಭಂಗಾನಂತರ ಮುಕ್ತರಿಗೆ ಸ್ವರೂಪ ಸುಖ. ತಮೋಯೋಗ್ಯರಿಗೆ ಸ್ವರೂಪದುಃಖಪ್ರದನೆಂತ ಅರ್ಥ.

ಪ್ರಮಾಣಗಳು :– ದೇಹವೃಕ್ಷೇ ಸಮಾಸೀನೌ ಸಖಾಯೌ ದಕ್ಷಿಣಾಚಿರಂ | ತಯೋರ್ಮಧ್ಯೇ ತು ಯೋ ಜ್ಞಾಯಾತ್ ತಸ್ಯ ಸ್ವಾದೇವ ಪಿಪ್ಪಲಂ | ಇತಿ ಪ್ರಾಹ ಶ್ರುತಿ ಸಾಕ್ಷಾತ್ಸಾರಭೋಕ್ತಾ ಹರಿಸ್ತತಃ | ಪಾಪಕರ್ಮವಿಭಾಗಸ್ತು ತತ್ತ್ವದೈತ್ಯೇಷು ಭಾಗಶಃ | ತತ್ತ್ವದೈತ್ಯೇಷು ಯತ್ಪಾಪಂ ತದ್ಭಾಗೀ ಕಲಿರೇವ ಹಿ ||

ಸುಪರ್ಣಾವೇತೌ ಸದೃಶೌ ಸಖಾಯೌ ಯದೃಚ್ಛಯೈತೌ ಕೃತನೀಡೌ ಚ ವೃಕ್ಷೇ || ಏಕಸ್ತಯೋಃ ಖಾದತಿ ಪಿಪ್ಪಲಾನ್ನಮನ್ಯೋ ನಿರನ್ನೋಪಿ ಬಲೇನ ಭೂಯಾನ್ || ಭಾಗವತ ಏಕಾದಶ ಸ್ಕಂಧ (೧೧ ನೆ ಅಧ್ಯಾಯ). ಇನ್ನೂ ಇದಕ್ಕೆ ಪ್ರಮಾಣವೇನೆಂದರೆ, ಪುರಂದರದಾಸರ ಪದ :–

ಜಯವದೆ ಜಯವದೆ ಈ ಮನೆತನಕೆ || ಪಲ್ಲವಿ ||
ಬಿಡುಬಿಡು ಬಿಡುಬಿಡು ಮನಸಂಶಯವಾ || ಅ. ಪ. ||

ಶುಕನೆಂಬೋ ಹಕ್ಕಿ ಹೇಳೀತಪ್ಪಾ, ಜಗವೆಂಬೋ ಗಿಡ ಹುಟ್ಟೈತಣ್ಣಾ, ಹಣ್ಣು ಗಳೆರಡೂ ಇದ್ದಾವಪ್ಪ, ಮೂರು ಬುಡದಾಗಿಡ ಕೇಳಣ್ಣಾ, ಹಣ್ಣಿನ ಒಳಗೆ ನಾಲ್ಕೂ ರಸವು ಕೇಳು ಐದು ದೊಡ್ಡದು ಹರಿಕಾಣಪ್ಪ, ಆರೂಬಗೆಯಾರಸವೂ ಕೇಳು, ಏಳುಬಗೆಯ ತೊಗಲುಂಟಣ್ಣಾ, ಸಣ್ಣ ಅರಿಗಳು ಉಂಟೈತಾವೇ, ಅಕ್ಷವು ಅದಕೆ ಒಂಭತ್ತೈತೆ, ಎಲೆಗಳು ಹತ್ತು ಇದ್ದಾವಪ್ಪ, ಒಂದೇಹಕ್ಕಿ ಹಣ್ಣು ತಿಂತೈತೆ, ಮತ್ತೊಂದ್ಹಕ್ಕಿ ನೋಡು ತದಪ್ಪಾ, ಹಣ್ಣು ತಿಂದ್ಹಕ್ಕಿ ಬಡವಾಗೈತೆ, ತಿನ್ನದ ಹಕ್ಕಿ ಬಲಿತೈತಣ್ಣಾ, ಒಂದೇಕುಲ ವೆಂದು ತಿಳಿಯಾಬ್ಯಾಡಿ, ತಿಳಿದರೆ ನಿಮಗೆ ಕೇಡಾದೀತು ; ಹಳೇವಸ್ತ್ರ ಬಿಸಾಡಣ್ಣಾ, ಹೊಸವಸ್ತ್ರ ದೇವ ಕೊಟ್ಟಾನು, ಗಿರಿದುರ್ಗಗಳು ಅಯಿದಾವಪ್ಪಾ, ಮಾರನು ಎಂಬ ಕಳ್ಳ ನಿದ್ದಾನೆ, ಸುರಜೇಷ್ಠನ ಸಂಗತಿಯಾ ಪಿಡಿಯೋ, ದೊಡ್ಡಮಾರ್ಗವು ಪಿಡಿಬೇಕಣ್ಣಾ, ದೊಡ್ಡಾಸಂಗತಿ ಬರುವೋತನಕ ಎರಡೂಮನೆಯಲ್ಲಿ ಇರಬೇಕಣ್ಣಾ, ಜ್ಞಾನ, ಭಕ್ತಿ ಎಂಬೋ ಮಾರ್ಗಗಳೆರಡೂ ಒಂದೊಂದೊಬ್ಬರು ಕೊಂಡಾರಣ್ಣ, ಕುರಂಗ ಮತಂಗ ಪತಂಗವು ಕೇಳ್ರೋ ಭೃಂಗಮೀನವು ಹತವಾಯಿತಣ್ಣಾ, ದಾನಕೈಯ್ಯ ತೋರಿಸಬೆಕು ಅದರಿಂದಾ ನದಿಯ ದಾಟಿದಿಯಪ್ಪಾ, ನಿನ್ನಾ ಯೋಗ್ಯತೆ ತಿಳಿದಾಮ್ಯಾಲೆ ಪುರಂದರವಿಠಲ ಸ್ಥಳ ಕೊಟ್ಟಾನು || (ಜೋಗಿಪದ).

**ದ್ಯುಮಣಿಕಿರಣವ ಕಂಡಮಾತ್ರದಿ ।**
**ತಿಮಿರವೋಡುವ ತೆರದಿ ಲಕ್ಷ್ಮೀ ।**
**ರಮಣ ನೋಡಿದಮಾತ್ರದಿಂದಘನಾಶ ಐದುವುದು ॥**
**ಕಮಲಸಂಭವ ಮುಖ್ಯರೆಲ್ಲಾ ।**
**ಸುಮನಸರೊಳಿಹ ಪಾಪರಾಶಿಯ ।**
**ಅಮರಮುಖನಂದದಲಿ ಭಸ್ಮವ ಮಾಳ್ಪ ಹರಿತಾನು ॥ ೨೮ ॥**

ಶ್ರೀ ಪರಮಾತ್ಮ ತನ್ನ ಭಕ್ತರ ಪಾಪಗಳ ನಾಶಮಾಡತಾನೆ ಎಂತ ಹೇಳತಾರೆ.

ದ್ಯುಮಣಿಕಿರಣವ–ಸೂರ್ಯನ ಕಿರಣಗಳ ತೇಜಸ್ಸಿನ, ಕಂಡ ಮಾತ್ರದಿ–ಕಾಣೋ ಮಾತ್ರದಿಂದ, ತಿಮಿರವೋಡುವ ತೆರದಿ–ಅಂಧಕಾರ ಪಲಾಯನಮಾಡೋಪಾದಿಯಲ್ಲಿ, ಲಕ್ಷ್ಮೀರಮಣ – ಸೂರ್ಯಸದೃಶನಾದ ಲಕ್ಷ್ಮೀಪತಿಯಾದ ನಾರಾಯಣದೇವರು, ನೋಡಿದಮಾತ್ರದಿಂದ–ಕಟಾಕ್ಷವೀಕ್ಷಣವೆಂಬ ಕಿರಣಗಳಿಂದ, ನೋಡೋಮಾತ್ರದಿಂದ, ಅಘ–ಆಗಾಮಿಸಂಚಿತಗಳೆಂಬ ಅಂಧಕಾರಸದೃಶವಾದ ಪಾಪಗಳು, ನಾಶ ಐದುವದು– ಆಗಾಮಿ, ನಿರ್ಲೇಪದಿಂದಲೂ, ಸಂಚಿತ, ಅಗ್ನಿಸ್ಪರ್ಶವಾದ ತೂಲರಾಶಿವತ್, ನಾಶ ವಾಗೋವಾಗತವೆ. ಪ್ರಾರಬ್ಧ, ಭೋಗದಿಂದಲೇ ನಾಶವಾಗಬೇಕು. (ಸಂಚಿತ ನಾಶ, ಮುಂದೆ ಹೇಳತಾರೆ), ಮುಖ್ಯರು–ಜೀವೋತ್ತಮರಾದ, ಕಮಲಸಂಭವ–ಬ್ರಹ್ಮದೇವರೇ ಮೊದಲಾದ, ಎಲ್ಲಾ ಸುಮನಸರೊಳಿಹ–ಎಲ್ಲಾ ದೇವತೆಗಳಲ್ಲಿ (ತೃಣಾಂತ ಮುಕ್ತಿ ಯೋಗ್ಯರು, ಈ ಮುಕ್ತಿಯೋಗ್ಯರಲ್ಲಿ ಇರತಕ್ಕ), ಪಾಪರಾಶಿಯ–ಸಂಚಿತ ಪಾಪರಾಶಿಯ, ಅಮರಮುಖನಂದದಲಿ–ದೇವತೆಗಳಿಗೆ ಮುಖಸ್ಥಾನಾಪನ್ನನಾದ ಅಗ್ನಿದೇವರು ಅನೇಕ ವಾದ ಕಾಷ್ಟಾದಿಗಳನ್ನು ದಹನಮಾಡಿ, ಭಸ್ಮಮಾಡೋಪಾದಿಯಲ್ಲಿ, ಹರಿ ತಾನು– ಬಿಂಬರೂಪಿಯಾದ, ಅಗ್ನಿಸದೃಶನಾದ ಶ್ರೀ ಪರಮಾತ್ಮನು, ಭಸ್ಮವ ಮಾಳ್ಪ–ಭಸ್ಮ ಮಾಡಿಬಿಡೋವನಾಗತಾನೆ.

**ತಾ||** ತಮಃ ಸೂರ್ಯಂ ಯಥಾ ನೈವ ಪಶ್ಯೇತ್ತದ್ವದ್ಧರಿಂ ನ ಹಿ || ಪಾಪಕರ್ಮ ನಿರೀಕ್ಷೇತ ತದ್ದೂರಾದೇವ ನಶ್ಯತಿ । ಬ್ರಹ್ಮಾದಿದೇವಭಾಗಾ (ಪಾಪಾಸ್ತು) ತೂಲವದ್ದ ಹತೇ ಹರಿಃ || ಎಂಬ ಪ್ರಮಾಣಗಳನ್ನನುಸರಿಸಿ, ಸಂಚಿತ ಕರ್ಮವನ್ನು ವೀಕ್ಷಣಾಖ್ಯ ಜ್ವಾಲದಿಂದ ದಹಿಸಿಬಿಡತಾನೆ. ಸೂರ್ಯ ದೃಷ್ಟಾಂತ ಆಗಾಮಿಗೆ, ಅಗ್ನಿ ದೃಷ್ಟಾಂತ ಸಂಚಿತಕ್ಕೆ, ಎಂದು ತಿಳಿಯಬೇಕು. ಋಜುಗಣದವರಿಗೆ ಪಾಪವಿಲ್ಲ, ತನ್ನಾಶವೂ ಇಲ್ಲ. ಅವರ ಕರ್ಮಗಳು ಯಾವತ್ತೂ ಪುಣ್ಯಗಳೇ. ಇನ್ನೂ ಅಪರೋಕ್ಷಾತ್ಪೂರ್ವಕಾಲೀನ ಕರ್ಮಸಂಚಿತ ಎಂತಲೂ, ಅನಂತರಕಾಲೀನ ಕರ್ಮ, ಆಗಾಮಿ ಎಂತಲೂ, ಅಪರೋಕ್ಷಾ ಆಗೀನೂ ಭೋಗಮಾಡತಾ ಇರುವ ಕರ್ಮಪ್ರಾರಬ್ಧ, ಭೋಗದಿಂದಲೇ ನಾಶ ಎಂತಲೂ ಇರುವ ನೇಮಾನುಸಾರ, ಋಜುಗಳಿಗೆ ಬಾಹ್ಯಆಗಾಮಿ, ಬಾಹ್ಯಸಂಚಿತ ಎರಡೂ ನಾಶ, ನಿರ್ಲೇಪಗಳೆಂದು ತಾತ್ಪರ್ಯ.

**ಚತುರಶತಭಾಗದಿ ದಶಾಂಶ ದೊ ।**
**ಳಿತರಜೀವರಿಗೀವ ಲೇಶವ ।**
**ದಿತಿಜ ದೇವರ್ಕಳಿಗೆ ಕೊಡುವ ವಿಶಿಷ್ಟ ದುಃಖಸುಖ ॥**
**ಮತಿವಿಹೀನಪ್ರಾಣಿಗಳಿಗಾ ।**
**ಹುತಿಯ ಸುಖ ಮೃತಿ ದುಃಖವರ ಯೋ ।**
**ಗ್ಯತೆಯುನರಿತು ಪಿಪೀಲಮಶಕಾದಿಗಳಿಗೀವ ಹರಿ ॥ ೨೯ ॥**

ಪಾಪ ಪುಣ್ಯ ವಿಭಾಗಕ್ರಮವನ್ನ ಹೇಳತಾರೆ. ಪ್ರತಿ ಪ್ರತೀ ಪ್ರಾಣಿಗಳ ಸ್ಥೂಲ ಶರೀರಗಳಲ್ಲಿ ಜೀವ, ದೇವ, ದೈತ್ಯರು ಈ ತ್ರಯರೂ ಆವಾಸರಾಗಿ ಇದ್ದು, ಮೂರೂಮಂದಿ ದೇಹಾಭಿಮಾನಿಗಳು ಎಂತ ಕರಿಸುತ್ತಾರೆ. ತ್ರಿವಿಧರು ಅವರವರ ಸಾಧನದ ಉದ್ದಿಶ್ಯವಾಗಿ ಭಗವದಾಜ್ಞಾದಿಂದ ಆವಾಸರಾಗಿ ಇದ್ದಾರೆ. ಈ ದೇಹದಿಂದ ಮಾಡಲ್ಪಡುವ ಪಾಪ ಪುಣ್ಯಗಳಿಗೆ ತ್ರಿವಿಧರೂನೂ ಅಭಿಮಾನಿಗಳಾಗಿ ಇದ್ದಾರೆ. ದಾವ ದಾವದಕ್ಕೆ ದಾರು ದಾರು ಎಂದರೆ, ಪಾಪಕ್ಕೆ ದೈತ್ಯರು, ಪುಣ್ಯಕ್ಕೆ ದೇವತೆಗಳು, ಮತ್ತು ಪಾಪಪುಣ್ಯ ಉಭಯಕ್ಕೆ ದೇಹಸ್ಥನಾದ ಜೀವ. ದೇಹಸ್ಥನಾದ ಜೀವನಕಡಿಯಿಂದ ಪುಣ್ಯಕಾರ್ಯ ಗಳನ್ನು ದೇವತೆಗಳೂನೂ, ಪಾಪಕಾರ್ಯವನ್ನ ದೇವತೆಗಳೇ ದೈತ್ಯರ ಅಂತರ್ಗತರಾಗಿ ಇದ್ದು, ದೈತ್ಯರ ದ್ವಾರಾ ಮಾಡಿಸತಾರೆ. ಉಭಯಕರ್ಮ, ದೇವ ದೈತ್ಯರ ದ್ವಾರಾ ಜೀವ ಮಾಡತಾನೆ. ತ್ರಿವಿಧರೂ ಮಾಡಿದವರಾದರು. ಆದಕಾರಣ, ಜೀವನಕಡಿಯಿಂದ ಮಾಡ ಲ್ಪಟ್ಟ ಉಭಯಕರ್ಮಗಳಿಗೆ ತ್ರಿವಿಧರೂ ಬದ್ಧರಾದಕಾರಣ ತ್ರಿವಿಧರಿಗೂ ಭಾಗವುಂಟು. ಅದು ಹ್ಯಾಂಗೆಂದರೆ–

ಚತುರಶತಭಾಗದಿ ದಶಾಂಶದೊಳಿತರಜೀವರಿಗೀವ ಎಂದರೆ ಚತುರಶತ – ನಾನ್ನೂರು, ಭಾಗದಿ–ಸ್ವತಂತ್ರಭಾಗದೊಳಗೆ ಸರ್ವರಿಗೆ ತಾರತಮ್ಯಾನುಸಾರ ವಿಭಾಗ ಮಾಡಿಕೊಟ್ಟದ್ದು ಆದ್ದರಿಂದ, ಚತುರಶತ ಅಂತ ಪ್ರಯೋಗವು. ದಶಾಂಶದೊಳು–ಹತ್ತು ಅಂಶವನ್ನ ತೆಗೆದುಕೊಂಡು, ಇವರಲ್ಲಿ, ಇತರ ಜೀವರಿಗೆ–ದೇವದೈತ್ಯರಿಗೆ ಅನ್ಯನಾದ, ದೇಹಸ್ಥನಾದ ಜೀವಗೆ, ಲೇಶವ–ಅತ್ಯಲ್ಪ ಪಾಪಪುಣ್ಯವ, ಈವ–ಕೊಡೋವನಾಗತಾನೆ. ದಶಾಂಶ ಸ್ವಾತಂತ್ರ್ಯವನ್ನ ಅಖಿಲ ನಿರಂಶ ಜೀವರಲ್ಲಿ ಇಟ್ಟ ಎಂತ ಹೇಳಿರೋಣದರಿಂದ, ಹತ್ತು ಅಂಶ ಸ್ವಾತಂತ್ರ್ಯ ಯಾವತ್ತೂ ಜೀವರಿಗೆ, ವಿಭಾಗಮಾಡಿದರೆ, ಪ್ರತಿ ಜೀವರ ಭಾಗಕ್ಕೆ ಬಂದ ಸ್ವಾತಂತ್ರ್ಯ ಎಷ್ಟುಮಾತ್ರವೋ ತಾವತ್ಪರಿಮಿತಿ ಪಾಪಪುಣ್ಯಗಳ, ದೇಹಸ್ಥ ಜೀವಗೆ ಕೊಡತಾನೆ. ಲೇಶ ಎಂಬುದು, ಈ ದೃಷ್ಟಾಂತದಂತೆ ತಿಳಿಯಬೇಕು. ಜೀವರಿಗೀವ ಎಂಬ ಬಹುವಚನಪ್ರಯುಕ್ತ, ಪ್ರತಿ ಪ್ರತೀ ಜೀವರಲ್ಲಿ ಇದೇ ನೇಮ ಎಂತ ತಾತ್ಪರ್ಯ. ದಿತಿಜ–ದಿತಿಪುತ್ರರಾದಂಥಾ ದೈತ್ಯರಿಗೆ, ವಿಶಿಷ್ಟದುಃಖ–ದುಃಖಕರಗಳಾದ ವಿಶಿಷ್ಟಪಾಪಗಳ ಯಾವತ್ತೂ ಕೊಡೋವನಾಗತಾನೆ. ದೇವರ್ಕಳಿಗೆ–ಈ ದೇಹಗತ ದೇವತೆಗಳಿಗೆ ವಿಶಿಷ್ಟಸುಖ–ಸುಖಕರಗಳಾದ ಪುಣ್ಯಗಳು ಯಾವತ್ತೂ, ಕೊಡುವ–

ಕೊಡತಾನೆ. ದೇಹಸ್ಥನಾದ ಜೀವಗೆ ಕೊಡಲ್ಪಟ್ಟ ಲೇಶವಾದ ಪಾಪಪುಣ್ಯಗಳು ಎರಡೂ ಭೋಗಿಸೋದಕ್ಕೆ ಯೋಗ್ಯತಾ ಇಲ್ಲದೆ, ಭೋಗಮಾಡಿದ್ದು ಹೋಗತಾ ಅವಶಿಷ್ಟ ಉಳಿಯೋದಾಗಿ ಆದರಲ್ಲೇ ಆಗಾಮಿ, ಸಂಚಿತ ಎಂತ ಎರಡುಪ್ರಕಾರ ಕರಿಸೋಗದಾಗತವೆ. ಈ ಆಗಾಮಿ ನಿರ್ಲೇಪ, ಸಂಚಿತ ನಾಶ, ಎಂತ ಶಾಸ್ತ್ರದಲ್ಲಿ ವಿದಿತವಾಗಿ ಅದೆ, ಮತಿವಿಹೀನ–ಅಜ್ಞಾನಿಗಳಾದವರು, ಜ್ಞಾನಿಗಳಾದವರನ್ನ ಸಿಂದಾದಿಗಳನ್ನು ಮಾಡಿದರೆ, ನಿಂದಾಮಾಡಿಸಿಕೊಂಡ ಜ್ಞಾನಿಗಳು ಭೋಗಿಸತಕ್ಕ ಲೇಶ ಪಾಪದೊಳಗೆ, ಪ್ರಾಣಿಗಳಿಗೆ–ನಿಂದಾಮಾಡಿದ ಜೀವರಿಗೆ ಭಾಗಮಾಡಿಕೊಡತಾನೆ. ತದ್ವತ್, ಭೂಷಣಮಾಡೋಣದ ರಿಂದ ಪುಣ್ಯ ಭಾಗಮಾಡಿ, ಅವರಿಗೆ ಕೊಡತಾನೆ. ಆದ್ದರಿಂದ ಭಗವದ್ಭಕ್ತರ ಭೂಷಣವೂ, ದೈತ್ಯರ ದೂಷಣವೂ ಮಾಡಬೇಕೆಂತ ತಾತ್ಪರ್ಯ; ಮತ್ತು ಪ್ರಾಣಿಗಳಿಗೆ ಎಂದರೆ, ತೃಣಾದಿ ಬ್ರಹ್ಮಾಂತ ತ್ರಿವಿಧ ಜೀವರಿಗೆ, ಆಹುತಿಯ–ಆಹಾರವೇನು, ಸುಖ–ಸುಖವೇನು, ಮೃತಿ–ಮರಣವೇನು, ದುಃಖ–ದುಃಖವೇನು, ಅವರ ಯೋಗ್ಯತೆಯನರಿತು–ಆಯಾ ಜೀವರ ಸ್ವರೂಪ ಯೋಗ್ಯತೆಯ ಮತ್ತು ಮಾಡಲ್ಪಟ್ಟ ಕರ್ಮಗಳ ಯೋಗ್ಯತೆಯ ಅರಿತವ ನಾಗಿ (ಪರಮಾತ್ಮನು), ಪಿಪೀಲ–ಇರುವೆ, ಮಶಕ–ನೊಣ, ಆದಿಗಳಿಗೆ–ಮೊದಲಾದ ಸಮಸ್ತ ಪ್ರಾಣಿಗಳಿಗೆ, ಹರಿ–ಬಿಂಬರೂಪಿ ಪರಮಾತ್ಮ, ಈವ–ಕೊಡೋವನಾಗತಾನೆ.

ಪ್ರಮಾಣ :–ಚತುಶ್ಯತೇಷು ಭಾಗೇಷು ದಶಾಂಶಾ ಜೀವಶಕ್ತಿತಾ । ಪುಣ್ಯಾಪಾಪ ಫಲಂ ತಾವದಸ್ಯ ಸ್ಯಾದಿತಿ ನಿಶ್ಚಿತಂ । ತಾವದೇವಾಲಮುಸ್ಯಾಸ್ತಿ ಕ್ಷುದ್ರತ್ವಾದಲ್ಪಶಕ್ತಿತಃ । ಯಥಾ ಹಿ ದೃಶ್ಯತೇ ಲೋಕೇ ಪಿಪೀಲಮಶಕಾದಯಃ । ಅಲ್ಪೇನೈವ ಹಿ ತುಷ್ಯಂತಿ ವ್ಯಥತೇ ಚಾಲ್ಪದುಃಖತಃ । ಪಾಪಕರ್ಮ ತು ಯತ್ಕಿಂಚಿತ್ ಜಾಯತೇ ಜೀವತೋ ದ್ವಿಜಾಃ । ಯಥಾಭಾಗಂ ತತ್ರ ದೈತ್ಯಾಃ ಜೀವಾಂಶ್ಚಾಪಿ ವಿಭಾಗಿನಃ ॥ ಇನ್ನೂ

ಯದಿ ಕಿಂಚೇಮಾಃ ಪ್ರಜಾಃ ಶುಭಮಾಚರಂತಿ ದೇವಾ ಏವ ತದಾಚರಂತಿ ದೇವಾನಾಮೇವೈತದ್ಭವತಿ ಸ್ವಾಮಿ ಹಿ ಫಲಮಶ್ನುತೇ ನಾಸ್ವಾಮಿ ಕರ್ಮ ಕುರ್ವಾಣಃ ॥ ಇತ್ಯಾದಿ ಪ್ರಮಾಣಗಳು ವಿವರಿಸಿದವು.

**ನಿತ್ಯ ನಿರಯಾಂಧಾಖ್ಯ ಕೂಪದಿ ।**
**ಭೃತ್ಯರಿಂದೊಡಗೂಡಿ ಪುನರಾ ।**
**ವರ್ತಿವರ್ಜಿತ ಲೋಕವೈದುವ ಕಲಿಯು ದ್ವೇಷದಲಿ ॥**
**ಸತ್ಯಲೋಕಾಧಿಪ ಚತುರ್ಮುಖ ।**
**ತತ್ತ್ವದೇವರ್ಕಳಸಹಿತ ನಿಜ ।**
**ಮುಕ್ತಿಯೈದುವ ಹರಿಪದಾಬ್ಜವ ಭಜಿಸಿ ಭಕುತಿಯಲಿ ॥ ೩೦ ॥**

ಯಥಾ ಬ್ರಹ್ಮಪ್ರಜತ್ಯೇಕಃ ಪರಾಂತೇ ಮುಕ್ತಸಜ್ಜನೈಃ । ತಥೈವ ದುರ್ಜನೈಸ್ಸಾ ಕಂ ಪರಾಂತೇ ಕಲಿರೇಕ ಸಃ ತಮೋಂಧಂ ಯಾತಿ ನೈಕೋಪಿ ಕದಾಚಿದ್ಬಹಿರಾವ್ರಜೇತ್ ।

ಎಂಬ ವಾಕ್ಯವನ್ನನುಸರಿಸಿ ಯಾವತ್ತೂ ಜೀವರೊಳಗೆ ತಮಸ್ಸಿಗೆ ಹೋಗತಕ್ಕವರು ದಾರು, ಮುಕ್ತಿ ಎಂಬ ವೈಕುಂಠಕ್ಕೆ ಹೋಗತಕ್ಕವರು ದಾರು, ಎಂದರೆ ಅವರನ್ನ ಹೇಳತಾರೆ.

ನಿತ್ಯ–ಮಹಾಪ್ರಳಯಕಾಲಕ್ಕೂ, ನಾಶವಾಗದೆ ನಿತ್ಯವಾಗಿ ಇರತಕ್ಕ (ಆ ಲೋಕ ಭಾಗದಲ್ಲಿ ಇರತಕ್ಕ), ನಿರಯ – ನರಕ ಎನ್ನತಕ್ಕ ಲೋಕದಲ್ಲಿ ವಿದ್ಯಮಾನವಾದ, ಅಂಧಾಖ್ಯ–ಅಂಧಂತಮಸ್ಸು ಎಂಬ ನಾಮದಿಂದ ಪ್ರಸಿದ್ಧವಾದಂಥಾ, ಕೂಪದಿ–ಭಾವಿಯಲ್ಲಿ, ಭೃತ್ಯರಿಂದೊಡಗೂಡಿ–ತನಗೆ ಅವರರಾದ ದೈತ್ಯರಿಂದೊಡಗೂಡಿ, ಪುನರಾವರ್ತಿವರ್ಜಿತ ಲೋಕವೈದುವ – ಪುನಃ–ಮತ್ತು, ಆವರ್ತಿವರ್ಜಿತ–ಜನನಾ ಎಂಬುದು ಇಲ್ಲದ, ಲೋಕವ-ಅಂಧಂತಮೋಲೋಕವನ್ನು, ಐದುವ-ಹೊಂದುವ, ಕಲಿಯು–ಕಲಿಯಾದವನು (ಇಂಥಾ ಅಂಧಂತಮೋಲೋಕ, ಏತರಿಂದ ಪ್ರಾಪ್ತವಾಯಿತೆಂದರೆ), ದ್ವೇಷದಲಿ–ದ್ವೇಷದಿಂದ ಪ್ರಾಪ್ತವಾಗೋದಾಯಿತು. (ದಾರಲ್ಲಿ ದ್ವೇಷಮಾಡಿದರೆ ಎಂದರೆ, ಶ್ರೀ ಪರಮಾತ್ಮನಲ್ಲೂ, ಅವನ ಭಕ್ತರಲ್ಲೂ ದ್ವೇಷಮಾಡೋಣದರಿಂದ ಎಂತ ತಿಳಿಯಬೇಕು.) ಸತ್ಯಲೋಕಾಧಿಪ–ಸತ್ಯಲೋಕಕ್ಕೆ ಅರಸನಾದ, ಚತುರ್ಮುಖ–ಚತುರಾಸ್ಯನಾದ ಬ್ರಹ್ಮದೇವರು, ತತ್ತ್ವದೇವರ್ಕಳ ಸಹಿತ–ತತ್ತ್ವದೇವತೆಗಳ ಸಹಿತ (ಬ್ರಹ್ಮ ತನ್ನ ಸಂಗಡ ಮುಕ್ತರಾಗತಕ್ಕ ಯಾವತ್ತೂ ಜೀವರ ಸಹಿತವಾಗಿ), ನಿಜಮುಕ್ತಿಯೈದುವ–ಮಹಾಪ್ರಳಯಕಾಲದಲ್ಲೂ, ನಾಶವಾಗದೆ–ನಿಜವಾಗಿ ಇರತಕ್ಕ, ಅತ್ಯಂತ ಸುಖಕರವಾದ ಮುಕ್ತಸ್ಥಾನವಾದ ವೈಕುಂಠಲೋಕವನ್ನು ಹೊಂದುವನು. ಮತ್ತು ನಿಜ ಎಂದರೆ, ನೈಜವಾದ ಸ್ವರೂಪಾನಂದಭೋಗವೆಂಬ ಮುಕ್ತಿ, ತನ್ನ ಪರಿವಾರಸಹಿತ ತಾನು ಐದುವನು. ತಾರತಮ್ಯಾನುಸಾರ, ಅವರರಾದವರನ್ನು ಅವರವರ ಯೋಗ್ಯಸ್ಥಾನದಲ್ಲಿರಿಸಿ, ತನ್ನ ಯೋಗ್ಯಸ್ಥಾನವನ್ನು ತಾನು ಐದೋವನಾಗತಾನೆ. ಏತರಿಂದ ಇದು ಎಂದರೆ, ಹರಿಪದಾಬ್ಜವ ಭಜಿಸಿ–ಭಗವಂತನಲ್ಲಿ, ಅವನ ಭಕ್ತರಲ್ಲಿ ದ್ವೇಷದಿಂದ ರಹಿತನಾಗಿ ಬಿಂಬರೂಪಿ ಪರಮಾತ್ಮನ್ನ ಭಜಿಸೋಣದರಿಂದ ಆಗೋದಾಯಿತು. (ಆ ಭಜನಿ ಎಂಬುದು ಹ್ಯಾಂಗೆ ಮಾಡಿದರೆ ಎಂದರೆ) ಭಕುತಿಯಲಿ–ಏಕಾದಶೇಂದ್ರಿಯಗಳಿಂದ ಪರಮಾತ್ಮನಲ್ಲೇ ಸ್ನೇಹ ವಿಟ್ಟು ಭಜಿಸೋಣದರಿಂದ ಆಯಿತು. ಆದ್ದರಿಂದ ಪರಮಾತ್ಮನಲ್ಲಿ, ಅವನ ಭಕ್ತರಲ್ಲಿ, ದ್ವೇಷಮಾಡದೆ ಪರಮಾತ್ಮನ್ನ ಭಕ್ತಿಯಿಂದ ಭಜಿಸಿದರೆ ವೈಕುಂಠ ಪ್ರಾಪ್ತಿ, ತದ್ವಿಪರೀತರಿಗೆ ಅಂಧಂತಮ ಪ್ರಾಪ್ತಿ ಎಂಬುದರಲ್ಲಿ ಲೇಶಾಂಶ ಸಂಶಯವಿಲ್ಲ ಎಂತ ತಿಳಿಯಬೇಕು.

**ವಿಶೇಷಾರ್ಥ :–** ಒಂಬತ್ತುಕೋಟಿ ದೇವತೆಗಳು, ತತ್ತ್ವೇಶರು, ಒಂಬತ್ತು ಕೋಟಿ ದೈತ್ಯರು, ತತ್ತ್ವೇಶರು ಎಂದು ತಿಳಿಯಬೇಕು. ತಮೋಯೋಗ್ಯರು ಅಂಧಂತಮಸ್ಸಿನಲ್ಲಿ ದುಃಖವನ್ನ ದುಃಖತ್ವೇನ ಅನುಭವಮಾಡತಾರೇ ಹೊರ್ತು, ಸುಖತ್ವೇನ ಅನುಭವ ಮಾಡೋದಿಲ್ಲ. ಸುಖತ್ವೇನ ಅನುಭವ ಮಾಡಿದರೆ, ದುಃಖರೂಪ ಎಂಬ ವಾಕ್ಯ ಅನೃತವಾಗಬೇಕಾದೀತು. ವೈಕುಂಠಕ್ಕೆ, ತಮಸ್ಸಿಗೆ ವೈಲಕ್ಷಣ್ಯ ಇಲ್ಲಧಾಂಗೆ ಆಗತದೆ. ತಮಸ್ಸು ದುಃಖಕರವೇ, ವೈಕುಂಠ ಸುಖಕರವೇ ಸರಿ. ಭಗವದ್ದ್ವೇಷಿ

ಗಳಿಗೆ ದುಃಖವಾಗದೆ ಸುಖವೇ ಆಗೋಪಕ್ಷಕ್ಕೆ, ತಮಸ್ಸು ಶಿಕ್ಷಾರೂಪವಾಗಲಿಲ್ಲ. ದೇವರು ತನ್ನ ಭಕ್ತರಿಗೆ ಅತಿಶಯವೇನೂ ಮಾಡಿದಂತೆ ಆಗಲಿಲ್ಲ. ಅಸುರರು ಸುಖಕರವಾದ ವೈಕುಂಠಾದಿ ಲೋಕಗಳಲ್ಲಿ ಇರಬಹುದು, ಇತ್ಯಾದಿ ಪೂರ್ವಪಕ್ಷ ಗಳು ಬರೋವಾಗತವೆ. ಅತ ಏವ, ತಮಸ್ಸು ದುಃಖಕರವಾದದ್ದು. ತದ್ಗತರಾದವರು ದುಃಖಾನುಭವ ಮಾಡತಕ್ಕವರಾಗೇ ಇರಬೇಕು. ಸುಖ ಲೇಶವೂ ಇಲ್ಲ, ಆದರೆ, 'ದುಃಖೇಪಿ ಸುಖಮಾನಿನಃ' ಎಂಬ ವಚನಕ್ಕೆ ಸಾರ್ಥಕ್ಯವೇನೆಂದರೆ, ಇದರ ಪ್ರತೀತಾರ್ಥಃ ದುಃಖ, ಭೋಗದಲ್ಲಿ ಆದರೂ, ಸುಖಾಭಿಮಾನದಿಂದ ಅನುಭವಿಸುತ್ತಾರೆಂತ ಅರ್ಥ ವಾಗುತ್ತದೆ. ಎಂದರೆ ಇದೇ ದುಃಖವೇ ತಮಗೆ ಸುಖ ಎಂತ, ಅನುಭವಿಸುತ್ತಾರೆಂತ ತಾತ್ಪರ್ಯವಾಗತದೆ. ಅದು ಅಲ್ಲ. ದುಃಖೇ–ದುಃಖರೂಪವಾದ ಅಂಧಂತಮಸ್ಸಿನಲ್ಲಿ ಭೋಗಿಸತಕ್ಕ ದುಃಖದಲ್ಲಿ, ಅಪಿ–ಮತ್ತು, ಸುಖ–ಸುಖ ಭೋಗಮಾಡಬೇಕೆಂಬ, ಮಾನಿನಃ–ಅಭಿಮಾನಿಗಳಾಗಿ ಇರ್ತಾರೆ. ಅದು ಹ್ಯಾಂಗೆಂದರೆ, ಸುಖಜ್ಞಾನ ಹೊರ್ತು ದುಃಖಜ್ಞಾನವಾಗೋದಿಲ್ಲ. ಸುಖಪಟ್ಟ ಪುರುಷನಿಗೆ ದುಃಖ ಪ್ರಾಪ್ತವಾದರೆ ಸುಖ. ಇಂಥಾದ್ದು, ದುಃಖ ಇಂಥಾದ್ದು ಎಂತ ಎರಡೂ ಜ್ಞಾನ, ಸ್ವಾನುಭವದಿಂದ ಆಗೋದಾಗತದೆ ಇದು ಪ್ರತ್ಯಕ್ಷಾನುಭವ. ತದ್ವತ್, ತಮೋಯೋಗ್ಯರು ಸ್ಥಿತಿಕಾಲದಲ್ಲಿ ಮಹಾಸುಖ ಭೋಗಮಾಡಿರುತ್ತಾರೆ. ತಮಸ್ಸಿನಲ್ಲಿ ದುಃಖ ಭೋಗಮಾಡೋಕಾಲದಲ್ಲಿ, ಪೂರ್ವದ ಸುಖ ಸ್ಮೃತಿಗೆ ಬಂದು, ಆ ಅಂಧಂತಮದಲ್ಲಾದರೋ ಸುಖಮಾನಿನಃ–ಈ ದುಃಖ ಹೋಗಿ ಪೂರ್ವದೋಪಾದಿಯಲ್ಲಿ ಸುಖವಾಗಬೇಕೆಂಬ ಅಭಿಮಾನಿಗಳಾಗಿ ಇರುತ್ತಾರೆಂತ ತಾತ್ಪರ್ಯ. ಸುಖ, ಸ್ಮರಣೆಗೆ ಬಂಥಾಂಗೆಲ್ಲಾ, ದುಃಖ, ಅಧಿಕವಾಗಿ ಭೋಗಿಸೋವ ರಾಗತಾರೆ. ಆದ್ದರಿಂದ ದುಃಖೇಪಿ ಸುಖ ಮಾನಿನಃ ಎಂತ ಕರಸೋವರಾಗಿ, ದುಃಖ ದುಃಖತ್ವೇನ ಅನುಭವಸ್ತಾರೇ ಹೊರ್ತು, ಸುಖತ್ವೇನ ಅನುಭವಿಸೋದಿಲ್ಲ. ಅವರ ಸ್ವರೂಪವೇ ದುಃಖಸ್ವರೂಪವಾದ್ದರಿಂದ, ತಮಸ್ಸಿನಾಗೇ ಇರಲಿ, ಪರಮಾತ್ಮನ ಉದರದಲ್ಲೇ ಇರಲಿ, ಸರ್ವದಾ ದುಃಖ ಭೋಗವೇ ಹೊರ್ತು ಸುಖವಿಲ್ಲ. ಮುಕ್ತರಿಗೆ ವೈಕುಂಠದಲ್ಲೇ ಇರಲಿ, ಪರಮಾತ್ಮನ ಉದರದಲ್ಲೇ ಇರಲಿ ಸರ್ವದಾ ಸುಖ ಹ್ಯಾಂಗೋ, ತದ್ವತ್, ಲಿಂಗಭಂಗರಾದ ಅಸುರರು ದುಃಖಜ್ಞಾನದಿಂದಲೇ ದುಃಖ ಭೋಗಿಸುತ್ತಾರೆ.

ಪ್ರಮಾಣ :– ಯತ್ ನಿತ್ಯತಮೋನಿಷ್ಠಾಃ ಪಾಪರೂಪಾಃ ಸ್ವಭಾವತಃ | ಚೋರತ್ವೇ ಕಲ್ಪಯಾಮಾಸ ದಂಡಯಾಮಾಸ ತಾನಪಿ || ಇತಿ ವಿಷ್ಣುರಹಸ್ಯೇ.

ಅರ್ಥ :– ನಿತ್ಯ–ನಿತ್ಯವಾದ, ತಮಃ–ತಮಸ್ಸಿನಲ್ಲಿ, ನಿಷ್ಠಾಃ–ನಿಷ್ಠರಾದ, ಸ್ವಭಾ ವತಃ–ಸ್ವರೂಪ ಸ್ವಭಾವದೆಶೆಯಿಂದ, ಪಾಪರೂಪಾಃ–ಪಾಪರೂಪರಾದಂಥಾ, ಯತ್– ದಾವ ಅಸುರರ, ಚೋರತ್ವೇ–(ಶುದ್ಧ ಸತ್ತ್ವಸ್ವರೂಪರಾಗಿ ಮುಕ್ತರಾದವರ, ಆದಿಸೃಷ್ಟಿ ಯಲ್ಲಿ ಸೃಷ್ಟಿಮಾಡಿ ಅವರಸಂಗಡ ಪರಮಾತ್ಮ ವಿಹಾರಕಾಲದಲ್ಲಿ), ಇವರನ್ನ ಉದರದಿಂದ ಹೊರತೆಗೆದು ಚೋರರನ್ನಾಗಿ, ಕಲ್ಪಯಾಮಾಸ–ಕಲ್ಪನಮಾಡಿ, ತಾನಪಿ–ಆ ಪಾಪ

ಸ್ವರೂಪರ, ದಂಡಯಾಮಾಸ–ಶಿಕ್ಷಿಸೋವನಾಗತಾನೆ. ಶುದ್ಧಸತ್ತ್ವನಿರ್ಮಿತ ಪದಾರ್ಥ ಗಳ ನೋಡಿ, ಸುಖಕ್ಕೆ ಯೋಗ್ಯವಾದದ್ದು ಎಂಬ ಜ್ಞಾನದಿಂದ ಚೋರತ್ವಕ್ಕಾಗಿ ಬಂದವರ ಶಿಕ್ಷಿಸುತ್ತಾನೆ, ಎಂದಮ್ಯಾಲೆ ಸುಖಜ್ಞಾನ, ದುಃಖಜ್ಞಾನ ಅವರಿಗೆ ಎರಡೂ ಇರೋವಾಗಿ ಅವೆ. ದುಃಖಾನುಭವಕಾಲದಲ್ಲಿ 'ಕೃಷ್ಣನಿಂದ ಮಹಾದುಃಖ ಪ್ರಾಪ್ತವಾಯಿತು. ತಮಸ್ಸಿನಿಂದ ಹೊರಗೆ ಬರೋಣವೇ ಅವನ ನಿರ್ಮೂಲಮಾಡತೇನೇ' ಎಂತ, ಇಂಥಾ ದ್ವೇಷಾತಿಶಯವಾದ ಉಕ್ತಿಗಳ ಉಚ್ಚರಿಸುತ್ತಾ ಇರ್ತಾರೆ. ಆದ್ದರಿಂದ ದುಃಖಜ್ಞಾನ ದಿಂದಲೇ ದುಃಖಾನುಭವವೆಂದು ಸಿದ್ಧವು. ದುಃಖಕರವಾದ ವಿಪರೀತ ಜ್ಞಾನದಲ್ಲಿ ಏಕೆ ಪ್ರವರ್ತಿಸುತ್ತಾರೆ ಎಂದರೆ, ಅವರ ಅನಾದಿಸ್ವರೂಪಸ್ವಭಾವ ಅಂಥಾದ್ದೇ ಆದ್ದರಿಂದ, ವಿಪರೀತ ಜ್ಞಾನದಲ್ಲಿ ಪ್ರವರ್ತಿಯು. (ದೃಷ್ಟಾಂತ): ಕ್ರಿಮಿವಿಶೇಷಗಳು ಅಗ್ನಿಗಳ ಜ್ವಾಲಾ ತಮಗೆ ದುಃಖಕರವಾದಾಗ್ಯೂ, ಆ ಜ್ವಾಲಾ ನೋಡಿ ಇದು ತಮಗೆ ಸುಖಕರ ವಾದದ್ದು ಎಂತ, ಆಶಾದಿಂದ ಅಗ್ನಿಯನ್ನು ಭಕ್ಷಿಸೋದಕ್ಕೆ ಬಂದು, ದುಃಖ ಐದಿದಂತೆ, ತಮೋಯೋಗ್ಯರ ಸ್ವರೂಪಸ್ವಭಾವವನ್ನನುಸರಿಸಿ ವಿಪರೀತ ಜ್ಞಾನ ತಮಗೆ ಸುಖ ಕೊಡತಕ್ಕದ್ದೆಂದು ಅದರಲ್ಲಿ ಪ್ರವೇಶಿಸಿ, ಪರಿಯವಸಾನದಲ್ಲಿ ದುಃಖ ಭೋಗಮಾಡತಾರೆ. ಹೀಂಗೆ ಯಾಕೆ ಆಗಬೇಕೆಂದರೆ, ಈಶ್ವರನಿಂದ ರಚಿತವಲ್ಲದ ಅವರ ಅನಾದಿಸ್ವರೂಪಸ್ವಭಾವವೇ ಅಂಥಾದ್ದು. ಆದ್ದರಿಂದ ಅದಕ್ಕೆ ಅನ್ಯಥಾ ಆಗೋದಿಲ್ಲ ಎಂತ ತಾತ್ಪರ್ಯ.

**ವಿಧಿನಿಷೇಧಗಳೆರಡು ಮರೆಯದೆ ।**
**ಮಧುವಿರೋಧಿಯ ಪಾದಕರ್ಪಿಸ ।**
**ಲದಿತಿಮಕ್ಕಳಿಗೀವ ಪುಣ್ಯವ ಪಾಪ ದೈತ್ಯರಿಗೆ ॥**
**ಸುದರ್ಶನಧರಗೀಯದಿರೆ ಬಂ ।**
**ದೊದಗಿ ಒಯ್ವರು ಪುಣ್ಯ ದೈತ್ಯರು ।**
**ಅಧಿಪರಿಲ್ಲದ ವೃಕ್ಷಗಳ ಫಲದಂತೆ ನಿತ್ಯದಲಿ ॥ ೩೧ ॥**

ದ್ವಂದ್ವಕರ್ಮಗಳ ಪರಮಾತ್ಮಗೆ ಅರ್ಪಿಸದೆ ಹೋದರೆ, ಪುಣ್ಯವು ಉಳಿಯೋದಿಲ್ಲ. ಪಾಪವೂ ಅಳಿಯೋದಿಲ್ಲ. ಆದ್ದರಿಂದ ಪುಣ್ಯ ಉಳಿಯಬೇಕಾದರೂ, ಪಾಪ ಅಳಿಯಬೇಕಾದರೂ, ದ್ವಂದ್ವಕರ್ಮ ಪರಮಾತ್ಮಗೆ ಅರ್ಪಿಸಬೇಕೆಂದು ಹೇಳತಾರೆ.

ವಿಧಿನಿಷೇಧಗಳೆರಡು ಮರೆಯದೆ– ವಿಧಿ–ಪುಣ್ಯಕರ್ಮಗಳೇನು, ನಿಷೇಧ–ಪಾಪ ಕರ್ಮಗಳೇನು, ಎರಡು – ಇವುಗಳು ಎರಡೂನೂ, ಮರೆಯದೆ – ದ್ವಂದ್ವಸಹನಾದಲ್ಲಿ, ವಿಸ್ಮೃತನಾಗದೆ, ಮಧುವಿರೋಧಿಯ – ಮಧುನಾಮಕ ದೈತ್ಯಗೆ ವಿರೋಧಿಯಾದ ಪರಮಾತ್ಮನಾದ ಕೃಷ್ಣನ, ಪಾದಕರ್ಪಿಸಲು–ಪಾದಗಳಿಗೆ ಅನುಸಂಧಾನದಿಂದ ಅರ್ಪಣೆ ಮಾಡಿದರೆ, ಅದಿತಿ ಮಕ್ಕಳಿಗೀವ ಪುಣ್ಯವ–ಪೂರ್ವೋಕ್ತಪ್ರಕಾರ ಜೀವನಯೋಗ್ಯತಾಕ್ಕೆ ಅನುಸರಿಸಿ ಕೊಟ್ಟದ್ದು ಹೋಗತಾ ಉಳಿದ ಪುಣ್ಯವನ್ನ, ಅದಿತಿ ಮಕ್ಕಳಾದ ದೇವತೆಗಳಿಗೆ ಕೊಡೋವನಾಗತಾನೆ. (ಎಷ್ಟುಮಂದಿ ದೇವತೆಗಳು ಜೀವನಕಡಿಯಿಂದ ಪುಣ್ಯಕರ್ಮ

ಮಾಡಸತಾರೋ, ಆ ಯಾವತ್ತೂ ಮುಂದಿಗೆ ಪುಣ್ಯವಿಭಾಗ ಎಂತ ತಾತ್ಪರ್ಯ). ಪಾಪ ದೈತ್ಯರಿಗೆ, ಈವ–ಪೂರ್ವೋಕ್ತಪ್ರಕಾರ ಜೀವರಿಗೆ ಕೊಟ್ಟ ಪಾಪ ಹೋಗತಾ ಉಳದದ್ದು, ದೈತ್ಯರಿಗೆ ಕೊಡತಾನೆ (ದಾವ ದೈತ್ಯರು ಜೀವನಕಡಿಯಿಂದ ಪಾಪಕರ್ಮ ಮಾಡಸತಾರೊ, ಅವರಿಗೆ ವಿಭಾಗ ಎಂತ ಅರ್ಥ. ಮತ್ತು ಜೀವರಿಗೆ ಉಳಿಸಿದ್ದು ಪೂರ್ವೋಕ್ತ ಶ್ಲೋಕಗಳಲ್ಲಿ ಹೇಳಿದ ಪ್ರಕಾರ, ನಾಶ ಐದಿಸುತ್ತಾನೆ), ಸುದರ್ಶನಧರಗೀಯದಿರೆ–ಚಕ್ರಧಾರಿಯಾದ ಪರಮಾತ್ಮಗೆ (ಪುಣ್ಯವ) ಅನುಸಂಧಾನದಿಂದ ಅರ್ಪಣೆಮಾಡದೆಹೋದರೆ, ಬಂದೊದಗಿ ಒಯ್ವರು ಪುಣ್ಯ ದೈತ್ಯರು – ಮೆಲ್ಲಮೆಲ್ಲಗೆ ಸಮೀಪಕ್ಕೆ ದೈತ್ಯರೇ ಬಂದು ಪುಣ್ಯವನ್ನ ಅಪಹಾರಮಾಡತಾರೆ. ಜೀವನಭಾಗಕ್ಕೆ ಬಂದ ಲೇಶ ಪುಣ್ಯವಾದರೂ ಉಳಿಸೋದಿಲ್ಲ. ಅಂದರೆ ಪರಿಮಳದ್ರವ್ಯ ಕಟ್ಟಿದ್ದ ವಸ್ತ್ರದಿಂದ ಪರಿಮಳದ್ರವ್ಯವೈದರೆ (ತೆಗೆದುಕೊಂಡು ಹೋಗಿಬಿಟ್ಟರೆ, ಬೇರ್ಪಡಿಸಿದರೆ), ದ್ರವ್ಯ ಅಪಹೃತವಾದರೂ ಪರಿಮಳ ಹತ್ತಿದ್ದಂತೆ ಮಾತ್ರ ಉಳದಿರ್ತದೆ, ಎಂತ ತಾತ್ಪರ್ಯ. ಹೀಗೆ ದೈತ್ಯರು ಅಪಹರಿಸಿದ ಪುಣ್ಯವ ಅವರಿಗೆ ದಕ್ಕ ಕೊಡದೇ, ವಾಯುದೇವರು ತಾವು ಅಪಹರಿಸಿ, ಭಗವದರ್ಪಣಮಾಡತಾರೆ. ಭಗವಂತ ಸ್ವೀಕಾರಮಾಡಿ ಯಾವತ್ತೂ ದೇವಗಣಕ್ಕೆ, ಯೋಗ್ಯತಾನುಸಾರ ವಿಭಾಗಮಾಡಿ ಕೊಡ ತಾನೆ. ಜೀವಗೆ ಪುಣ್ಯವೇ ಇಲ್ಲದಾಗಿ, ಪೂರ್ವೋಕ್ತಪ್ರಕಾರ ಲೇಶ ಉಳಿಯೋದಾಯಿತು. ಪಾಪಗಳ ದೈತ್ಯರು ಅಪಹಾರಮಾಡೋದಿಲ್ಲ ಆದ್ದರಿಂದ ಜೀವಗೆ ಪಾಪಗಳು ಉಳಿದೇ ಇರ್ತವೆ. ತನ್ನಭಾಗದ ಲೇಶ ಪಾಪವೇನು, ದೈತ್ಯರಿಗೆ ಭಾಗವಾಗಿ ಹೋಗತಕ್ಕ ಪಾಪ ವೇನು, ಎರಡೂ ಜೀವನ್ನ ಸುತ್ತಿಕೊಂಡು ಪರಿಹಾರವಾಗೋದಕ್ಕೆ ಮಾರ್ಗವಿಲ್ಲದಾಯಿತು. ಆದ್ದರಿಂದ ಪಾಪಕರ್ಮವ ಭಗವಂತಗೆ ಅರ್ಪಣೆಮಾಡಿದರೆ, ಲೇಶಭಾಗ ಜೀವಗೆ ಉಳಿಸಿ, ಉಳಿದಭಾಗ ದೈತ್ಯರಿಗೆ ವಿಭಾಗಮಾಡಿ ಕೊಡತಾನೆ. ಜೀವನ ಲೇಶಭಾಗ ಪಾಪವನ್ನ ತನ್ನ ಅನುಗ್ರಹದಿಂದ ನಾಶಮಾಡತಾನೆ. ಆದ್ದರಿಂದ, ದ್ವಂದ್ವಕರ್ಮ ಅನುಸಂಧಾನ ಪೂರ್ವಕ ಭಗವಂತಗೆ ಅರ್ಪಣೆ ಮಾಡದೇಹೋದರೆ ಪುಣ್ಯ ಲಾಭವಾಗೋದಿಲ್ಲ, ಪಾಪ ಪರಿಹಾರವಾಗೋದಿಲ್ಲ. ಆದಕಾರಣ ದ್ವಂದ್ವಕರ್ಮ ಅರ್ಪಣೆಮಾಡಬೇಕು ಎಂತ ತಾತ್ಪರ್ಯ. ಅಧಿಪರಿಲ್ಲದ ವೃಕ್ಷಗಳ ಫಲದಂತೆ ನಿತ್ಯದಲಿ–ಅಧಿಪರು ಅಥವಾ ನಾಥರು ಇಲ್ಲದಂಥಾ ಗಿಡದಲ್ಲಿ ವಿದ್ಯಮಾನವಾದ ಫಲಗಳ ಅನ್ಯರು ಅಪಹಾರಮಾಡೋಪಾದಿಯಲ್ಲಿ, ದೇಹಾಖ್ಯ ವೃಕ್ಷಗತ ಪುಣ್ಯಫಲಗಳ ಅನ್ಯರಾದ ದೈತ್ಯರು ಅಪಹಾರಮಾಡದಂತೆ, ಅಧಿಪ ನಾದ ಪರಮಾತ್ಮನ ವಶಮಾಡಿ, ಕಾಪಾಡಬೇಕೆಂದು ಪ್ರಾರ್ಥನಾಮಾಡಿದರೆ, ಅನ್ಯರು ಅಪಹರಿಸದಂತೆ ಕಾವಲು ಇದ್ದು, ಆ ಫಲವನ್ನ ಜೀವಗೆ ಭೋಗಕ್ಕೆ ತಂದುಕೊಡತಾನೆ. ಇಲ್ಲದಿದ್ದರೆ ಪ್ರತಿದಿನದಲ್ಲಿ ಮಾಡತಕ್ಕ ಪುಣ್ಯಫಲಗಳ, ದೈತ್ಯರು ಅಪಹರಿಸುತ್ತಾರೆ. ಈ ಕಾರಣದಿಂದ ದ್ವಂದ್ವಕರ್ಮ ಭಗವದರ್ಪಣೆಮಾಡಬೇಕೆಂದು ಸಿದ್ಧವು.

ಪ್ರಮಾಣ :– ಯಥಾ ಹ್ಯನಾಥವೃಕ್ಷಾದಿಃ ಪೀಡ್ಯತೆ ನಿಖಿಳೈರಪಿ । ರಾಜ್ಞಾ ಪರಿಗೃಹೀತೋ ಯಸ್ತಸ್ಮಾನ್ನ ಪಶ್ಯತಿ ಕಶ್ಚನ । ಸಂಕೀರ್ಣನಾನಾವಿಧಪಾತಕಾನಾಂ ನಿವೃತ್ತಿಮಿಚ್ಛನ್ ಶರಣಂ ಪ್ರಜೇದ್ಧರಿಂ । ದಯಾಳುರೇತಾನಿ ನಿಬರ್ಹ್ಯ ಶೀಘ್ರಂ

ಗುರೂಣಿ ಪಾಪಾನಿ ಲಘೂಕರೋತಿ | ಪುಣ್ಯಾಪಾಪನಿವೃತ್ತಿಂ ಚ ತಾವತ್ಕುರ್ಯಾದ್ಧರಿಂ ಸ್ಮರನ್ || ತಸ್ಮಿನ್ ಅನರ್ಪಿತಂ ಪುಣ್ಯಂ ತದ್ವಿಲುಂಪಂತಿ ರಾಕ್ಷಸಾಃ || ಎಂಬ ತಾತ್ಪರ್ಯದ ಅರ್ಥ ವಿವರಿಸಿತು.

**ತಿಲಜಕಶ್ಮಲ ತ್ಯಜಿಸಿ ದೀಪವು |**
**ತಿಳಿಯತೈಲವ ಗ್ರಹಿಸಿ ಮಂದಿರ |**
**ದೊಳಗೆ ವ್ಯಾಪಿಸಿಯಿಪ್ಪಕತ್ತಲೆ ಭಂಗಿಸುವ ತೆರದಿ ||**
**ಕಲಿಮೊದಲುಗೊಂಡಖಿಳ ದಾನವ |**
**ಕುಲಜರನುದಿನ ಮಾಳ್ಪ ಪುಣ್ಯಜ |**
**ಫಲವ ಬ್ರಹ್ಮಾದ್ಯರಿಗೆ ಕೊಟ್ಟಲ್ಲಲ್ಲೆ ರಮಿಸುವನು || ೩೨ ||**

ಭಗವದ್ದ್ವೇಷಿಗಳ ದೇಹಗತ ತತ್ತ್ವನಿಯಾಮಕ ಬ್ರಹ್ಮಾದಿ ದೇವತೆಗಳಿಗೆ, ಪುಣ್ಯ ಭಾಗ ವಿಚಾರ ಹೇಳತಾರೆ.

ದೀಪವು–ದೀಪವಾದುದು ಏನುಮಾಡುತ್ತದೆ ಎಂದರೆ, ತಿಲಜ–ಎಳ್ಳಿನಿಂದ ಉತ್ಪನ್ನ ವಾದದ್ದು ಒಳ್ಳೇಎಣ್ಣೆ, ಇದರಲ್ಲಿ, ಕಶ್ಮಲ–ಕಶ್ಮಲ ಸಾಂಕೇತವಾದ ಗಸಿ, ತಿಳಿಯ–ತಿಳಿ ಎಣ್ಣೆ ಎರಡೂ ಕಲತು ಅವೆ. ಹಾಂಗೆ ಕಲತು ಇದ್ದದ್ದರೊಳಗೆ, ತ್ಯಜಿಸಿ–ಕಶ್ಮಲವಾದ ಎಣ್ಣೆಯನ್ನು ಬಿಟ್ಟು, ತೈಲವ ಗ್ರಹಿಸಿ–ಎಣ್ಣೆಮಾತ್ರ ಸ್ವೀಕಾರಮಾಡಿ, ಮಂದಿರದೊಳಗೆ– ಮನಿಯೊಳಗೆ, ವ್ಯಾಪಿಸಿಯಿಪ್ಪ–ಪ್ರಕಾಶರೂಪದಿಂದ ವ್ಯಾಪಿಸಿ ಇರತಕ್ಕ, ಕತ್ತಲೆ ಭಂಗಿ ಸುವತೆರದಿ–ಅಂಧಕಾರವನ್ನು ಪರಿಹಾರಮಾಡೋಪಾದಿಯಲ್ಲಿ, ಕಲಿ ಮೊದಲುಗೊಂಡು– ಕಲಿ ಆರಂಭಮಾಡಿ, ಅಖಿಳದಾನವ–ಸಮಸ್ತ ದೈತ್ಯರು ಮತ್ತು ಕುಲಜರು–ಈ ದೈತ್ಯರ ಕುಲದಲ್ಲಿ ಉತ್ಪನ್ನರಾದ ದೇವಯೋನಿಜರಾದ ಆಜಾನಜ ದೇವತೆಗಳೊಳಗೆ ಸದೃಶರಾದ ಅಸುರರು, ಈ ಯಾವತ್ತೂ ಮಂದಿ ದೈತ್ಯರು, ಅನುದಿನ ಮಾಳ್ಪ–ಪ್ರತಿದಿನ, ಪ್ರತಿ ಕ್ಷಣದಲ್ಲಿ ಮಾಳ್ಪ, ಪುಣ್ಯಜ ಫಲವ–ಉಪಲಕ್ಷಣಯಾ ದೃಷ್ಟಾಂತಲಕ್ಷಣಯಾ ದೀಪಸದೃಶ ಪರಮಾತ್ಮ; ಈ ಪರಮಾತ್ಮನೆಂಬೋ ದೀಪ, ಗಸಿ ಸದೃಶವಾದ ದೈತ್ಯರ ಪಾಪಗಳ ತಾನು ಸ್ವೀಕಾರಮಾಡದೆ, ಅವರಿಗೇ ಉಳಿಸಿ, ದೈತ್ಯರಿಂದ ಅನಾದಿಕರ್ಮವನುಸರಿಸಿ ಮಾಡಿಸಿದ, ಪುಣ್ಯಕರ್ಮದಿಂದ ಜನಿತವಾದ ತೈಲಸದೃಶವಾದ ಪುಣ್ಯಫಲಗಳ, ತಾನು ಆಕರ್ಷಣೆಮಾಡಿ, ಬ್ರಹ್ಮಾದ್ಯರಿಗೆ ಕೊಟ್ಟು–ಈ ದೈತ್ಯರ ದೇಹಗತ ಬ್ರಹ್ಮಾದಿ ತತ್ತ್ವ ದೇವತೆಗಳಿಗೆ ಕೊಡೋವನಾಗಿ, ಅಲ್ಲಲ್ಲೆ ರಮಿಸುವನು–ಆಯಾ ದೇವತಿಗಳಲ್ಲೇ ರಮಿಸುತ್ತಾ ಇರತಾನೆ.

**ತಾ||** ದೀಪಸದೃಶನಾದ ಪರಮಾತ್ಮ, ದೇವತೆಗಳ ದೇಹಾಖ್ಯ ಮನಿಯಲ್ಲಿ ತನ್ನ ಕಟಾಕ್ಷವೆಂಬ ಪ್ರಕಾಶದಿಂದ, ಅಂಧಕಾರವೆಂಬ ಅಜ್ಞಾನ ಪರಿಹಾರಮಾಡಿ ರಮಿಸುತ್ತಾನೆ. ಮನಿಯಲ್ಲಿ ದೀಪ ಇದ್ದರೂ ಕೆಲವುಕಡಿ ಭಿತ್ತ್ಯಾದಿ (ಗೋಡೆ) ಪ್ರತಿಬಂಧಕದಿಂದಲೂ,

ದೂರ ದೋಷದಿಂದಲೂ, ದೀಪದಿಂದ ಅಂಧಕಾರ ಹ್ಯಾಂಗೆ ಪರಿಹಾರವಿಲ್ಲವೋ ತದ್ವತ್, ದೈತ್ಯರಿಗೆ ಸ್ವರೂಪಭೂತ ಅಜ್ಞಾನ ಪ್ರತಿಬಂಧಕದಿಂದಲೂ, ಸಮೀಚೀನ ಜ್ಞಾನದಿಂದ ದೂರವಾಗಿಯೇ ಇರೋಣದರಿಂದಲೂ, ಪರಮಾತ್ಮನ ಕಟಾಕ್ಷಾಖ್ಯಪ್ರಕಾಶ ದೈತ್ಯರಿಗೆ, ದೇಹಾಖ್ಯ ಗೃಹದಲ್ಲಿ ಪ್ರಸರಿಸದೆ ಅಜ್ಞಾನರೂಪವಾದ ಅಂಧಕಾರವೇ ದಾವಾಗ್ಯೂ ಇರುತ್ತದೆ. ಇವರ ಪಾಪದಲ್ಲಿ ದೇವತೆಗಳಿಗೆ ಭಾಗವಿಲ್ಲ. ಪುಣ್ಯವಿಭಾಗ ಯಾವತ್ತೂ ದೇವತೆಗಳಿಗೆ ಸೇರಿ ಅತ್ಯಲ್ಪ ಉಳದದ್ದು, ಪ್ರತೀತದಲ್ಲಿ ಸುಖವಾಗಿ ತೋರತಾ ಇರಬೇಕು ಭೋಗದಲ್ಲಿ ಸರ್ವವೂ ದುಃಖಕರವಾಗಿಯೇ ಇರಬೇಕು. ಇಂಥಾ ಫಲವನ್ನ ದೇವರು ಕೊಡತಾನೆಂತ ತಾತ್ಪರ್ಯ.

**ಇದ್ದಲೆಯು ನಿತ್ಯದಲಿ ಮೇಧ್ಯಾ ।**
**ಮೇಧ್ಯವಸ್ತುಗಳುಂಡು ಲೋಕದಿ ।**
**ಶುದ್ಧಶುಚಿ ಎಂದೆನಿಸಿಕೊಂಬನು ವೇದಸ್ಮೃತಿಗಳೊಳು ॥**
**ಬುದ್ಧಿಪೂರ್ವಕವಾಗಿ ವಿಬುಧರು ।**
**ಶ್ರದ್ಧೆಯಿಂದರ್ಪಿಸಿದ ಕರ್ಮ ನಿ ।**
**ಷಿದ್ಧವಾದರು ಸರಿಯೆ ಕೈಕೊಂಡುದ್ಧರಿಸುತಿಪ್ಪ ॥ ೩೩ ॥**

ಪರಮಾತ್ಮ ತನ್ನ ಭಕ್ತರು ಸಮರ್ಪಿಸಿದ ಪುಣ್ಯ ಪಾಪಗಳನ್ನು ತಾನು ತೆಗೆದುಕೊಂಡು, ನಿರ್ದೋಷನಾಗಿರುವನೆಂದು ಸದೃಷ್ಟಾಂತವಾಗಿ ಹೇಳತಾರೆ.

ಇದ್ದಲೆಯು–ಎರಡು ಶಿರಸ್ಸುಗಳುಳ್ಳ ಅಗ್ನಿದೇವರು, ನಿತ್ಯದಲಿ–ಪ್ರತಿದಿವಸದಲ್ಲಿ, ಜನರಿಂದ ಹಾಕಲ್ಪಟ್ಟ, ಮೇಧ್ಯ–ಸಮೀಚೀನವಾದ ಪದಾರ್ಥಗಳೇನು, ಅಮೇಧ್ಯ–ಅಸಹ್ಯಕರವಾದ ಪದಾರ್ಥಗಳೇನು, ವಸ್ತುಗಳುಂಡು–ಈ ಉಭಯದ್ರವ್ಯಗಳನ್ನ ಭೋಜನ ಮಾಡಿ, ಲೋಕದಿ–ಈ ಪ್ರಪಂಚದಲ್ಲಿ, ಶುಚಿ–ಒಳ್ಳೇ ಶುಚಿ ಆದವರು ಎಂತಲೂ, ಶುದ್ಧ–ನಿರ್ದೋಷಿ ಎಂತಲೂ, ಎಂದೆನಿಸಿಕೊಂಬನು–ಈ ಪ್ರಕಾರ ಸರ್ವರಿಂದ ಕರಿಸಿಕೊಳ್ಳಲ್ಪಡುತ್ತಾರೆ. ಶ್ರದ್ಧೆಯಿಂದ–ಆತ್ಯಾಶದಿಂದ ಯುಕ್ತರಾಗಿ, ಪರಮಾತ್ಮನಲ್ಲಿ ಮಾಹಾತ್ಮ್ಯ ಪೂರ್ವಕ ಸುದೃಢಸ್ನೇಹದಿಂದ ಯುಕ್ತರಾಗಿ, ವಿಬುಧರು–ಜ್ಞಾನಿಗಳು, ಬುದ್ಧಿಪೂರ್ವಕವಾಗಿ–ಮನಸ್ಸಿಗೆ ಪಾಪ ಎಂತ ತಿಳದು ಮಾಡತಾರೆ. ಅನಾದಿಕರ್ಮ ಪರಂಪರಾದಿಂದ, ಕರ್ಮವೈಚಿತ್ರ ಆ ರೀತಿಯಾಗಿರೋದ್ದರಿಂದ, ಅದನ್ನನುಸರಿಸಿ ಪಾಪಕರ್ಮಗಳು ಜೀವರಿಗೆ, ಅವು ಪಾಪಕರ್ಮವೆಂದು ತಿಳಿಸಿ, ದೇಹದ್ವಾರಾ ಮಾಡಸತಾನೆ. ಇತ್ಯಾದಿ ಅನುಸಂಧಾನದಿಂದ ಅತ್ಯಂತ ಆದರದಿಂದ, ವೇದಸ್ಮೃತಿಗಳೊಳು–ಅಪೌರುಷೇಯವಾದ ವೇದವೇನು, ಪೌರುಷೇಯವಾದ ಪುರಾಣಗಳೇನು, ಇವುಗಳಲ್ಲಿ ಹೇಳಿದಪ್ರಕಾರ ಅನುಸಂಧಾನಯುಕ್ತನಾಗಿ, ಅರ್ಪಿಸಿದ–ಸಮರ್ಪಣೆಮಾಡಿದ, ಕರ್ಮ (ಇದು ಪುಣ್ಯಕರ್ಮವಾದರೆ ವಿಚಾರವಿಲ್ಲ), ನಿಷಿದ್ಧವಾದರು ಸರಿಯೆ–ನಿಷಿದ್ಧವಾದ ಪಾಪಕರ್ಮವಾದರೂ ಸರಿಯೆ, ದಾವ ಕರ್ಮವಾದ ಕಾಲಕ್ಕೂ, ಅಗ್ನಿಯೋಪಾದಿಯಲ್ಲಿ, ಕೈಕೊಂಡು–ತಾನು ಸ್ವೀಕಾರಮಾಡಿ,

ಉದ್ಧರಿಸುತಿಪ್ಪ–ತಾನು ವಿಕಾರ ಐದದೆ, ಅರ್ಪಿಸಿದವರಿಗೆ ಜ್ಞಾನ ಭಕುತಿ ವೈರಾಗ್ಯಗಳ ಅತಿಶಯವಮಾಡುತ್ತಾ, ಅಜ್ಞಾನಬಾಧಾ ಇಲ್ಲದಂತೆ ಉದ್ಧಾರಮಾಡುತ್ತಾ ಜೀವನ ಸ್ಥೂಲದೇಹದಲ್ಲಿ, ಇರೋವನಾಗಿದ್ದಾನೆ. (ಇವನಿವನ ಅನುಸಂಧಾನ ಧಾರುಢ್ಯ ಹ್ಯಾಂಗೆ ಹ್ಯಾಂಗೆ ಅಭಿವೃದ್ಧಿಮಾಡತಾನೋ, ಅದಕ್ಕೆ ಸಮತೂಕ ಪಾಪಗಳ ನಾಶಮಾಡತಾನೆ.)

**ಒಡೆಯರಿದ್ದ ವನಸ್ಥ ಫಲಗಳ ।**
**ಬಡಿದು ತಿಂಬುವರುಂಟೆ ಕಂಡರೆ ।**
**ಹೊಡೆದು ಬಿಸುಟುವರೆಂಬ ಭಯದಿಂ ನೋಡಲಂಜುವರು ॥**
**ಬಿಡದೆ ಮಾಡುವ ಕರ್ಮಗಳು ಮನೆ ।**
**ಮಡದಿ ಮಕ್ಕಳು ಬಂಧುಗಳ ಕಾ ।**
**ರೊಡಲನಾಳುಗಳೆಂದ ಮಾತ್ರದಿ ಓಡುವುದು ದುರಿತ ॥ ೩೪ ॥**

ಪಾಪರಾಶಿಗಳು ಲೇಪವಾಗದೆ ಇರೋದಕ್ಕೆ ಅನುಸಂಧಾನ, ದೈತ್ಯರು ಪುಣ್ಯ ಅಪಹರಿಸದೆ ಇರೋದಕ್ಕೆ ದೃಷ್ಟಾಂತ, ಎರಡೂ ಹೇಳತಾರೆ.

ಒಡೆಯರಿದ್ದ–ಯಜಮಾನನೂ, ಕಾವಲುಗಾರನೂ, ಇರತಕ್ಕ, ವನಸ್ಥ ಫಲಗಳ–ತೋಟಗಳಲ್ಲಿ ಇರತಕ್ಕ ಫಲಗಳನ್ನು, ಬಡಿದು ತಿಂಬುವರುಂಟೆ–ಹೊಡೆದಂಥಾವರಾಗಿ ಭಕ್ಷಿಸೋವರು ಉಂಟೆ ಎಂದರೆ, ಅದು ಒಂದುಕಾಲಕ್ಕೂ ಆಗಲಾರದು. ಏತರಿಂದ ಅಂದರೆ, ಕಂಡರೆ – ತೋಟದ ಯಜಮಾನನಾಗಲಿ, ಕಾವಲುಗಾರನಾಗಲಿ, ಕಂಡುಕೊಂಡರೆ, ಹೊಡೆದು ಬಿಸುಟುವರು–ಚೋರನ್ನ ಛಂದಾಗಿ ಪ್ರಹಾರಮಾಡಿ ಬಿಡೋವರಾಗುತಾರೆ ಹೊರ್ತು, ಸುಮ್ಮನೆ ಅವನ್ನ ಬಿಡೋದಿಲ್ಲ. ಎಂಬ ಭಯದಿಂ–ಎಂಬ ಅಂಜಿಕೆಯಿಂದ, ನೋಡಲಂಜುವರು–ತೋಟದಲ್ಲಿ ಇರತಕ್ಕ ಫಲಗಳನ್ನ ಕಣ್ಣಿಂದ ನೋಡೋದಕ್ಕೆಸಹಾ ಅಂಜೋವರಾಗತಾರೆ. ತದ್ವತ್, ಪುಣ್ಯಕರ್ಮಗಳ ಭಗವದರ್ಪಣವಮಾಡಿದರೆ, ಶ್ರೀ ಪರಮಾತ್ಮ ಕಾವಲು ಇದ್ದು ದೈತ್ಯರು ಅಪಹರಿಸದಂದೆ ಮಾಡಿ, ತಾನು ಸ್ವೀಕಾರಮಾಡ ತಾನೆ. ದೈತ್ಯರು ಅಪಹರಿಸುವುದಕ್ಕೆ ಸಾಮರ್ಥ್ಯ ಅವರಿಗೆ ಇರೋದಿಲ್ಲ ಮತ್ತು, ಮನೆ ಮಡದಿ ಮಕ್ಕಳು–ಮನಿಯೇನು, ಹೆಂಡತಿಯೇನು, ಮಕ್ಕಳೇನು, ಬಂಧುಗಳ ಮಾಡುವ ಕರ್ಮಗಳು–ಇನ್ನೂ ನೆಂಟರು ಇವರುಗಳ ಕುರಿತು ಮಾಡಿದ, ಇನ್ನೂ ಅನೇಕ ಕಾರಣ ಗಳಿಂದ ಮಾಡಿದ ಪಾಪಕರ್ಮಗಳ, ಬಿಡದೆ–ಬಿಡದೇ ಮಾಡಿದಕಾಲಕ್ಕೂ, ತಾನೇನು, ತನ್ನ ದಾರಾಪುತ್ರಾದಿ ಬಂಧು ಬಳಗವೇನು, ಸರ್ವಪ್ರಾಣಿಗಳೇನು, ಕಾರೊಡಲನ–ಕಪ್ಪು ವರ್ಣ ವಿಶಿಷ್ಟನಾದ ಶ್ರೀ ಕೃಷ್ಣನ, ಆಳುಗಳು ಎಂದಮಾತ್ರದಿ–ಅಧೀನರು ಎಂತ ದೃಢಾನು ಸಂಧಾನದಿಂದ ಅಂಬೋಣವೇನು, ಸರ್ವಪಾಪಗಳ "ಕೃಷ್ಣಾರ್ಪಣ" ಎಂತ ಅಂಬೋಣ ವೇನು, ಈ ಪ್ರಕಾರ ನಿರಭಿಮಾನದಿಂದ ಅಂದ ಮಾತ್ರದಿಂದ, ದುರಿತ–ಪಾಪವು ಲೇಪ ವಾಗದೆ, ಓಡುವುದು–ತನಗೆ ಆಶ್ರಯವಿಲ್ಲ ಎಂತ ತಿಳಿದು ತನಗೆ ಆಶ್ರಯಸ್ಥಾನವಾದ ದೈತ್ಯರಲ್ಲಿ ಭಗವದಾಜ್ಞಾದಿಂದ ಸೇರೋದಾಗತದೆ, ಎಂತ ತಾತ್ಪರ್ಯ.

**ಜ್ಞಾನ ಕರ್ಮೇಂದ್ರಿಯಗಳಿಂದೇ ।**
**ನೇನು ಮಾಡುವ ಕರ್ಮಗಳ ಲ ।**
**ಕ್ಷ್ಮೀನಿವಾಸನಿಗರ್ಪಿಸುತಲಿರು ಕಾಲಕಾಲದಲಿ ॥**
**ಪ್ರಾಣಪತಿ ಕೈಕೊಂಡು ನಾನಾ ।**
**ಯೋನಿಯೈದಿಸನೊಮ್ಮೆ ಕೊಡದಿರೆ ।**
**ದಾನವರು ಸೆಳೆದೊಯಿವರೆಲ್ಲಾ ಪುಣ್ಯರಾಶಿಗಳ ॥ ೩೫ ॥**

ಮಾಡಿದ ಕರ್ಮಸಮೂಹಗಳು ಶ್ರೀ ಪರಮಾತ್ಮಗೆ ಅರ್ಪಣೆಮಾಡದೆ ಹೋದರೆ, ಪುಣ್ಯಗಳು ನಷ್ಟವಾಗಿ ಪಾಪ ಲೇಪವಾಗತದೆ, ಎಂತ ಹೇಳತಾರೆ.

ಜ್ಞಾನ–ಜ್ಞಾನೇಂದ್ರಿಯಗಳು ಐದು, ಮನಸ್ಸು ಒಂದು, ಕರ್ಮ–ಕರ್ಮೇಂದ್ರಿಯಗಳು ಐದು, ಇಂದ್ರಿಯಗಳಿಂದ–ಅಂತು ಹನ್ನೊಂದು ಇಂದ್ರಿಯಗಳಿಂದ, ಏನೇನು ಮಾಡುವ ಕರ್ಮಗಳ–ಬಿಂಬಕ್ರಿಯಾದ್ವಾರಾ ಅನಾದಿಕರ್ಮಪರಂಪರಾ ಅನುಸರಿಸಿ ಅನೇಕ ವಿಚಿತ್ರಗಳಾದ ಪಾಪ ಪುಣ್ಯ ರೂಪವಾದ ಯಾವತ್ತೂ ಕರ್ಮಗಳ ಮಾಡಿ, ಈ ಮಾಡಿದ ಕರ್ಮಗಳನ್ನ, ಲಕ್ಷ್ಮೀನಿವಾಸನಿಗೆ–ರಮಾವಲ್ಲಭನಾದ, ಬಿಂಬನಾದ ಶ್ರೀ ಪರಮಾತ್ಮಗೆ, ಕಾಲಕಾಲದಲಿ–ಕ್ಷಣೇ ಕ್ಷಣೇ, ಅರ್ಪಿಸುತಲಿರು–ಸಮರ್ಪಣಮಾಡುತ್ತಾ ಇರೋವನಾಗು (ಈ ಅರ್ಪಿಸಿದ ಯಾವತ್ತೂ ಕರ್ಮಗಳ), ಪ್ರಾಣಪತಿ ಕೈಕೊಂಡು–ಜೀವೋತ್ತಮರಾದ ವಾಯುದೇವರಿಗೆ ಸ್ವಾಮಿಯಾದ ಶ್ರೀ ನಾರಾಯಣಾಭಿನ್ನ ಪರಮಾತ್ಮನು ಸ್ವೀಕಾರಮಾಡಿ, ನಾನಾಯೋನಿಯೈದಿಸನು–ಪಾಪಕರ್ಮದಿಂದ ಪ್ರಾಪ್ತವಾಗಬೇಕಾದ ನಾನಾಯೋನಿಗಳ (ಪಾಪ ಅರ್ಪಣಮಾಡೋಣದರಿಂದ ಅದನ್ನ ಸ್ವೀಕಾರಮಾಡಿ), ಐದಿಸೋದಿಲ್ಲಾ. ಈ ಕಾರಣದಿಂದ, ಪಾಪ ಅರ್ಪಿಸಬೇಕು, ಅರ್ಪಣವೇ ವಿಧಿ. ಒಮ್ಮೆ ಕೊಡದಿರೆ–ಪಾಪ ಅರ್ಪಿಸೋಣ ದೋಷವೆಂದು ಒಂದಾವರ್ತಿ ಕೊಡದೇಹೋದರೆ ಆ ಪಾಪ ಅವನಲ್ಲೇ ನಿಂತು, ತತ್ಫಲ, ನಾನಾಯೋನಿಗಳ ಭೋಗದ್ವಾರಾ ಕೊಡೋವನಾಗತಾನೆ. ಇದೇಪ್ರಕಾರ, ಒಂದಾವರ್ತಿ ಪುಣ್ಯಕರ್ಮ ಅರ್ಪಣವೆಂದು ಕೊಡದೇಹೋದರೆ, ಎಲ್ಲಾ ಪುಣ್ಯರಾಶಿಗಳ–ಅರ್ಪಿತವಾಗದ ಪುಣ್ಯರಾಶಿಗಳ, ದಾನವರು ಸೆಳೆದೊಯಿವರು–ದೈತ್ಯರು ಅಪಹರಿಸೋವರಾಗತಾರೆ. ಮೇರುಸದೃಶ ಪುಣ್ಯದಲ್ಲಿ ಸರ್ಷಪಮಾತ್ರ ಉಳದು, ಸುಖಪ್ರದರ್ಶನ, ದುಃಖ ಭೋಗರೂಪವಾದ ಫಲವಾಗೋದಾಗತದೆ. ಮ್ಯಾಲಿನ ಶ್ಲೋಕಗಳಲ್ಲಿ ಛಂದಾಗಿ ಅನುಷ್ಠಾನಯುಕ್ತನಾಗಿ ದ್ವಂದ್ವಕರ್ಮಗಳ ಅರ್ಪಿಸಬೇಕೆಂತ ತಾತ್ಪರ್ಯ.

**ಶ್ರುತಿಸ್ಮೃತ್ಯರ್ಥವ ತಿಳಿದಹಂ ।**
**ಮತಿವಿಶಿಷ್ಟನು ಕರ್ಮಮಾಡಲು ।**
**ಪ್ರತಿಗ್ರಹಿಸನು ಪಾಪಗಳ ಕೊಡುತಿಪ್ಪ ನಿತ್ಯ ಹರಿ ॥**

**ಚತುರದಶಭುವನಾಧಿಪತಿ ಕೃತ ।**
**ಕೃತ ಕೃತಜ್ಞ ನಿಯಾಮಕನು ಎನೆ ।**
**ಮತಿಭ್ರಂಶಪ್ರಮಾದಸಂಕಟದೋಷವವಗಿಲ್ಲ ॥ ೩೬ ॥**

ಅಹಂಮಮತಾದಿಗಳಿಂದ ಮಾಡಿದ ಕರ್ಮಗಳ ಪರಮಾತ್ಮ ಸ್ವೀಕಾರಮಾಡೋದಿಲ್ಲ ಎಂತ ಹೇಳತಾರೆ.

ಶ್ರುತಿ–ವೇದಶ್ರುತಿ. ಇದು ಅಪೌರುಷೇಯವಾದದ್ದು, ಸ್ಮೃತಿ–ಪೌರುಷೇಯವಾದ, ಶ್ರೀ ವೇದವ್ಯಾಸದೇವರು ಮಾಡಿದ ಪುರಾಣಗಳು, ಹಾಂಗೆ ಸರ್ವಮೂಲ ಟೀಕಾ ಟಿಪ್ಪಣಿ ಆದಿಯಾಗಿ ಸತ್‌ಶಾಸ್ತ್ರಗಳು, ಅರ್ಥವತಿಳಿದು–ಇವುಗಳನ್ನು ಓದಿ ಪಾಠಪ್ರವಚನಾದಿಗಳಿಂದ ಅಧಿಕಾರಿ ಅನುಷ್ಠಾನಮಾಡತಕ್ಕ ಪ್ರಮೇಯಗಳ ತಿಳಿದು, ದೋಷಾದೋಷಗಳ ತಿಳದೂನೂ, ಅಹಂಮತಿವಿಶಿಷ್ಟನು–ಸರ್ವಪುಣ್ಯಗಳ ನಷ್ಟಮಾಡತಕ್ಕ, ಪಾಪಫಲಗಳ ಕೊಡತಕ್ಕ, ಪ್ರಬಲದೋಷವಾದ ಅಹಂಮಮತಾ ಎಂಬ ದೋಷಯುಕ್ತನಾದ ಶಾಸ್ತ್ರಜ್ಞನಾದ ಅಧಿಕಾರಿ, ಕರ್ಮಮಾಡಲು–ಪುಣ್ಯಕರ್ಮಗಳ ಮಾಡಿ ಭಗವದರ್ಪಣೆಮಾಡಲು, ಪ್ರತಿಗ್ರಹಿಸನು–ಪರಮಾತ್ಮ ಸ್ವೀಕರಿಸೋದಿಲ್ಲ, ಹರಿ–ಶ್ರೀ ಪರಮಾತ್ಮನು, ನಿತ್ಯ–ಪ್ರತಿದಿನದಲ್ಲಿ ಮಾಡಿದ ಪುಣ್ಯಗಳಿಗೆ, ಪಾಪಗಳ ಕೊಡುತಿಪ್ಪ–ಪಾಪಫಲಗಳೇ ಅವರಿಗೆ ಕೊಡುತ್ತಾ ಇರುತ್ತಾನೆ. ಚತುರದಶಭುವನಾಧಿಪತಿ–ತನ್ನ ಅಂತರ್ಗತನಾದ ಬಿಂಬರೂಪಿ ಪರಮಾತ್ಮ, ಈ ಹದಿನಾಲ್ಕುಲೋಕಕ್ಕೆ ಸ್ವಾಮಿ ಎಂತಲೂ, ಕೃತ–ಏಕಾದಶೇಂದ್ರಿಯಗಳಲ್ಲಿ ಇದ್ದು ತನ್ನ ಕ್ರಿಯಾದ್ವಾರಾ ಮಾಡಲ್ಪಟ್ಟ ಯಾವತ್ತೂ ಕರ್ಮಗಳ, ಕೃತ–ಪ್ರತಿಬಿಂಬನಾದ, ಅಸ್ವತಂತ್ರನಾದ, ಜೀವನಾದ, ನಾನು ಮಾಡೋವನಾಗತೇನೆ ಎಂತ, ಕೃತಜ್ಞ–ಅಹಂಮಮತಾದಿಗಳ ತ್ಯಜಿಸಿ ಮಾಡತಕ್ಕ ದ್ವಂದ್ವಕರ್ಮಗಳಲ್ಲಿ ಈ ಅನುಸಂಧಾನವೇನು, ಸರ್ವಕರ್ಮಗಳಲ್ಲಿ ಅಂತರ್ಗತ ಪರಮಾತ್ಮನ್ನ ಅನುಸಂಧಾನದಿಂದ ತಿಳಿದವನಾಗಿ, ನಿಯಾಮಕನು ಎನೆ–ಸರ್ವೇಂದ್ರಿಯ ನಿಯಾಮಕ ಬಿಂಬರೂಪಿ ಪರಮಾತ್ಮನು ಎಂತ, ತ್ರಿಕರಣಶುದ್ಧಿಯಾಗಿ ಅಂದರೆ, ಇಂಥಾ ಅಧಿಕಾರಿಗೆ, ಮತಿಭ್ರಂಶ–ಬುದ್ಧಿಭ್ರಮಣದಿಂದಲೂ, ಪ್ರಮಾದ–ಮಹಾಪ್ರಮಾದದಿಂದಲೂ, ಸಂಕಟ–ನಿರ್ಬಂಧಾದಿ ಸಂಕಟದಿಂದ ಪ್ರಾಪ್ತವಾದ, ದೋಷವು–ದೋಷಸಮೂಹವು, ಅವಗಿಲ್ಲ–ಪೂರ್ವೋಕ್ತ ಕಾರಣಗಳಿಂದ ಅರ್ಪಣವಿಷಯದಲ್ಲಿ ವಿಸ್ಮೃತನಾದಕಾಲಕ್ಕೂ, ಅಹಂಮಮತಾದಿಗಳಿಂದ ದೂರನಾಗಿ ಇರೋಕಾರಣದಿಂದ, ಈ ಪಾಪಗಳು ಅವಗೆ ಲೇಪವಿಲ್ಲಾ ಎಂತ ತಾತ್ಪರ್ಯ.

**ವಾರಿಜಾಸನಮುಖ್ಯರಾಜ್ಞಾ ।**
**ಧಾರಕರು ಸರ್ವಸ್ವತಂತ್ರ ರ ।**
**ಮಾರರಮಣನೆಂದರಿದು ಇಷ್ಟಾನಿಷ್ಟಕರ್ಮಫಲ ॥**

**ಸಾರಭೋಕ್ತನಿಗರ್ಪಿಸಲು ಸ್ವೀ ।**
**ಕಾರಮಾಡುವ ಪಾಪಫಲವ ಕು ।**
**ಬೇರನಾಮಕ ದೈತ್ಯರಿಗೆ ಕೊಟ್ಟವರ ನೋಯಿಸುವ ॥ ೩೭ ॥**

ಶ್ರೀ ದೇವರು ಕರ್ಮ ವಿಭಾಗಮಾಡಿ ದೇವದೈತ್ಯರಿಗೆ ಕೊಡತಾನೆ ಎಂತ ಹೇಳತಾರೆ.

ಮುಖ್ಯರು – ಜೀವೋತ್ತಮರಾದ, ವಾರಿಜಾಸನು – ಕಮಲಾಸನನಾದ, ಬ್ರಹ್ಮ ದೇವರೇ ಮೊದಲಾದ ದೇಹಗತ ತತ್ತ್ವದೇವತೆಗಳು, ಸರ್ವಸ್ವತಂತ್ರ–ಚರಾಚರ ಸರ್ವ ಜಗತ್ತಿನೊಳಗೆ ಪರಾಧೀನನಲ್ಲದ ಸ್ವತಂತ್ರನಾದವ, ಸರ್ವಪೂಜ್ಯನಾದವ, ರಮಾ ರಮಣನು–ರಮಾಪತಿಯಾದ ಶ್ರೀ ಬಿಂಬರೂಪಿ ಪರಮಾತ್ಮನು, ಆಜ್ಞಾಧಾರಕರು–ಈ ದೇವರ ಆಜ್ಞಾಧಾರಕರು, ಪರಾಧೀನ ಸ್ವಾತಂತ್ರ್ಯ ಉಳ್ಳವರು, ತತ್ತ್ವದೇವತೆಗಳು, ಈ ತತ್ತ್ವದೇವತೆಗಳ ಆಜ್ಞಾಧಾರಕರು ಸರ್ವಪ್ರಾಣಿಗಳು, ಆಯಾ ತತ್ತ್ವದೇವತೆಗಳಿಗೆ, ಅವರಿಗೆ ಸ್ವೋತ್ತಮರಾದ ದೇವತೆಗಳು ತತ್ತ್ವನಿಯಾಮಕರಾಗಿ ಅವರವರ ಆಜ್ಞಾಧಾರಕ ರಾಗಿ ಇರ್ತಾರೆ. ಈ ರೀತ್ಯಾ ಸ್ವೋತ್ತಮರು ಸ್ವಾವರರಿಗೆ ನಿಯಾಮಕರಾಗಿಯೂ, ಸ್ವಾವರರು ಆಜ್ಞಾಧಾರಕರಾಗಿಯೂ ಇರುತ್ತಾರೆ. ರಮಾ ಆರಭ್ಯ ತೃಣಾಂತ ಸರ್ವರೂ ಸ್ವೋತ್ತಮರಿಂದ ಆಜ್ಞಾಧಾರಕರು, ಎಂದರಿದು–ಎಂತ ಗುರುಮುಖದಿಂದ ಸಚ್ಛಾಸ್ತ್ರದಲ್ಲಿ ಉಕ್ತವಾದ ಕ್ರಮವನ್ನು ಅರಿತವನಾಗಿ, ಇಷ್ಟ–ಪುಣ್ಯಕರ್ಮಗಳು, ಅನಿಷ್ಟ–ಪಾಪಕರ್ಮ ಗಳು, ಕರ್ಮಫಲ–ಈ ಉಭಯವಿಧ ಕರ್ಮಜನಿತ ಫಲವೇನು, ಸಾರಭೋಕ್ತನಿಗೆ–ಈ ಪುಣ್ಯಾಪುಣ್ಯಗಳಲ್ಲಿ ತಜ್ಜನಿತ ಫಲಗಳಲ್ಲಿ ವಿದ್ಯಮಾನವಾದ ತದಾಕಾರವಾದ ತನ್ನ ಸ್ವಾಖ್ಯರೂಪವಾದ ಸಾರವನ್ನ ಭೋಜನಮಾಡತಕ್ಕ ಬಿಂಬನಾದ ಶ್ರೀಹರಿಗೆ, ಅರ್ಪಿಸಲು– ಅನುಸಂಧಾನದಿಂದ ಅರ್ಪಣೆಮಾಡಲು, ಸ್ವೀಕಾರಮಾಡವ–ಕೈಕೊಂಡು ತನ್ನ ಸ್ವಾಖ್ಯ ವನ್ನು ಸ್ವೀಕಾರಮಾಡಿ (ತದನ್ಯವಾದ), ಪಾಪಫಲವ–ಪಾಪಕರ್ಮಜ ಫಲವನ್ನ, ಕುಬೇರ ನಾಮಕ–"ಕುಮತೇರೀರಣಾತ್ಸರ್ವಸಾವೃತೇಃ ಸ ಕುಬೇರಕಃ" ಎಂಬ ವಿಷ್ಣುರಹಸ್ಯೋಕ್ತ ರೀತ್ಯಾ ಅಂದರೆ, ದೈತ್ಯರಿಗೆ ಬಿಂಬನಾಗಿ ಪ್ರೇರಣಾದಿಗಳ ಮಾಡತಾನಾದಕಡಿಯಿಂದ, ಕುಬೇರ ಎಂತ ನಾಮಾಂಕಿತನಾದ ಪರಮಾತ್ಮ, ದೈತ್ಯರಿಗೆ ಕೊಟ್ಟು–ದೇಹಗತರಾದ ದೈತ್ಯರಿಗೆ ಕೊಟ್ಟವನಾಗಿ, ಅವರನೋಯಿಸುವ–ಅವರನ್ನ ದುಃಖಪಡಸೋವನಾಗತಾನೆ.

**ತಾ॥** ಜೀವರಿಗೆ ಉಳಿದ ಅಲ್ಪ ಪಾಪಗಳು ದಾವವು ಅವೆ, ಅವನ್ನು ಭಗವದರ್ಪಣೆ ಮಾಡೋಣದರಿಂದ ಪರಿದೃಶ್ಯಮಾನದಲ್ಲಿ, ಲೋಗರಿಗೆ ದುಃಖದೋಪಾದಿಯಲ್ಲಿ ದುಃಖ ವಾಗಿ ತೋರತಾ ಇರೋಣ, ಭೋಗಮಾಡತಕ್ಕ ಅಧಿಕಾರಿಗೆ ಜ್ಞಾನಾತಿಶಯದಿಂದ ಪರಮಸುಖವಾಗಿ ಇರೋಣ, ಇಂಥಾ ಫಲ ಕೊಡೋವನಾಗತಾನೆ. ಲೋಗರಿಗೆ ಸುಖವಾಗಿ ತೋರೋಣ ವಿಷಯಸುಖ ; ಆ ವಿಷಯಸುಖದಲ್ಲಿ ಹೇಯತಾಬುದ್ಧಿ ಹುಟ್ಟಿಸಿ ನಿಸ್ಸಂಗನ್ನ ಮಾಡತಾನೆ. ಪುಣ್ಯ, ತಾರತಮ್ಯಾನುಸಾರ ದೇಹಗತ ತತ್ತ್ವದೇವತೆಗಳಿಗೆ ವಿಭಾಗವಾದದ್ದು ಹೋಗತಾ, ಉಳಿದ ಜೀವನಭಾಗದ ಪುಣ್ಯಕ್ಕೆ, ಜ್ಞಾನಪೂರ್ವಕವಾದ

ಐಶ್ವರ್ಯ ಕೊಟ್ಟು, ಅದರಿಂದ ಭೋಗಪಡಸತಾ ಪದ್ಮಪತ್ರಗತ ಉದಕದೋಪಾದಿಯಲ್ಲಿ, ಲಿಪ್ತನ್ನಮಾಡದೇ ಸರ್ವದಾ ಭಗವದರ್ಪಣ ಬುದ್ಧಿಯನ್ನು ಕೊಟ್ಟು, ಸುಖಪಡಿಸುತ್ತಾನೆ ಎಂತ ಭಾವವು,

**ಕ್ರೂರದೈತ್ಯರೊಳಿದ್ದು ತಾನೇ ।**
**ಪ್ರೇರಿಸುವ ಕಾರಣದಿ ಹರಿಗೆ ಕು ।**
**ಬೇರನೆಂಬರು ಎಲ್ಲರೊಳು ನಿರ್ಗತಗತಿಗೆ ನಿರುತ ॥**
**ಸೂರಿಗಮ್ಯಗೆ ಸೂರ್ಯನೆಂಬರು ।**
**ದೂರಶೋಕಗೆ ಶುಕ್ಲ ಲಿಂಗಶ ।**
**ರೀರವಿಲ್ಲದಕಾರಣದಲಿ ಅಕಾಯನೆನಿಸುವನು ॥ ೩೮ ॥**

ಪೂರ್ವ ಶ್ಲೋಕದಲ್ಲಿ ಉಕ್ತವಾದ ಕುಬೇರ ಶಬ್ದಾದಿಗಳಿಗೆ ವಿವರವನ್ನು ಹೇಳತಾರೆ.

ಕ್ರೂರ–ಸ್ವರೂಪಸ್ವಭಾವದಲ್ಲಿ ಭಗವದ್ದ್ವೇಷದಿಂದ ಯುಕ್ತರಾದ ಅತಿಕ್ರೂರರಾದ, ದೈತ್ಯರೊಳಿದ್ದು–ದೈತ್ಯರಲ್ಲಿ ಬಿಂಬನಾಗಿದ್ದು, ತಾನೇ–ಸ್ವರೂಪದಲ್ಲಿ ತತ್ತ್ವದೇವತಾರೂಪ ಗಳಿಂದ, ಪ್ರೇರಿಸುವ ಕಾರಣದಿ–ಸ್ವರೂಪಯೋಗ್ಯತಾನುಸಾರ ಜೀವನ ಸ್ವರೂಪದಲ್ಲೇನು, ಅದನನುಸರಿಸಿ ಬಾಹ್ಯ ಸ್ಥೂಲದೇಹದಲ್ಲೇನು, ಪ್ರೇರಣೆಮಾಡೋಕಾರಣದಿಂದ, ಹರಿಗೆ–ದೈತ್ಯ ಜೀವಾಂತರ್ಗತನಾದ ಬಿಂಬನಾದ ಹರಿಗೆ, ಹೆಸರು ಏನೆಂದರೆ, ಕುಬೇರನೆಂಬರು–ಕುಬೇರ ಎಂತ ಹೇಳತಾರೆ. "ಕುಬಿ ಆಚ್ಛಾದನೇ" ಇತಿ ಧಾತೋಃ ಧನದಾನೇನ ದಾರಿದ್ರ್ಯಂ ಕುಂಬತಿ ಆಚ್ಛಾದಯತಿ ಇತಿ ಕುಬೇರಃ", ಎಲ್ಲರೊಳು–ಯಾವತ್ತೂ ದೈತ್ಯ ರೊಳು ಕುಬೇರನಾಮದಿಂದ ಇದ್ದು, ನಿರುತ–ನಿರಂತರದಲ್ಲಿ ಇಂಥಾ ಕ್ರೂರ ದೈತ್ಯರ, ನಿರ್ಗತಗತಿಗೆ–ಅಧೋಗತಿಯಾದ ನಿತ್ಯ ಅಂಧಂತಮಃಲೋಕ ಸೇರಿಸೋ ಉದ್ದಿಶ್ಯ, ಸ್ವರೂ ಪಾನುಗುಣ್ಯವಾಗಿ ಸ್ಥೂಲದೇಹದಿಂದ ಸಾಧನಮಾಡಿಸುತ್ತಾನೆ. ಸೂರಿಗಮ್ಯಗೆ–ಭಗವದ್ಭಕ್ತ ರಾದ ಜ್ಞಾನಿಗಳಾದವರಿಗೆ ಅಂತರ್ಗತನಾದ ಪರಮಾತ್ಮನು ಅವರವರಿಗೆ ಪ್ರತ್ಯಕ್ಷನಾಗಿ ದರ್ಶನ ಕೊಡತಾನಾದಕಡಿಯಿಂದ, ಇಂಥಾ ಜ್ಞಾನರೂಪಿ ಪರಮಾತ್ಮನ್ನ, ಸೂರ್ಯ ನೆಂಬರು–"ಸೂರ್ಯಸ್ಸ ಸೂರಿಗಮ್ಯತ್ವಾತ್ ಪ್ರಾಜಾಪತ್ಯಃ ಪ್ರಜಾಪತೇಃ" । ಎಂತ ಅಂಬೋವರಾಗತಾರೆ. (ಸೂರ್ಯ) ಸ್ವರೂಪ, ಬಾಹ್ಯ, ಈ ಎರಡರಲ್ಲಿ ಸ್ವರೂಪಾನುಸಾರ ಪೂರ್ವೋಕ್ತಪ್ರಕಾರ ಸತ್ಸಾಧನಾ ಮಾಡಿಸೋನಿಮಿತ್ತ, ಪ್ರೇರಣಾದಿಗಳ ಮಾಡತಾನೆ. ಊರ್ಧ್ವಗತಿಯಾದ ವೈಕುಂಠಲೋಕ ಪ್ರವೇಶಕ್ಕಾಗಿ, ಎಂತ ಅರ್ಥ. ದೂರಶೋಕಗೆ–ದುಃಖದೂರನಾದ ಪರಮಾತ್ಮಗೆ ಎಂದರೆ, ಜೀವಾಂತರ್ಗತನಾದಕಾಲಕ್ಕೂ, ಜೀವರ ಯಾತನಾದಿಗಳು ಬಿಂಬಗೆ ಇಲ್ಲದಕಾರಣ, 'ದೂರಶೋಕ' ಎಂತ ಕರಿಸಿದ. ಇಂಥಾ ಪರಮಾತ್ಮಗೆ (ಜೀವರೋಪಾದಿಯಲ್ಲಿ), ಶುಕ್ಲ–"ಶುಕ್ರಂ ತಚ್ಛೋಕರಾಹಿತ್ಯಾತ್ ಅವ್ರಣಂ ನಿತ್ಯಪೂರ್ಣತಃ । ಪಾವನತ್ವಾತ್ ಸದಾ ಶುದ್ಧಂ ಅಕಾಯಂ ಲಿಂಗವರ್ಜನಾತ್ ॥" ಇತಿ ಈಶಾವಾಸ್ಯಭಾಷ್ಯೋಕ್ತರೀತ್ಯಾ ಶುಕ್ಲಶೋಣಿತ ಜಡಪ್ರಕೃತ್ಯಾತ್ಮಕ ಸ್ಥೂಲಶರೀರವೇನು,

ಲಿಂಗಶರೀರವು–ಇದರ ಒಳಗೆ ಜೀವರೋಪಾದಿಯಲ್ಲಿ ಪ್ರಕೃತ್ಯಾತ್ಮಕ ಅನಾದಿಲಿಂಗಶರೀರ ವೇನು, ಇಲ್ಲದಕಾರಣದಿ–ಇಂಥಾ ಶರೀರಗಳು ಇಲ್ಲದಕಾರಣಗಳಿಂದ, ಅಕಾಯನೆನಿಸು ವನು–ಪೂರ್ವೋಕ್ತ ಶರೀರಗಳು ಇಲ್ಲ ಎಂತ ಅರ್ಥ. ಆದರೆ ಈ ಪರಮಾತ್ಮಗೆ ಶರೀರ ಇರೋದಾಗಿ ಅದೆ. ಎಂಥಾ ಶರೀರ ಎಂದರೆ, ಆನಂದಜ್ಞಾನದೇಹವುಳ್ಳವನು ಎಂತಲೂ, ಈ ಶರೀರ ಅಚ್ಛೇದ್ಯ, ಅಭೇದ್ಯ ಎಂತಲೂ, ಎನಿಸೋವನಾಗತಾನೆ. ಕುಬೇರಾದಿ ನಾಮಗಳು ಪರಮಾತ್ಮನ ನಾಮಗಳೆಂತಲೆ ತಾತ್ಪರ್ಯ.

**ಪೇಳಲೊಶವಲ್ಲವು ಮಹಾಪಾ ।**
**ಪಾಳಿಗಳ ಒಂದೇ ಕ್ಷಣದಿ ನಿ ।**
**ರ್ಮೂಲಗೈಸಲಿಬೇಕು ಎಂಬುವಗೊಂದೆ ಹರಿನಾಮ ॥**
**ನಾಲಿಗೆಯೊಳುಳ್ಳವಗೆ ಪರಮಕೃ ।**
**ಪಾಳು ಕೃಷ್ಣನು ಕೈಪಿಡಿದು ತ ।**
**ನ್ನಾಲಯದೊಳಿಟ್ಟನುದಿನದಲಾನಂದಪಡಿಸುವನು ॥ ೩೯ ॥**

ಶ್ರೀಹರಿನಾಮೋಚ್ಚಾರಣ ಮಾಡುವವರಿಗೆ ಶ್ರೀ ಪರಮಾತ್ಮ ಮೋಕ್ಷಕೊಡತಾನೆ, ಎಂತ ಹೇಳತಾರೆ.

ಪೇಳಲೊಶವಲ್ಲವು–ಈ ಪೂರ್ವೋಕ್ತ ಶ್ರೀ ಪರಮಾತ್ಮನ ಮಾಹಾತ್ಮ್ಯ ಇಷ್ಟು ಎಂತಲೂ, ಅಂಥಾ ಮಹಿಮೆ ಹೇಳೋದಕ್ಕೆ ರಮಾ ಬ್ರಹ್ಮಾದಿಗಳಿಗೇ ವಶವಲ್ಲ ಎಂತಲೂ, ಮಹಾಪಾಪಾಳಿಗಳ – ಜ್ಞಾತಾಜ್ಞಾತವಾಗಿ ಸ್ಥೂಲದೇಹದಿಂದ, ಬಿಂಬಕ್ರಿಯಾದ್ವಾರಾ ಭಗವದ್ಭಕ್ತರು ಮಾಡಿದ ಶ್ರೇಷ್ಠವಾದ ಪಾಪ ಪಂಙ್ತಿಸಮೂಹಗಳನ್ನು, ನಿರ್ಮೂಲ ಗೈಸಲಿಬೇಕು–ಮೂಲಭೂತವಾದ, ಬೇರುಸಾಂಕೇತವಾದ ಲಿಂಗದೇಹಸಹಿತ, ಮೂಲ ಸಹಿತವಾಗಿ ನಾಶಮಾಡಬೇಕು, ಎಂಬುವಗೆ–ಎನತಕ್ಕ ಅಧಿಕಾರಿಗೆ, ಒಂದೆ–ಒಂದಾದಂಥ ದೇಹಾಂತರ್ಗತ, ಜೀವಾಂತರ್ಗತನಾದಂಥಾ ಅಸದೃಶನಾದ, ಗುಣಪೂರ್ಣನಾದ, ಹರಿ–ಬಿಂಬರೂಪಿ ಪರಮಾತ್ಮನಾದ ಶ್ರೀಹರಿಯ, ವಾಸನಾರೂಪ ಹೃದಯಾಕಾಶದಲ್ಲಿ ಮಾಡಿ ಕೊಂಡು, ಧ್ಯಾನೋಪಾಸನಾದಿ ಪೂಜಾದಿಗಳ ಮಾಡುತ್ತಾ, ಈ ಮೂರ್ತಿಯ ಹೃದಯಾ ಕಾಶದಲ್ಲಿ ನೋಡಿದಂತೆ ಸರ್ವತ್ರ ವಾಸನಾದಿಂದ ನೋಡುತ್ತಾ, ಬಾಹ್ಯಾಂತರದಲ್ಲಿ ಏಕ ಚಿತ್ತನಾಗಿ ಈ ರೂಪವೇ ಕಣ್ಣಿಂದ ನೋಡುತ್ತಾ, ನಾಮ–('ಅಧಿಕಾರಿ') ಧ್ಯಾನಮಾಡತಕ್ಕ ಪರಮಾತ್ಮನ, ಹರಿಯ ಬಿಂಬನಾಮವನ್ನ ಮಾಹಾತ್ಮ್ಯಪೂರ್ವಕ ಸುದೃಢಸ್ನೇಹದಿಂದ, ನಾಲಿಗೆಯೊಳು–ಜಿಹ್ವೆಯಲ್ಲಿ, ಉಳ್ಳವಗೆ–ಉಚ್ಚಾರಣಾ ಸದಾ ಇರತಕ್ಕ ಅಧಿಕಾರಿಗೆ, ಪರಮ ಕೃಪಾಳು–ಉತ್ತಮಾಧಿಕಾರಿಗಳಾದ ಬ್ರಹ್ಮಾದಿ ದೇವತೆಗಳಲ್ಲಿ, ನೀಚಾಧಿಕಾರಿಗಳಾದ ತೃಣಾದಿ ಮುಕ್ತಿಯೋಗ್ಯ ಜೀವರಲ್ಲಿ, ಅವರವರ ಯೋಗ್ಯತಾನುಸಾರ ಅನುಗ್ರಹಮಾಡ ತಕ್ಕ, ಕೃಷ್ಣನು–ಕೃಷ್ಣರೂಪಿ ಪರಮಾತ್ಮನು, ಕೈಪಿಡಿದು–ಪೂರ್ವೋಕ್ತ ಅಧಿಕಾರಿ ಸಂಸಾರ

ಸಮುದ್ರದಲ್ಲಿ ಬಿದ್ದು ಮುಣಗುತ್ತಾ ಇದ್ದವನ ಹಸ್ತವನ್ನ ಹಿಡಿದು, ಒಂದೇಕ್ಷಣದಿ–ಒಂದೇ ಒಂದು ಕ್ಷಣದಲ್ಲಿ, ತನ್ನ ಅಪರೋಕ್ಷ ಕೊಟ್ಟು, ಪಾಪರೂಪವಾದ ಸಂಚಿತ ಕರ್ಮವನ್ನ ತನ್ನ ವೀಕ್ಷಣರೂಪವಾದ ಕಿಡಿಗಳಿಂದ ಭಸ್ಮಮಾಡಿ, ಪಾಪರೂಪವಾದ ಆಗಾಮಿ ಎಂಬ ಅಂಧಕಾರವನ್ನ ತನ್ನ ನೇತ್ರಪ್ರಕಾಶದಿಂದ ಲೇಪವಾಗದಂತೆ ದೂರಮಾಡಿ, ಪ್ರಾರಬ್ಧ ಭೋಗವನ್ನ ಅಂತಃಕರಣದಿಂದ ಕೆಲವುಭಾಗ ಉಪಮರ್ದನಮಾಡಿ, ಸಂಸಾರಸಮುದ್ರ ಅಂತಗಾಣಿಸಿ ಅಂತ್ಯದಲ್ಲಿ ಲಿಂಗಭಂಗ ಐದಿಸಿ, ತನ್ನಾಲಯದೊಳಿಟ್ಟು–ತನ್ನ ಮನಿಗಳಾದ, ವೈಕುಂಠಾದಿ ಲೋಕಗಳಲ್ಲಿ ಪ್ರವೇಶಮಾಡಿಸಿ, ಅನುದಿನದಲಿ–ಪ್ರತಿದಿನದಲ್ಲೂ, ಆನಂದ ಪಡಿಸುವನು–ಅವರವರ ಸ್ವರೂಪಾನಂದಪಡಿಸೋವನಾಗುತ್ತಾನೆ.

**ವಿಶೇಷಾರ್ಥ :**–ಅನುದಿನ ಎಂಬುದು, ವೈಕುಂಠದಲ್ಲಿ ಸೂರ್ಯ ಚಂದ್ರಾದಿಗಳಿಂದ ದಿನ ಸಾಂಕೇತವಲ್ಲ. [ಅರವತ್ತು (೬೦) ಘಳಿಗೀಗೆ ಒಂದು ದಿನಾ ಎಂತ ಸಾಂಕೇತ. ಹಾಂಗಾದರೂ ಸರಿಯೆ.] ಬ್ರಹ್ಮನ ನೂರು ವರ್ಷ, ನಾರಾಯಣದೇವರಿಗೆ ಒಂದು ಹಗಲು ಸಾಂಕೇತ, ಹಾಂಗೇ ನೂರು ವರುಷ, ಪ್ರಳಯಕಾಲದ ರಾತ್ರಿ ಸಾಂಕೇತ ; ಇದು ಸೃಷ್ಟಿ ವಿವಕ್ಷಾ. ಶ್ರೀ ಪರಮಾತ್ಮಗೆ ಆದಿ ಮಧ್ಯಾಂತಗಳು ಇಲ್ಲದಕಡಿಯಿಂದ ಕಾಲ ಎಂಬುದು ಔಪಚಾರಿಕವು.

**ರೋಗಿಯೌಷಧ ಪಥ್ಯದಿಂದ ನಿ ।**
**ರೋಗಿಯೆನಿಸುವ ತೆರದಿ ಶ್ರೀಮ ।**
**ದ್ಭಾಗವತ ಸುಶ್ರವಣಗೈದು ಭವಾಖ್ಯ ರೋಗವನು ॥**
**ನೀಗಿ ಸರ್ವಾದ್ಯಖಿಳ ವಿಷಯ ನಿ ।**
**ಯೋಗಿಸು ದಶೇಂದ್ರಿಯವನಿಲನೊಳು ।**
**ಶ್ರೀಗುರುಜಗನ್ನಾಥವಿಠಲ ಪ್ರೀತನಾಗುವನು ॥ ೪೦ ॥**

ಸಂಸಾರಾಖ್ಯ ರೋಗಪರಿಹಾರಕ್ಕೆ ಔಷಧ ಹೇಳತಾರೆ.

ರೋಗಿಯು–ಜ್ವರಾದಿ ರೋಗದಿಂದ ಯುಕ್ತನಾದ ಪುರುಷನು, ಔಷಧ–ರೋಗ ಗಳನ್ನು ಪರಿಹರಿಸತಕ್ಕ ರೋಗಾನುಗುಣ್ಯವಾದ ಔಷಧ ಸೇವನದಿಂದಲೂ, ಪಥ್ಯದಿಂದ– ಔಷಧವನ್ನು ಮುರಿಯತಕ್ಕ, ರೋಗವನ್ನ ಅಭಿವೃದ್ಧಿಮಾಡತಕ್ಕ ಭೋಜನದ್ರವ್ಯಗಳ ತ್ಯಾಗಮಾಡಿ, ಪಥ್ಯ, ಔಷಧ ಪಥ್ಯ, ಈ ಎರಡರಿಂದ, ನಿರೋಗಿಯೆನಿಸುವ–ರೋಗರಹಿತ ನಾಗಿ, ಧಾರ್ಢ್ಯನಾಗಿ ಇರೋವನಾಗುತ್ತಾನೆ. ತೆರದಿ–ಇದರೋಪಾದಿಯಲ್ಲಿ (ಸರ್ವ ಪ್ರಾಣಿಗಳಿಗೆ ಅಹಂಮಮತಾ, ಆಶಾ ಎಂಬ ರೋಗ ಪ್ರಾಪ್ತಿಯಾಗಿ ಅದೆ. ಇದರಿಂದ ನಾನಾ ದುಃಖಗಳ ಭೋಗಮಾಡುತ್ತಾ ಇದ್ದಾರೆ). ಈ ರೋಗ ಪರಿಹಾರಕ್ಕೆ ಔಷಧ ದಾವದೆಂದರೆ, ಶ್ರೀಮತ್–ಪೂಜ್ಯವಾದ, ಶ್ರೇಷ್ಟವಾದ, ಭಾಗವತ–ಭಾಗವತ ಪುರಾಣ ವನ್ನ (ಈ ಭಾಗವತಾಖ್ಯ ಔಷಧವನ್ನ), ಸುಶ್ರವಣಗೈದು–ವೈದ್ಯಗೆ ಸದೃಶರಾದ ಸಮಿಾ

ಚೀನರಾದ ಗುರುಗಳಿಂದ ಛಂದಾಗಿ ಶ್ರವಣರೂಪದಿಂದ ಪಾನಮಾಡಿ, ಔಷಧಕ್ಕೆ ಅನುಕೂಲವಾದ ಪಥ್ಯವೆಂಬೋದೇ ಭಾಗವತದಲ್ಲಿ ಹೇಳಿದಪ್ರಕಾರ ಅನುಷ್ಠಾನಮಾಡಿ, ಭವಾಖ್ಯರೋಗವನು ನೀಗಿ–ಸಂಸಾರಕ್ಕೆ ಕಾರಣವಾದ ಅಹಂಮಮತಾ, ಆಶಾ ಎನತಕ್ಕ ರೋಗವನ್ನ ಕಳಕೊಂಡು, ಸರ್ವಾದ್ಯಖಿಳವಿಷಯ – ಸಮಸ್ತವಾದ ಇಂದ್ರಿಯಜನಿತ ವಿಷಯಗಳ, ದಶೇಂದ್ರಿಯವ–ದಶೇಂದ್ರಿಯವನ್ನೂ, ಮನಸ್ಸನ್ನೂ, ಅಖಿಳ–ಸಮಸ್ತವಾದ ಚರಾಚರ ಪ್ರಪಂಚಕ್ಕೆ, ಆದಿ–ಉತ್ತಮ (ತಾರತಮ್ಯದಲ್ಲಿ, ಆದಿಭೂತನಾದವ, ಇವನ ವ್ಯಾಲೆ ಉತ್ತಮರು ಇಲ್ಲದವನಾದ), ಅನಿಲನೊಳು–ಶ್ರೀ ಭಾರತೀರಮಣ ಮುಖ್ಯ ಪ್ರಾಣಾಂತರ್ಗತನಾದ ಶ್ರೀ ನಾರಾಯಣದೇವರಿಗೆ, ನಿಯೋಗಿಸು–ಸಮರ್ಪಣ ಮಾಡೋವನಾಗು, ಶ್ರೀಗುರು–ಲಕ್ಷ್ಮೀದೇವೇರಿಗೆ ಗುರುಭೂತನಾದ, ಜಗನ್ನಾಥವಿಠಲ–ಚರಾಚರ ಜಗತ್ತಿಗೆ ಸ್ವಾಮಿಯಾದ, ಪಾಪಪರಿಹಾರಕನಾದ ಶ್ರೀ ಪರಮಾತ್ಮ, ಪ್ರೀತನಾಗುವನು–ಸಂತುಷ್ಟನಾಗಿ ಸಂರಕ್ಷಣಮಾಡತಾನೆ ಎಂತ ತಾತ್ಪರ್ಯ.

**ಶ್ರೀಮತ್ಸತ್ಯಪರಾಯಣತೀರ್ಥಕರಕಮಲಸಂಜಾತಶ್ರೀಮತ್ಸಂಕರ್ಷಣ-ತೀರ್ಥವಿರಚಿತಾಯಾಂ ಶ್ರೀಮದ್ಹರಿಕಥಾಮೃತಸಾರಕನ್ನಡಭಾಷಾ-ಟೀಕಾಯಾಂ ಸರ್ವಸ್ವಾತಂತ್ರ್ಯಸಂಧಿವ್ಯಾಖ್ಯಾನಂ ಸಂಪೂರ್ಣಂ.**

|| ಶ್ರೀ ಕೃಷ್ಣಾರ್ಪಣಮಸ್ತು ||

|| ಓಂ ಶ್ರೀ ಗುರುಭ್ಯೋ ನಮಃ ಹರಿಃ ಓಂ ||

# ಹತ್ತೊಂಬತ್ತನೆಯ ಸಂಧಿ

## ಕರ್ಮವಿಮೋಚನ ಸಂಧಿ

## (ಸ್ತೋತ್ರಪ್ರಕರಣ ಸಂಧಿ)

ಪೂರ್ವೋಕ್ತ ಸಂಧಿಗಳ ಅನುಸರಿಸಿ ಬಿಂಬ ಪ್ರತಿಬಿಂಬಗಳ ತಿಳಿದ ಅನಂತರದಲ್ಲಿ, ಈ ಸಂಧಿಯಲ್ಲಿ ಉಕ್ತವಾದ ಕ್ರಮಕ್ಕೆ ಅನುಸಂಧಾನಯುಕ್ತನಾಗಿ, ಕರ್ಮಗಳ ಮಾಡಿದಾ ಎಂದರೆ, ಅವುಗಳು ಲೇಪವಾಗದೆ, ಮೋಚನವಾಗುತ್ತಾ ಬರುತ್ತವೆ, ಎಂತ ಹೇಳಿ ಅದರ ಅನುಸಂಧಾನಕ್ರಮುವನ್ನ ಹೇಳುತ್ತಾರೆ.

**ಹರಿಕಥಾಮೃತಸಾರ ಗುರುಗಳ |**
**ಕರುಣದಿಂದಾಪನಿತು ಪೇಳುವೆ |**
**ಪರಮ ಭಗವದ್ಭಕ್ತರಿದನಾದರದಿ ಕೇಳುವುದು || ಪ ||**

**ಮೂಲ :**

**ಮೂಲನಾರಾಯಣನು ಮಾಯಾ |**
**ಲೋಲ್ಯನಂತವತಾರನಾಮಕ |**
**ವ್ಯಾಳ ರೂಪ ಜಯಾರಮಣನಾವೇಶನೆನಿಸುವನು ||**
**ಲೀಲೆಗೈವಾನಂತಚೇತನ |**
**ಜಾಲದೊಳು ಪ್ರದ್ಯುಮ್ನ ಬ್ರಹ್ಮಾಂ |**
**ಡಾಲಯದ ಒಳಹೊರಗೆ ನೆಲಸಿಹ ಶಾಂತಿ ಅನಿರುದ್ಧ || ೧ ||**

ಜೀವರು, ಕರ್ಮಮಾಡಬೇಕಾದರೆ, ಸ್ಥೂಲದೇಹವಿಶಿಷ್ಟರಾಗಿ ಕರ್ಮ ಮಾಡ ಬೇಕು. ಈ ಸ್ಥೂಲದೇಹ ಸೃಷ್ಟಿ ಆಗಬೇಕಾದರೆ, ಬ್ರಹ್ಮಾಂಡ ಸೃಷ್ಟಿಯಾಗಿ ಸ್ಥೂಲವೇಹ ಸೃಷ್ಟಿ ಆಗಬೇಕು. ಸ್ಥೂಲದೇಹಗಳೇನು, ಬ್ರಹ್ಮಾಂಡವೇನು, ದಾರು ಸೃಷ್ಟಿಮಾಡಿದ ರೆಂದರೆ ಹೇಳತಾರೆ.

**ಟೀಕಾ :**

ಮೂಲನಾರಾಯಣನು– ಮೂಲ–ಸೃಷ್ಟಿಗೆ ಕಾರಣಭೂತನಾದ, ನಾರಾಯಣನು– ನಾರಾಯಣದೇವರು, ಬ್ರಹ್ಮ ಪ್ರಳಯಾನಂತರದಲ್ಲಿ ತ್ರಿವಿಧ ಜೀವರ, ತೃಣಾಂತವಾಗಿ ಉದರದಲ್ಲಿ ಧರಿಸಿ ಲಕ್ಷ್ಮೀರೂಪರಾದ, ಭೂದೇವೇರು, ವಟಪತ್ರರಾಗಿಯೂ, ಶ್ರೀದೇವೇರು

ಉದಕರೂಪರಾಗಿಯೂ, ಪ್ರಳಯಕಾಲ ರಾತ್ರಿಕಾಲವಾದ್ದರಿಂದ, ದುರ್ಗಾದೇವೇರು ಅಂಧಕಾರರೂಪದಿಂದಲೂ ಇರುವಕಾಲದಲ್ಲಿ ಈ ನಾರಾಯಣದೇವರಿಂದ, ಮಾಯಾ ಲೋಲ–ಮಾಯಾನಾಮಕ ಲಕ್ಷ್ಮೀದೇವೇರಕೂಡ ವಿಹಾರಮಾಡತಕ್ಕ ವಾಸುದೇವರೂಪ ಅಭಿವ್ಯಕ್ತಿಯಾಗಿ, ಅನಂತಾವತಾರನಾಮಕ–ಈ ವಾಸುದೇವರೂಪದಿಂದಲೇ ಅನಂತಾ ನಂತ ಅವತಾರ ರೂಪಗಳು ಅಭಿವ್ಯಕ್ತಿಗೆ ಕಾರಣವಾದ ರೂಪವಾದ್ದರಿಂದ, ಈ ವಾಸುದೇವ ನಿಂದ, ವ್ಯಾಳ–ಸರ್ಪದಂತೆ ದೀರ್ಘಾಕಾರ ಕಾಲದಲ್ಲಿ ಅಂತರ್ಯಾಮಿಯಾದ, ಎರಡನೇ ರೂಪವಾದ, ಜಯಾರಮಣನ–ಜಯಾನಾಮಕರಾದ, ಲಕ್ಷ್ಮೀದೇವೇರ ಪತಿಯಾದ, ಸಂಕರ್ಷಣನ, ರೂಪ–ರೂಪವು, ಈ ರೂಪದಿಂದ, ಆವೇಶನೆನಿಸುವನು–ಸರ್ವಜೀವರ ಚಿನ್ಮನಸ್ಸಿನಲ್ಲಿ ಪ್ರವೇಶನಾಗಿ, ಮನೋದ್ವಾರಾ ವ್ಯಾಪಾರಗಳ ಅಂಕುರ ಮಾಡತಕ್ಕವ ನಾದ್ದರಿಂದ, ಈ ಸಂಕರ್ಷಣನು ಆವೇಶವುಳ್ಳವನು ಎಂತ ಕರೆಸುತ್ತಾನೆ. ಪ್ರದ್ಯುಮ್ನ– ಮೂರನೇದಾದ ರೂಪ, ಪ್ರದ್ಯುಮ್ನರೂಪ, ಅನಂತಚೇತನ ಜಾಲದೊಳು–ಅನಂತರಾದ ಜೀವರ ಸಮೂಹದೊಳು ವಿದ್ಯಮಾನಗಳಾದ, ಆಯಾ ಪ್ರಾಣಿಗಳ ಚಿದಿಂದ್ರಿಯಗಳಾದ ದಶೇಂದ್ರಿಯಗಳಲ್ಲಿ ಪ್ರವೇಶನಾದ ಇವನೇ ದಳಸಂಚಾರಿಯಾದ ಮೂಲೇಶನು. ಇವನು ಸಂಕರ್ಷಣರೂಪದಿಂದ ಅಭಿವ್ಯಕ್ತನಾದವನು. ಲೀಲೆಗೈವ – ಆಯಾ ಇಂದ್ರಿಯಜನ್ಯ ವಿಷಯರೂಪವಾದ ವ್ಯಾಪಾರಗಳ ನಡೆಸುತ್ತಾನೆ. ಶಾಂತಿ ಅನಿರುದ್ಧ–ಶಾಂತಿನಾಮಕ ಲಕ್ಷ್ಮೀಪತಿಯಾದ ಅನಿರುದ್ಧ, ಬ್ರಹ್ಮಾಂಡಾಲಯದ–ಬ್ರಹ್ಮಾಂಡ ಸಾಂಕೇತವಾದ ಮನೆ ಯಲ್ಲೂ, ತದವಕಾಶದಲ್ಲೂ, ಒಳಹೊರಗೆ–ಇರತಕ್ಕ ಜೀವರ ಸ್ಥೂಲದೇಹೇಂದ್ರಿಯಾದಿ ಗಳಲ್ಲೇನು, ತದನ್ಯ ಸರ್ವತ್ರದಲ್ಲೇನು, ಬ್ರಹ್ಮಾಂಡದ ಹೊರಗೆ ಇರುವ ಪ್ರಾಣಿಗಳ ಸ್ಥೂಲ ದಲ್ಲೇನು, ತದನ್ಯ ನವಾರಣಪರಿಯಂತರವಲ್ಲೂ, ನೆಲಸಿಹ–ವ್ಯಾಪ್ತನಾಗಿ ಇದ್ದಾನೆ. ಈ ಅನಿರುದ್ಧರೂಪ ಪ್ರದ್ಯುಮ್ನರೂಪದಿಂದ ಅಭಿವ್ಯಕ್ತಿ ಎಂತ ತಿಳೀಬೇಕು. ಈ ಪ್ರಕಾರ ಮೂಲಕಾರಣನಾದ ನಾರಾಯಣದೇವರ ರೂಪದಿಂದ ಹೊರಟ ರೂಪಗಳು ನಾಲ್ಕು, ಮೂಲರೂಪ ಒಂದು, ಅಂತು ಐದು ರೂಪಗಳು.

| | |
|---|---|
| ೧. ಸೃಷ್ಟಿಕರ್ತ ಅನಿರುದ್ಧ<br>೨. ಸ್ಥಿತಿಕರ್ತ ಪ್ರದ್ಯುಮ್ನ<br>೩. ಸಂಹಾರಕರ್ತ ಸಂಕರ್ಷಣ<br>೪. ಮೋಕ್ಷಪ್ರದ ವಾಸುದೇವ<br>೫. ಸ್ವರೂಪಾನಂದ ಉಣಿಸುವ ನಾರಾಯಣ | ಈ ಪ್ರಕಾರ ಸರ್ವಜಗತ್ಕಾರ್ಯ ಗಳಿಗೂ, ಇನ್ನೂ ಅನೇಕ ಕಾರ್ಯ ಗಳಿಗೂ ಕಾರಣರೂಪಗಳು. ಈ ಐದು ರೂಪಗಳು ಎಲ್ಲಾಕಡಿಯಲ್ಲೂ ವ್ಯಾಪ್ತವಾಗಿ ಇರುತ್ತವೆ. |

**ವಿಶೇಷಾರ್ಥ :** – ಮತ್ತೂ, ಇದೇ ಅನಿರುದ್ಧ, ಬ್ರಹ್ಮಾಂಡಕ್ಕೆ ಸದೃಶವಾದ ಪಿಂಡಾಂಡವೆನ್ನತಕ್ಕ ಜೀವನಸ್ವರೂಪದೇಹದಲ್ಲಿ ಆವಾಸನಾಗಿ ಆಧಾರಭೂತನಾಗಿದ್ದಾನೆ. ನಾರಾಯಣ, ಜೀವನ ಹೃದಯದಲ್ಲಿ ಪ್ರಾದೇಶನಾಮಕನು ಎಂತ ಕರಿಸತಾನೆ. "ಹೃದಯೇ ಸರ್ವಶೋವ್ಯಾಪ್ತಿ ಪ್ರಾದೇಶಃ". ಈ ನಾರಾಯಣನ ಆರನೇರೂಪವಾದ ಪುರುಷರೂಪ,

ಜೀವನ ಸ್ವರೂಪದೇಹಗತ, ಉಚ್ಚಾರಣೆಗೆ ಯೋಗ್ಯಗಳಾದ ಓಂಕಾರಾದಿ ವರ್ಣಗಳಲ್ಲಿ ವ್ಯಾಪ್ತವಾಗಿ ಅದೆ. ಈ ಓಂಕಾರದಿಂದ ವರ್ಣಗಳು, ಮಂತ್ರಗಳು ಅಭಿವ್ಯಕ್ತಿ ಎಂತ ತಿಳಿಯಬೇಕು. ಜೀವರ ಸ್ಥೂಲಶರೀರ ಪ್ರವಿಷ್ಟರೂಪಗಳು ಪ್ರಳಯಕಾಲದಲ್ಲಿ, ಪುನಶ್ಚ ಮೂಲರೂಪದಲ್ಲಿ ಐಕ್ಯ ಐದುತ್ತವೆ. ಈ ಐದು ರೂಪಗಳು, ತ್ರಿಗುಣಕಾರ್ಯಗಳ ನಡಿಸುವ ನಿಮಿತ್ತದಿಂದ, ಪ್ರವೇಶ ಎಂತ ತಾತ್ಪರ್ಯ. ಈ ಐದು ರೂಪಗಳ ನಾಮನಿರ್ವಚನ ಬರಿಯಲ್ಪಡುತ್ತದೆ.

**ನಾರಾಯಣ** ಎಂದರೆ—೧. ಅರ, ನ, ದೋಷಗಳು ಇಲ್ಲದವ. ಈ ದೋಷರಹಿತ ವಾದ ಗುಣಗಳು ದಾವವವೋ ಅವುಗಳ, ಅಯಣ—ಛಂದಾಗಿ ಆಶ್ರಯವುಳ್ಳವನಾದುದ ರಿಂದಲೂ, ೨. ನರಾಃ—ಎಂದರೆ, ಚೇತನರು ಚೇತನಸಂಬಂಥತ್ವದೆಶಿಯಿಂದ, ನಾರಂ— ಜ್ಞಾನವು, ಜ್ಞಾನರೂಪನಾದ್ದರಿಂದಲೂ, ಇಂಥಾ ಜ್ಞಾನರೂಪರಾದವರಿಗೆ, ಅಯಣ— ಆಶ್ರಯರೂಪನಾದ್ದರಿಂದಲೂ, ೩. ಅರ, ನ—ಅಜ್ಞಾನರಹಿತನಾದ್ದರಿಂದಲೂ ಜ್ಞಾನಿಗಳಾದ ಭಕ್ತರಿಗೆ, 'ಅಯಣ' ಆಶ್ರಯನಾದಕಡಿಯಿಂದಲೂ, **ನಾರಾಯಣ** ಎಂತ ತಾತ್ಪರ್ಯ.

೧. ಈ **ನಾರಾಯಣಗೆ** ಅಂಶಿತ್ವವು ಹ್ಯಾಂಗೆ ಅದೆ ಎಂದರೆ, ಈ ನಾಮವು ಅನಿರುದ್ಧಾದಿ ಪಂಚಮೂರ್ತಿಪರವಾಗಿ ನಿರ್ವಚನಮಾಡೋಣದರಿಂದ ಅಂಶಿತ್ವವು ಕೂಡು ತ್ತದೆ. ಅದು ಹ್ಯಾಂಗೆಂದರೆ 'ರೀಙ್' ಕ್ಷಯೇ ಎಂತ ಧಾತು ಇದ್ದಕಾರಣ 'ರ' ಎಂದರೆ ನಾಶ ಎಂತ ಅರ್ಥವು. ಯಾವಾತನ ಜ್ಞಾನಾನಂದಾದಿಗಳಿಗೆ ವೃದ್ಧಿ, ಕ್ಷಯ ಗಳಿಲ್ಲವೋ ಆತನು, ನರ ಎಂತ ಕರಿಸುತ್ತಾನೆ. 'ನರ' ಎಂದರೆ ವಾಯುವು. ಈ ವಾಯುವಿನ ಅಂತರ್ಯಾಮಿತ್ವದಿಂದ ಆಶ್ರಯನಾದಕಾರಣ ನಾರಾಯಣ ಎಂದರೆ, ಅನಿರುದ್ಧನೆಂತ ಅರ್ಥ. ನಾರಾ, ಅನಿರುದ್ಧ ಶಬ್ದಗಳಿಗೆ ಏಕಾರ್ಥತ್ವ ಅದೆ. ಹ್ಯಾಂಗೆಂದರೆ, ಅನಃ ಎಂದರೆ, ವಾಯುದೇವರು (ಅನೋ ವೈ ಪ್ರಾಣಃ ಎಂತ ಶ್ರುತಿ) ಈ ವಾಯುದೇವರಲ್ಲಿ ಅತ್ಯಂತವಾಗಿ, ರುದ್ಧಃ—ಅಂತರ್ಯಾಮಿತ್ವದಿಂದ ಬದ್ಧನಾದಕಾರಣ, ನಾರಾಯಣಾನಿರುದ್ಧ ಶಬ್ದಗಳಿಗೆ ಏಕಾರ್ಥತ್ವ ಇರೋಣದರಿಂದ ನಾರಾಯಣ ಎಂದರೆ, **ಅನಿರುದ್ಧ** ಎಂತ ಸಿದ್ಧ ವಾಯಿತು. ಕ್ಷೀಣವಾಗದೆ ಇದ್ದ ಸುಖ ಜ್ಞಾನಾನಂದಸ್ವರೂಪನಾದಕಾರಣ ನಾರಾಯಣ ಎಂತ ಕರಿಸುತ್ತಾನೆ. ತದಂತರ್ಗತ ಭಗವದ್ರೂಪವು ನಾರಾಯಣ ಎನಿಸುತ್ತದೆ ಎಂತ 'ನಾಮ ಮಹೋದಧಿ' ಪ್ರಮಾಣವದೆ. 'ಆ ಅಧಿಷ್ಠಾನಗತ ಭಗವದ್ರೂಪವು ಆ ಅಧಿಷ್ಠಾನ ನಾಮದಿಂದ ಕರಿಸುತ್ತದೆ' ಎಂತ ಶ್ರೀಮದಾಚಾರ್ಯರ ಉಕ್ತಿ ಇರುತ್ತದೆ.

೨. ದಾವಾತಗೆ ಜ್ಞಾನಾನಂದತಿರೋಭಾವಲಕ್ಷಣ ನಾಶವಿಲ್ಲವೋ, ಆತನೇ ನಾರ; ನಾರ ಎಂದರೆ **ಪ್ರದ್ಯುಮ್ನ**. ನಾರಾಯಣ, ಪ್ರದ್ಯುಮ್ನ ಶಬ್ದಗಳಿಗೆ ಏಕಾರ್ಥತ್ವ ವದೆ. ಹ್ಯಾಂಗೆಂದರೆ, ಪ್ರಕೃಷ್ಟತಿರೋಭಾವರಹಿತವಾದ ದ್ಯುತಿ ಎಂದರೆ ಜ್ಞಾನವು. ಅತಿರೋಹಿತ ವಿಜ್ಞಾನವು ಯಾವಾತಗೆ ಇದೆಯೋ ಆತನೇ ಪ್ರದ್ಯುತಿ ಎಂತ ಕರಿಸುತ್ತಾನೆ. ಪ್ರದ್ಯುತಿ ಎಂದರೆ ವಾಯುದೇವರು, ಆತನಿಂದ ತಿಳಿಯಲಿಕ್ಕೆ ಯೋಗ್ಯನಾದಕಾರಣ,

'ನಾರ' ಎಂದರೆ ಪ್ರದ್ಯುಮ್ನ. 'ಅತಿರೋಹಿತ ವಿಜ್ಞಾನವಿಶಿಷ್ಟನಾದಕಾರಣ, ವಾಯು ದೇವರು, 'ನಾರ' ಎಂತ ಕರಿಸುತ್ತಾರೆ' ಎಂತ ಶ್ರೀಮದಾಚಾರ್ಯರ ಉಕ್ತಿ ಇರುತ್ತದೆ. ಈ ಮುಖ್ಯಪ್ರಾಣನ ವಿಜ್ಞಾನದಿಂದ ಜ್ಞೇಯತ್ವವಿದ್ದ ಕಾರಣ, **ಪ್ರದ್ಯುಮ್ನನು** ನಾರಾಯಣ ಎಂತ ಕರಿಸುತ್ತಾನೆ.

೩. 'ಅರ' ಶಬ್ದವಾಚ್ಯವಾದ ದುಃಖಗಳನ್ನು ನಾಶಮಾಡುತ್ತಾನಾದಕಾರಣ, 'ನಾರ' ಎಂದರೆ ವಾಯುದೇವರು. ಈ ವಾಯ್ವಂತರ್ಯಾಮಿತ್ವವಿದ್ದದ್ದರಿಂದ **ಸಂಕರ್ಷಣನು** ನಾರಾಯಣ ಎಂತ ಕರಿಸುತ್ತಾನೆ ನಾರಾಯಣ ಸಂಕರ್ಷಣ ಶಬ್ದಗಳಿಗೆ ಏಕಾರ್ಥತ್ವವದೆ. ಹ್ಯಾಂಗೆಂದರೆ, ದೋಷ, ಅರ, ಶಬ್ದಗಳಿಗೆ ಏಕಾರ್ಥತ್ವ ವಿದ್ದಕಾರಣ 'ಅರ' ಎಂದರೆ ದೋಷ. ಭಕ್ತಜನರ ದೋಷನಾಶಕನಾದಕಾರಣ, ವಾಯುವು 'ನಾರ' ಶಬ್ದವಾಚ್ಯನು. ಈ ವಾಯ್ವಂತರ್ಯಾಮಿಯಾಗಿ, ಭಗವದುಪಾಸನಾಮಾಡುವ ಭಕ್ತರ ಪಾಪಾಕರ್ಷಣಮಾಡುವನಾದ್ದರಿಂದಲೂ, ಇವರಿಗೆ ಆಶ್ರಯಭೂತನಾಗಿ ಇರುವದ ರಿಂದಲೂ, **ಸಂಕರ್ಷಣನು**, ನಾರಾಯಣ ಎಂತ ಕರಿಸುತ್ತಾನೆ.

೪. 'ನಾರ' ಶಬ್ದಕ್ಕೆ 'ವಾಯು' ವಾಚಕತ್ವವಿದ್ದಕಾರಣ, ವಾಯುದೇವರಿಗೆ ಸರ್ವತ್ರವ್ಯಾಪ್ತಿ, 'ನಾರ' ಎಂದರೆ ವಾಯುವು. ನಾರಾಯಣ **ವಾಸುದೇವ** ಶಬ್ದಗಳಿಗೆ ಏಕಾರ್ಥತ್ವವದೆ. 'ರಳ ಗತೌ' ಎಂತ ಧಾತುವಿದ್ದಕಾರಣ, 'ರ' ಎಂದರೆ ಗಮನ ವೆಂತ ಅರ್ಥವು. ಏಕತ್ರಗಮನವು ದಾವಾತಗೆ ಇಲ್ಲವ್ವೋ ಆತ, ಅರ ಎಂತ ಕರೆಸುತ್ತಾನೆ. ಸರ್ವತ್ರಗಮನವು ಯಾವಾತಗೆ ಅದೆಯೋ ಆತನು 'ನಾರ' ಎಂತ ಕರೆಸುತ್ತಾನೆ. ಹೀಂಗೆ ಹೇಳುವದರಿಂದ ವಾಯುದೇವರಿಗೆ ಸರ್ವತ್ರ ವ್ಯಾಪ್ತಿತ್ವ ಸಿದ್ಧವಾಯಿತು. ಸರ್ವತ್ರ ವಸನಶೀಲತ್ವ ಕ್ರೀಡಾದಿಗುಣವಿಶಿಷ್ಟತ್ವ ಹೇತುಗಳಿಂದ ವಾಸುದೇವನು, ವಾಯ್ವಂತಸ್ಥ ನಾದ ಕಾರಣದಿಂದಲೂ, ಆಶ್ರಯನಾದ ಕಾರಣದಿಂದಲೂ ನಾರಾಯಣ ಎಂತ ಕರೆಸುತ್ತಾನೆ. ಹೀಂಗೆ ಅಂಬೋಣದರಿಂದ ನಾರಾಯಣ ಎಂದರೆ **ವಾಸುದೇವ**ನೆಂತ ಸಿದ್ಧವಾಯಿತು.

ಇಂಥಾ ನಾರಾಯಣ ಶಬ್ದವಾದ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸು ದೇವಾಖ್ಯ ಚತುರ್ಮೂರ್ತಿಗಳಿಗೆ ಆಶ್ರಯನಾದವನು ನಾರಾಯಣನು ಎಂಬುವುದರಿಂದ, ನಾರಾಯಣಗೆ ಅಂಶಿತ್ವವು ಸಿದ್ಧವಾಯಿತು. ಈ ನಾರಾಯಣರೂಪವು ಬ್ರಹ್ಮಾಂಡದ ಬಹಿರ್ಭಾಗಸ್ಥ ಅವ್ಯಾಕೃತಾಕಾಶವು ವ್ಯಾಪಿಸಿಕೊಂಡು 'ವಿಶ್ವತಃ ಚಕ್ಷುಃ, ವಿಶ್ವತೋ ಮುಖೋ, ವಿಶ್ವತೋ ಬಾಹುಃ, ವಿಶ್ವತಃ ಪಾದಃ, ಅನಂತ ಶೀರ್ಷಾನಂತಾಕ್ಷ್ಣಾನಂತ, ಮುಖಾನಂತಬಾಹೂನಂತಪಾದ,' ಅನಂತಾನಂತಾವಯುವಗಳಿಂದ ಪೂರ್ಣವಾದ ಅಂಶ ರೂಪದಲ್ಲಿ, ಅನಿರುದ್ಧಾದಿ ಅನಂತಾನಂತಾಂಶರೂಪಗಳು, ಅನಂತಾನಂತ ಗುಣ, ರೂಪ, ನಾಮ ಕ್ರಿಯಾಯುಕ್ತವಾಗಿ ಪಾದಾರಂಭಮಾಡಿ, ಶಿರಃಪರಿಯಂತ, ತೆನಿಯಲ್ಲಿ ಜೋಳ ಗಳು ಇದ್ದಂತೆ ವ್ಯಾಪಿಸಿಕೊಂಡಿವೆ. ಈ ನಾರಾಯಣನ ಗುಣ, ರೂಪ, ಕ್ರಿಯೆಗಳ ಆದ್ಯಂತ

ತಿಳಿಯೋನಿಮಿತ್ತ, ಶ್ರೀದೇವಿಯರು ತಾವು ಅನಂತಾಂಶಗಳಿಂದ ಯುಕ್ತರಾಗಿ ಒಂದು ಗುಣಗಣನಾ ಮಾಡಿದಾಗ್ಯೂ ಅದರಲ್ಲಿ ಅನಂತತ್ವವನ್ನು ಕಂಡು ಬೆರಗಾಗಿ ಆನಂದ ಸಮುದ್ರದಲ್ಲಿ ಮಗ್ನರಾದರು. ಆ ನಾರಾಯಣನು ಜಗತ್ಸೃಷ್ಟಿಮಾಡಬೇಕೆಂಬ ಇಚ್ಛಾ ಉಳ್ಳವನಾಗಿ ತನ್ನ ಮೂಲರೂಪ ನಾರಾಯಣನ ದೆಶೆಯಿಂದ, ಅನಂತಾವತಾರಗಳಿಗೆ ಆಶ್ರಯವಾದ ಅವತಾರಾಭಿವ್ಯಕ್ತಿಗೆ ವ್ಯಂಜಕವಾದ ಪ್ರಳಯಸಮುದ್ರಶಾಯಿಯಾದ ಕಾರಣ, ನಾರಾಯಣ ಅನಂತಗುಣಪೂರ್ಣನಾದಕಾರಣ, ಬ್ರಹ್ಮನೇ ಮೊದಲಾದ ಅನಂತ ನಾಮಗಳುಳ್ಳ ಪದ್ಮನಾಭರೂಪವನ್ನು ಅಭಿವ್ಯಕ್ತಿ ಮಾಡಿದನು ಎಂತ ತಾತ್ಪರ್ಯ.

**ಐದು ಕಾರಣರೂಪ ಇಪ್ಪ ।**
**ತ್ತೈದು ಕಾರ್ಯಗಳೆನಿಸುವುವು ಆ ।**
**ರೈದುರೂಪದಿ ರಮಿಸುತಿಪ್ಪನು ಈ ಚರಾಚರದಿ ॥**
**ಭೇದವರ್ಜಿತ ಮೂರ್ಜಗಜ್ಜ ।**
**ನ್ಮಾದಿಕಾರಣ ಮುಕ್ತಿದಾಯಕ ।**
**ಸ್ವೋದರದೊಳಿಟ್ಟೆಲ್ಲರನ ಸಂತೈಪ ಸರ್ವಜ್ಞ ॥ ೨ ॥**

ಪೂರ್ವೋಕ್ತ ಐದು ರೂಪಗಳಿಂದಲೇ ಜಗತ್ಕಾರ್ಯ ನಡಸತಾನೆ ಎಂತ ಹೇಳತಾರೆ.

ಐದು ಕಾರಣರೂಪ–ಪ್ರಪಂಚ ಸೃಷ್ಟ್ಯಾದಿ ವ್ಯಾಪಾರಕ್ಕೆ ಕಾರಣವಾದ ರೂಪಗಳು ಪೂರ್ವೋಕ್ತ ಐದು, ಇಪ್ಪತ್ತೈದು ಕಾರ್ಯಗಳೆನಿಸುವುವು–ತತ್ತ್ವನ್ಯಾಸ ರೀತ್ಯಾ, ತತ್ತ್ವಗಳು ಇಪ್ಪತ್ತುನಾಲ್ಕು, ಅವ್ಯಕ್ತ ತತ್ತ್ವಗಳು ಎರಡು ; ಅವು ದಾವುವೆಂದರೆ ರಮಾಭಿಮನ್ಯವಾದ ಅವ್ಯಕ್ತ ತತ್ತ್ವ ಒಂದು, ಬ್ರಹ್ಮಾಣೀ, ಭಾರತೀ ಅಭಿಮನ್ಯವಾದ ಅವ್ಯಕ್ತ ತತ್ತ್ವ ಒಂದು, ಅಂತು ಇಪ್ಪತ್ತೈದು. ಈ ಇಪ್ಪತ್ತೈದು ಕಾರ್ಯಗಳಿಗೆ ಅನಿರುದ್ಧಾದಿ ಪಂಚರೂಪಗಳಿಂದ ಪ್ರತಿ ಒಂದು ರೂಪದಿಂದಲೂ, ಅನಿರುದ್ಧಾದಿ ಐದು ರೂಪಗಳು ಅಭಿವ್ಯಕ್ತಿಯಾಗಿ, ಇಪ್ಪತ್ತೈದು ಕಾರ್ಯಗಳಲ್ಲಿ ಪ್ರವೇಶಮಾಡಿ, ಇಪ್ಪತ್ತೈದು ಕಾರ್ಯರೂಪಗಳೆಂದು ಕರಿಸೋವಾಗತವೆ. ಈ ಚರಾಚರದಿ–ಈ ವಿದ್ಯಮಾನವಾದ ಬ್ರಹ್ಮಾಂಡದಲ್ಲಿ ಸೃಜ್ಯರಾದ ಚೇತನ ಜೀವರಲ್ಲೂನೂ, ವೃಕ್ಷಾದಿ ಜಡ ಜೀವರಲ್ಲೂನೂ, ಸ್ವರೂಪ ದೇಹದಲ್ಲೂನೂ, ಆರೈದು ರೂಪದಿ–ಮೂವತ್ತು ರೂಪಗಳಿಂದ (ಎಂದರೆ, ಕಾರಣ ರೂಪಗಳು ಐದು, ಕಾರ್ಯ ರೂಪಗಳು ಇಪ್ಪತ್ತೈದು, ಅಂತು ಮೂವತ್ತು ರೂಪಗಳು), ರಮಿಸುತಿಪ್ಪನು–ಕ್ರೀಡಾ ಮಾಡತಾ ಇರತಾನೆ. ಭೇದವರ್ಜಿತ–ತನ್ನ ಮೂಲರೂಪಕ್ಕೂ, ಅವತಾರ ರೂಪಗಳಿಗೂ, ಮತ್ತು ಅಭಿವ್ಯಕ್ತ ರೂಪಗಳಿಗೂ ಪರಸ್ಪರ ಜ್ಞಾನಾದಿ ಬಲಗಳಿಂದ ಅತ್ಯಂತ ಅಭೇದ ಉಳ್ಳವನು, ಮೂರ್ಜಗಜ್ಜನ್ಮಾದಿಕಾರಣ–ಮೂರು ಲೋಕಗಳು (ಹದಿನಾಲ್ಕು ಲೋಕಗಳೂ ಗ್ರಾಹ್ಯ), ತದ್ಗತ ಜೀವರನ್ನ, ಜನ್ಮ, ಎಂದರೆ, ಅನಿರುದ್ಧ ರೂಪದಿಂದ ಸೃಷ್ಟಿ (೧), ಆದಿ ಶಬ್ದದಿಂದ ಪ್ರದ್ಯುಮ್ನ ರೂಪದಿಂದ ಸ್ಥಿತಿ (೨), ಸಂಕರ್ಷಣ ರೂಪದಿಂದ ಸಂಹಾರ

(೩), ಮುಕ್ತಿದಾಯಕ ವಾಸುದೇವರೂಪದಿಂದ ಮುಕ್ತಿ (೪), ಇವುಗಳಿಗೆ ಕಾರಣನು, ಸರ್ವಜ್ಞ–ಸರ್ವಜ್ಞನಾದ ನಾರಾಯಣ ರೂಪದಿಂದ ಬ್ರಹ್ಮ ಪ್ರಳಯದಲ್ಲಿ, ಎಲ್ಲರನ–ಸ್ಥಾವರ ಜಂಗಮಾತ್ಮಕ ಪ್ರಾಣಿಗಳನ್ನು, ಹಾಂಗೆ ಯಾವತ್ತೂ ಶುದ್ಧ ಜಡಗಳನ್ನು, ಸ್ವೋದರದೊಳಿಟ್ಟು–ತನ್ನ ಉದರದಲ್ಲಿ ಇಟ್ಟವನಾಗಿ, ಸಂತೈಪ–ಸಂರಕ್ಷಣಾ ಮಾಡತಾನೆ.

**ವಿಶೇಷಾರ್ಥ :**–ಸರ್ವಜ್ಞ ಎಂದರೆ, ಸ್ವಪರಗತ ಅಶೇಷ, ವಿಶೇಷ, ಸರ್ವಾರ್ಥ ವಿಷಯಕವಾದದ್ದರನ್ನ ತಿಳಿದವ. ಮತ್ತು ಆರೈದು ಎಂದರೆ, ಮೂವತ್ತು ರೂಪ ಎಂತಲೂ ತಿಳಿಯಬಹುದು. ಆರನೇ ರೂಪದಿಂದ ಓಂಕಾರ ಶಬ್ದವಾಚ್ಯನು. ವ್ಯಾಲಿ ಸ್ಥೂಲ ಸೃಷ್ಟಿಗೆ ಅನಿರುದ್ಧ ಎಂತ ಹೇಳಲ್ಪಟ್ಟಿದೆ. ಸೂಕ್ಷ್ಮ ಸೃಷ್ಟಿಗೆ ನಾರಾಯಣ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಈ ನಾಲ್ಕು ರೂಪಗಳಿಂದ, ಲಿಂಗದೇಹದ ತ್ರಿಗುಣಾತ್ಮಕ ಉಪಾದಾನ ಮಾಡಿದ ಸೃಷ್ಟಿ, ಸೂಕ್ಷ್ಮ ಸೃಷ್ಟಿ ಒಂದು ; ನಾರಾಯಣ ಅವ್ಯಕ್ತ ತತ್ತ್ವ ಸೃಷ್ಟಿಮಾಡಿದ ಸೃಷ್ಟಿ ಒಂದು ; ವಾಸುದೇವ, ಮಹತತ್ತ್ವ ಸೃಷ್ಟಿಮಾಡಿದ ಸೃಷ್ಟಿ ಒಂದು ; ಸಂಕರ್ಷಣ, ಅಹಂಕಾರ ತತ್ತ್ವ ಸೃಷ್ಟಿಮಾಡಿದ ಸೃಷ್ಟಿಒಂದು ; ಪ್ರದ್ಯುಮ್ನ, ಸರ್ವಪ್ರಾಣಿಗಳಿಗೆ ಅನಿರುದ್ಧ ಶರೀರ ಸೃಷ್ಟಿಮಾಡಿದ ಸೃಷ್ಟಿ ಒಂದು ; ಅಂತು ನಾಲ್ಕು, ಇಲ್ಲೀವರೆಗೆ ಸೂಕ್ಷ್ಮ ಸೃಷ್ಟಿ. ನಂತರ ಅನಿರುದ್ಧ, ಲಿಂಗೋಪಾದಾನಕ್ಕೆ ಅನ್ಯವಾದ ಮೂಲ ಜಡ ಪ್ರಕೃತಿಯಿಂದ ಅನಿರುದ್ಧ ಸ್ಥೂಲದೇಹಗಳೂ ಸೃಷ್ಟಿಮಾಡಿದ, ಬ್ರಹ್ಮಾಂಡವೂ ಸೃಷ್ಟಿ ಮಾಡಿದ. ಸ್ವರೂಪ ದೇಹದಲ್ಲಿ ಯಾವತ್ತೂ ರೂಪಗಳು ಇದ್ದೋಪಾದಿಯಲ್ಲಿ ಸ್ಥೂಲ ದೇಹಗಳಲ್ಲೂನೂ ತಿಳಿಯಬೇಕು. ಈ ಪ್ರಕಾರ ತಿಳಿಯುತ್ತಾ ಬಂದರೆ, ಕರ್ಮ ವಿಮೋಚನಾ ಆಗುತ್ತಾ ಬರುತ್ತದೆ ಎಂತ ತಾತ್ಪರ್ಯ.

**ಕಾರ್ಯ ಕಾರಣ ಕರ್ತೃಗಳೊಳು ಸ್ವ ।**
**ಭಾರ್ಯರಿಂದೊಡಗೂಡಿ ಕಪಿಲಾ ।**
**ಚಾರ್ಯ ಕ್ರೀಡಿಸುತಿಪ್ಪ ತನ್ನೊಳು ತಾನೆ ಸ್ವೇಚ್ಛೆಯಲಿ ॥**
**ಪ್ರೇರ್ಯನಲ್ಲೆ ರಮಾಬ್ಜಭವ ಭವ ।**
**ರಾರ್ಯ ರಕ್ಷಿಸಿ ಶಿಕ್ಷಿಸುವನು ಸ್ವ ।**
**ವೀರ್ಯದಿಂದಲಿ ದಿವಿಜದಾನವತತಿಯನನುದಿನದಿ ॥ ೩ ॥**

ಪೂರ್ವೋಕ್ತಪ್ರಕಾರ ಸ್ವರೂಪದಲ್ಲಿ, ಸ್ಥೂಲದಲ್ಲಿ ವ್ಯಾಪಾರಗಳ ಮಾಡಿಸಿ ದೇವತೆಗಳ ರಕ್ಷಣೆ, ದೈತ್ಯರ ಶಿಕ್ಷೆ ಮಾಡತಾನೆ ಎಂತ ಹೇಳತಾರೆ.

ಕಾರಣ–ಸೂಕ್ಷ್ಮ ಸೃಷ್ಟಿಗೂನೂ, ಸ್ಥೂಲ ಸೃಷ್ಟಿಗೂನೂ, ಕಾರಣಗಳು ಎರಡು. ಸೂಕ್ಷ್ಮ ಸೃಷ್ಟಿ ಅನಿರುದ್ಧ ದೇಹದ ಪರಿಯಂತರವೆ. ಇದಕ್ಕೆ ಉಪಾದಾನ ಕಾರಣ ಲಿಂಗ ದೇಹ ; ಸ್ಥೂಲ ಸೃಷ್ಟಿಗೆ ಉಪಾದಾನಕಾರಣ, ಅನ್ಯವಾದ ಮೂಲ ಜಡಪ್ರಕೃತಿ; ಇದರಿಂದ ಬ್ರಹ್ಮಾಂಡ ನವಾವರಣ ಲೋಕಗಳು, ಪ್ರಾಣಿಗಳ ಸ್ಥೂಲದೇಹ, ಇವುಗಳ ಸೃಷ್ಟಿ.

ಅಂತು ಉಪಾದಾನ ಕಾರಣಗಳು ಎರಡು ಎಂತ ಅರ್ಥ. ಕಾರ್ಯ—ಲಿಂಗೋಪಾದಾನ ಕಾರ್ಯ ಅನಿರುದ್ಧ ಶರೀರದವರೆಗೂ; ಮೂಲ ಜಡಪ್ರಕೃತಿ ಉಪಾದಾನಕಾರ್ಯ, ಬ್ರಹ್ಮಾಂಡಾದಿಗಳು. ಈ ಕಾರಣ ಕಾರ್ಯಗಳಲ್ಲಿ, ಕರ್ತೃಗಳೊಳು—ಅನಾದಿ ಕರ್ಮ ವನ್ನನುಸರಿಸಿ ದೇಹದ್ವಾರಾ, ಪಾಪಪುಣ್ಯ ಭೋಗಮಾಡತಕ್ಕ ಕರ್ತೃಗಳಾದ ಜೀವರೊಳು ಈ ಯಾವತ್ತರಲ್ಲಿ, ಸ್ವಭಾರ್ಯರಿಂದೊಡಗೂಡಿ—ಪೂರ್ವೋಕ್ತ ಮೂವತ್ತು ರೂಪಗಳಿಂದ (ಹಾಂಗೇ ರಮಾರೂಪಗಳು ಅಭಿವ್ಯಕ್ತಿ), ಈತನ ಪತ್ನೀರಿಂದ ಸಹಿತನಾಗಿ, ಕಪಿಲಾ ಚಾರ್ಯ—ಜ್ಞಾನರೂಪಿಯಾದ ಪರಮಾತ್ಮ, ಸ್ವೇಚ್ಛೆಯಲಿ—ತನ್ನ ಇಚ್ಛಾದಿಂದಲಿ, ತನ್ನೊಳು ತಾನೆ—ತನ್ನಲ್ಲಿ ಇರತಕ್ಕ ತನ್ನ ಮನಾದಿ ಇಂದ್ರಿಯಗಳಲ್ಲಿ ತತ್ತಾ್ವಭಿಮಾನಿ ದೇವತಾನಾಮಗಳಿಂದ ತಾನೇ, ಕ್ರೀಡಿಸುತಿಪ್ಪ—ರಮಣಮಾಡತಾ ಇರತಾನೆ. ಅಂದರೆ ಸ್ವರಮಣ ಎಂತ ಅರ್ಥ. ಅಲ್ಲೆ—ಇಂಥಾ ಪರಮಾತ್ಮ ಆಯಾ ಜೀವರ, ಸ್ವರೂಪ, ಬಾಹ್ಯ ಮನೋ ಇಂದ್ರಿಯಾದಿಗಳಲ್ಲಿ ಇದ್ದು, ರಮಾಬ್ಜಭವ ಭವರ—ಲಕ್ಷ್ಮೀದೇವೇರು, ಬ್ರಹ್ಮ ದೇವರು, ರುದ್ರದೇವರು, ಇವರೇಮೊದಲಾದ ತೃಣಾಂತ ಸರ್ವ ಪ್ರಾಣಿಗಳಿಗೆ, ಆರ್ಯ—ಸ್ವಾಮಿಯಾದ, ಜ್ಞಾನರೂಪಿಯಾದ ಪರಮಾತ್ಮನು, ಪ್ರೇರ್ಯನಲ್ಲೆ—ಅವರವರ ಸ್ವರೂಪ ಜ್ಞಾನವನ್ನನುಸರಿಸಿ, ಮುಕ್ತಿಯೋಗ್ಯರಲ್ಲಿ ಸಮಾಚೀನ ಜ್ಞಾನ, ತಮೋಯೋಗ್ಯರಲ್ಲಿ ವಿಪರೀತ ಜ್ಞಾನ, ಈ ಪ್ರಕಾರ ಸ್ವರೂಪಯೋಗ್ಯತಾವನ್ನು ಅನುಸರಿಸಿ ಪ್ರೇರಕನು, ಅನುದಿನದಿ—ಸ್ವರೂಪದಲ್ಲಿ ತಾನೇ ಆಗಿನ್ನೂ, ಸ್ಥೂಲದೇಹದಲ್ಲಿ ದೇವತೆಗಳದ್ವಾರಾ ಪ್ರತಿ ದಿನದಲ್ಲೂ ಪ್ರೇರಕನಾಗಿನ್ನೂ, ಸ್ವವೀರ್ಯದಿಂದಲಿ—ತನ್ನ ಸಾಮರ್ಥ್ಯದಿಂದ, ದಿವಿಜ—ದೇವತೆಗಳ, ತೃಣಾಂತ ಮುಕ್ತಿಯೋಗ್ಯರ, ತತಿಯ—ಈ ಸಮೂಹವನ್ನು, ರಕ್ಷಿಸಿ-ಸಂರಕ್ಷಣ ಮಾಡಿ, ದಾನವ—ದೈತ್ಯರು (ತೃಣಾಂತ ಇವರುಗಳನ್ನ), ಶಿಕ್ಷಿಸುವನು—ನರಕದಲ್ಲಿ ಶಿಕ್ಷಾ ಮಾಡತಾನೆ ಎಂತ ತಾತ್ಪರ್ಯ.

**ವಿಶೇಷಾರ್ಥ :** — ಕಪಿಲ ಎಂದರೆ, ಸಂಸಾರಕಂಪಲಯಹೇತುತ್ವಾತ್ಕಪಿಲಃ । ಇತ್ಯಸ್ಮಿನ್ನರ್ಥೇ ವಿಪ್ರತಿಪತ್ತಿರ್ನಾಸ್ತೀತ್ಯಾಹ । ಸಾಂಖ್ಯೇತಿ । ಸಾಂಖ್ಯಶಾಸ್ತ್ರಂ ಕೃತ್ವಾ ಪ್ರವರ್ತಕತ್ವೇನ ತದಾಚಾರ್ಯಾಣಾಂ ಪುರುಷಾಣಾಂ ಪರಮಗುರುತ್ವೇನ ತೈಃ ಸು ಸಮಂತೋಽವಿಪ್ರತಿಪನ್ನಃ ಕುತರ್ಕ್ಯಾಖ್ಯಾಹಿತಸಾಂಖ್ಯಕರ್ತಾ ನಾಯಮಿತ್ಯಾಹ । ಸಿದ್ಧೇತಿ ಸಿದ್ಧಾ ಮುಕ್ತಾಃ ತೇಷಾಂ ಗಣಸ್ಯಾಧೀಶಃ ಅನ್ಯಕಪಿಲಸ್ಯೈತದಭಾವಾತ್ ॥ ಎಂತ ಅನುಸಂಧಾನಮಾಡಿ ಕಾರ್ಯ ಮಾಡತಾಬಂದರೆ, ಕರ್ಮವಿಮೋಚನ ಆಗತಾ ಬರುತ್ತದೆ. ಕರ್ಮ ಉತ್ಪತ್ತಿ ಆದಿಯಲ್ಲಿ ಜೀವನಲ್ಲಿ, ಅಂತ್ಯದಲ್ಲಿ ಸ್ಥೂಲದೇಹದಲ್ಲಿ ಎಂತ ತಾತ್ಪರ್ಯ.

**ಈ ಸಮಸ್ತ ಜಗತ್ತಿನೊಳಗಾ ।**
**ಕಾಶದೊಳಗಿರುತಿಪ್ಪ ವ್ಯಾಪ್ತಾ ।**
**ವೇಶನವತಾರಾಂತರಾತ್ಮಕನಾಗಿ ಪರಮಾತ್ಮ ॥**

**ನಾಶರಹಿತ ಜಗತ್ತಿನೊಳಗವ ।**
**ಕಾಶದನು ತಾನಾಗಿ ಯೋಗೀ ।**
**ಶಾಶಯುಸ್ಥಿತ ತನ್ನೊಳೆಲ್ಲರನಿಟ್ಟು ಸಲಹುವನು ॥ ೪ ॥**

ಈ ಪೂರ್ವೋಕ್ತ ಶ್ರೀಪರಮಾತ್ಮ ಒಬ್ಬನೇ ಸಮಸ್ತಕ್ಕೂ ಆಧಾರನಾಗಿ ಇದ್ದಾನೆ ಎಂತ ಹೇಳತಾರೆ.

ಆಕಾಶದೊಳಗೆ– ಜಡಾಕಾಶದಲ್ಲಿ, ಈ ಸಮಸ್ತ ಜಗತ್ತಿನೊಳಗೆ – ಸಮಸ್ತ ಜಡ ದ್ರವ್ಯಗಳು, ಸಮಸ್ತರ ಸ್ಥೂಲದೇಹ, ಹಾಂಗೆ, ಈ ವ್ಯಾಪಿಸಿರುವ ಆಕಾಶದಲ್ಲೂ, ವ್ಯಾಪ್ತ– "ತತ್ಸೃಷ್ಟ್ವಾ ತದನು ಪ್ರಾವಿಶತ್" ಎಂಬುವ ಶ್ರುತಿರೀತ್ಯಾ ತದಾಕಾರನಾಗಿ, ಸಾವಯುವ ನಾಗಿ ಪೂರ್ವೋಕ್ತ ಮೂವತ್ತು ರೂಪಗಳಿಂದ, ಇರುತಿಪ್ಪ – ಇರೋವನಾಗಿದ್ದಾನೆ. ನಾಶರಹಿತ–ಅನಾದ್ಯನಂತಕಾಲಕ್ಕೂ ನಾಶ ಇಲ್ಲದ, ಈಶ್ವರನಿಂದ ರಚಿತವಲ್ಲದ, ಜಗತ್ತಿನೊಳಗೆ–ತ್ರಿವಿಧಜೀವಸ್ವರೂಪದೊಳು, ಪರಮಾತ್ಮ–ಪರಂ ಆತ್ಮ ಎಂತ ಪದ, ಪರಂ ಎಂದರೆ, ಜಡೇಂದ್ರಿಯಗಳಿಗೆ ಅನ್ಯವಾದ ಸ್ವರೂಪೇಂದ್ರಿಯಗಳನ್ನು, ಆತ್ಮ ಎಂದರೆ, ನಿಯಮನ ಮಾಡೋವಿಷಯದಲ್ಲಿ ಸ್ವಾಮಿಯಾದವ. ಇಂಥಾ ಶ್ರೀಹರಿ, ಅಂತರಾತ್ಮಕನು– ಅಂತರ–ಜೀವನ ಮಧ್ಯದಲ್ಲೇನು, ಜೀವೇಂದ್ರಿಯಗಳ ಮಧ್ಯದಲ್ಲೇನು, ಇನ್ನೂ ಯಾವತ್ತೂ ತತ್ತ್ವಗಳ ಮಧ್ಯದಲ್ಲೇನು, ಆತ್ಮ–ನಿಯಾಮಕನಾದವ, ಆಗಿ–ಈ ಪ್ರಕಾರ ಜೀವರಿಗೆ ಬಿಂಬನಾಗಿ, ಸ್ಥಿತ–ಅನಾದ್ಯನಂತಕಾಲಕ್ಕೂ ಅವಿಯೋಗನಾಗಿದ್ದಾನೆ. ಮತ್ತು, ಅವತಾರ– ಶ್ರೀ ವಾಸುದೇವರೂಪದಿಂದ ಹೊರಟ ಆಯಾ ಜೀವಾಕಾರ, ಅವತಾರ ರೂಪಗಳಿಂದ ಆಯಾ ಜೀವರಲ್ಲಿ, ಆವೇಶನು–ಪ್ರವೇಶಮಾಡಿ ನಿತ್ಯ ಬಿಂಬನಾದ ತನ್ನ ರೂಪದ ಕೂಡಾ ಕೂಡಿಕೊಂಡು, ತಾನಾಗಿ–ಜೀವಸ್ವರೂಪದಲ್ಲಿ ತದ್ಗತ ತತ್ತ್ವಗಳಿಗೆ ತಾನೇ ನಿಯಾಮಕ ನಾಗಿ ಇಚ್ಛಾದಿಗಳ ಉತ್ಪತ್ತಿಮಾಡಿ, ಅವಕಾಶದನು–ಆ ಉತ್ಪನ್ನವಾದ ಇಚ್ಛಾದಿಗಳ ಕಾರ್ಯ ನಡಿಯಬೇಕಾದರೆ, ಸ್ಥೂಲದೇಹದಲ್ಲಿ ಬಿಂಬನಾಗಿ ಇದ್ದು, ಬ್ರಹ್ಮಾದಿ ತತ್ತ್ವ ದೇವತೆಗಳದ್ವಾರಾ ಸ್ಥೂಲೇಂದ್ರಿಯಗಳಿಂದ ಕ್ರಿಯಾದಿಗಳು ಆಗುವಂತೆ ಅವಕಾಶ ಕೊಡ ತಾನೆ, ಎಂದರೆ ಇಚ್ಛಾಮಾತ್ರವೆ ಸ್ವರೂಪದಲ್ಲಿ ದಶೇಂದ್ರಿಯಗಳ ಕ್ರಿಯಾಕ್ಕೆ ಅಲ್ಲಿ ಅವಕಾಶ ವಿಲ್ಲ, ಕ್ರಿಯಾವಕಾಶ ಸ್ಥೂಲದೇಹೇಂದ್ರಿಯಾದಿಗಳಲ್ಲಿ ಸ್ವರೂಪ ಬಿಂಬನ ಕಾರ್ಯ ಪೃಥಕ್ ಆಗಿ ಲಿಂಗಭಂಗಾನಂತರ ಈ ತ್ರಿಗುಣಕಾರ್ಯ ಪ್ರವಿಷ್ಟರೂಪದಿಂದ ಎಂತ ಅರ್ಥ. ಯೋಗೀಶ–ಭಗವದ್ಭಕ್ತರಾದ ಜ್ಞಾನಿಗಳಿಗೆ ಸ್ವಾಮಿ, ಆಶಯು–ಹಾಂಗೂ ಆಶ್ರಯನಾಗಿ, ತನ್ನೊಳೆಲ್ಲರನು–ತನ್ನ ಭಕ್ತರನ್ನೂ, ದ್ವೇಷಿಗಳನ್ನೂ, ಇನ್ನೂ ಸಮಸ್ತ ಪದಾರ್ಥ ಗಳನ್ನೂನು, ಪ್ರಳಯಕಾಲದಲ್ಲಿ ತನ್ನ ನಾರಾಯಣರೂಪದೊಳು, ಇಟ್ಟು ಸಲಹುವನು– ಇಟ್ಟವನಾಗಿ ಸಂರಕ್ಷಿಸುತ್ತಾನೆ ಎಂತ ತಿಳಿಯುತ್ತಾ ಬಂದರೆ, ಕರ್ಮವೋಚನಿಯಾಗುತ್ತದೆ ಎಂತ ತಾತ್ಪರ್ಯ.

**ದಾರುಪಾಷಾಣಗತ ಪಾವಕ ।**
**ಬೇರೆಬೇರಿಪ್ಪಂತೆ ಕಾರಣ ।**
**ಕಾರ್ಯಗಳ ಒಳಗಿದ್ದು ಕಾರಣಕಾರ್ಯನೆಂದೆನಿಸಿ ॥**
**ತೋರಿಕೊಳ್ಳದೆ ಎಲ್ಲರೊಳು ವ್ಯಾ ।**
**ಪಾರಮಾಡುವ ಯೋಗ್ಯತೆಗಳನು ।**
**ಸಾರ ಫಲಗಳನುಣಿಸಿ ಸಂತೈಸುವ ಕೃಪಾಸಾಂದ್ರ ॥ ೫ ॥**

ಎಲ್ಲರೊಳು ವ್ಯಾಪಾರಮಾಡತಕ್ಕ ಪರಮಾತ್ಮ ಒಬ್ಬನೇ ಆದರೂ, ಬ್ಯಾರೆ ಬ್ಯಾರೆ ರೂಪಗಳಿಂದ ಇದ್ದು ಫಲಗಳ ಸರ್ವರಿಗೂ ಸಮಾನವಾಗಿ ಕೊಡೋದಿಲ್ಲ ಎಂತಲೂ, ಪರಮಾತ್ಮಗೂ ಅವನ ರೂಪಗಳಿಗೂ ಅಭೇದ ಚಿಂತಿಸಬೇಕು ಎಂತಲೂ ಹೇಳತಾರೆ.

ಪಾವಕ–ಅಗ್ನಿ, ಈ ಅಗ್ನಿಗೆ ಅಧಿಷ್ಠಾನಗಳು, ದಾರು–ಕಟ್ಟಿಗಿ ಒಂದು, ಪಾಷಾಣ–ಕಲ್ಲು ಒಂದು, ಅಂತು ಎರಡು, ಗತ–ಈ ಉಭಯಾಧಿಷ್ಠಾನಗಳಲ್ಲಿ ಅಗ್ನಿ, ಬೇರೆ ಬೇರೆ–ಅಧಿಷ್ಠಾನಗಳು ಬ್ಯಾರೆ ಬ್ಯಾರೆ ಆದ್ದರಿಂದ ಅಗ್ನಿ ಒಂದೇ ಆದಕಾಲಕ್ಕೂ, ಅಧಿಷ್ಠಾನ ವಿವಕ್ಷಾದಿಂದ ಬ್ಯಾರೆ ಬ್ಯಾರೆ ಆಗಿ ಇದ್ದಾನೆ. ಇದ್ದಾನೆ ಎಂಬೋದಕ್ಕೆ, ದಾರು ಮಂಥನ ದಿಂದಲೂ, ಕಲ್ಲು ಪರಸ್ಪರ ಬಲವಾದ ಸ್ಪರ್ಶದಿಂದಲೂ, ಅಗ್ನಿ ಕಾಣಿಸೋದಾಗತದೆ. ಇದರೋಪಾದಿಯಲ್ಲಿ, ಇಪ್ಪಂತೆ–ಒಂದೇ ಅಗ್ನಿ ಎರಡು ಅಧಿಷ್ಠಾನದಲ್ಲಿ ಬ್ಯಾರೆ ಬ್ಯಾರೆ ಇದ್ದೋಪಾದಿಯಲ್ಲಿ ಅಸದೃಶನಾದ ಸರ್ವೋತ್ತಮನಾದ ಪರಮಾತ್ಮ, ಕಾರಣ–ಪೂರ್ವೋಕ್ತ ಲಿಂಗೋಪಾದಾನಕಾರಣ ಒಂದು, ಮೂಲ ಜಡಪ್ರಕೃತ್ಯಾಖ್ಯ ಉಪಾದಾನ ಕಾರಣ ಒಂದು, ಇವು ಎರಡೂ ಕಾರಣಗಳು, ಕಾರ್ಯಗಳ–ಕಾರ್ಯಗಳು ಎರಡು, ಅವು ದ್ಯಾವವೆಂದರೆ, ಲಿಂಗಕಾರಣದ ಕಾರ್ಯ ಅನಿರುದ್ಧ ಶರೀರದವರೆಗೂ ; ಮೂಲ ಜಡಪ್ರಕೃತಿಕಾರಣದ ಕಾರ್ಯ, ಮಹದಾದಿಗಳು, ಬ್ರಹ್ಮಾಂಡ ಲೋಕಗಳು, ಅಂಡಾ ವರಣಗಳು, ಪ್ರಾಣಿಗಳ ಸ್ಥೂಲದೇಹಗಳೊಳು ; ಅಂತು ಎರಡು ಕಾರ್ಯಗಳು, ಇವುಗಳ, ಒಳಗಿದ್ದು–ಕಾರಣದ್ವಯ, ಕಾರ್ಯದ್ವಯ, ಇವುಗಳಲ್ಲಿ ದಾರು ಪಾಷಾಣಗತ ಅಗ್ನಿಸದೃಶ ನಾಗಿದ್ದು, ತೋರಿಕೊಳ್ಳದೆ–ಅದೃಶ್ಯನಾಗಿದ್ದು, ಕಾರಣ–ಕಾರಣಗಳಲ್ಲಿ ಕಾರಣವಾಚ್ಯನಾ ಗಿನ್ನೂ, ಕಾರ್ಯನು ಎಂದೆನಿಸಿ–ಕಾರ್ಯಗಳಲ್ಲಿ ಕಾರ್ಯ ಶಬ್ದ ವಾಚ್ಯನಾಗಿನ್ನೂ, ತತ್ತದ್ವಾಚ್ಯನೆಂದೆನಿಸಿ, ಹಾಂಗೆ, ಎಲ್ಲರೊಳು–ಅಧಿಷ್ಠಾನಭೂತರಾದ ಸರ್ವಜೀವರಲ್ಲಿ, ಪೂರ್ವೋಕ್ತಪ್ರಕಾರ ಕಾಣಿಸದೆ ಇದ್ದು, ಯೋಗ್ಯತೆಗಳನುಸಾರ–ಅನಾದಿಸ್ವರೂಪ ಯೋಗ್ಯ ತಾನುಸಾರ, ಅನಾದಿಕರ್ಮಾನುಸಾರ, ಆಯಾ ಜೀವರ ಸ್ಥೂಲದೇಹೇಂದ್ರಿಯಾದಿಗಳಿಂದ, ವ್ಯಾಪಾರಮಾಡುವ–ಕಾರ್ಯಗಳ ಮಾಡಿಸಿ, ಫಲಗಳನುಣಿಸಿ–ಆಯಾ ಕರ್ಮಜನಿತ ಫಲಗಳ ಉಣಿಸಿ, ಕೃಪಾಸಾಂದ್ರ–ವೈಷಮ್ಯ ನೈರ್ಘೃಣ್ಯಶೂನ್ಯನಾದ, ಕೃಪಾಸಮೂಹವುಳ್ಳ ಪರಮಾತ್ಮ, ಸಂತೈಸುವ–ಅವರವರ ಸ್ವರೂಪಯೋಗ್ಯತಾನುಸಾರ ಪರಿಯವಸಾನಕ್ಕೆ ರಕ್ಷಿಸುತ್ತಾನೆ ಎಂತ ತಿಳದು ಉಪಾಸನಾಮಾಡತಾ ಬಂದರೆ, ಕರ್ಮ ವಿಮೋಚನೆಯಾಗು ತ್ತದೆಂತ ತಾತ್ಪರ್ಯ.

**ಊರ್ಮಿಗಳವೋಲಿಪ್ಪ ಕರ್ಮವಿ ।**
**ಕರ್ಮ ಜನ್ಯ ಫಲಾಫಲಂಗಳ ।**
**ನಿರ್ಮಲಾತ್ಮನು ಮಾಡಿಮಾಡಿಸಿ ಉಂಡುಣಿಸುತಿಪ್ಪ ॥**
**ನಿರ್ಮಮ ನಿರಾಮಯ ನಿರಾಶ್ರಯ ।**
**ಧರ್ಮವಿದ್ಧರ್ಮಾತ್ಮ ಧರ್ಮಗ ।**
**ದುರ್ಮತಿಯ ಜನರೊಲ್ಲನಪ್ರತಿಮಲ್ಲ ಶ್ರೀನಲ್ಲ ॥ ೬ ॥**

ಶ್ರೀ ಪರಮಾತ್ಮ ಎಂಥಾವನೆಂದರೆ ಅದರನ್ನ ಹೇಳಿ, ಬಿಂಬಕ್ರಿಯಾ ವಿಚಾರವನ್ನೂ ಹೇಳತಾರೆ.

ನಿರ್ಮಮ–ಮಮತಾರಹಿತ ಅಂದರೆ, ತನ್ನ ಭಕ್ತರಲ್ಲಿ ಮಮತಾ, ದ್ವೇಷಿಗಳಲ್ಲಿ ದ್ವೇಷ, ಇಂಥಾ ಮಮತಾದ್ವೇಷಾತ್ಮಕ ವೈಷಮ್ಯದಿಂದ ಶೂನ್ಯನಾದವನು, ನಿರಾಮಯ–ರೋಗಾದ್ಯುಪದ್ರವಗಳು, ಭಯ ವ್ಯಸನಾದಿಗಳು ಇಲ್ಲದವನು, ನಿರಾಶ್ರಯ – ತನಗೆ ಯಾರೂ ಆಶ್ರಯ ಇಲ್ಲದೆ ತನಗೆ ತಾನೇ ಆಶ್ರಯನಾದವನು, ಧರ್ಮವಿತ್–ಸರ್ವಧರ್ಮವನ್ನೂ ತಿಳಿದವನು, ಧರ್ಮಾತ್ಮ–ಧರ್ಮಸ್ವರೂಪಿಯಾದವನು, ಧರ್ಮಗ–ಧರ್ಮಗಳಲ್ಲಿ ತದ್ವಾಚ್ಯನಾಗಿ, ಸಾಕ್ಷಿಯಾಗಿ ಇರತಕ್ಕವನು, ದುರ್ಮತಿಯ ಜನರೊಲ್ಲನು–ತನ್ನಲ್ಲಿ ದ್ವೇಷಮಾಡತಕ್ಕ ದೈತ್ಯರಿಗೆ ಪ್ರತ್ಯಕ್ಷನಾಗದೆ ಅವರಿಗೆ ದೂರನಾಗಿ ಇರತಕ್ಕವನು, ಅಪ್ರತಿಮಲ್ಲ–ಅಸದೃಶನಾದವ, ಶೂರನಾದವ, ಶ್ರೀನಲ್ಲ–ಲಕ್ಷ್ಮೀಪತಿಯಾದವನು, ಇಂಥಾ, ನಿರ್ಮಲಾತ್ಮನು – ದೋಷದೂರನಾದ ಪರಮಾತ್ಮನು, ಜೀವ ದೇಹಾಂತರ್ಗತನಾಗಿ, ತದಾಕಾರನಾಗಿ, ಬಿಂಬನಾಗಿ ಇದ್ದು, ಊರ್ಮಿಗಳವೋಲಿಪ್ಪ–ಜೀವರು ಬಿಂಬಕ್ರಿಯಾ ದ್ವಾರಾ ಸ್ಥೂಲದೇಹದಿಂದ ಮಾಡಿದ ಕರ್ಮಗಳು, ತತ್ಕರ್ಮ ಫಲಭೋಗಗಳು ತರಂಗದೋಪಾದಿಯಲ್ಲಿ ಒಂದರ ಹಿಂದೆ ಒಂದು ಭೋಗಕ್ಕೆ ಬರತಾ ಇರತಕ್ಕ, ಕರ್ಮವಿಕರ್ಮ–ಪುಣ್ಯಕರ್ಮ, ಪಾಪಕರ್ಮ, ಇವೆರಡೂನೂ, ಮಾಡಿಮಾಡಿಸಿ–ಪ್ರಥಮತಃ ತಾನು ಮಾಡಿ, ನಂತರ ಜೀವರಿಂದ ಮಾಡಿಸಿ, ಜನ್ಯ–ಈ ಪಾಪ ಪುಣ್ಯ ಕರ್ಮದಿಂದ ಜನಿತವಾದ, ಫಲಾಫಲಂಗಳ–ಪುಣ್ಯ ಫಲವೇನು, ಪಾಪ ಫಲವೇನು, ಉಂಡು–ಜೀವ ಭುಕ್ತಗತ, ತನ್ನ ಸ್ವಾಖ್ಯ ಫಲಗಳ ಉಂಡು, ಉಣಿಸುತಿಪ್ಪ–ತದ್ದ್ವಾರಾ ಜೀವ ಭೋಗ್ಯ, ಜೀವರಿಗೆ ಉಣಸ ತಾನೆ ಎಂತ ತಾತ್ಪರ್ಯ.

**ತಾ॥** ಮಮತಾದ್ವೇಷ ಶೂನ್ಯ ಎಂದರೆ, ಆಯಾ ಅಧಿಷ್ಠಾನಾನುಸಾರವಾಚ್ಯ ಎಂಬೋಣದರಿಂದ ಅದರದರ ಸ್ವಭಾವಗಳ ವ್ಯಕ್ತಮಾಡತಾನೇ ಹೊರ್ತು ಅನ್ಯಥಾವಲ್ಲ. ದ್ವೇಷ ಸ್ವಭಾವರಲ್ಲಿ ದ್ವೇಷ, ಭಕ್ತಿ ಸ್ವಭಾವರಲ್ಲಿ ಅಂತಃಕರಣ, ಮಾಡುತ್ತಾ ಇರುತ್ತಾನೆಂತ ತಿಳಕೋಬೇಕು ಎಂತ ತಾತ್ಪರ್ಯ.

**ಜಲದ ವಡಬಾನಳಗಳಂಬುಧಿ ।**
**ಜಲವನುಂಬುವುವಬ್ದ ಮಳೆಗರೆ ।**
**ದಿಳೆಗೆ ಶಾಂತಿಯನೀವುದನಲನು ತಾನೆ ಭುಂಜಿಪುದು ॥**
**ತಿಳಿವುದೀಪರಿಯಲ್ಲಿ ಲಕುಮಿಾ ।**
**ನಿಲಯ ಗುಣಕೃತ ಕರ್ಮಜ ಫಲಾ ।**
**ಫಲಗಳುಂಡುಣಿಸುವನು ಸರ್ವಗ ಸರ್ವಜೀವರಿಗೆ ॥ ೭ ॥**

ಜೀವರಿಗೆ ಫಲಾಫಲಂಗಳ ಉಣಿಸೋದರಿಂದ ಸ್ವಪ್ರಯೋಜನ ಏನಾದರೂ ಉಂಟೇ ಎಂದರೆ ಸ್ವಪ್ರಯೋಜನವಿಲ್ಲ, ಪರಪ್ರಯೋಜನಾ ಎಂತ ಹೇಳತಾರೆ.

ಅಂಬುಧಿಜಲವನು–ಸಮುದ್ರೋದಕವನ್ನು, ಜಲದ–ಮೇಘವೇನು, ವಡಬಾನಳ ಗಳು–ಸಮುದ್ರದಲ್ಲಿ ಇರುವ ವಡಬ ಸಾಂಕೇತ ಅಗ್ನಿಯೇನು, ಇವು ಎರಡೂ, ಉಂಬು ವುವು–ಭೋಜನಮಾಡೋವಾಗತವೆ. ಈ ಪಾನಮಾಡಿದ ಮೇಘ, ವಡಬಾನಳ, ಈ ಎರಡರ ಒಳಗೆ, ಅಬ್ದ–ಮೇಘ, ತಾನು ಪಾನಮಾಡಿದ ಉದಕವನ್ನು, ಮಳೆಗರೆದು– ತನ್ನಲ್ಲಿ ಇಟ್ಟುಕೊಳ್ಳಧಾಂಗೆ ಮಳೆ ಸುರಿಸಿ, ಇಳೆಗೆ–ಭೂಮಿಗೆ, ಶಾಂತಿಯನೀವುದು– ತಂಪು ಉಂಟುಮಾಡೋದಾಗತದೆ. ಅನಲನು–ಮತ್ತೊಂದಾದ, ಸಮುದ್ರೋದಕ ಪಾನ ಮಾಡಿದ ವಡಬ ಎಂಬ ಅಗ್ನಿಯು, ತಾನೆ ಭುಂಜಿಪುದು – ಮೇಘದೋಪಾದಿಯಲ್ಲಿ ಭೂಮಿಗೆ ಕೊಡದೆ, ತಾನೇ ಭೋಜನಮಾಡೋದಾಗತದೆ. ಅನ್ಯರಿಗೆ ಕೊಡೋದಿಲ್ಲ ಎಂತ ತಾತ್ಪರ್ಯ. ಈಪರಿಯಲಿ–ಈ ಪ್ರಕಾರ, ತಿಳಿವುದು–ಪರಮಾತ್ಮಭುಕ್ತ ಬ್ಯಾರೆ, ಜೀವಭುಕ್ತ ಬ್ಯಾರೆ ಎಂತ ತಿಳಿಯಬೇಕು. ಸರ್ವಗ–ಸರ್ವತ್ರ ವ್ಯಾಪ್ತನಾದ, ಲಕುಮಿಾ ನಿಲಯ–ಲಕ್ಷ್ಮೀಪತಿಯಾದ ನಾರಾಯಣದೇವರು, ಗುಣಕೃತ–ತ್ರಿಗುಣಗಳಿಂದ ಮಾಡ ಲ್ಪಟ್ಟ, ಕರ್ಮಜ–ಕರ್ಮದಿಂದ ಜನಿತವಾದ, ಫಲಾಫಲಂಗಳ–ಪುಣ್ಯ ಫಲಗಳ, ಪಾಪ ಫಲಗಳ, ಸರ್ವಜೀವರಿಗೆ–ಸಮಸ್ತ ಜೀವರಿಗೆ ಅವರವರ ಯೋಗ್ಯತಾನುಸಾರ, ಉಂಡುಣಿ ಸುವನು–ಪೂರ್ವೋಕ್ತ ವಡಬಾಗ್ನಿಯೋಪಾದಿಯಲ್ಲಿ ಅನ್ಯರಿಗೆ ಭೋಗಯೋಗ್ಯವಲ್ಲದ ತನ್ನ ಸ್ವಾಖ್ಯಗಳ ತಾನು ಉಂಡು, ಜೀವ ಭುಕ್ತ, ಮೇಘವರ್ಷಿಸಿ ಭೂಮಿಗೆ ಶಾಂತಿ ಕೊಟ್ಟೋಪಾದಿಯಲ್ಲಿ ಉಣಿಸುತ್ತಾನೆ ಎಂತ ತಾತ್ಪರ್ಯ.

**ತಾ॥** ಮೇಘ, ವಡಬಾಗ್ನಿ ಸದೃಶ, ಭಗವದ್ರೂಪಗಳು ; ಕರ್ಮ ಸದೃಶ, ಸಮುದ್ರೋದಕ ; ಇದರಲ್ಲಿ, ವಡಬಾಗ್ನಿ ಪಾನಮಾಡಿದ ಉದಕ ಒಂದು ; ಮೇಘ ಪಾನ ಮಾಡಿದ ಉದಕ ಒಂದು. ಮೇಘ ಪಾನಮಾಡಿದ ಉದಕಸದೃಶ, ಜೀವರು ಅರ್ಜಿಸಿದ ಜಡಕರ್ಮ. ವಡಬಾಗ್ನಿ ಪಾನಮಾಡಿದ ಉದಕಸದೃಶ, ಪರಮಾತ್ಮನ ಸ್ವಾಖ್ಯಕರ್ಮ. ಜೀವ ಭುಕ್ತ ಕರ್ಮದಲ್ಲಿ ವಿದ್ಯಮಾನವಾದ ಸ್ವಾಖ್ಯಕರ್ಮ, ವಡಬಾಗ್ನಿಯೋಪಾದಿಯಲ್ಲಿ ತಾನೇ ಭೋಜನಮಾಡತಾನೆ. ಜೀವ ಭುಕ್ತ ಕರ್ಮವನ್ನ, ಭೂಸದೃಶರಾದ ಜೀವರಿಗೆ, ಮೇಘಸದೃಶನಾದ ಪರಮಾತ್ಮ, ಸೃಷ್ಟಿಸಾಂಕೇತದಿಂದ ಭೋಗಿಸೋದಕ್ಕೆ ಕೊಡತಾನೆ.

ಜೀವ ಭುಕ್ತ ಬ್ಯಾರೆ, ಈಶ ಭುಕ್ತ ಬ್ಯಾರೆ ಎಂಬೋದಕ್ಕೆ ಮಾತ್ರ ದೃಷ್ಟಾಂತ; ಸ್ವೀಕಾರ ಮಾಡಿದ್ದರ ಒಳಗೆ, ತನ್ನದು ತನ್ನಲ್ಲಿ ಇಟ್ಟುಕೊಂಡು, ಅನ್ಯರದು ಅನ್ಯರಿಗೆ ಕೊಡತಾನೆ ಎಂತ ತಾತ್ಪರ್ಯ.

**ಪುಸ್ತಕಗಳವಲೋಕಿಸುತ ಮಂ ।**
**ತ್ರಸ್ತುತಿಗಳೆನಲೇನು ರವಿಯುದ ।**
**ಯಸ್ತಮನ ಪರಿಯಂತ ಜಪತಪ ಮಾಡಿ ಫಲವೇನು ॥**
**ಹೃತ್ಸ್ಥ ಪರಮಾತ್ಮನೆ ಸಮುಸ್ತಾ ।**
**ವಸ್ಥೆಗಳೊಳಿದ್ದೆಲ್ಲರೊಳಗೆ ನಿ ।**
**ರಸ್ತಕಾಮನು ಮಾಡಿಮಾಡಿಪನೆಂದು ತಿಳಿಯದವ ॥ ೮ ॥**

ಬಿಂಬಕ್ರಿಯಾ, ಪ್ರತಿಬಿಂಬಕ್ರಿಯಾ ತಿಳಿಯದವ ಏನು ಸತ್ಕರ್ಮ ಮಾಡಿದರೂ ಫಲವಿಲ್ಲ ಎಂತ ಹೇಳತಾರೆ.

ನಿರಸ್ತಕಾಮನು–ಭಗವದನುಗ್ರಹ ಸಂಪಾದಿಸಬೇಕು ಎಂತ ಇರತಕ್ಕವನು ನಿಷ್ಕಾಮನಾಗಿ, ಹೃತ್ಸ್ಥಪರಮಾತ್ಮನೆ – ಹೃದಯಗತ ಬಿಂಬರೂಪಿಯಾದ ಪರಮಾತ್ಮನೇ ದೇಹೇಂದ್ರಿಯಾದಿಗಳಲ್ಲಿ ತದಾಕಾರನಾಗಿದ್ದು ಹಾಂಗೆ ಜೀವರಿಗೆ ಪ್ರಾಪ್ತವಾಗತಕ್ಕ, ಸಮುಸ್ತ–ಸಮಸ್ತವಾದ, ಅವಸ್ಥೆಗಳೊಳಗಿದ್ದು–ಅವಸ್ಥಾತ್ರಯ, ಇನ್ನೂ ಪಾಪಪುಣ್ಯಜನಿತ ವಿಚಿತ್ರವಾದ ಅವಸ್ಥೆಗಳು, ಇಂಥಾ ಅವಸ್ಥೆಗಳಿಗೆ ಬಿಂಬನಾಗಿ ಇದ್ದು ಭೋಗಕ್ಕೆ ತಂದು ಕೊಡುತ್ತಾನೆಂತಲೂ, ಮತ್ತು, ಎಲ್ಲರೊಳಗೆ–ತನ್ನಂತೆ ಸಮಸ್ತ ಪ್ರಾಣಿಗಳೊಳು, ದೇಹದಿಂದ, ಮಾಡಿ ಮಾಡಿಪನೆಂದು – ಸರ್ವವ್ಯಾಪಾರವೂ ಬಿಂಬಕ್ರಿಯಾದ್ವಾರಾ ತಾನು ಮಾಡಿ, ತದ್ದ್ವಾರಾ ದೇವತೆಗಳು ಇವರುಗಳಿಂದ ಕರ್ಮ ವ್ಯಾಪಾರಗಳ ಮಾಡಿಸತಾನೆ ಎಂತ, ತಿಳಿಯದವ – ಅನುಸಂಧಾನದಿಂದ ತಿಳಿಯದೆ, ತದನುಷ್ಠಾನಮಾಡದೆ, ರವಿಯುದಯಸ್ತಮನಪರಿಯಂತ – ಸೂರ್ಯ ಉದಯಾರಂಭ, ಸಾಯಂಕಾಲಪರಿಯಂತ, ಪುಸ್ತಕಗಳವಲೋಕಿಸುತ–ಸರ್ವಶಾಸ್ತ್ರವೂ ನೋಡುತ್ತಾ, ತಥಾ ಬಾಯಿಂದ ಉಚ್ಚರಿಸುತ್ತಾ, ಮಂತ್ರ ಸ್ತುತಿಗಳ–ಅಷ್ಟಮಹಾಮಂತ್ರಗಳು, ಸ್ತೋತ್ರಗಳು, ಎನಲೇನು–ಹೇಳಿಕೊಂಡಿದ್ದೇನು, ಜಪತಪ–ಜಪ, ನಿರಶನಾದಿ ವ್ರತಗಳು ಇವುಗಳನ್ನು, ಮಾಡಿ ಫಲವೇನು–ಮಾಡಿ ಫಲವಿಲ್ಲ ಎಂತ ಅರ್ಥ.

**ತಾ॥** ಬಿಂಬಕ್ರಿಯಾ ಪ್ರತಿಬಿಂಬಕ್ರಿಯಾನುಸಂಧಾನ ತಿಳಿದು, ನಿಷ್ಕಾಮನಾಗಿ ಸಕಲ ಕರ್ಮಗಳಲ್ಲಿ ಪರಮಾತ್ಮನು ವ್ಯಾಪ್ತನೆಂದು ತಿಳಿದು, ಅನುಷ್ಠಾನ ಮಾಡತಾ ಬಂದರೆ, ಕರ್ಮಗಳು ಮೋಚನ ಆಗುತ್ತಾ ಬರುತ್ತವೆ ಎಂತ ತಾತ್ಪರ್ಯ.

**ಮದ್ಯಭಾಂಡವ ದೇವನದಿಯೊಳ ।**
**ಗದ್ದಿತೊಳೆಯಲು ನಿತ್ಯದಲಿ ಪರಿ ।**
**ಶುದ್ಧವಾಹುದೆ ಎಂದಿಗಾದರು ಹರಿಪದಾಬ್ಜಗಳ ॥**

**ಬುದ್ಧಿಪೂರ್ವಕ ಭಜಿಸದವಗೆ ವಿ ।**
**ರುದ್ಧವೆನಿಸುವುವೆಲ್ಲ ಕರ್ಮ ಸ ।**
**ಮೃದ್ಧಿಗಳು ದುಃಖವನೆ ಕೊಡುತಿಹವಧಮಜೀವರಿಗೆ ॥ ೯ ॥**

ಅಂತರಂಗ ಶುದ್ಧನಾಗದೆ, ಬಾಹ್ಯ ಶುದ್ಧನಾಗಿ ಢಾಂಬಿಕದಿಂದ ಮಾಡಿದ ಸರ್ವ ಸತ್ಕರ್ಮಗಳೂ ಪಾಪಫಲವೇ ಕೊಡತವೆ ಎಂತ ಹೇಳತಾರೆ.

ಮದ್ಯಭಾಂಡವ–ಸಾರಾಯಿ ಇಂದ ಸಹಿತವಾದ ಗಡಿಗಿಯನ್ನ, ದೇವನದಿಯೊಳಗೆ–ಭಾಗೀರಥೀನದಿಯಲ್ಲಿ, ನಿತ್ಯದಲಿ – ಪ್ರತಿದಿನದಲ್ಲೂ, ಅದ್ದಿ ತೊಳೆಯಲು – ಮುಣುಗಿಸಿ ಥಂದಾಗಿ ತೊಳೆದರೆ, ಎಂದಿಗಾದರು–ದಾವಾಗಾದಾರೂ, ಪರಿಶುದ್ಧವಾಹುದೆ–ಥಂದಾಗಿ ಶುದ್ಧವಾಗೋದೆ ? ಎಂದರೆ ಶುದ್ಧವಾದ ಪಾತ್ರಿ ಎಂತ ಕರಿಸೋದಿಲ್ಲ. ಅದರೋಪಾದಿಯಲ್ಲಿ, ಈ ದೇಹಾಖ್ಯ ಭಾಂಡದಲ್ಲಿ ಪ್ರಾಕೃತವಿಷಯ ಕಾಮನಾ ಏನು, ಅಹಂಮಮತಾದಿಗಳೇನು, ಬಿಂಬಕ್ರಿಯಾ ಪ್ರತಿಬಿಂಬಕ್ರಿಯಾ ವಿಸ್ಮೃತಿ ಏನು, ಇತ್ಯಾದಿ ದುರ್ಗುಣಗಳಾದ ಮದ್ಯವ ತುಂಬಿ, ಈ ದೇಹಾಖ್ಯ ಭಾಂಡವನ್ನ ದೇವನದಿ ಸದೃಶವಾದ ಸಚ್ಛಾಸ್ತ್ರವೇನು, ಜಪತಪವೇನು, ಇತ್ಯಾದಿಗಳೆಂಬ ನದೀಉದಕದಲ್ಲಿ ಸ್ನಾನಮಾಡಿಸೋಣದರಿಂದ ಪವಿತ್ರವಾಗಲಾರದು. ಬುದ್ಧಿಪೂರ್ವಕ–ಜ್ಞಾನಪೂರ್ವಕ, ಮನಃಪೂರ್ವಕವಾಗಿ, ಅಹಂಮಮತಾದಿಗಳ ತ್ಯಜಿಸಿ, ಪ್ರಾಕೃತ ವಿಷಯಾದಿಗಳ ಕಾಮನಮಾಡದೆ, ಪದ್ಮಪತ್ರಗತ ಉದಕದೋಪಾದಿಯಲ್ಲಿ ನಿರ್ಲಿಪ್ತನಾಗಿ ವಿಷಯಾದಿಗಳಲ್ಲಿ ಓಡಾಡುತ್ತಾ, ಬಿಂಬಕ್ರಿಯಾದ್ವಾರಾ ಪ್ರತಿಬಿಂಬಕ್ರಿಯಾನೆನಿಯುತ್ತಾ, ಹರಿಪದಾಬ್ಜಗಳ–ಶ್ರೀಪರಮಾತ್ಮನ ಪಾದಕಮಲಗಳ, ಭಜಿಸದವಗೆ–ಭಜನೆಮಾಡದೆ ಇರತಕ್ಕ ಮನುಷ್ಯಗೆ, ಮತ್ತು, ಅಧಮ ಜೀವರಿಗೆ–ಅಧಮರಾದ ಅಜ್ಞಾನಯುಕ್ತರಾದವರಿಗೆ, ಎಲ್ಲ ಕರ್ಮಸಮೃದ್ಧಿಗಳು–ಪುಣ್ಯ, ಪಾಪ ಈ ಉಭಯ ವಿಧವಾದ ಕರ್ಮಸಮೂಹಗಳು, ವಿರುದ್ಧವೆನಿಸುವುವು–ಪಾಪಕರ್ಮಗಳು ಆಗುತ್ತಾ ಬಂದು, ದುಃಖವನೆ ಕೊಡುತಿಹವು–ಅಂತ್ಯದಲ್ಲಿ ನರಕಾದ್ಯನರ್ಥಗಳ ಹೊಂದಿಸಿ, ಕೊನೆಗೆ ಅಂಧಂತಮೋಲೋಕ ಹೊಂದಿಸತವೆ ಎಂತ ತಾತ್ಪರ್ಯ.

**ಭಕ್ತಿಪೂರ್ವಕವಾಗಿ ಮುಕ್ತಾ ।**
**ಮುಕ್ತನೀಯಾಮಕನ ಸರ್ವೋ ।**
**ದ್ರಿಕ್ತಮಹಿಮೆಗಳನವರತ ಕೊಂಡಾಡು ಮರಿಯದಲೆ ॥**
**ಸಕ್ತನಾಗದೆ ಲೋಕವಾರ್ತೆ ಪ್ರ ।**
**ಸಕ್ತಿಗಳನೀಡಾಡಿ ಶ್ರುತಿಸ್ಮೃ ।**
**ತ್ಯುಕ್ತಕರ್ಮವ ಮಾಡುತಿರು ಹರಿಯಾಜ್ಞೆಯೆಂದರಿದು ॥ ೧೦ ॥**

ಶ್ರೀಪರಮಾತ್ಮನಲ್ಲಿ ಭಕ್ತಿಯುತನಾಗಿ ಸ್ಮೃತಿಪೂರ್ವಕ ಸರ್ವಕರ್ಮಗಳ ಮಾಡು ಎಂತ ಹೇಳತಾರೆ.

ಸಕ್ತನಾಗದೆ–ಪ್ರಾಕೃತವಿಷಯಭೋಗಾದಿಗಳಲ್ಲೇನು, ಅಹಂಮಮತಾದಿಗಳಲ್ಲೇನು, ಆಸಕ್ತವಾದ ಮನಸ್ಸುಳ್ಳವನಾಗದವನಾಗಿ, ಲೋಕವಾರ್ತೆ–ಭಗವನ್ಮಹಿಮಾ ವಾರ್ತೆಗಳು ಹೊರ್ತು ತದ್ವ್ಯತಿರಿಕ್ತವಾದ ಸಮಾಚಾರಗಳು, ದೇವ ಬ್ರಾಹ್ಮಣರ ನಿಂದಾ ಇತ್ಯಾದಿಗಳಿಗೆ ಆಕರರಾದ ಅಜ್ಞಜನರು ಆಡತಕ್ಕ ಮಾತುಗಳು, ಪ್ರಸಕ್ತಿಗಳನು–ಲೋಕವ್ಯವಹಾರ ಮಾತುಗಳು, ಇವ್ರುಗಳನ್ನು, ಈಡಾಡಿ–ದೂರಮಾಡಿ ಬಿಟ್ಟವನಾಗಿ, ಮಕ್ತಾಮುಕ್ತ ನಿಯಾಮಕನ–ಲಿಂಗಭಂಗರಾಗಿ, ಮುಕ್ತರಾಗಿ, ವೈಕುಂಠಾದಿ ಲೋಕಗಳಲ್ಲಿ ಇರತಕ್ಕ ಮುಕ್ತರಿಗೇನು, ಸಲಿಂಗರಾಗಿ ಸಾಧನಮಾಡುತ್ತಾ ಇರತಕ್ಕ ಅಮುಕ್ತರಿಗೇನು, ಇವರುಗಳಿಗೆ ನಿಯಾಮಕನಾದ ಪರಮಾತ್ಮನ, ಸರ್ವೋದ್ರಿಕ್ತ ಮಹಿಮೆಗಳ–ಶ್ರೇಷ್ಠಗಳಾದ ಮಹಿಮೆಗಳ, ಅಂದರೆ, ರಮಾದಿ ಸರ್ವ ಅಸ್ವತಂತ್ರಚೇತನರಕಿಂತಲೂ, ಅಸದೃಶನಾದ, ಶ್ರೇಷ್ಠನಾದ ಪರಮಾತ್ಮನ ಮಾಹಾತ್ಮ್ಯಗಳು, ಅವು ದಾವವೆಂದರೆ, ಸೃಷ್ಟಿ, ಸ್ಥಿತಿ, ಲಯ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷ, ಇವ್ರುಗಳನ್ನು, ಅನವರತ–ಸದಾ ಸರ್ವಕಾಲದಲ್ಲಿಯೂ, ಮರೆಯದಲೆ–ಮರೆತುಹೋಗದೆ, ಭಕ್ತಿಪೂರ್ವಕವಾಗಿ–ಅಚ್ಛಿದ್ರಸ್ನೇಹದಿಂದ ಯುಕ್ತನಾಗಿ, ಭೇದಜ್ಞಾನ, ತಾರತಮ್ಯಜ್ಞಾನಪೂರ್ವಕವಾಗಿ, ಕೊಂಡಾಡು – ಉಚ್ಚಾರಮಾಡೋವನಾಗು. ಈ ಪ್ರಕಾರ ಸತ್ಕರ್ಮಾನುಷ್ಠಾನ ಮಾಡುತ್ತಾ, ಶ್ರುತಿ–ಅಪೌರುಷೇಯವಾದ ವೇದಗಳು, ಸ್ಮೃತಿ–ಪೌರುಷೇಯವಾದ ಪುರಾಣಗಳು, ಇನ್ನೂ ಧರ್ಮಶಾಸ್ತ್ರಗಳು, ಉಕ್ತ–ಇವ್ರುಗಳಲ್ಲಿ ಹೇಳಿದ ವಾಕ್ಯಗಳು, ದಾವವವೆ, ಇವು ವೇದವ್ಯಾಸ ದೇವರಿಂದ ಆಜ್ಞಾಪಿಸಲ್ಪಟ್ಟವ್ರು ಎಂತ ತಿಳಿದು, ಇವ್ರುಗಳು, ಹರಿ ಆಜ್ಞೆಯೆಂದರಿದು–"ಶ್ರುತಿಸ್ಮೃತೀ ಹರೇರಾಜ್ಞಾ" ಎಂತ ತಿಳಿದವನಾಗಿ, ಕರ್ಮವ ಮಾಡುತಿರು–ಶ್ರೀಪರಮಾತ್ಮಗೆ ಪ್ರೀತಿಕರವಾದ ಕಾರ್ಯಗಳ ಮಾಡುತ್ತಾ ಇರೋವನಾಗು ಎಂತ ಅರ್ಥ.

**ವಿಶೇಷಾರ್ಥ** :– ವ್ಯಾಲಿ ಕಂಡ ಭಕ್ತಿ ಎಂಬುದು ಎಂಥಾದ್ದೆಂದರೆ :–

ಮಾಹಾತ್ಮ್ಯಜ್ಞಾನಪೂರ್ವಸ್ತು ಸುದೃಢಃ ಸರ್ವತೋಧಿಕಃ |
ಸ್ನೇಹೋ ಭಕ್ತಿರಿತಿ ಪ್ರೋಕ್ತಸ್ತಯಾ ಭಕ್ತಿರ್ನ ಚಾನ್ಯಥಾ ||
ದಾನತೀರ್ಥತಪೋಯಜ್ಞಪೂರ್ವಾಃ ಸರ್ವೇಪಿ ಸರ್ವದಾ |
ಅಂಗಾನಿ ಹರಿಸೇವಾಯಾಂ ಭಕ್ತಿಸ್ತ್ವೇಕಾ ವಿಮುಕ್ತಯೇ |
ಭಕ್ತ್ಯರ್ಥಾನ್ಯಖಿಳಾನ್ಯೇವ ಭಕ್ತಿರ್ಮೋಕ್ಷಾಯ ಕೇವಲಾ ||
ಭಕ್ತಾನಾಮಪಿ ಭಕ್ತಿರ್ಹಿ ನಿತ್ಯಾನಂದಸ್ವರೂಪಿಣೀ |
ಜ್ಞಾನಪೂರ್ವಪರಸ್ನೇಹೋ ನಿತ್ಯೋ ಭಕ್ತಿರಿತೀರ್ಯತೇ ||

ಇನ್ನೂ

ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ |
ಶಕ್ಯ ಏವಂವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ ||

ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ |
ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ||

ಇತ್ಯಾದಿನಾ ವಿಷ್ಣುಭಕ್ತೇರೇವ ಸರ್ವಸಾಧನೋತ್ತಮತ್ವಂ ಪರೋಕ್ಷಾಪರೋಕ್ಷ ಜ್ಞಾನಯೋಃ ಜ್ಞಾನಿನೋಪಿ ಮೋಕ್ಷಂ ಚ ತದಧೀನತ್ವಂ ಚ " ಎಂತ ಇತ್ಯಾದ್ಯನು ಸಂಧಾನದಿಂದ ಕರ್ಮಮಾಡುತ್ತಾ ಬಂದರೆ, ಶ್ರೀಹರಿಪ್ರೀತಿಯಾಗಿ ಕರ್ಮಮೋಚನ ವಾಗುತ್ತಾ ಬರುತ್ತದೆ ಎಂತ ತಾತ್ಪರ್ಯ.

**ಲೋಪವಾದರು ಸರಿಯೆ ಕರ್ಮಜ |**
**ಪಾಪಪುಣ್ಯಗಳೆರಡು ನಿನ್ನನು |**
**ಲೇಪಿಸವು ನಿಷ್ಕಾಮುಕನು ನೀನಾಗಿ ಮಾಡುತಿರೆ ||**
**ಸೌಪರ್ಣಿವರವಹನ ನಿನ್ನ ಮ |**
**ಹಾಪರಾಧಗಳೆಣಿಸದಲೆ ಸ್ವ |**
**ರ್ಗಾಪವರ್ಗದೊಳಿಟ್ಟು ಸಲಹುವ ಸತತ ಸುಖಸಾಂದ್ರ || ೧೧ ||**

ಶ್ರೀ ಪರಮಾತ್ಮನು ನಿಷ್ಕಾಮುಕ ಕರ್ಮ ಮಾಡತಕ್ಕವರ ಅಪರಾಧಗಳ ಎಣಿಸೋದಿಲ್ಲ ಎಂತ ಹೇಳತಾರೆ.

ನೀನು–ಭಗವದನುಗ್ರಹ ಸಂಪಾದಿಸಬೇಕೆಂಬ ಅಧಿಕಾರಿಯಾದ ನೀನು, ನಿಷ್ಕಾಮುಕನು ಆಗಿ–ಪ್ರಾಕೃತ ವಿಷಯಭೋಗಾದಿಗಳ ಕಾಮನಾಮಾಡದೆ, ನಿಷ್ಕಾಮುಕನಾಗಿ, ಹರಿ ಇಚ್ಛಾದಿಂದ ಅನಾದಿಕರ್ಮವನ್ನನುಸರಿಸಿ ಪ್ರಾಪ್ತವಾದ ಭಾಗ್ಯ ಬಡತನಗಳ, ಲಾಭ ನಷ್ಟ, ಸುಖದುಃಖಾದಿಗಳ, ಪದ್ಮಪತ್ರಗತ ಉದಕದೋಪಾದಿಯಲ್ಲಿ, ನಿರ್ಲಿಪ್ತನಾಗಿ, ಮಾಡುತಿರೆ–ಮಾಡುತ್ತಾ ಇದ್ದರೆ, ಕರ್ಮಜ–ಈ ಕರ್ಮದಿಂದ ಜನಿತಗಳಾದ, ಪಾಪಪುಣ್ಯಗಳೆರಡು–ಪಾಪವೇನು, ಪುಣ್ಯವೇನು, ಈ ಎರಡೂ, ನಿನ್ನನು ಲೇಪಿಸವು–ನಿನಗೆ ಲೇಪವಾಗಿ ಜನ್ಮಗಳು ಎತ್ತೋದಕ್ಕೆ ಕಾರಣವಾಗೋದಿಲ್ಲವಾದ್ದರಿಂದ ಕ್ರಮವಾಗಿ ಸಾಧನ ಮಾಡುತ್ತಾ ಬಂದರೆ, ಲೋಪವಾದರು–ಅಥವಾ ಕ್ವಚಿತ್ಕಾಲದಲ್ಲಿ ಅವಶಾತ್ತಾಗಿ ಪಾಪ ಕರ್ಮಗಳ ಮಾಡಿದಾಗ್ಯೂನೂ ಅವುಗಳು, ಸರಿಯೆ–ಪುಣ್ಯಕರ್ಮಕ್ಕೆ ಸರಿಯೇ ಆಗಿ ಪುಣ್ಯ ಫಲವೇ ಕೊಡತವೆ. ಇಂಥಾ ದ್ವಂದ್ವಕರ್ಮಕ್ಕೆ, ಜ್ಞಾನ ಭಕುತಿ ವೈರಾಗ್ಯ ಐಶ್ವರ್ಯ ಅತಿಶಯವಾಗಿ, ಮೋಕ್ಷವೇ ಫಲ. ಸೌಪರ್ಣಿವರವಹನ–ಗರುಡವಾಹನನಾದ, ಸುಖ ಸಾಂದ್ರ–ಆನಂದ, ಜ್ಞಾನ, ಸುಖದೇಹನಾದ ಪರಮಾತ್ಮ, ಸತತ–ನಿರಂತರ ಇಂಥಾ ಅನುಸಂಧಾನದಿಂದ ಸಹಿತನಾದ, ನಿನ್ನ ಮಹಾಪರಾಧಗಳೆಣಿಸದಲೆ–ಬಿಂಬಕ್ರಿಯಾದ್ವಾರಾ ಅನಾದಿಕರ್ಮವನುಸರಿಸಿ ನಿನ್ನಿಂದ ಮಾಡಲ್ಪಟ್ಟ, ಶ್ರೀಷ್ಠಾಪರಾಧಗಳ, ಗಣನಾಮಾಡದೆ, ಸ್ವರ್ಗ–ಜ್ಞಾನ ಭಕುತಿ ವೈರಾಗ್ಯಾತಿಶಯಗಳಿಂದ ಪ್ರಾಪ್ತವಾಗತಕ್ಕ ಸ್ವರ್ಗಸುಖವನ್ನು ಐಹಿಕದಲ್ಲಿ ಕೊಟ್ಟು ಪುನರಾವರ್ತಿಲೋಕವಾದ ಸ್ವರ್ಗಸುಖವನ್ನ ತಪ್ಪಿಸಿ, ಅಪವರ್ಗ ದೊಳಿಟ್ಟು–ಲಿಂಗಭಂಗವನ್ನು ಐದಿಸಿ ವೈಕುಂಠಾದಿ ಲೋಕಗಳಲ್ಲಿ ಇಟ್ಟು, ಸಲಹುವ–

ಸ್ವರೂಪಾನಂದವನ್ನ ಭೋಜನಮಾಡಿಸುತ್ತಾನೆ. ಆದ್ದರಿಂದ ಕರ್ಮವೋಚನೆ ವಿಷಯ, ಪೂರ್ವೋಕ್ತಪ್ರಕಾರ ತಿಳಿಯಬೇಕೆಂತ ತಾತ್ಪರ್ಯ.

**ಸ್ವರತ ಸುಖಮಯ ಸುಲಭ ವಿಶ್ವಂ ।**
**ಭರ ವಿಶೋಕ ಸುರಾಸುರಾರ್ಚಿತ ।**
**ಚರಣಯುಗ ಚಾರ್ವಾಂಗ ಶಾರ್ಙ್ಗ ಶರಣ್ಯ ಜಿತಮನ್ಯು ॥**
**ಪರಮಸುಂದರತರ ಪರಾತ್ಪರ ।**
**ಶರಣಜನಸುರಧೇನು ಶಾಶ್ವತ ।**
**ಕರುಣಿ ಕಂಜದಳಾಕ್ಷ ಕಾಯೆನೆ ಕಂಗೊಳಿಪ ಸಿದ್ಧ ॥ ೧೨ ॥**

ಇನ್ನೂ ಕರ್ಮಗಳು ವೋಚನೆಯಾಗಬೇಕಾದರೆ ಶ್ರೀ ಪರಮಾತ್ಮನ ಸ್ತೋತ್ರದಿಂದ ಆಗುತ್ತದೆ ಎಂತಲೂ, ಆ ಸ್ತೋತ್ರಕ್ರಮವೂ ಹೇಳತಾರೆ.

ಸ್ವರತ–ರಮಾದೇವರಿಂದ ರಹಿತನಾಗಿ ತಾನೇ ಲಕ್ಷ್ಮೀಯಾಗಿನ್ನೂ, ತಾನೇ ಪುರುಷ ನಾಗಿನ್ನೂ, ಪರ್ಯಂಕಾದಿ ಅನೇಕವಿಧ ಸ್ವಕೀಯವಾದ ರೂಪಗಳಿಂದಲೆ, ಭೋಗ ಮಾಡತಕ್ಕವನಾದ್ದರಿಂದ, ಎಲ್ಲೈ, ಸ್ವರಮಣನಾದವನೇ, ಸುಖಮಯ–ಸುಖದ ಸಮೂ ಹವೇ ಶರೀರವಾಗಿ ಉಳ್ಳವನೇ, ಸುಲಭ–ನಿಷ್ಕಾಮನಾದ್ದರಿಂದ ನಂಬಿದವರಿಗೆ ಸುಲಭನಾದ ವನೇ, ವಿಶ್ವಂಭರ–ಚರಾಚರ ಜಗತ್ತುಗಳಿಗೆ ಆಧಾರನಾಗಿ ಅವನ್ನು ಧರಿಸಿದವನೇ, ವಿಶೋಕ–ಹೋಗಲ್ಪಟ್ಟ ದುಃಖವುಳ್ಳವನೇ, ಅಸುರ–ದೈತ್ಯರ ಬಾಧಾ ಪರಿಹಾರಾರ್ಥ ವಾಗಿ, ಸುರಾ–ದೇವತೆಗಳಿಂದ, ಅರ್ಚಿತಚರಣಯುಗ–ಪೂಜಾಮಾಡಲ್ಪಟ್ಟ ಪಾದದ್ವಯ ಗಳುಳ್ಳವನೇ, ಇನ್ನೂ ದೈತ್ಯವಂಶೋದ್ಭವರಾದ ಪ್ರಹ್ಲಾದಾದಿಗಳಿಂದ ಪೂಜಾದಿಗಳ ಮಾಡಿಸಿಕೊಂಡವನೇ ಎಂತಲೂ ತಾತ್ಪರ್ಯ, ಚಾರ್ವಾಂಗ–ಮನೋಹರಗಳಾದ ಹಸ್ತಾ ದ್ಯವಯವಗಳು ಉಳ್ಳವನೇ, ಶಾರ್ಙ್ಗ – ಶಾರ್ಙ್ಗನಾಮಕ ಧನುರ್ಧಾರಿಯಾದವನೇ, ಶರಣ್ಯ–ಹರಿ ಸರ್ವೋತ್ತಮ ಎಂತ ಮುಕ್ತಿಯೋಗ್ಯರಿಂದ ಹೊಗಳಿಸಿಕೊಳ್ಳಲ್ಪಟ್ಟವನೇ, ಮತ್ತು ಸರ್ವೋತ್ತಮತ್ವೇನ ಶರಣುಮಾಡದ ದೈತ್ಯರಿಂದ ಬಲಪರಾಕ್ರಮ ಪ್ರದರ್ಶನದಿಂದ ಶರಣ್ಯನಾದವನೇ, ಜಿತಮನ್ಯು–ಜಯಿಸಲ್ಪಟ್ಟ ಕ್ರೋಧವುಳ್ಳವ ಎಂದರೆ, ದ್ವೇಷಿಗಳಾದ ದೈತ್ಯರಲ್ಲಿ ಕೋಪರಹಿತನಾಗಿ ಸ್ವರೂಪಾನುಸಾರ ಫಲ ಕೊಡತಕ್ಕವನೇ, ಪರಮಸುಂದರ ತರ–ಉತ್ತಮರಾದ ಅತ್ಯಂತ ಸೌಂದರ್ಯವುಳ್ಳ, ರಮಾದೇವೇರಿಗಿಂದಲೂ ಅಸದೃಶವಾದ ಮೋಹನರೂಪ ಉಳ್ಳವನೇ, ಪರಾತ್ಪರ–ಉತ್ತಮರೊಳಗೆ ಅಸದೃಶವಾದ ಉತ್ತಮನಾದ ವನೇ ಅಂದರೆ, ಬ್ರಹ್ಮಾದಿ ಜೀವಾಪೇಕ್ಷಯಾ ಅನ್ಯರಾದ ರಮಾದೇವೇರ ವ್ಯಾಪ್ತಿ ದೇಶ ಯಿಂದ ಅನ್ಯವಾದ ಸ್ವಾಖ್ಯಪ್ರದೇಶವುಳ್ಳವನೇ, ಶರಣಜನಸುರಧೇನು–ಶರಣಾಗತ ಜನರಿಗೆ ಇಷ್ಟಾರ್ಥಗಳ ಕೊಡೋದರಲ್ಲಿ, ಕಾಮಧೇನು ಸದೃಶನಾದವನೇ, ಶಾಶ್ವತ–ಅನಾದ್ಯನಂತ ಕಾಲಕ್ಕೂ ಶಶ್ವದೇಕಪ್ರಕಾರವಾಗಿ ನಿತ್ಯನಾಗಿ ಇರತಕ್ಕವನೇ, ಕರುಣಿ–ತನ್ನ ಭಕ್ತರಾದವ ರಲ್ಲಿ ಅಂತಃಕರಣ ಉಳ್ಳವನೇ, ಕಂಜದಳಾಕ್ಷ–ಕಮಲಪತ್ರದೋಪಾದಿಯಲ್ಲಿ ವಿಶಾಲವಾದ

ನೇತ್ರಗಳುಳ್ಳವನೇ, ಕಾಯಿನೆ–ಸಂರಕ್ಷಣ ಮಾಡು ಎಂತ ತ್ರಿಕರಣಪೂರ್ವಕವಾಗಿ ಕರೆದರೆ, ಸಿದ್ಧ–ನಿಶ್ಚಯವಾಗಿ, ಸಿದ್ಧವಾಗಿ, ಕಂಗೊಳಿಪ–ಹೃದಯಾಂತರ್ಗತ ಬಿಂಬ, ಪ್ರತ್ಯಕ್ಷನಾಗಿ ಕಾಪಾಡತಾನೆ ಎಂತ ತಿಳಿದು ಸ್ತೋತ್ರಮಾಡಬೇಕೆಂತ ತಾತ್ಪರ್ಯ.

**ನಿರ್ಮಲನು ನೀನಾಗಿ ಕರ್ಮ ವಿ ।**
**ಕರ್ಮಗಳನು ನಿರಂತರದಲಿ ಸು ।**
**ಧರ್ಮನಾಮಕಗರ್ಪಿಸುತ ನಿಷ್ಕಲುಷ ನೀನಾಗು ॥**
**ಭರ್ಮಗರ್ಭನ ಜನಕ ದಯದಲಿ ।**
**ದುರ್ಮತಿಗಳನು ಕೊಡದೆ ತನ್ನಯ ।**
**ಹರ್ಮ್ಯದೊಳಗಿಟ್ಟೆಲ್ಲ ಕಾಲದಿ ಕಾವ ಕೃಪೆಯಿಂದ ॥ ೧೩ ॥**

ದ್ವಂದ್ವಕರ್ಮಗಳ, ಶ್ರೀ ಪರಮಾತ್ಮಗೆ ಅರ್ಪಿಸು ಎಂತ ಹೇಳತಾರೆ.

ನಿಷ್ಕಲುಷ ನೀನಾಗು–ಅಜ್ಞಾನರಹಿತರಾದ ಭಗವದ್ಭಕ್ತರ ಆಶ್ರಯವನ್ನು ನೀನು ಮಾಡಿದವನಾಗಿ ಅವರ ಮುಖದಿಂದ, ಉಪದೇಶಕ್ರಮದಿಂದ, ಅನುಸಂಧಾನಮಾರ್ಗಗಳ, ಭಗವತ್ಪೂಜಾಕ್ರಮಗಳ ತಿಳಿದುಕೊಂಬೋವನಾಗು, ತಿಳಿದುಕೊಂಡದ್ದರನ್ನ, ನಿರ್ಮಲನು ನೀನಾಗಿ–ಶುದ್ಧಚಿತ್ತನಾಗಿ, ಅಂದರೆ, ಅಂತಃಶುದ್ಧಿ ಎಂತಲೂ, ಬಹಿಃಶುದ್ಧಿ ಎಂತಲೂ ಎರಡುಪ್ರಕಾರ. ಅಂತಃಶುದ್ಧಿ, ಎಂದರೆ, ಅಹಂಮಮತಾರಹಿತನಾಗಿ, ತಾರತಮ್ಯ ಪಂಚ ಭೇದ ಜ್ಞಾನದಿಂದ ನಿಶ್ಚಯವಾದ ಕಾರ್ಯ ಮಾಡುವ್ರದು, ಅಂತಃಶುದ್ಧಿ. ಬಹಿಃಶುದ್ಧಿ ಎಂದರೆ, ವೇದೋಕ್ತ ಕರ್ಮಗಳು, ದೇವಪೂಜಾದಿ ಅನೇಕ ಸತ್ಕರ್ಮಾನುಷ್ಠಾನಗಳು, ಇವ್ರು ಬಹಿಃಶುದ್ಧಿಯಾದುವ್ರ. ಇವ್ರುಗಳಿಂದ ಅನುಷ್ಠಾನಮಾಡುತ್ತಾ, ನಿರಂತರದಲಿ–ಪ್ರತಿ ದಿನವೂ ಸದಾಕಾಲ ದೇಹೇಂದ್ರಿಯಾದಿಗಳಿಂದ ಬಿಂಬಕ್ರಿಯಾದ್ವಾರಾ ಮಾಡತಕ್ಕ, ಕರ್ಮ ವಿಕರ್ಮಗಳನು–ಪುಣ್ಯಪಾಪಾತ್ಮಕ ದ್ವಂದ್ವಕರ್ಮಗಳನ್ನು, ಸುಧರ್ಮನಾಮಕಗರ್ಪಿಸುತ–ಅರ್ಪಿತವಾದ ದ್ವಂದ್ವಕರ್ಮಗಳ ಸಮಿಾಚೀನವಾದ ಧರ್ಮಕರ್ಮಗಳನ್ನಾಗಿ ಪರಮಾತ್ಮ ಮಾಡತಾನಾದಕಡಿಯಿಂದ, ದೇವರಿಗೆ ಸುಧರ್ಮ ಎಂತ ನಾಮ. ಇಂಥಾ ಸುಧರ್ಮ ನಾಮಕ ಪರಮಾತ್ಮಗೆ ಅರ್ಪಿಸುತ್ತಾ, ಭರ್ಮಗರ್ಭನ ಜನಕ–ಹಿರಣ್ಯಗರ್ಭನಾಮದಿಂದ ಇರುವ ಬ್ರಹ್ಮದೇವರಿಗೆ ತಂದಿಯಾದ ಶ್ರೀ ವಾಸುದೇವ ನಾಮಕ ಪರಮಾತ್ಮ, ದಯದಲಿ–ದಯದಿಂದ, ದುರ್ಮತಿಗಳನು ಕೊಡದೆ–ಪಾಪಕರ್ಮಗಳ ಅರ್ಪಣೆಮಾಡೋಣದರಿಂದ ಆ ಪಾಪಕರ್ಮಕ್ಕೆ ಫಲವಾದ ದುರ್ಬುದ್ಧಿಯ ಕೊಡದೆ, ಅದರನ್ನ ಪುಣ್ಯಕರ್ಮತ್ವೇನ ಸ್ವೀಕಾರಮಾಡಿ ಸಮಿಾಚೀನವಾದ ಬುದ್ಧಿಯನ್ನು ಕೊಟ್ಟು, ಕೃಪೆಯಿಂದ – ಕೇವಲ ಅಂತಃಕರಣದಿಂದ ಲಿಂಗಭಂಗ ಐದಿಸಿ, ತನ್ನಯ–ತನ್ನ ಸ್ವಕೀಯವಾದ ಮುಕ್ತರ ಸಂಗತ ವಿಹಾರಮಾಡೋದಕ್ಕೆ ಯೋಗ್ಯವಾದ, ಅನಾದ್ಯನಂತಕಾಲಕ್ಕೂ ಶಾಶ್ವತವಾದ, ತನಗೆ ಭಿನ್ನವಾದ, ಹರ್ಮ್ಯದೊಳಗೆ–ವೈಕುಂಠಲೋಕಗತ ಉಪ್ಪರಿಗಿ ಮನಿಯಲ್ಲಿ, ಎಲ್ಲ ಕಾಲದಿ–ಸದಾ ಸರ್ವಕಾಲದಿ, ಇಟ್ಟು ಕಾವ–ಇಟ್ಟು ಸಂರಕ್ಷಣ ಮಾಡತಾನಾದಕಾರಣ, ದ್ವಂದ್ವ

ಕರ್ಮಗಳ ಅರ್ಪಿಸುತ್ತಾ ನಿರ್ಮಲನಾಗಿ ಇದ್ದರೆ, ಕರ್ಮಮೋಚನೆ ಆಗುವುದೆಂದು ತಾತ್ಪರ್ಯ.

**ಕಲ್ಪಕಲ್ಪದಿ ಶರಣಜನ ವರ ।**
**ಕಲ್ಪವೃಕ್ಷನು ತನ್ನ ನಿಜಸಂ ।**
**ಕಲ್ಪದನುಸಾರದಲಿ ಕೊಡುತಿಪ್ಪನು ಫಲಾಫಲವ ॥**
**ಅಲ್ಪಸುಖದಾಪೇಕ್ಷೆಯಿಂದಹಿ ।**
**ತಲ್ಪನಾರಾಧಿಸದಿರೆಂದಿಗು ।**
**ಶಿಲ್ಪಿಗನ ಕೈಸಿಲ್ಕಿದಾ ಶಿಲೆಯಂತೆ ಸಂತೈಪ ॥ ೧೪ ॥**

ಐಹಿಕ ಸುಖಕ್ಕಾಗಿ ಪರಮಾತ್ಮನ ಆರಾಧನೆ ಮಾಡಬ್ಯಾಡಾ ಎಂತ ಹೇಳತಾರೆ.

ಕಲ್ಪವೃಕ್ಷನು – ಸರ್ವಾಭೀಷ್ಟಗಳ ಕೊಡತಕ್ಕ ಕಲ್ಪವೃಕ್ಷದೋಪಾದಿಯಲ್ಲಿ, ಪರಮಾತ್ಮ, ಕಲ್ಪ ಕಲ್ಪದಿ–ಬ್ರಹ್ಮದೇವರ ಪ್ರತಿಪ್ರತೀ ಮಹಾಕಲ್ಪದಲ್ಲಿ, ತನ್ನ ನಿಜಸಂಕಲ್ಪದನುಸಾರದಲಿ–ತನ್ನ ಸತ್ಯವಾದ ಸಂಕಲ್ಪಾನುಸಾರದಲ್ಲಿ ಸಾಧನಮಾಡಿಸಿ ಅಂದರೆ, ದಾರ ದಾರಿಂದ ಎಷ್ಟೆಷ್ಟು ಕಲ್ಪ ಸಾಧನ ಮಾಡಸತೇನೂ ಎಂತ ಅನಾದಿ ಆರಭ್ಯ ಸಂಕಲ್ಪ ಮಾಡಿದ್ದಾನೊ, ಅಷ್ಟು ಕಲ್ಪಸಾಧನ ಮಾಡಿಸಿ ಆಯಾ ಕಲ್ಪಾಂತಕ್ಕೆ ಸಾಧನ ಪೂರ್ತಿ ಆದ ಪ್ರಾಣಿಗಳಾದ ತ್ರಿವಿಧ ಜೀವರ, ಶರಣಜನ–ಶರಣಾಗತತ್ವ ಸ್ವರೂಪಸ್ವಭಾವದಲ್ಲಿ ಉಳ್ಳ ತನ್ನ ಭಕ್ತರಿಗೆ, ವರ–ಉತ್ತಮವಾದ ವೈಕುಂಠಾದಿ ಲೋಕದಲ್ಲಿ ಸ್ವರೂಪಸುಖ ಭೋಗಮಾಡತಕ್ಕ, ಫಲ–ಫಲವೂ, ಅಫಲವ–ದುಷ್ಟರಾದ ತಮೋಯೋಗ್ಯ, ನಿತ್ಯ ಸಂಸಾರಿಗಳಿಗೆ, ದುಃಖಫಲವನ್ನು ಅಂಧಂತಮ ಲೋಕದಲ್ಲಿ, ಸಾಂತಾನಿಕ ಲೋಕದಲ್ಲಿ, ಸ್ವರೂಪದುಃಖ, ಮಿಶ್ರಭೋಗ ಮಾಡತಕ್ಕ ಸುಖವನ್ನು, ಕೊಡುತಿಪ್ಪನು–ಲಿಂಗಭಂಗ ಐದಿಸಿ ಕೊಡತಾ ಇರತಾನೆ. ಕಡಿಮೆ ಬಿದ್ದವರಿಗೆ ಪುನಃ ಅಸೃಜ್ಯರಾಶಿಯಿಂದ ತೆಗೆದು, ಕಡಿಮೆ ಆದದ್ದಕ್ಕೆ ಭರ್ತಿಮಾಡತಾ ಇರತಾನೆ. ಅಲ್ಪಸುಖದಾಪೇಕ್ಷೆಯಿಂದ–ನಶ್ವರ ವಾದ ಅಲ್ಪವಾದ ಪ್ರಾಕೃತ ವಿಷಯಭೋಗಾಪೇಕ್ಷೆಯಿಂದ, ಎಂದಿಗು–ದಾವಾಗ್ಲೂ, ಅಹಿತಲ್ಪನ–ಶೇಷಶಾಯಿಯಾದ ಶ್ರೀ ಪರಮಾತ್ಮನ, ಆರಾಧಿಸದಿರು–ಸುಖಾಪೇಕ್ಷೆಗಾಗಿ, ಆರಾಧನ ಮಾಡಬ್ಯಾಡಾ, ಶಿಲ್ಪಿಗನ–ಕಲ್ಲುಕೆಲಸ ಮಾಡತಕ್ಕ ಶಿಲ್ಪಿಯು, ಕೈಸಿಲ್ಕಿದ–ಕೈಯಿಂದ ಮಾಡಲ್ಪಟ್ಟ, ಆ ಶಿಲೆಯಂತೆ–ಆ ಶಿಲೆಯೋಪಾದಿಯಲ್ಲಿ, ಸಂತೈಪ–ಸಂರಕ್ಷಣೆ ಮಾಡತಾನೆ.

**ತಾ||** ಕಲ್ಲುಬಡಿಗ ಶಿಲಾವನ್ನ ಸಾಕಾರವಾದ ಪ್ರತಿಮಾ ಮಾಡತಾನೆ. ಪ್ರತಿಷ್ಠಾ ಮಾಡಿ ಪೂಜಾದಿಗಳ ಮಾಡೋ ಯೋಗ್ಯತಾ ಇಲ್ಲ. ಆದ್ದರಿಂದ ಪ್ರತಿಮಾ ಸುಮ್ಮಗೆ ಹಾಕಿರ್ತಾನೆ. ತದ್ವತ್, ಅಸೃಜ್ಯರಾಶಿಗತ ಜೀವರು ಅನಾದಿಯಾಗಿ ಸುಮ್ಮಗೆ ಬಿದ್ದಿದ್ದಾರೆ. ಅವರನ್ನ, ತನ್ನ ಸಂಕಲ್ಪಕ್ಕೆ ದಾವಾಗ ಬರತದೋ, ಆಗ್ಗೆ ಸೃಷ್ಟಿಗೆ ತಂದು ಅವರವರ

ಸಾಧನಮಾಡಿಸಿ ಗತಿಗಳ ಕೊಡತಾನೆ. ಇದಕ್ಕಾಗಿ ಅಧಿಕಾರಿಗಳಾದ ನಾವುಗಳು, ಐಹಿಕ ಸುಖ ಅಪೇಕ್ಷಿಸದೆ ಹರಿಪ್ರೀತಿಗಾಗಿ ಕರ್ಮಗಳ ಮಾಡತಾ ಬಂದರೆ, ಸಂಚಿತನಾಶ, ಆಗಾಮಿ ನಿರ್ಲೇಪವಾಗಿ, ಪ್ರಾರಬ್ಧಕರ್ಮಭೋಗಾನಂತರ ಮೋಕ್ಷ ಕೊಡತಾನೆಂತ ತಾತ್ಪರ್ಯ.

**ದೇಶಭೇದಾಕಾಶದಂದದಿ ।**
**ವಾಸುದೇವನು ಸರ್ವಭೂತನಿ ।**
**ವಾಸನೆನಿಸಿ ಚರಾಚರಾತ್ಮಕನೆಂದು ಕರೆಸುವನು ॥**
**ದ್ವೇಷಸ್ನೇಹೋದಾಸೀನಗಳಿ ।**
**ಲ್ಲೀಶರೀರಗಳೊಳಗೆ ಅವರೋ ।**
**ಪಾಸನಗಳಂದದಲಿ ಫಲವೀವನು ಪರಬ್ರಹ್ಮ ॥ ೧೫ ॥**

ಶ್ರೀ ಪರಮಾತ್ಮಗೆ ದ್ವೇಷಾಸೂಯೆಗಳಿಲ್ಲ ಎಂತ ಹೇಳತಾರೆ.

ದೇಶಭೇದ_ಭೇದದಿಂದ ಯುಕ್ತವಾದ ಅನೇಕ ಪ್ರದೇಶಗಳು ಅವೆ. ಅದರಲ್ಲಿ ಆಕಾಶವದೆ. ಉತ್ತಮ ನೀಚವಾಗಿ ಇರುವ ಈ ಆಕಾಶದಲ್ಲಿ, ಭೇಧ_ನಾನಾವಿಧವಾದ ಭೇದಗಳಿಂದ ಯುಕ್ತಗಳಾದ ಇವುಗಳಲ್ಲಿ, ಆಕಾಶದಂದದಿ_ಒಂದಾದಂಥ ಆಕಾಶ, ಅಧಿಷ್ಠಾನಗಳಾದ ದೇಶಭೇದಗಳಂತೆ ತದಾಕಾರದಿಂದ ಯುಕ್ತವಾಗಿ ಅದೆ. ದೇಶಕ್ಕೆ ಭೇದವೇ ಹೊರ್ತು ಆಕಾಶಕ್ಕೆ ಭೇದವಿಲ್ಲ, ಹ್ಯಾಂಗೋ ಈ ದೇಶ ಆಕಾಶದೋಪಾದಿಯಲ್ಲಿ, ಸರ್ವಭೂತ_ದೇಶಭೇದಕ್ಕೆ ಸದೃಶರಾದ ಸರ್ವಪ್ರಾಣಿಗಳೆಂಬೋ ಅಧಿಷ್ಠಾನಗಳಲ್ಲಿ, ವಾಸುದೇವನು_ಆಕಾಶಕ್ಕೆ ಸದೃಶನಾದ ಶ್ರೀ ವಾಸುದೇವನು, ನಿವಾಸನೆನಿಸಿ_ಆಕಾಶದೋಪಾದಿಯಲ್ಲಿ ಆವಾಸನೆನಿಸಿ, ಚರ_ಜಂಗಮ ಜೀವರಲ್ಲಿ, ಚರ ಎಂತಲೂ, ಅಚರ_ಸ್ಥಾವರ ಜೀವರಲ್ಲಿ, ಅಚರ ಎಂತಲೂ, ಆತ್ಮಕನೆಂದು – ಈ ಪ್ರಕಾರ ಚರಾಚರಾತ್ಮಕನೆಂದು, ಕರೆಸುವನು_ನಾಮದಿಂದ ಕರೆಸುವನು. ಆಕಾಶದೋಪಾದಿಯಲ್ಲಿ ನಿರ್ಲಿಪ್ತನು. ಈ ಶರೀರಗಳೊಳಗೆ_ತ್ರಿವಿಧ ಜೀವರ ಸ್ವರೂಪಗಳೊಳಗೆ, ಬಾಹ್ಯ ಸ್ಥೂಲ ದೇಹಗಳೊಳಗೆ, ಈ ಪೂರ್ವೋಕ್ತಪ್ರಕಾರ ಆಕಾಶದೋಪಾದಿಯಲ್ಲಿ ಸಮಾನನಾಗಿ ಇದ್ದಾನೆ. ದ್ವೇಷ_ತಮೋಯೋಗ್ಯರಲ್ಲಿ ದ್ವೇಷವೂ, ಸ್ನೇಹ_ಮುಕ್ತಿಯೋಗ್ಯರಲ್ಲಿ ಸ್ನೇಹ, ಉದಾಸೀನಗಳಿಲ್ಲ_ನಿತ್ಯಸಂಸಾರಿಗಳಲ್ಲಿ ಉದಾಸೀನ, ಪರಮಾತ್ಮಗೆ ಈ ಮೂರೂ ಇಲ್ಲ. ಪರಬ್ರಹ್ಮ_ಗುಣಪೂರ್ಣನಾದ ಸರ್ವೋತ್ತಮನಾದ ಪರಮಾತ್ಮ, ಅವರೋಪಾಸನಗಳಂದದಲಿ_ಆಯಾ ತ್ರಿವಿಧ ಜೀವರ ಸ್ವರೂಪಯೋಗ್ಯತಾವನ್ನನುಸರಿಸಿ ಅವರವರ ಉಪಾಸನಾನುಸಾರ, ಫಲವೀವನು_ಸುಖಫಲ ಒಬ್ಬರಿಗೆ (ಸಾತ್ತ್ವಿಕರಿಗೆ), ಮಿಶ್ರಫಲ ಇನ್ನೊಬ್ಬರಿಗೆ (ರಾಜಸರಿಗೆ), ದುಃಖಫಲ ಮತ್ತೊಬ್ಬರಿಗೆ (ತಾಮಸರಿಗೆ), ಕೊಡತಾನೆ. ದುಷ್ಟಜನನಿಗ್ರಹ, ಶಿಷ್ಟಜನ ಪರಿಪಾಲನ ಮಾಡತಕ್ಕ ರಾಜ, ದೋಷಿ ಅಲ್ಲ. ತದ್ವತ್, ಮಹಾರಾಜನಾದ ಪರಮಾತ್ಮ ನಿರ್ದೋಷಿ ಎಂತ ತಾತ್ಪರ್ಯ.

**ಸಂಚಿತಾಗಾಮಿಗಳ ಕರ್ಮ ವಿ ।**
**ರಿಂಚಿಜನಕನ ಬಿಡದೆ ಭಜಿಸಲು ।**
**ಮುಂಚಿನಂದದಲಿರದೆ ಕ್ರಮದಿಂ ನಾಶ ಐದುವುವು ॥**
**ಚಂಚಲಿಸದಲೆ ...............* ನಿ ।**
**ಷ್ಕಿಂಚನಜನಪ್ರಿಯನ ನಿಲಿಸಿರೊ ।**
**ಮಿಂಚಿನಂದದಿ ಪೊಳೆವ ಹೃದಯಾಂಬರದಿ ಪುರುಷೇಶ ॥ ೧೬ ॥**

ಸಂಚಿತಾಗಾಮಿಕರ್ಮ ನಾಶವಾಗೋ ಮಾರ್ಗ ಹೇಳತಾರೆ.

ನಿಷ್ಕಿಂಚನಜನಪ್ರಿಯನ–ಒಡವರಾದ ತನ್ನ ಭಕ್ತಜನರಲ್ಲಿ ಪ್ರೀತಿವಿಷಯವಾದ, ವಿರಿಂಚಿಜನಕನ–ಬ್ರಹ್ಮದೇವನ ತಂದಿಯಾದ ವಾಸುದೇವನ, ನಿಲಿಸಿರೊ–ಹೃದಯಾಕಾಶ ದಲ್ಲಿ ವಾಸನಾ ಪ್ರತಿಮಾನ್ನ ನಿಲ್ಲಿಸೋವರಾಗಿರಿ (ಎಂತ ಸಂಬೋಧನ), ನಿಲ್ಲಿಸಿ, ಚಂಚಲಿಸ ದಲೆ–ಮನಸ್ಸು ಪ್ರಾಕೃತವಿಷಯಭೋಗಾದಿಗಳಲ್ಲಿ ಸಂಚಾರಮಾಡದಂತೆ ತದೇಕಧ್ಯಾನ ಪರರಾಗಿ, ಏಕಚಿತ್ತರಾಗಿ, ಬಿಡದೆ ಭಜಿಸಲು–ಬಿಡಧಾಂಗೆ ಧ್ಯಾನಮಾಡಲು, ಸಂಚಿತಾ ಗಾಮಿಗಳ ಕರ್ಮ–ವಿದ್ಯಮಾನ ಜನ್ಮದಲ್ಲಿ ಅನುಭವಮಾಡತಕ್ಕ ಕರ್ಮ, ಹಿಂದೆ ಏಳು ಜನ್ಮದೊಳಗೆ ಈ ಮಧ್ಯದಲ್ಲಿ ಮಾಡಿದ ಪಾಪವೋ, ಪುಣ್ಯವೋ, ಅವರನ್ನ ಈ ಜನ್ಮದಲ್ಲಿ ಕೊಟ್ಟು, ಅದು ಇಂಥಾ ಜನ್ಮದ್ದು ಎಂತ ತಿಳಿಸದೇ ಇದ್ದು, ಹಿಂದೆ ಏಳು ಜನ್ಮದ ಕರ್ಮ ದಾವದದೇ ಅದು ಆಗಾಮಿ ಎಂತ ಕರೆಸುತ್ತದೆ. ಅದಕ್ಕೆ ಮ್ಯಾಲೆ ಇರತಕ್ಕ ಕರ್ಮ, ಸಂಚಿತ ಕರ್ಮ. ಇದು ಅಪರೋಕ್ಷಾತ್ಪೂರ್ವಕಾಲೀನವಾದದ್ದು. ಪ್ರಾರಬ್ಧಕರ್ಮ ತತ್ಕಾಲದಲ್ಲಿ ಭೋಗಮಾಡುತ್ತ ಇರತಕ್ಕ ಕರ್ಮ. ಅಪರೋಕ್ಷಾನಂತರ ಸಂಚಿತಾಗಾಮಿ ಪ್ರಾರಬ್ಧ ಕರ್ಮಗಳು ಎಂಥಾವೆಂದರೆ, ಅಪರೋಕ್ಷಕಾಲಕ್ಕೂ ಭೋಗಮಾಡತಾ ಇರತಕ್ಕ ಕರ್ಮಗಳು, ಪ್ರಾರಬ್ಧ ಕರ್ಮಗಳು, ಎಂತ ಕರಿಸುತ್ತವೆ. ಈ ಪ್ರಾರಬ್ಧ ಎಂಬುದು ನಾಶ ವಾಗಲಾರದು. ಭೋಗಿಸೇತೀರಬೇಕು. ತದನ್ಯ, ಆಗಾಮಿ ಎನತಕ್ಕ ಕರ್ಮವೆಂಬ ಏಳು ಜನ್ಮದ ಕರ್ಮ ನಿರ್ಲೇಪ ಅಂದರೆ, . ಭೋಗಕ್ಕೆ ಬಂದು ನಿರಭಿಮಾನದಿಂದ ಪದ್ಮಪತ್ರಗತ ಜಲವತ್ ಸ್ಪರ್ಶವಾಗಿ, ನಿರ್ಲೇಪವಾಗಿ ಭೋಗಿಸೋದು. ಅತ ಏವ, ಆಗಾಮಿ ನಿರ್ಲೇಪ ಎಂಬುದು, ಮುಂಚಿನಂದದಲಿರದೆ–ಧ್ಯಾನೋಪಾಸನಕ್ಕೆ ಪೂರ್ವದಲ್ಲಿ ಇದ್ದದ್ದು ಎಷ್ಟುಮಾತ್ರ ರಾಶೀಭೂತವಾಗಿತ್ತೋ ಅಷ್ಟು ರಾಶಿ ಇರದೆ, ಧ್ಯಾನೋಪಾಸನಬಲದಿಂದ, ಕ್ರಮದಿಂ– ಹ್ಯಾಂಗೆ ಹ್ಯಾಂಗೆ ಅಧಿಕವಾಗುತದೋ ಹಾಂಗೆ ಹಾಂಗೆ ಎಲ್ಲಾ ಅಧಿಕವಾಗತಾ, ಆ ಕ್ರಮದಿಂದ, ನಾಶ ಐದುವುವು–ನಾಶ ಐದೋವಾಗತವೆ. ಅನಂತರ, ಹೃದಯಾಂಬರದಿ– ಹೃದಯಾಕಾಶದಲ್ಲಿ ಧ್ಯಾನೋಪಾಸನಾ ಮಾಡತಕ್ಕ ವಾಸನಾಪ್ರತೀಕಾಂತರ್ಗತನಾದ, ಚಿದಾನಂದನಾದ, ಪುರುಷೇಶ–ಕ್ಷರಾಕ್ಷರ ಪುರುಷರಿಗೆ ಸ್ವಾಮಿಯಾದ, ಪರಮಾತ್ಮ,

* ಐದು ಮಾತ್ರೆಗಳು ಮೂಲದಲ್ಲೇ ಬಿಟ್ಟುಹೋಗಿವೆ. ಗ್ರಂಥಾಂತರಗಳಲ್ಲಿ ಈ ಶ್ಲೋಕವೇ ಪಾಠಾಂತರವಾಗಿದೆ. ಶ್ರೀ ಸಂಕರ್ಷಣ ಒಡೆಯರ ಟೀಕಾದಲ್ಲಿ ಈ ಬಿಟ್ಟುಹೋಗಿರುವ ಭಾಗದ ವ್ಯಾಖ್ಯಾನವೂ ಇಲ್ಲ.

ಮಿಂಚಿನಂದದಿ ಪೊಳೆವ–ಮಿಂಚಿನ ಕಾಂತಿಯೋಪಾದಿಯಲ್ಲಿ, ಕಾಂತಿಯುಕ್ತನಾಗಿ ಪ್ರತ್ಯಕ್ಷ ನಾಗುವ. ಆಗ್ಗೆ ಸಂಚಿತಾಗಾಮಿಗಳು ನಿಶ್ಶೇಷವಾಗಿ ಪರಿಹಾರ. ಪ್ರಾರಬ್ಧ ಮಾತ್ರ ಪರಿಹಾರವಾಗದೆ ಭೋಗಿಸಬೇಕಾಗಿ ಉಳಿದಿರೋದಾಗತದೆ.

**ವಿಶೇಷಾರ್ಥ :**–ಮತ್ತು ಏಳು ಜನ್ಮದ ಆಗಾಮಿ ಒಂದು. ಪ್ರಾರಬ್ಧ ಕರ್ಮ ಭೋಗಿಸೋಕಾಲದಲ್ಲಿ ಆ ಕರ್ಮದಿಂದ ಅನೇಕ ಕರ್ಮಗಳು ಉತ್ಪತ್ತಿ ಆಗಿ, ಮುಂದೆ ಭೋಗಿಸತಕ್ಕದ್ದಾಗಿ ಇರುತ್ತವೆ. ಅವು ಸ್ಪರ್ಶವಿಲ್ಲದೆ, ನಿರ್ಲೇಪವಾಗಿ ಹೋಗತವೆ. ಅಪರೋಕ್ಷಾತ್ಪೂರ್ವಕಾಲೀನ ಕರ್ಮ, ಸಂಚಿತಕರ್ಮವೆನಿಸುತ್ತದೆ. ಅಪರೋಕ್ಷವಾಗಿ ಭೋಗಿಸತಾ ಇರತಕ್ಕ ಕರ್ಮ, ಪ್ರಾರಬ್ಧಕರ್ಮವೆನಿಸುತ್ತದೆ. ಇದರಿಂದ ಉತ್ಪನ್ನವಾದ ಕರ್ಮ, ಆಗಾಮಿ ಎಂತ ಕರಿಸುತ್ತವೆ. ಇದೇ ಸ್ಪರ್ಶವಾಗದೆ ನಿರ್ಲೇಪವಾಗತಕ್ಕ ಕರ್ಮ. ಸಂಚಿತಕ್ಕೆ ನಾಶ ಎಂದರೆ, ಭೋಗಕ್ಕೆ ಬಾರದೇನೆ ನಷ್ಟವಾಗುತ್ತದೆ. ಈ ಸಂಚಿತಾಗಾಮಿ ಕರ್ಮಗಳ ಉತ್ಪತ್ತಿ ಹ್ಯಾಂಗೆಂದರೆ, ಅನಾದಿಕರ್ಮವೆಂಬ ಬೀಜ, ಸೃಷ್ಟಿಕಾಲದಲ್ಲಿ ಅಂಕುರವಾಗಿ ವೃಕ್ಷವಾಯಿತು. ಈ ವೃಕ್ಷಕ್ಕೆ ಶಾಖೆಗಳು ಮೂರು. ಅಂಕುರ ಆಗಾಮಿ, ಸಂಚಿತ, ಪ್ರಾರಬ್ಧ. ಈ ಶಾಖಾತ್ರಯದಲ್ಲಿ ಫಲಗಳ ಕ್ರಮ ದಾವದೆಂದರೆ ಆಗಾಮಿ ಕರ್ಮಶಾಖಾದಲ್ಲಿ ಲಕ್ಷ ಫಲವದೆ. ಸಂಚಿತಕರ್ಮಶಾಖಾದಲ್ಲಿ ಲಕ್ಷ ಫಲವದೆ. ಪ್ರಾರಬ್ಧ ಕರ್ಮಶಾಖಾದಲ್ಲಿ ಹತ್ತು ಫಲವದೆ. ಆದಿಯಲ್ಲಿ ಜೀವನಾದವ, ಆಗಾಮಿಕರ್ಮವೆಂಬ ಶಾಖಾದಲ್ಲಿ ಸಂಚಾರಮಾಡುತ್ತಾ, ತದ್ಗತ ಫಲಗಳ ಭೋಗಿಸತಾ ಇರತಾನೆ. ಮಧ್ಯೆ ಅಪರೋಕ್ಷವಾಗತದೆ. ಆಗ್ಗೆ ಭೋಗಿಸತಾ ಇರತಕ್ಕ ಫಲ ಅನುಭವಿಸೇ ತೀರಬೇಕು. ಆ ಶಾಖಾದಲ್ಲಿ ಅವಶಿಷ್ಟ ಇರುವ ಫಲಗಳು ಆಗಾಮಿ ಎಂತ ಕರಿಸುತ್ತವೆ. ಇವು ನಿರ್ಲೇಪ. ಸಂಚಿತ ಶಾಖಾಫಲಗಳು ನಾಶ. ಪ್ರಾರಬ್ಧ ಶಾಖಾಗತ ಹತ್ತು ಫಲಗಳ ಭೋಗ ಮಾಡಬೇಕು. ಪೂರ್ವೋಕ್ತ ಸಂಚಿತಾಗಾಮಿ ಶಾಖಾದ್ವಯಗಳಲ್ಲಿ ಅನೇಕ ಅಂತರಾಂತರ ಶಾಖಾಫಲಭೋಗಗಳು ಅವೆ. ಆಗಾಮಿ ಶಾಖಾದಲ್ಲೂ, ಸಂಚಿತ ಶಾಖಾದಲ್ಲೂ, ತ್ರಿವಿಧ ಪ್ರಕಾರ ಶಾಖಾಗಳುಂಟು, ಫಲಭೋಗಗಳೂ ಉಂಟು. ಇದರ ಪ್ರಮಾಣ ಬಾದರಾಯಣ ಕೃತ ತತ್ತ್ವಸಾರದಿಂದ ತಿಳೀಬೇಕು.

**ಕಾಲ ದ್ರವ್ಯ ಸುಕರ್ಮ ಶುದ್ಧಿಯ ।**
**ಪೇಳುವರು ಅಲ್ಪರಿಗೆ ಇವು ನಿ ।**
**ರ್ಮೂಲಗೈಸವು ಎಲ್ಲ ಪಾಪಗಳೆಲ್ಲ ಕಾಲದಲಿ ॥**
**ತೈಲಧಾರೇಯಂತವನ ಪದ ।**
**ಓಲಯಿಸಿ ತುತಿಸದಲೆ ನಿತ್ಯದಿ ।**
**ಬಾಲಿಶರು ಕರ್ಮಾದಿಗಳೆ ತಾರಕವೆನುತಲಿಹರು ॥ ೧೭ ॥**

ಗಂಗಾದಿ ತೀರ್ಥಸ್ನಾನಾದಿಗಳಿಂದಲೂ, ಪುಣ್ಯಕಾಲವಿಶೇಷಗಳಲ್ಲಿ ಮಾಡಿದ ಸತ್ಕರ್ಮಗಳಿಂದಲೂ, ಇನ್ನೂ ಪ್ರಾಯಶ್ಚಿತ್ತರೂಪವಾದ ಕರ್ಮಗಳಿಂದಲೂ, ದೋಷ

ದಿಂದ ಶುದ್ಧನಾಗತಾನೆ ಎಂತ ಶಾಸ್ತ್ರ ಆದಲ್ಲಾ (ಇದೆಯಲ್ಲಾ), ಆದರಿಂದ ದೋಷಗಳು ಪರಿಹಾರವಾಗತದ ಎಂದರೆ, ಹೇಳತಾರೆ,

ಅಲ್ಪರಿಗೆ–ಜ್ಞಾನ ಅಲ್ಪವಾಗಿ ಇರೋಣ, ಅಜ್ಞಾನ ಬಹಳವಾಗಿ ಇರೋಣ, ಇಂಥಾ ಅಲ್ಪರಿಗೆ, ಅವರು ಮಾಡಿದ ಪಾಪಗಳಿಗೆ, ಕಾಲ–ಪುಣ್ಯಕಾಲವಾದ ಸರ್ವಕಾಲ, ವಿಶೇಷಕಾಲಗಳಲ್ಲಿ, ದ್ರವ್ಯ–ದ್ರವ್ಯಾದಿ ದಾನಗಳಿಂದೇನು ಅಥವಾ ಸಾಧಾರಣಕಾಲಗಳಲ್ಲಿ ಹಿರಣ್ಯ ದಾನ ಮೊದಲಾದ, ಇನ್ನೂ ಅನೇಕ ದಾನಧರ್ಮಗಳೇನು, ಸುಕರ್ಮ–ಸಮೀಚೀನವಾದ ಕೃಚ್ಛ್ರ, ಚಾಂದ್ರಾಯಣ ವ್ರತೋಪವಾಸ, ತೀರ್ಥಯಾತ್ರೆ, ದೇವರ ಪೂಜಾದಿ ಅನೇಕ ಸತ್ಕರ್ಮಗಳಿಂದ, ಶುದ್ಧಿಯ ಪೇಳುವರು–ಶಾಸ್ತ್ರಜ್ಞರು ಪ್ರಾಯಶ್ಚಿತ್ತ ರೂಪವಾದ ಪರಿಶುದ್ಧಿಯನ್ನು ಹೇಳತಾರೆ. ಇದು ಸತ್ಯವೇ ಹೊರ್ತು ಅನೃತವಲ್ಲ. ಇವು–ಈ ಪೂರ್ವೋಕ್ತ ಪ್ರಾಯಶ್ಚಿತ್ತಗಳು, ಎಲ್ಲ ಪಾಪಗಳ–ಸಮಸ್ತವಾದ ಪಾಪಗಳನ್ನು, ನಿರ್ಮೂಲಗೈಸವು–ನಿರ್ಮೂಲವಾಗಿ ಹೋಗಲಾಡಿಸಲಾರವು. ಅವಶಿಷ್ಟ ಉಳಿದಿರುತ್ತದೆ. ಅಲ್ಪ ಪಾಪಗಳು ನಾಶವಾಗಿ ಪ್ರಬಲ ಪಾಪಗಳು ಶೇಷ ಉಳಿದಿರುತ್ತವೆ. ಸಮಸ್ತ ಪಾಪ ಗಳೂ ನಿರ್ಮೂಲವಾಗಿ ನಾಶ ಐದಬೇಕಾದರೆ ಶ್ರೀ ಭಗವತ್ಪ್ರಸಾದ ಹೊರ್ತು, ಕರ್ಮ ರೂಪ, ಪ್ರಾಯಶ್ಚಿತ್ತಾದಿಗಳಿಂದ ಆಗೋದಿಲ್ಲ. ಆದಕಡಿಯಂದ, ಎಲ್ಲಕಾಲದಲಿ–ಸದಾ ಸರ್ವಕಾಲದಲ್ಲಿ, ಅವನ–ಹೃದಯಾಕಾಶಗತ ಲಕ್ಷ್ಮೀಪತಿಯಾದ ಪರಮಾತ್ಮನ, ಪದ–ಪಾದಗಳ, ತೈಲಧಾರೇಯಂತೆ–ತೈಲಧಾರೆ ಅವಿಚ್ಛಿನ್ನವಾಗಿ ಹ್ಯಾಂಗೆ ಇರತದೊ ತದ್ವತ್, ಅವಿಚ್ಛಿನ್ನವಾಗಿ, ನಿತ್ಯದಿ–ಪ್ರತಿದಿನದಲ್ಲೂ, ಓಲಯಿಸಿ–ಭಜನಾರೂಪದಿಂದ ಸೇವಾಮಾಡಿ, ತುತಿಸದಲೆ–ಗುಣ ಮಾಹಾತ್ಮ್ಯಗಳನ್ನು ಸ್ತೋತ್ರಮಾಡದೆ ಸರ್ವಪಾಪಗಳೂ ನಾಶವಾಗ ಲಾರವು. ಬಾಲಿಶರು–ಅಜ್ಞಾನಿಗಳು ಸರ್ವಪಾಪಗಳು ಸುಕರ್ಮರೂಪವಾದ ಪ್ರಾಯಶ್ಚಿ ತ್ತಾದಿಗಳಿಂದ ನಾಶವಾಗತವೆ ಎಂತಲೂ, ಕರ್ಮಾದಿಗಳೆ–ಪಾಪಕರ್ಮಗಳ ನಾಶಕ್ಕೆ ಸುಕರ್ಮಗಳೆ, ತಾರಕವು–ಗತಿ ಐದಿಸತಕ್ಕವೆಂದು, ಎನುತಲಿಹರು–ಹೇಳೋವರಾಗುತ್ತಾರೆ. ಆದರೆ ಸರ್ವಕರ್ಮಗಳನ್ನ ಶ್ರೀ ಪರಮಾತ್ಮನ ಸ್ಮರಣಪೂರ್ವಕಮಾಡಿ, ಸಮರ್ಪಣಮಾಡಿ, ಭಗವತ್ಪ್ರಸಾದ ಸಂಪಾದಿಸಿ ಗತಿ ಹೊಂದಬೇಕೇಹೊರ್ತು, ಅನ್ಯವಾದ ಶುಷ್ಕ ಕರ್ಮಗಳು, ಅಧಿಕಾರಿಗಳನ್ನು ಪವಿತ್ರಮಾಡಿ ಸದ್ಗತಿ ಐದಿಸಲಾರವು ಎಂತ ತಾತ್ಪರ್ಯ.

**ಕಮಲಸಂಭವ ಶರ್ವಶಕ್ರಾ ।**
**ದ್ಯಮರರೆಲ್ಲರು ಇವನ ದುರತಿ ।**
**ಕ್ರಮ ಮಹಿಮೆಗಳ ಮನವಚನದಿಂ ಪ್ರಾಂತಗಾಣದಲೆ ॥**
**ಶ್ರಮಿತರಾಗಿ ಪದಾಬ್ಜ ಕಲ್ಪ ।**
**ದ್ರುಮದ ನೆಳಲಾಶ್ರಯಿಸಿ ಲಕ್ಷ್ಮೀ ।**
**ರಮಣ ಸಂತೈಸೆಂದು ಪ್ರಾರ್ಥಿಪರತಿಭಕುತಿಯಿಂದ ॥ ೧೮ ॥**

ದೋಷದಿಂದ ನಿರ್ಮೂಲರಾಗಬೇಕಾದರೆ, ತೃಣಜೀವಾರಂಭಮಾಡಿ, ಬ್ರಹ್ಮಾಂತ ವರಿಗೆ ಪರಮಾತ್ಮನ ಭಕ್ತಿಪೂರ್ವಕವಾದ ಧ್ಯಾನವೇ ಪ್ರಾಯಶ್ಚಿತ್ತ ಎಂತ ಹೇಳತಾರೆ.

ಕಮಲಸಂಭವ–ಬ್ರಹ್ಮದೇವರು, ಶರ್ವಶಕ್ರಾದ್ಯಮರರೆಲ್ಲರು–ರುದ್ರ, ಇಂದ್ರ, ಇವರೇ ಮೊದಲಾದ, ಯಾವತ್ತೂ ಮಂದಿ ದೇವತೆಗಳು, ಇವನ–ಈ ಪೂರ್ವೋಕ್ತ ಪರಮಾತ್ಮನ, ದುರತಿಕ್ರಮ–ತಿಳಕೊಂಬೋದಕ್ಕೆ ಅಶಕ್ಯವಾದ, ಅತಿಕ್ರಮಿಸಿದ, ಮಹಿಮೆಗಳ–ಆದ್ಯಂತ ಶೂನ್ಯಗಳಾದ ಮಹಿಮೆಗಳ, ಮನ–ಮನಸಾ ಆಲೋಚನಿಮಾಡಿನ್ನೂ, ವಚನದಿಂ–ವಾಕ್ಯದಿಂದ ಉಚ್ಚಾರಮಾಡಿನ್ನೂ, ಪ್ರಾಂತಗಾಣದಲೆ–ಕೊನಿಗಾಣದೆ, ತಮ್ಮ ಯೋಗ್ಯ ತಾನುಸಾರ ತಿಳಕೊಂಬೋವರಾಗಿ, ಶ್ರಮಿತರಾಗಿ – ಅಪಾರಮಹಿಮೆಗಳ ಸಾಕಲ್ಯೇನ ತಿಳಿಕೊಂಬೋದಕ್ಕೆ ಯೋಗ್ಯತಾ ಸಾಲದೇ, ಚಿತ್ತಭ್ರಮೆಯುಕ್ತರಾಗಿ, ಪದಾಬ್ಜ–ಪರಮಾತ್ಮನ ಪಾದಕಮಲಗಳೆಂಬೋ, ಕಲ್ಪದ್ರುಮ–ಸರ್ವಾಭೀಷ್ಟಕೊಡತಕ್ಕ, ಕಲ್ಪ ವೃಕ್ಷದ, ನೆಳಲಾಶ್ರಯಿಸಿ–ಅನುಗ್ರಹಾರ್ಥ ಆಶ್ರಯಮಾಡಿ, ಲಕ್ಷ್ಮೀರಮಣ–ರಮಾಪತಿ ಯಾದ ಶ್ರೀನಾರಾಯಣನೆ, ಸಂತೈಸೆಂದು–ನಿನ್ನ ಮಾಹಾತ್ಮೆ ತಿಳಿಕೊಂಬೋದಕ್ಕೆ ನಾವೇನು ಲಕ್ಷ್ಮೀದೇವೇರೂನೂ, ಸಮರ್ಥರಲ್ಲ. ನಿನಗೆ ನೀನೇ ಕರುಣಾಮಾಡಿ ಸಂರಕ್ಷಣಾ ಮಾಡಬೇಕೆಂತ, ಅತಿ ಭಕುತಿಯಿಂದ–ಅತ್ಯಂತವಾದ ಅವಿಚ್ಛಿನ್ನ ಭಕುತಿಯಿಂದ, ಪ್ರಾರ್ಥಿ ಪರು–ಪ್ರಾರ್ಥನಾಮಾಡುತ್ತಾರೆ. ಆದ್ದರಿಂದ ಸರ್ವಪಾಪಗಳು ಪರಿಹಾರವಾಗಬೇಕಾದರೆ, ಪೂರ್ವೋಕ್ತಪ್ರಕಾರ ಧ್ಯಾನಯುಕ್ತರಾಗಿ ಮಾಹಾತ್ಮ್ಯಜ್ಞಾನಪೂರ್ವಕ, ಸುದೃಢ ಸ್ನೇಹ ರೂಪವಾದ ಭಕುತಿಯಿಂದ ಪ್ರಾರ್ಥಿಸಿದರೆ ಪ್ರಾಯಶ್ಚಿತ್ತದಿಂದ ಹೋಗತಕ್ಕ ಪಾಪಗಳೇನು, ತದನ್ಯ ಪಾಪಗಳೇನು, ಸಮೂಲವಾಗಿ ನಾಶವಾಗತವೆ. ಪ್ರಾಯಶ್ಚಿತ್ತರೂಪವಾದ ಕರ್ಮದಲ್ಲಿ ಲೋಪವಾದರೆ, ಆ ಲೋಪವಾದದ್ದಕ್ಕೆ ಬ್ಯಾರೆ ಪ್ರಾಯಶ್ಚಿತ್ತವಾಗಬೇಕು. ಕರ್ಮ ಪ್ರಾಯಶ್ಚಿತ್ತ, ಗಹನವಾದದ್ದು. ಆದಕಡಿಯಿಂದ ಶ್ರೀಶನ ಧ್ಯಾನರೂಪವಾದ ಪ್ರಾಯಶ್ಚಿತ್ತವೇ ಸರ್ವಕ್ಕೂ ಶ್ರೇಷ್ಠ ಎಂತ ತಿಳಿದು, ಸರ್ವಕರ್ಮದಲ್ಲೂ ಶ್ರೀ ಪರಮಾತ್ಮನ ಧ್ಯಾನ, ಸ್ಮರಣವಿರಬೇಕೆಂತ ತಾತ್ಪರ್ಯ.

**ವಾರಿಚರವೆನಿಸುವುವು ದರ್ದುರ ।**
**ತಾರಕಗಳೆಂದರಿದು ಭೇಕವ ।**
**ನೇರಿ ಜಲಧಿಯ ದಾಟುವೆನು ಎಂಬುವನ ತೆರನಂತೆ ॥**
**ತಾರತಮ್ಯಜ್ಞಾನಶೂನ್ಯರು ।**
**ಸೂರಿಗಮ್ಯನ ತಿಳಿಯಲರಿಯದೆ ।**
**ಸೌರ ಶೈವಮತಾನುಗರನನುಸರಿಸಿ ಕೆಡುತಿಹರು ॥ ೧೯ ॥**

ಕರ್ಮ ಪ್ರಾಯಶ್ಚಿತ್ತಕ್ಕೆ ದೃಷ್ಟಾಂತವನ್ನೂ, ಹರಿಭಕ್ತಿ ಮಾಡದವ ದುಃಖ ಐದತಾನೆ ಎಂಬೋದಕ್ಕೆ ದೃಷ್ಟಾಂತವನ್ನೂ ಹೇಳತಾರೆ.

ದರ್ದುರ–ಕಪ್ಪೆಗಳು, ವಾರಿಚರವೆನಿಸುವವು–ಜಲಚರ ಜೀವಗಳೆಂದು ಕರಿಸುತ್ತವೆ, ತಾರಕಗಳೆಂದರಿದು – ಸಮುದ್ರೋದಕಗತ ಈ ಕಪ್ಪೆಗಳ ಮ್ಯಾಲೆ ಕೂತು ಹೋದರೆ ಸಮುದ್ರದ ಆಚೆ ಕಟ್ಟೆ ಸೇರಿಸೋವಾಗತವೆ. ಈ ಕಪ್ಪೆಗಳೇ ತಾರಕಗಳೆಂದು ತಿಳಿದವನಾಗಿ, ಭೇಕವನೇರಿ–ಈ ಕಪ್ಪೆಗಳಮ್ಯಾಲೆ ಕೂತವನಾಗಿ, ಜಲಧಿಯ–ಸಮುದ್ರವ, ದಾಟುವೆನು ಎಂಬುವನ ತೆರನಂತೆ–ದಾಟುವೆನು ಎಂಬುವನೋಪಾದಿಯಲ್ಲಿ (ಅಂದರೆ, ಅದು ಹ್ಯಾಂಗೆ ಅಸಂಭಾವಿತವೋ ಅದರಂತೆ), ಪಾಪಾಖ್ಯ ಸಮುದ್ರ ದಾಟೋ ಉದ್ದಿಶ್ಯ, ಸುಕರ್ಮ ರೂಪವಾದ ಪ್ರಾಯಶ್ಚಿತ್ತಗಳೆಂಬೋ ಕಪ್ಪೆಗಳಮ್ಯಾಲೆ ಏರೋಣದರಿಂದ, ಪಾಪಸಮುದ್ರ ದಾಟಲಾರ ಎಂತ ಅರ್ಥ. ಸಮುದ್ರ ದಾಟಬೇಕಾದರೆ ನಾವಿಯೇ ಆಗಬೇಕು; ಪರಮಾತ್ಮನ ಧ್ಯಾನ ಸೇವಾದಿಗಳೇ ಆ ನಾವಿಯು. ಅನ್ಯಸಾಮಗ್ರಿಗಳಿಂದ ದಾಟೋಣ ಆಗೋದಿಲ್ಲ. ಇದರನ್ನ ಬಿಟ್ಟವರಾಗಿ, ತಾರತಮ್ಯಜ್ಞಾನಶೂನ್ಯರು–ಶ್ರೀಹರಿ ಸರ್ವೋತ್ತಮ, ವಾಯು ಜೀವೋತ್ತಮ, ತಾರತಮ್ಯ ಪಂಚಬೇಧ ಜ್ಞಾನವೆಂಬ ಜ್ಞಾನಾಖ್ಯ ನಾವಿದ್ವಾರಾ ಸಂಸಾರಸಮುದ್ರ ದಾಟಬೇಕು. ಅನ್ಯಮಾರ್ಗಗಳಿಂದ ಆಗೋದಿಲ್ಲ ಎಂಬ ಜ್ಞಾನಶೂನ್ಯರಾದವರು, ಸೂರಿಗಮ್ಯನ ತಿಳಿಯಲರಿಯದೆ – ಜ್ಞಾನಿಗಳಿಂದ ತಿಳಿದ ಪರಮಾತ್ಮನೆಂಬೋ ನಾವಿದ್ವಾರಾ ಸಂಸಾರಸಮುದ್ರ ದಾಟಬೇಕೆಂಬೋದರನ್ನ ತಿಳಿಯದೆ, ಸೌರ–ಸೂರ್ಯ, ಈ ಸೂರ್ಯನೇ ಸರ್ವೋತ್ತಮ ಎಂತಲೂ, ಶೈವ–ರುದ್ರ, ಈ ರುದ್ರನೇ ಸರ್ವೋತ್ತಮ ಎಂತಲೂ ತಿಳಿದಿರುವ, ಮತಾನುಗರ–ಭೇಕಸದೃಶವಾದ ಮತಗಳ, ಆಯಾ ಮತಾವಲಂಬಿಗಳಾದವರ, ರುದ್ರ, ಗಣಪತಿ, ಸೂರ್ಯಾದಿಗಳ, ಅನುಸರಿಸಿ–ಆಶ್ರಯಮಾಡಿ, ಕೆಡುತಿಹರು–ಆ ರುದ್ರ, ಸೂರ್ಯ ಮೊದಲಾದವರ ದ್ವಾರಾನೇ ಸುಖಗಳಿಂದ ನಾಶ ಐದಿ, ಅಂಧಂತಮಲೋಕದಲ್ಲಿ ದುಃಖಾನುಭವಮಾಡತಾರೆ. ರುದ್ರಾದಿ ದೇವತೆಗಳು ಸರ್ವೋತ್ತಮರಲ್ಲ; ಅವರಿಗೆ ಮೋಕ್ಷ ಕೊಡೋ ಶಕ್ತಿಯಿಲ್ಲ, ಶ್ರೀ ಪರಮಾತ್ಮ ಒಬ್ಬನೇ ಮೋಕ್ಷಕೊಡುವವನು ಎಂತ ತಿಳಿದು ಉಪಾಸನಮಾಡುತ್ತಾ ಬಂದರೆ, ಕರ್ಮ ವಿಮೋಚನಿಯಾಗುತ್ತಾ ಬರುತ್ತದೆ ಎಂತ ತಾತ್ಪರ್ಯ,

**ಕ್ಷೋಣಿಪತಿಸುತನೆನಿಸಿ ಕೈ ದು ।**
**ಗ್ಗಾಣಿಗೊಡ್ಡುವ ತೆರದಿ ಸುಮನಸ ।**
**ಧೇನು ಮನೆಯೊಳಗಿರಲು ಗೋಮಯ ಬಯಸುವಂದದಲಿ ॥**
**ವೇಣುಗಾನಪ್ರಿಯನ ಅಹಿಕ ಸು ।**
**ಖಾನುಭವ ಬೇಡದಲೆ ಲಕುಮಿಾ ।**
**ಪ್ರಾಣನಾಥನ ಪಾದಭಕುತಿಯ ಬೇಡು ಕೊಂಡಾಡು ॥ ೨೦ ॥**

ಅನ್ಯ ದೇವತೆಗಳಾದ, ರುದ್ರಾದಿದೇವತೆಗಳ, ಸರ್ವೋತ್ತಮತ್ವೇನ ಭಜಿಸಿದವರಿಗೆ ಅಂಧಂತಮ ದುಃಖ ಪ್ರಾಪ್ತಿ. ಆದ್ದರಿಂದ ಅನ್ಯ ಸೂರ್ಯ, ಶಿವಾದಿಗಳ ಸರ್ವೋತ್ತಮ

ತ್ವೇನ ತಿಳೀಕೊಡದೂ ಎಂತಲೂ, ಐಹಿಕ ಸುಖಕ್ಕಾಗಿ ಪರಮಾತ್ಮನ ಬೇಡ ಬ್ಯಾಡಾ ಎಂತಲೂ ಹೇಳತಾರೆ.

ಕ್ಷೋಣಿಪತಿಸುತನೆನಿಸಿ–ಭೂಮಿಯನ್ನು ಪರಿಪಾಲನಮಾಡತಕ್ಕ ಅರಸನ ಪುತ್ರ ಎಂತ ಎನಿಸಿ, ಬೇಕಾದ ಇಷ್ಟಾರ್ಥಗಳ ಪೂರ್ತಿಮಾಡತಕ್ಕ ತನ್ನ ತಂದಿಯನ್ನು ಕುರಿತು, ದುಗ್ಗಾಣಿಗೆ–ಎರಡು ಪೈಸಾಗೋಸ್ಕರ, ಕೈ ಒಡ್ಡುವತೆರದಿ–ತನ್ನ ಕರಗಳ ನೀಡಿ ಬೇಡಿ ದೋಪಾದಿಯಲ್ಲಿ, ಸುಮನಸಧೇನು – ಸ್ವರ್ಗಲೋಕಗತ ದೇವತೆಗಳ ಆಕಳು ಆದ ಕಾಮಧೇನು, ಸರ್ವ ಇಷ್ಟಾರ್ಥಗಳ ಕೊಡತಕ್ಕದ್ದು. ಇಂಥಾ ಕಾಮಧೇನು, ಮನೆಯೊಳಗಿರಲು–ಮನೆಯೊಳಗೆ ಇರಲಾಗಿ ಅದರಬಳಿಗೆ ಹೋಗಿ, ಗೋಮಯ ಬಯಸುವಂದದಲಿ–ಸೆಗಣಿ ಬೇಕು ಎಂತ ಅಪೇಕ್ಷಿಸಿ, ಯಾಚನಾಮಾಡಿದೋಪಾದಿಯಲ್ಲಿ, ಹದಿನಾಲ್ಕು ಲೋಕಕ್ಕೆ ರಾಜನಾದ ಕ್ಷೋಣಿಪತಿಸಾಂಕೇತನಾದ ಪರಮಾತ್ಮಗೆ ಪುತ್ರರಾದವರು, ಪ್ರಾಣಿಗಳಾದ ನಾವು ನಮಗೆ ತಂದಿ, ಪರಮಾತ್ಮ, ಕಾಮಧೇನುಸದೃಶನಾದವ. ಈ ದೇಹಾಖ್ಯ ಮನಿವಳಗೆ ಇದ್ದಾನೆ. ಇಂಥಾ ಪರಮಾತ್ಮ ಅವರವರ ಯೋಗ್ಯತಾನುಸಾರ ಸರ್ವಾಭೀಷ್ಟಗಳ ಕೊಡತಕ್ಕವ. ಇಂಥಾ, ವೇಣುಗಾನಪ್ರಿಯನ–ಲಕ್ಷ್ಮೀದೇವೇರು ಗಾನಮಾಡೋದಕ್ಕೆ ವೇಣುರೂಪ ಧರಿಸಿ ಶ್ರೀ ಕೃಷ್ಣನ ಮುಖಕಮಲಗಳ ಮಕರಂದಾಸ್ವಾದನಮಾಡಿ ಕ್ರೀಡಾ ಮಾಡಿದ ಈ ರಮಾದೇವೇರಿಗೆ ಪ್ರೀತಿವಿಷಯಕನಾದ ಶ್ರೀ ಪರಮಾತ್ಮನ್ನ ಐಹಿಕ ಸುಖವನ್ನು ಕೊಡೂ ಎಂತ ಬೇಡೋಣ ದಾವದದೇ ಅದು, ಪೂರ್ವೋಕ್ತ ದೃಷ್ಟಾಂತಾನುಸಾರ ಅಲ್ಪವಾದ ಎರಡು ಕಾಸು, ಗೋಮಯ ಬಯಸಿದಂತೆ ಆಗತದೆ ; ಅದರನ್ನೇ ಕೊಡತಾನೆ. ಅದು ಅಲ್ಪಪ್ರಯೋಜನವು, ದುಃಖ ಪರಿಹಾರವಾಗಲಾರದು. ಆದ್ದರಿಂದ, ಅಹಿಕಸುಖಾನುಭವ–ನಶ್ವರವಾದ ದುಗ್ಗಾಣಿ, ಸೆಗಣಿಸದೃಶವಾದ ಅನಿತ್ಯಸುಖವನ್ನ, ಬೇಡದಲೆ–ಕೇಳದೇ, ಅಹಿಕಸುಖಗಳ ತ್ಯಾಗಮಾಡಿ, ಲಕುಮಿಪ್ರಾಣನಾಥನ–ಲಕ್ಷ್ಮೀದೇವೇರು, ವಾಯುದೇವರು, ಇವರಿಗೆ ಸ್ವಾಮಿಯಾದ ಬಿಂಬರೂಪಿ ಪರಮಾತ್ಮನ, ಪಾದಭಕುತಿಯ ಬೇಡು–ಪಾದದಲ್ಲಿ ಅಚಂಚಲ ಭಕುತಿಯನ್ನು ಕೊಡು ಎಂತ ಬೇಡು. ಅನ್ಯವಾದದ್ದು ಬೇಡ ಬ್ಯಾಡಾ, ಕೊಂಡಾಡು–ಬಿಂಬಮೂರ್ತಿ ಮಾಹಾತ್ಮ್ಯವನ್ನ ಹೊಗಳುತ್ತಾ ಇರು ಎಂತ ತಾತ್ಪರ್ಯ.

**ಜ್ಞಾನ ಜ್ಞೇಯ ಜ್ಞಾತೃವೆಂಬಭಿ ।**
**ಧಾನದಿಂ ಬುದ್ಧ್ಯಾದಿಗಳಧಿ ।**
**ಷ್ಠಾನದಲಿ ನೆಲೆಸಿದ್ದು ಕರೆಸುತ ತತ್ತದಾಹ್ವಯದಿ ॥**
**ಭಾನುಮಂಡಲಗಭ ಪ್ರದರ್ಶಕ ।**
**ತಾನೆನಿಸಿ ವಶನಾಗುವನು ಶುಕ ।**
**ಶೌನಕಾದಿಮುನೀಂದ್ರಹೃದಯಾಕಾಶಗತಚಂದ್ರ ॥ ೨೧ ॥**

ಶ್ರೀ ಪರಮಾತ್ಮನು ಭಕ್ತಿ ಬೇಡಿದವರಿಗೆ ಭಕ್ತಿ ಕೊಟ್ಟು ಪ್ರತ್ಯಕ್ಷನಾಗತಾನೆ ಎಂತ ಹೇಳತಾರೆ.

ಬುದ್ಧ್ಯಾದಿಗಳಧಿಷ್ಠಾನದಲಿ–ಬುದ್ಧಿಯೇ ಆದಿಯಾಗಿ ಏಕಾದಶೇಂದ್ರಿಯಗಳ ಅಧಿಷ್ಠಾನದಲ್ಲಿ ಅಂದರೆ, ಅದರ ವಿವರ. ಜ್ಞಾನ–ಜ್ಞಾನಶಬ್ದವಾಚ್ಯನಾದ ಪರಮಾತ್ಮ, ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ, ಅಂತಃಕರಣ. ಈ ಐದು ಮನೋವೃತ್ತಿಗಳಲ್ಲಿ, ಜ್ಞೇಯ–ಜ್ಞೇಯಶಬ್ದವಾಚ್ಯನಾದ ಪರಮಾತ್ಮ, ಪಂಚಜ್ಞಾನೇಂದ್ರಿಯಗಳಲ್ಲಿ, ಜ್ಞಾತೃವು–ಜ್ಞಾತೃಶಬ್ದವಾಚ್ಯಪರಮಾತ್ಮ, ಪಂಚಕರ್ಮೇಂದ್ರಿಯಗಳಲ್ಲಿ ಈ ಪ್ರಕಾರ ಏಕಾದಶೇಂದ್ರಿಯಗಳಲ್ಲಿ ಎಂಬ ಜ್ಞಾನ, ಜ್ಞೇಯ, ಜ್ಞಾತೃ, ಎಂಬ ಅಭಿಧಾನದಿಂ–ನಾಮದಿಂದಲಿ, ನೆಲೆಸಿದ್ದು–ಆವಾಸನಾಗಿದ್ದು, ತತ್ತದಾಹ್ವಯದಿ–ಆಯಾ ಪೃಥ್‌ಪೃಥಕ್ ಆಗಿ ಇರತಕ್ಕ ಮನೋವೃತ್ತಿಗಳು ಐದರಲ್ಲಿ ಐದು, ಜ್ಞಾನರೂಪಗಳಿಂದ ಅಂಶಗಳು, ಜ್ಞಾನೇಂದ್ರಿಯ ಐದರಲ್ಲಿ ಜ್ಞೇಯರೂಪದ ಅಂಶಗಳು ಐದು, ಕರ್ಮೇಂದ್ರಿಯ ಐದರಲ್ಲಿ ಜ್ಞಾತೃರೂಪದ ಅಂಶಗಳು ಐದು, ಈ ಪ್ರಕಾರ ಇದ್ದು ಆಯಾ ಇಂದ್ರಿಯನಾಮಗಳಿಂದ, ಕರೆಸುತ–ಕರಿಸೋವನಾಗಿ, ಭಾನುಮಂಡಲಗಭ – ಸೂರ್ಯಮಂಡಲಗತ ಕಾಂತಿಯೋಪಾದಿಯಲ್ಲಿ, ಜ್ಞಾನವನ್ನು, ಪ್ರದರ್ಶಕ–ಪ್ರದರ್ಶನಮಾಡತಕ್ಕವನು, ತಾನೆನಿಸಿ–ಮನ ಆದಿ ಐದು ವೃತ್ತಿಗಳ ಜ್ಞಾನರೂಪಗಳಾದ ಐದು ರೂಪಗಳಿಂದ ಜ್ಞಾನಪ್ರದರ್ಶಕ ತಾನೆನಿಸಿ ಜ್ಞಾನಪ್ರದರ್ಶನಮಾಡಿ, ವಶನಾಗುವನು–ಮನೋಇಂದ್ರಿಯಕ್ಕೆ ವಶನಾಗಿ ಪ್ರತ್ಯಕ್ಷನಾಗುವನು. ಶುಕಶೌನಕಾದಿ ಮುನೀಂದ್ರ–ಜ್ಞಾನಿಶ್ರೇಷ್ಠರಾದ ಶುಕಾಚಾರ್ಯರು, ಶೌನಕರು ಇವರೇ ಮೊದಲಾದ ತನ್ನ ಭಕ್ತರು ದಾರೋ, ಆ ಯಾವತ್ತೂ ಮಂದಿಯ ಅಹಂಮಮತಾ ಎಂಬ ತಾಪತ್ರಯವನ್ನು, ಹೃದಯಾಕಾಶಗತ–ಹೃದಯಾಕಾಶದಲ್ಲಿ ಬಿಂಬನಾಗಿದ್ದು, ಚಂದ್ರ–ಚಂದ್ರ ಸದೃಶನಾಗಿ ತನ್ನ ಅಂತಃಕರಣಗಳೆಂಬೋ ಕಿರಣಗಳಿಂದ ತಾಪ ಶಮನಮಾಡುತ್ತಾ ಭಕ್ತರ ಆನಂದ ಬಡಿಸತಾನೆ. ಎಂದರೆ, ಹೃದಯಾಕಾಶಗತ ಬಿಂಬ, ಸೂರ್ಯಸದೃಶನಾಗಿ ಅಜ್ಞಾನ ಪರಿಹಾರಮಾಡಿ, ಜ್ಞಾನಪ್ರಕಾಶವೂ, ಚಂದ್ರಸದೃಶನಾಗಿ ತಾಪತ್ರಯ ಶಮನಮಾಡತಾನೆ ಎಂತ ತಾತ್ಪರ್ಯ.

**ವಿಶೇಷಾರ್ಥ :**– ಪರಮಾತ್ಮನ ರೂಪಗಳು ಮೂರು. ಜ್ಞಾನ, ಜ್ಞೇಯ, ಜ್ಞಾತೃ ಎಂತ. ಈ ನಾಮಗಳಿಂದ ಕರಿಸಿದವನಾಗಿ, ಪಂಚ ಜ್ಞಾನೇಂದ್ರಿಯಗಳು, ಪಂಚ ಕರ್ಮೇಂದ್ರಿಯಗಳು, ಬುದ್ಧಿಮನ ಆದಿ ಪಂಚ ಮನೋವೃತ್ತಿರೂಪಗಳಾದ ಇಂದ್ರಿಯಗಳಲ್ಲಿ ಜ್ಞಾನನಾಮಕ ಪರಮಾತ್ಮ ಜ್ಞಾನೇಂದ್ರಿಯಗಳಲ್ಲಿ, ಜ್ಞೇಯನಾಮಕ ಪರಮಾತ್ಮ ಕರ್ಮೇಂದ್ರಿಯಗಳಲ್ಲಿ, ಜ್ಞಾತೃನಾಮಕ ಪರಮಾತ್ಮ ಅಧಿಷ್ಠಾನಗಳಲ್ಲಿ ಆವಾಸನಾಗಿದ್ದು, ಆಯಾ ನಾಮಗಳಿಂದಲೂ ಪ್ರತಿ ಪ್ರತೀ ಇಂದ್ರಿಯಗಳಲ್ಲಿ ಬ್ಯಾರೆ ಬ್ಯಾರೆ ರೂಪಗಳಿಂದಲೂ ಕರಿಸೋವನಾಗಿ ಜ್ಞಾನಶಬ್ದವಾಚ್ಯ ಪರಮಾತ್ಮ, ಬುದ್ಧ್ಯಾದಿ ಐದು ಮನೋವೃತ್ತಿಗಳಲ್ಲಿ, ಐದು ರೂಪಗಳಿಂದ ಅಭಿಮಾನಿಗಳಾದ ದೇವತಾಂತರ್ಗತನಾಗಿದ್ದು, ಶುಭಾಶುಭ ಜ್ಞಾನ

ವನ್ನು ಉತ್ಪತ್ತಿಮಾಡೋವನಾಗತಾನೆ. ಪಂಚ ಜ್ಞಾನೇಂದ್ರಿಯಗಳಲ್ಲಿ ಇರತಕ್ಕ ಜ್ಞೇಯ ನಾಮಕ ಪರಮಾತ್ಮ, ಪಂಚ ಜ್ಞಾನೇಂದ್ರಿಯನಾಮಗಳಿಂದ ಐದು ರೂಪಗಳ ಧರಿಸಿ, ಐದು ಇಂದ್ರಿಯಗಳಿಗೆ ಅಭಿಮಾನಿಗಳಾದ ದೇವತೆಗಳ ಅಂತರ್ಗತನಾಗಿದ್ದು, ಆಯಾ ಇಂದ್ರಿಯನಾಮಗಳಿಂದ ಕರಿಸಿ, ಆಯಾ ಇಂದ್ರಿಯಗಳ ವ್ಯಾಪಾರಗಳ ಅಂಕುರಮಾಡಿ, ತಿಳಿಸತಾನೆ. ಜ್ಞಾತೃನಾಮಕ ಪರಮಾತ್ಮ, ಪಂಚ ಕರ್ಮೇಂದ್ರಿಯಗಳಲ್ಲಿ ಇರತಕ್ಕ ಅಭಿಮಾನಿಗಳಾದ ದೇವತಾಂತರ್ಗತನಾಗಿದ್ದು, ಕರ್ಮೇಂದ್ರಿಯನಾಮಗಳಿಂದ ಕರಿಸಿ, ಕರ್ಮೇಂದಿಯಗಳ ದ್ವಾರಾ ಈ ಕರ್ಮಗಳು, ಈ ಈ ರೀತಿ ಮಾಡಬೇಕೆಂದು ತಿಳಿಸಿಕೊಡೋವನಾಗತಾನೆ. ಈ ಪ್ರಕಾರ ತಿಳಿಸಿಕೊಟ್ಟನಂತರ, ಕ್ರಿಯಾದಿಗಳ ಮಾಡೋದಕ್ಕೆ ಅಧಿಕಾರಿಯಾದವ, ಕರ್ಮೇಂದ್ರಿಯಗಳ ದ್ವಾರಾ ಮಾಡೋದಕ್ಕೆ ಉಪಕ್ರಮ ಮಾಡತಾನೆ. ಹ್ಯಾಂಗೆಂದರೆ, ಸೂರ್ಯಮಂಡಲಗತನಾದ ಶ್ರೀ ನಾರಾಯಣದೇವರು ಸೂರ್ಯವಿಷಯಕವಾದ ತೇಜಸ್ಸು ಗಮನಾಗಮನಗಳೇನು ತಾನೇ ಎಂತ ಎನಿಸಿದವನಾಗಿ, ಸೂರ್ಯನಿಂದ ವ್ಯಾಪಾರಗಳ ಹ್ಯಾಂಗೆ ವ್ಯಕ್ತಮಾಡತಾ ಇದ್ದಾನೋ, ಈ ಪ್ರತ್ಯಕ್ಷ ದೃಷ್ಟಾಂತವತ್ ಬುದ್ಧ್ಯಾದಿ ಇಂದ್ರಿಯಾಧಿಷ್ಠಾನಗತ ಅಭಿಮಾನಿ ದೇವತಾಂತರ್ಗತನಾಗಿದ್ದು ಇಂದ್ರಿಯ ವ್ಯಾಪಾರಗಳ ಅಂಕುರಮಾಡುತ್ತಾ, ರೂಪಾಂತರದಿಂದ ತತ್ಕ್ರಿಯಾ ನಡಿಸುತ್ತಾ ಇರೋವನಾಗಿದ್ದಾನೆ. ಆಯಾ ಇಂದ್ರಿಯಗಳನ್ನ ಜೈಸಬೇಕಾದರೆ ಆಯಾ ಇಂದ್ರಿಯಾಭಿಮಾನಿ ದೇವತಾಂತರ್ಗತ ಭಗವಂತನ್ನ ತಿಳದು ಆಯಾ ದೇವತೆಗಳ ಭಜನಿ ಮಾಡಿದರೆ, ಆಯಾ ದೇವತೆಗಳ ದ್ವಾರಾ ತದ್ಗತ ಪರಮಾತ್ಮ ಆಯಾ ಇಂದ್ರಿಯಗಳಿಗೆ ಜಯ ಕೊಟ್ಟು ಇಂದ್ರಿಯಗಳ ಚಾಂಚಲ್ಯ ಇಲ್ಲದಂತೆ ಮಾಡಿ, ಆಯಾ ದೇವತೆಗಳ ದ್ವಾರಾ ತನ್ನ ಪರವಾದ ಇಂದ್ರಿಯಗಳ ವ್ಯಾಪಾರ ನಡಿಸಿ ಹೃದಯಾಕಾಶದಲ್ಲಿ ಪ್ರತ್ಯಕ್ಷನಾಗುವನು. ಆದಕಾರಣ, ವಿಷ್ಣುಭಕ್ತರಾದವರು ಪೂರ್ವೋಕ್ತಪ್ರಕಾರ, ಸೂರ್ಯಶಿವಾದಿಗಳ ಭಜಿಸಬೇಕು. ತದ್ವ್ಯತಿರಿಕ್ತ ಭಜಿಸಿದವರಿಗೆ ಪರಮಾತ್ಮ ಒಲಿಯೋದಿಲ್ಲ. ಆದಕಾರಣ ದೇವ, ಮಾನವ, ದಾನವರಲ್ಲಿ ಕೂಡ ಅನುಸಂಧಾನಪೂರ್ವಕ ಭಗವಂತನ್ನ ಭಜಿಸಬೇಕೇ ಹೊರ್ತು ಅನ್ಯ ವಿಧವಾಗಿ ಮಾಡಕೂಡದು.

**ಉದಯವ್ಯಾಪಿನಿ ದರ್ಶ ಪೌರ್ಣಿಮ ।**
**ವಧಿಕಯಾಮವು ಶ್ರವಣವಭಿಜಿತು ।**
**ಸದನವೈದಿರೆ ಮಾಳ್ಪ ತೆರದಿಂದದಲಿ ಹರಿಸೇವೆ ॥**
**ವಿಧಿನಿಷೇಧಗಳೇನು ನೋಡದೆ ।**
**ವಿಧಿಸುತಿರು ನಿತ್ಯದಲಿ ತನ್ನಯ ।**
**ಸದನದೊಳಗಿಂಬಿಟ್ಟು ಸಲಹುವ ಭಕ್ತವತ್ಸಲನು ॥ ೨೨ ॥**

ಶ್ರೀ ಪರಮಾತ್ಮನ ಧ್ಯಾನೋಪಾಸನಕ್ಕೆ ಕಾಲನೇಮ ಕೆಲಸವಿಲ್ಲ ಎಂತ ಹೇಳತಾರೆ.

ದರ್ಶ–ಅಮಾವಾಸ್ಯ, ಪೌರ್ಣಿಮವು–ಹುಣ್ಣಿಮೆ, ಇವೆರಡೂ, ಉದಯವ್ಯಾಪಿನಿ–ಸೂರ್ಯೋದಯಕ್ಕೆ, ವ್ಯಾಪಿಸಿ ಇದ್ದು, ತದನಂತರ ಇವತ್ತು ಕಾಲವೂ (ಆ ದಿನ ಪೂರ್ತಿ) ಪಾಡ್ಯಮಿ ಸಂಬಂಧಿಸಿ ಇದ್ದರೂ ಸರಿಯೇ, ಅಭಿಜಿತು–ಹಗಲು ಹದಿನೈದು ಘಳಿಗಿಗೆ ಅಭಿಜಿತ್ ಎಂತ ಸಾಂಕೇತ, ಅಧಿಕ–ಹದಿನೈದು ಘಳಿಗೆಗೆ ಮ್ಯಾಲೆ ಅಧಿಕವಾದಕಾಲ ಅಲ್ಪಕಾಲವಾದರೂ, ಯಾಮವು–ತೃತೀಯ ಯಾಮ ಎಂತ ಸಾಂಕೇತವಾಗುತ್ತದೆ. ಸದನವ–ತೃತೀಯ ಯಾಮದ ಅಲ್ಪಕಾಲವೆಂಬೋ ಮನಿಯನ್ನು, ಶ್ರವಣವು–ಶ್ರವಣ ನಕ್ಷತ್ರವು, ಐದಿರೆ–ಐದುತಿರಲಾಗಿ ತದನ್ಯಕಾಲ ಧನಿಷ್ಠಾನಕ್ಷತ್ರವಾದರೂ ಸರಿಯೆ, ಅಮಾವಾಸ್ಯ ಪಾಡ್ಯಮಿ ಕಲತು ಇರುವ ತಿಥಿ ಒಂದು, ಪೌರ್ಣಮಿ ಪಾಡ್ಯಮಿ ಕಲೆತಿರುವ ತಿಥಿ ಒಂದು, ಶ್ರವಣ ಧನಿಷ್ಠಾನಕ್ಷತ್ರಗಳು ಕಲೆತಿರುವ ತಿಥಿ ಒಂದು, ಅಂತು ಮೂರು ತಿಥಿಗಳು ಶುಭವಾದ ಅಮಾವಾಸ್ಯ, ಪೌರ್ಣಮಿ, ಶ್ರವಣಗಳ ಪೂರ್ಣವಾಗಿ ಗ್ರಾಹ್ಯ ಮಾಡಿ, ಮಾಳ್ಪ ತೆರದಂದದಲಿ–ಆಚರಣೆಮಾಡಿದೋಪಾದಿಯಲ್ಲಿ, ವಿಧಿ ನಿಷೇಧಗಳೇನು ನೋಡದೆ–ಪೂರ್ವೋಕ್ತಪ್ರಕಾರ ವಿಧಿ ಕಾಲವಾದ ಸ್ನಾನಾದಿಗಳ ಮಾಡಿ ಶುಚಿರ್ಭೂತ ರಾಗಿ ಇದ್ದಕಾಲ, ಅಶುಭನಾಗಿದ್ದಕಾಲ, ಎಂತಲೂ, ಬಾಹ್ಯಗಳ ಏತಾದೃಶ ವಿಧಿ ನಿಷೇಧ ಗಳು ಏನೂ ನೋಡೋದೇನೇ ಅಂತಃ ಶುಚಿಯಾಗಿ, ಹರಿಸೇವೆ – ಹೃದಯಾಕಾಶದಲ್ಲಿ ಶ್ರೀ ಪರಮಾತ್ಮನ್ನ ಸೇವಾ, ವಿಧಿಸುತಿರು–ಮಾಡುತ್ತಾ ಇರು. ನಿತ್ಯದಲಿ–ಪ್ರತಿ ಪ್ರತೀ ದಿನ ದಲ್ಲೂ, ಈ ಪ್ರಕಾರ ಧ್ಯಾನೋಪಾಸನಾದಿಗಳ ಮಾಡತಾ ಬಂದರೆ ಇದರಿಂದ, ಭಕ್ತ ವತ್ಸಲನು–ಭಕ್ತವತ್ಸಲನಾದ ಶ್ರೀ ಪರಮಾತ್ಮನು ಸಂದರ್ಶನ ಕೊಟ್ಟು, ತನ್ನಯ ಸದನ ದೊಳಗೆ–ತನ್ನ ಮನಿಯಾದ ವೈಕುಂಠಲೋಕದಲ್ಲಿ, ಇಂಬಿಟ್ಟು–ಆಶ್ರಯಕೊಟ್ಟು ಇಟ್ಟು, ಸಲಹುವ–ಸಂರಕ್ಷಣೆ ಮಾಡತಾನೆ.

**ವಿಶೇಷಾರ್ಥ :**–ವಿಷ್ಣುಪಂಚಕ ಉಪವಾಸ ಮಾಡತಕ್ಕವರು, ಶ್ರವಣ, ಅಭಿಜಿತು ವ್ಯಾಪ್ತವಾಗಿದ್ದರೆ, ಆದಿನದಲ್ಲಿ ಶ್ರವಣೋಪವಾಸ ಮಾಡತಾರೆ. ಅದೇಪ್ರಕಾರ ದರ್ಶ ಪೌರ್ಣಿಮಾಗಳು, ಸೂರ್ಯೋದಯಕಾಲಕ್ಕೆ ವ್ಯಾಪಿಸಿದ್ದರೆ ಉಪವಾಸ ಮಾಡತಾರೆ. ಈ ದೃಷ್ಟಾಂತ ಯಾಕೆಂದರೆ, ಉಪವಾಸಮಾಡೋದಕ್ಕೆ, ಪೌರ್ಣಿಮಾ, ಅಮಾವಾಸ್ಯ, ಶ್ರವಣ, ಇವು ಮೂರೂ ಯೋಗ್ಯವಾದುವು. ಉಪವಾಸಕ್ಕೆ ಶುಚಿ ಆದದ್ದು, ಇವು ಮೂರೂ ಆಯಾದಿನಗಳಲ್ಲಿ ಕ್ವಚಿದ್ಭಾಗವವೆ. ಮಿಗಿಲಾದ ಕಾಲದಲ್ಲಿ ಪೌರ್ಣಿಮಾದಿಗಳು ಇಲ್ಲವಾದ್ದರಿಂದ ಉಪವಾಸ ಬ್ಯಾಡಾ ಎಂತಲೂ ಮತ್ತು ಅಭಿಜಿತ್ತಿಗೆ ಮ್ಯಾಲೆ ಶ್ರವಣ ನಕ್ಷತ್ರವಿಲ್ಲ, ಧನಿಷ್ಠಾ ಎಂತಲೂ ಕರಿಸಿದ ಕಾಲ, ಉಪವಾಸಕ್ಕೆ ಯೋಗ್ಯವಲ್ಲದ ಅಶುಚಿ ಕಾಲ ಎಂತಲೂ ಅನ್ನಬಹುದೇ? ಅನ್ನಕೂಡದು. ಶುಚಿ, ಅಶುಚಿ, ಎರಡರಿಂದ ಯುಕ್ತ ವಾದ ದರ್ಶ, ಪೌರ್ಣಿಮಿ, ಶ್ರವಣ, ಇವು ಮೂರೂ ಉಪವಾಸಕ್ಕೆ ಶುಚಿತ್ವೇನ ಭಾವನಾಮಾಡಿ ಆಚರಿಣಿ ಮಾಡತಾರೆ. ಮಾಡಿದರೂ ಅಶುಚಿ ದೋಷ ಪ್ರಾಪ್ತವಾಗ ತದಾ? ಪೂರ್ಣತಿಥಿಯಲ್ಲಿ ಉಪವಾಸಮಾಡಿದರೆ ದಾವ ಫಲವನ್ನ ಹೊಂದತಾರೋ, ಅಂಥಾ ಫಲವನ್ನೇ ಹೊಂದುತಾರೆ. ಯಾಕೆಂದರೆ, ಉದಯವ್ಯಾಪಿನೀ ಎಂಬುದು, ದರ್ಶ,

ಪೌರ್ಣಿಮಾಗಳಿಗೆ ಶ್ರೇಷ್ಠವಾದದ್ದು, ಅಭಿಜತುವ್ಯಾಪಿನಿ, ಶ್ರವಣಕ್ಕೆ ಶ್ರೇಷ್ಠವಾದದ್ದು. ಆದ್ದರಿಂದ, ಅಶುಚಿಯಾದ, ಅನ್ಯ ತಿಥಿ, ಅನ್ಯ ನಕ್ಷತ್ರ, ಅನ್ಯ ಯಾಮಗಳಲ್ಲಿ, ಸಂಬಂಧಿಸಿದ್ದರೂ, ದೋಷವಾದದ್ದಲ್ಲ. ಆದ್ದರಿಂದ, ಅಧಿಕಾರಿಗಳು, ಮನಸ್ಸನ್ನು ಹೃದಯಾಕಾಶವೆಂಬ ಸದನದಲ್ಲಿರಿಸಿ, ಅದರಲ್ಲಿರತಕ್ಕ ಪರಮಾತ್ಮನ್ನ ಸದಾ ಧ್ಯಾನಪೂರ್ವಕ ಸಾವಯವ ವಿಶಿಷ್ಟನಾದ ಪರಮಾತ್ಮನ್ನ ಮನೋವಾಸನಾದಿಂದ ವಾಸನಾಪ್ರತೀಕಾಂತರ್ಗತ, ಗೋಳಕಾಂತರ್ಗತ, ಬಿಂಬರೂಪಿಯಾದ ಶ್ರೀ ಪರಮಾತ್ಮನ, ಷೋಡಶ ಪೂಜಾದಿಗಳನ್ನು, ಶುಚಿಯಾಗಿ ಇರತಕ್ಕ ಕಾಲದಲ್ಲಿ ಪೂಜಾಮಾಡಬೇಕೆಂಬ ವಿಧಿಕಾಲವೂ, ಅಶುಚಿಯಾಗಿರತಕ್ಕ ಕಾಲದಲ್ಲಿ ತತ್ಪೂಜಾ ಮಾಡಕೂಡದೆಂಬ ವಿಧಿಯೂ, ಇವೆರಡೂ ಶಾಸ್ತ್ರಸಿದ್ಧವಾದರೂ, ಇವೆರಡು ಬಾಹ್ಯ ಪೂಜಾ ವಿಷಯಗಳು. ಆದರೆ, ಮಾನಸಪೂಜಾ ಮಾಡತಕ್ಕವರಿಗೆ ಇವೆರಡೂ ನಿಷೇಧಾನಿಷೇಧಗಳೂ ಇಲ್ಲಾ ಎಂತ ತಾತ್ಪರ್ಯ. ಮಾನಸಪೂಜಾ ಮಾಡತಕ್ಕ ಅಧಿಕಾರಿಗೆ ವಿಧಿನಿಷೇಧಗಳು ದಾವವೆಂದರೆ: ಅಹಂಮಮತಾದಿಗಳೇ, ನಿಷೇಧಗಳು ; ಇವುಗಳ ತ್ಯಾಗವೇ, ವಿಧಿ ; ಬಾಹ್ಯ ವಿಧಿ ನಿಷೇಧಗಳು ಇವಗೆ ಇಲ್ಲ. ಆದ್ದರಿಂದ, ಪೂರ್ವೋಕ್ತ ಬಾಹ್ಯ ವಿಧಿ ನಿಷೇಧಗಳೇನೂ ನೋಡದೆ, ಹೃದಯಾಕಾಶದಲ್ಲಿ ವಾಸನಾ ರೂಪವಾದ ಮಾನಸಪೂಜಾ ವಿಧಿಸುತಿರು. ಈ ಪೂಜಾಬಲದಿಂದ ಪರಮಾತ್ಮ ತನ್ನ ಚಿದಾನಂದರೂಪವನ್ನು ದರುಶನಕೊಟ್ಟು ತನ್ನ ಭಕ್ತರೆಂಬೋ ಗೋವುಗಳಿಗೆ ವತ್ಸಲನೆಂಬೋ ಪರಮಾತ್ಮ, ಎಡಬಿಡದೆ ಇದ್ದು, ತನ್ನ ವೈಕುಂಠಾಖ್ಯ ಸದನದಲ್ಲಿಟ್ಟು ಸಂರಕ್ಷಿಸುವನು. ಮುಖ್ಯ ತಾತ್ಪರ್ಯವೇನೆಂದರೆ, ವಿಷಯಾಶಾ ತ್ಯಾಗಮಾಡಿ ಮಾನಸಪೂಜಾ ಮಾಡತಕ್ಕ ಅಧಿಕಾರಿಗಳಿಗೆ ವಿಧಿ ಎಂಬೋ ಸ್ನಾನಾದಿಗಳು ಮಾಡಬೇಕೆಂಬೋ ನೇಮವಿಲ್ಲ. ಮಡಿಯಿಂದಿರಲಿ, ಮೈಲಿಗಿಯಿಂದಿರಲಿ, ಮಾನಸಪೂಜಾಕ್ಕೆ ದೋಷವಿಲ್ಲ ಎಂತ ತಾತ್ಪರ್ಯ.

**ನಂದೀವಾಹನರಾತ್ರಿ ಸಾಧನಿ ।**
**ಬಂದ ದ್ವಾದಶಿ ದಶಮಿ ಪೈತೃಕ ।**
**ಸಂಧಿಸಿಹ ಸಮಯದಲಿ ಶ್ರವಣವ ತ್ಯಜಿಸುವಂತೆ ಸದಾ ॥**
**ನಿಂದ್ಯರಿಂದಲಿ ಬಂದ ದ್ರವ್ಯವ ।**
**ಕಂದೆರದು ನೋಡದಲೆ ಶ್ರೀಮದ ।**
**ನಂದತೀರ್ಥಾಂತರ್ಗತನ ಸರ್ವತ್ರ ಭಜಿಸುತಿರು ॥ ೨೩ ॥**

ಸದಾ ಸರ್ವಕಾಲದಲ್ಲಿ ಪ್ರಾಕೃತ ದ್ರವ್ಯಗಳ ವೀಕ್ಷಣಮಾಡದೆ, ತದಂತರ್ಗತ ಪರಮಾತ್ಮನ್ನ ವೀಕ್ಷಣಮಾಡುತ್ತಿರು ಎಂತ ಹೇಳತಾರೆ.

ನಂದೀವಾಹನ ರಾತ್ರಿ–ವೃಷಭವಾಹನವಾಗುಳ್ಳ ರುದ್ರದೇವರ ದಿನ ಎಂದು ಹೆಸರು ಪಡೆದ ಶಿವರಾತ್ರಿ ದಿನದಲ್ಲೇನು, ಸಾಧನಿಬಂದ ದ್ವಾದಶಿ–ಸಾಧನಿಬಂದ ದ್ವಾದಶಿ ದಿನದಲ್ಲಿ, ದಶಮಿ–ದಶಮಿ ದಿನದಲ್ಲೇನು, ಪೈತೃಕ–ಮಾತಾಪಿತೃಗಳ ಶ್ರಾದ್ಧದಿನದಲ್ಲೇನು, ಸಂಧಿಸಿಹ–

ಪ್ರಾಪ್ತವಾಗಿರತಕ್ಕ, ಸಮಯದಲಿ–ದಿನಗಳಲ್ಲಿ, ಶ್ರವಣವ ತ್ಯಜಿಸುವಂತೆ–ವಿಷ್ಣುಪಂಚಕ ಉಪವಾಸಮಾಡತಕ್ಕವರು ಶ್ರವಣೋಪವಾಸ ಮಾಡಬೇಕು, ಪೂರ್ವೋಕ್ತ ಶಿವರಾತ್ರಿ ಮೊದಲಾದ ತಿಥಿಗಳಲ್ಲಿ ಉಪವಾಸ ಮಾಡಬೇಕಾದ ಶ್ರವಣನಕ್ಷತ್ರ ಪ್ರಾಪ್ತವಾದರೆ, ಆ ಶ್ರವಣೋಪವಾಸವನ್ನ ತ್ಯಾಗಮಾಡತಾರೆ. ಶಿವರಾತ್ರಿ, ಪೈತೃಕ ತಿಥಿಗಳೆರಡೂ ಅನ್ಯ ದೇವತಾಕವಾದ್ದರಿಂದ ಆ ತಿಥಿಗಳಲ್ಲಿ ಮಾಡಿದ, ವಿಷ್ಣುವಿಗೆ ಪ್ರೀತಿಕರವಾದ ಶ್ರವಣೋಪ ವಾಸ ಮಾಡಿದರೆ, ವಿಷ್ಣುವಿಗೆ ಪ್ರೀತಿಕರವಾಗೋದಿಲ್ಲ. ಆದ್ದರಿಂದ ಆ ದಿನಗಳಲ್ಲಿ ಶ್ರವಣೋಪವಾಸತ್ಯಾಗವೂ, ದಶಮಿ ಶ್ರವಣ ತ್ಯಾಗ ಎಂಬುದು ದಶಮಿ, ಏಕಾದಶಿ, ದ್ವಾದಶಿ ದಿನತ್ರಯಾತ್ಮಕವ್ರತ ಮಹಾಫಲಪ್ರದವಾದದ್ದು, ನಿತ್ಯವ್ರತ; ವಿಷ್ಣುಪಂಚಕ, ನೈಮಿತ್ತಿಕವ್ರತ; ಶ್ರವಣ, ದಶಮಿ ಎರಡೂ ವಿಷ್ಣುವ್ರತಗಳೇ ಆದಕಾಲಕ್ಕೂ, ಪ್ರಬಲ ವ್ರತ ಸಂಪುಟಾಕಾರವಾದ ದಶಮ್ಯಾದಿ ದಿನತ್ರಯಾತ್ಮಕ ವ್ರತವಾದ್ದರಿಂದ, ಈ ಪ್ರಬಲ ವ್ರತದಿಂದ ಅಲ್ಪವಾದ ಶ್ರವಣವು ನಿಂದಿತವಾಗಿ, ತತ್ಫಲ ದಶಮಿವ್ರತದಾಗೆ ಅಂತರ್ಭೂತ ವಾಯಿತು. ಇದರೋಪಾದಿಯಲ್ಲಿ, ನಿಂದ್ಯರಿಂದಲಿ ಬಂದ–ಪರಮಾತ್ಮನ್ನ ನಿಂದಾಮಾಡ ತಕ್ಕವರಿಂದ ಬಂದಂಥಾ, ದ್ರವ್ಯವ ಕಂದೆರದು ನೋಡದಲೆ–ದ್ರವ್ಯವ ಕಣ್ಣುತೆರೆದು ನೋಡ ದೇನೇ ಇರೋವನಾಗೆಂದು ತಾತ್ಪರ್ಯ. ಮತ್ತು ಭಗವನ್ನಿಂದಾಪೂರ್ವಕವಾಗಿ ಬಂದ ದ್ರವ್ಯಸಾಂಕೇತವಾದ ವಿಪರೀತಜ್ಞಾನಪ್ರತಿಪಾದಕವಾದ ಮಿಥ್ಯಾಶಾಸ್ತ್ರವನ್ನ ಕಣ್ಣುತೆರೆದು ನೋಡದೆ ಎಂತಲೂ ತಾತ್ಪರ್ಯವೇ. ಈ ಪ್ರಕಾರ ನಿಸ್ಪೃಹನಾಗಿದ್ದು, ಸದಾ–ನಿರಂತರ ದಲ್ಲೂ, ಸರ್ವತ್ರ–ಚರಾಚರ ಸರ್ವಾಧಿಷ್ಠಾನದಲ್ಲೂ, ಶ್ರೀಮತ್–ಜ್ಞಾನಾಖ್ಯ ಸಂಪತ್ತಿ ನಿಂದ ಪೂರ್ಣರಾದ, ಆನಂದತೀರ್ಥ–ಶ್ರೀಮಧ್ವಾಚಾರ್ಯರ, ಅಂತರ್ಗತನ–ಅಂತರ್ಗತ ನಾದ ಶ್ರೀಮನ್ನಾರಾಯಣದೇವರ, ಭಜಿಸುತಿರು–ಸ್ತೋತ್ರಮಾಡುತ್ತಾ ಇರೋವನಾಗು. ಸರ್ವತ್ರವ್ಯಾಪ್ತನಾದ ಶ್ರೀ ಪರಮಾತ್ಮನ್ನ ಬಿಂಬರೂಪಿ ಪರಮಾತ್ಮನಲ್ಲಿ ಐಕ್ಯ ಚಿಂತಿಸಿ, ಭಾರತೀರಮಣಮುಖ್ಯಪ್ರಾಣಾಂತರ್ಗತನಾಗಿ, ಗೋಳಕ ಚಿಂತನೆ ಕ್ರಮಾತ್ ಭಜಿಸಬೇ ಕೆಂತ ತಾತ್ಪರ್ಯ.

**ವಿಶೇಷಾರ್ಥ :** – ಪಂಚಭೇದ, ತಾರತಮ್ಯಜ್ಞಾನ, ಹರಿಸರ್ವೋತ್ತಮತ್ವ, ವಾಯುಜೀವೋತ್ತಮತ್ವ, ಇವುಗಳಿಂದ ಶೂನ್ಯವಾದ ಜ್ಞಾನವೂ ನಿಂದಾದ್ರವ್ಯಗಳೇ. ಮತ್ತು ಪ್ರತಿಮಾನೇ ದೇವರು ಎಂತ ಪೂಜಾಮಾಡೋಣ ದಾವದದೆ, ಇದೇ ನಿಂದಾ ಯುಕ್ತವಾದ ಜ್ಞಾನದ್ರವ್ಯವು. ನಿರ್ದೋಷಯುಕ್ತವಾದ ಜ್ಞಾನದಿಂದ ಸಹಿತನಾಗಿರಬೇ ಕೆಂದು ತಾತ್ಪರ್ಯ.

**ಶ್ರೀಮನೋರಮ ಮರುತೇಶ ತ್ರಿಕಕು ।**
**ದ್ಧಾಮ ಸತ್ಕಲ್ಯಾಣಗುಣ ನಿ ।**
**ಸ್ಸೀಮ ಪಾವನನಾಮ ದಿವಿಜೋದ್ದಾಮ ರಘುರಾಮ ॥**

**ಪ್ರೇಮಪೂರ್ವಕ ನಿತ್ಯ ತನ್ನ ಮ ।**
**ಹಾಮಹಿಮೆಗಳ ತುತಿಸುವರಿಗೆ ಸು ।**
**ದಾಮಗೊಲಿದಂದದಲಿ ಅಖಿಳಾರ್ಥಗಳ ಕೊಡುತಿಪ್ಪ ॥ ೨೪ ॥**

ಸರ್ವಾಧಿಷ್ಠಾನದಲ್ಲಿ ಪರಮಾತ್ಮನ್ನ ಅನುಸಂಧಾನಮಾಡಿ, ಸ್ತೋತ್ರಮಾಡುವವರಿಗೆ ಅಖಿಳಾರ್ಥಗಳ ಕೊಡತಾನಾದಕಾರಣ ಸರ್ವಾಂತರ್ಗತನಾದ ಪರಮಾತ್ಮನ್ನ ಸ್ತೋತ್ರ ಮಾಡಬೇಕೆಂದು ಹೇಳತಾರೆ.

ಶ್ರೀಮನೋರಮ – ಶ್ರೀ ಲಕ್ಷ್ಮೀದೇವೇರಿಗೆ ಮನೋಹರನಾದವ, ಮರುತೇಶ– ಜೀವೋತ್ತಮರಾದ ವಾಯುದೇವರಿಗೆ ಸ್ವಾಮಿಯಾದವ, ಕಕುದ–ವೃಷಭಸ್ಕಂಧದೋ ಪಾದಿಯಲ್ಲಿ ಶ್ರೇಷ್ಠವಾದ, ಉನ್ನತವಾದ, ತ್ರಿ–ಮೂರಾದಂಥಾ, ಧಾಮ–ವೈಕುಂಠ, ಅನಂತಾಸನ, ಶ್ವೇತದ್ವೀಪವೇ ಮನಿಗಳಾಗಿವುಳ್ಳವ, ಸತ್ಕಲ್ಯಾಣಗುಣ–ಸಮೀಚೀನಗಳಾದ ಮಂಗಳಕರಗಳಾದ ಗುಣಗಳಿಂದ ಪೂರ್ಣನಾದವ. ನಿಸ್ಸೀಮ–ಅನ್ಯರಿಂದ ಜಯಿಸುವುದಕ್ಕೆ ಅಶಕ್ಯನಾದವ. ಪಾವನನಾಮ–ಪತಿತರಾದವರ ಪುನೀತರನ್ನಾಗಿ ಮಾಡತಕ್ಕ ಹೆಸರು ಗಳುಳ್ಳವ, ರಘುರಾಮ–ರಘುರಾಯನ ಕುಲದಲ್ಲಿ ಹುಟ್ಟಿ ರಾಮಾವತಾರವನ್ನೆತ್ತಿದವ, ದಿವಿಜೋದ್ದಾಮ–ಬ್ರಹ್ಮಾದಿ ದೇವತೆಗಳಿಂದಲೂ ಶ್ರೇಷ್ಠನಾದವ ಎಂತ ಈ ಪ್ರಕಾರ, ನಿತ್ಯ–ಪ್ರತಿದಿನದಲ್ಲೂ, ಪ್ರೇಮಪೂರ್ವಕ–ಅತ್ಯಂತ ಆದರಪೂರ್ವಕವಾಗಿ, ತನ್ನ ಮಹಾ ಮಹಿಮೆಗಳ–ಪರಮಾತ್ಮನಾದ, ತನ್ನ ಶ್ರೇಷ್ಠವಾದ, ಅಸದೃಶವಾದ, ಅಪಾರವಾದ ಮಹಿಮೆಗಳ, ತುತಿಸುವರಿಗೆ–ಸ್ತೋತ್ರಮಾಡತಕ್ಕವರಿಗೆ, ಸುದಾಮಗೊಲಿದಂದದಲಿ– ಕುಚೇಲನೆಂಬ ಬ್ರಾಹ್ಮಣನಿಗೆ ಒಲಿದೋಪಾದಿಯಲ್ಲಿ, ಅಖಿಳಾರ್ಥಗಳ – ಇಹಪರದಲ್ಲಿ ಯೋಗ್ಯತಾನುಸಾರ ಸಮಸ್ತ ಇಷ್ಟಾರ್ಥಗಳ, ಕೊಡುತಿಪ್ಪ–ಕೊಡೋವನಾಗತಾನೆ.

**ತಂದೆತಾಯ್ಗಳ ಕುರುಹನರಿಯದ ।**
**ಕಂದ ದೇಶಾಂತರದೊಳಗೆ ತ ।**
**ನ್ನಂದದಲಿ ಇಪ್ಪವರ ಜನನೀಜನಕರನು ಕಂಡು ॥**
**ಹಿಂದೆ ಎನ್ನನು ಪಡೆದವರು ಇವ ।**
**ರಂದದಲಿ ಇಪ್ಪರೋ ನಾನವ ।**
**ರೆಂದು ಕಾಣುವೆನೆನುತ ಹುಡುಕುವ ತೆರದಿ ಕೋವಿದರು ॥ ೨೫ ॥**

ಸರ್ವೋತ್ತಮನಾದ ಪರಮಾತ್ಮನ್ನ ತಿಳಕೋಬೇಕಾದರೆ ಅವನ ಮಾಹಾತ್ಮ್ಯ ತಿಳ ಕೊಂಡು, ಮಾಹಾತ್ಮ್ಯಜ್ಞಾನಪೂರ್ವಕ ಸುದೃಢಸ್ನೇಹ ಮಾಡಬೇಕಾದರೂ, ಶಾಸ್ತ್ರದಲ್ಲಿ ಹುಡುಕಿ ತಿಳಕೋಬೇಕು. ಅನ್ಯವಿಧದಿಂದ ತಿಳೀಲಾರದು ಎಂತಲೂ, ಗುರುಗಳ ದ್ವಾರಾ ಶಾಸ್ತ್ರವನ್ನ ಹುಡುಕಬೇಕು ಎಂತಲೂ ಎರಡು ಶ್ಲೋಕಗಳಿಂದ ಹೇಳತಾರೆ.

ತಂದೆತಾಯ್ಗಳ–ಮಾತಾಪಿತೃಗಳ, ಕುರುಹನರಿಯದ–ಗುರ್ತು ಅರಿಯದ, ಪೂರ್ವದಲ್ಲೇ, ದೇಶಾಂತರದೊಳಗೆ–ತಂದೆತಾಯಿಗಳು ಇರತಕ್ಕ ಪ್ರದೇಶವನ್ನು ಕಾರಣಾಂತರದಿಂದ ಬಿಟ್ಟು ದೇಶಾಂತರದಲ್ಲಿರತಕ್ಕ ಅನ್ಯದೇಶ ಪ್ರವೇಶಮಾಡಿದ, ಕಂದ–ಬಾಲಕನು, ತನ್ನಂದದಲಿ–ತನ್ನಂತೇ ಬಾಲಕರಾಗಿ, ಇಪ್ಪವರ–ಇರತಕ್ಕವರ, ಜನನೀಜನಕರನು ಕಂಡು–ಮಾತಾಪಿತೃಗಳನ್ನು ನೋಡಿದವನಾಗಿ, ಹಿಂದೆ–ಸಂಗಾತಲೇ ಯೋಚನಿಮಾಡಿದವನಾದ. ಏನೆಂತೆಂದರೆ, ಎನ್ನನು ಪಡೆದವರು–ತನ್ನನ್ನು ಉತ್ಪಾದನೆಮಾಡಿದವರು, ಇವರಂದದಲಿ–ಈ ಬಾಲಕರ ತಂದೆತಾಯಿಗಳ ಕಂಡೋಪಾದಿಯಲ್ಲಿ, ಇಪ್ಪರೊ–ಇರುವರೊ, ನಾನು-ಈ ಬಾಲಕರು ತಾಯಿತಂದೆಗಳ ಕಂಡೋಪಾದಿಯಲ್ಲಿ ನಾನೂನೂ, ಅವರ–ನನ್ನ ತಂದೆ ತಾಯಿಗಳ, ಎಂದು–ಯಾವಾಗ, ಕಾಣುವೆನೆನುತ–ಎಂದಿಗೆ ನೋಡೇನೆನುತ, ಮನಸಾ ಆಲೋಚನಿಮಾಡಿ, ಹುಡುಕುವ ತೆರದಿ–ಹುಡುಕಿದೋಪಾದಿಯಲ್ಲಿ, ಕೋವಿದರು–ಜ್ಞಾನಿಗಳು ಭಗವಂತನ್ನ ಹುಡುಕುತ್ತಾರೆ ಎಂತ ತಾತ್ಪರ್ಯ.

**ವಿಶೇಷಾರ್ಥ :**–ಸೃಜ್ಯರಾಶಿಯಲ್ಲಿ ವಿದ್ಯಮಾನರಾದ ಜೀವರನ್ನ ಸ್ಥೂಲದೇಹದಿಂದ ಸೃಷ್ಟಿಮಾಡಬೇಕಾದರೆ, ಆದಿಯಲ್ಲಿ ಬ್ರಹ್ಮಾಂಡದ ಹೊರಭಾಗದ ಪ್ರದೇಶದಲ್ಲಿ ಮಾತಾಪಿತೃಗಳಾದ ರಮಾ, ಮಧುಸೂದನರಿಂದ ಜೀವ ಸೃಷ್ಟನಾಗಿ ತದನಂತರ ದೇಶಾಂತರವಾದ ಬ್ರಹ್ಮಾಂಡದ ಒಳಗೆ ಪ್ರವೇಶಮಾಡೋವನಾದ. ಅಲ್ಲಿ ಸಾಧನಸಂಪೂರ್ತಿಗೋಸ್ಕರ ಸಾಧನಮಾಡಿ ಮಾತಾಪಿತೃಗಳಾದ ರಮಾ ಮಧುಸೂದನರ ಹೃದಯಾಕಾಶದಲ್ಲಿ ಧ್ಯಾನ ಮಾಡತಾ ಆ ವಾಸನಾರೂಪಗಳ ಕಣ್ಣಿಂದ ನೋಡತಾ ಇರತಕ್ಕ ಸಂಪೂರ್ಣ ಪಕ್ವರಲ್ಲದ ಬಾಲಕಸದೃಶರಾದ ಜ್ಞಾನಿಗಳು, ಅವರ ಮಾತಾಪಿತೃಗಳಾದ ರಮಾಮಧುಸೂದನರ ಪ್ರತೀಕಗಳನ್ನು ನೋಡುತ್ತಾ, ಈ ಪ್ರಕಾರ ತಾವೂ ಉಪಾಸನಮಾಡಿ ತಾಯಿತಂದಿಗಳಾದ ರಮಾಮಧುಸೂದನರ, ಹೃದಯಾಕಾಶದಲ್ಲಿ ಎಂದು ಕಾಣುವೆನೆನುತ ಕೋವಿದರು ಹುಡುಕುತ್ತಾರೆಂತ ತಾತ್ಪರ್ಯ.

**ಶ್ರುತಿ ಪುರಾಣ ಸಮೂಹದೊಳು ಭಾ ।**
**ರತ ಪ್ರತಿಪ್ರತಿ ಪದಗಳೊಳು ನಿ ।**
**ರ್ಜಿತನ ಗುಣರೂಪಗಳ ಹುಡುಕುತ ಪರಮಹರುಷದಲಿ ॥**
**ಮತಿಮತರು ಪ್ರತಿದಿವಸ ಸಾರ ।**
**ಸ್ವತಸಮುದ್ರದಿ ಶಫರಿಯಂದದಿ ।**
**ಸತತ ಸಂಚರಿಸುವರು ಕಾಣುವ ಲವಲವಿಕೆಯಿಂದ ॥ ೨೬ ॥**

ಜ್ಞಾನಿಗಳಾದವರು, ತಾಯಿತಂದೆಗಳಾದ ಲಕ್ಷ್ಮೀನಾರಾಯಣರ ಎಲ್ಲಿ ಹುಡುಕುತ್ತಾರೆ, ಎಂದರೆ ಹೇಳತಾರೆ.

ಶ್ರುತಿ ಪುರಾಣಸಮೂಹದೊಳು–ವೇದ, ಶ್ರುತಿಗಳಲ್ಲಿ ಪುರಾಣಗಳಲ್ಲಿ, ಭಾರತ ಪ್ರತಿ ಪ್ರತಿ ಪದಗಳೊಳು–ಐದನೇ ವೇದವಾದ ಭಾರತದಲ್ಲಿ, ಪ್ರತಿ ಪ್ರತೀ ಪದಗಳಲ್ಲಿ, ಸಾರಸ್ವತ

ಸಮುದ್ರದಿ–ಏತಾದೃಶವಾದ ಸರಸ್ವತೀಸಾಂಕೇತವಾದ ಸಮುದ್ರದಲ್ಲಿ, ನಿರ್ಜಿತನ–ಅನ್ಯರಿಂದ ಜೈಸೋದಕ್ಕೆ ಅಶಕ್ಯನಾದ ಪರಮಾತ್ಮನ್ನ ಮತ್ತು ಅನ್ಯರಾದ ದೈತ್ಯರು ಉಪಾಸನ ಮಾಡಿ ಪ್ರತ್ಯಕ್ಷೀಕರಿಸಿಕೊಂಬೋದಕ್ಕೆ ಅಶಕ್ಯನಾದವನ, ಶಫರಿಯಂದದಿ–ಮಚ್ಛದೋಪಾದಿಯಲ್ಲಿ ಮುಣುಗಿ, ಮಚ್ಛವಾದದ್ದು ಸಮುದ್ರದಲ್ಲಿ ಮುಣುಗಿ ತನಗೆ ಬೇಕಾದ ಆಹಾರವನ್ನು ಹುಡುಕೋಪಾದಿಯಲ್ಲಿ ಜ್ಞಾನಿಗಳಾದ ಮಚ್ಛಗಳು ಸಾರಸ್ವತ ಸಮುದ್ರದಲ್ಲಿ ಮುಣುಗಿ, ಮತಿಮತರು–ಜ್ಞಾನವಂತರು, ಪರಮಹರುಷದಲಿ–ಅತ್ಯಂತ ಸಂತೋಷದಿಂದ, ಪ್ರತಿದಿವಸ–ನಿರಂತರದಲ್ಲೂ, ಗುಣರೂಪಗಳ–ಶ್ರೀ ಪರಮಾತ್ಮನ ಗುಣಗಳೇನು, ರೂಪಗಳೇನು, ಎಂಥಾದ್ದು, ಅವ ಪ್ರತ್ಯಕ್ಷನಾಗಬೇಕಾದರೆ, ಮಾರ್ಗ ಎಂಥಾದ್ದು ಎಂತ, ಹುಡುಕುತ–ಹುಡುಕುತ್ತಾ, ಸತತ–ನಿರಂತರದಲ್ಲೂ, ಸಂಚರಿಸುವರು–ಸಾರಸ್ವತ ಸಮುದ್ರದಲ್ಲಿ ಸಂಚರಿಸುವರು, ಸಂಚರಿಸಿ, ಧ್ಯಾನೋಪಾಸನಾದಿಗಳಿಂದ, ಲವಲವಿಕೆಯಿಂದ–ಹೃದಯಾಕಾಶದಲ್ಲಿ ಕಂಡೂಕಾಣದಂತೆ ಈ ಪ್ರಕಾರ, ಕಾಣುವ–ಅಧಿಕಾರಿಯಾದವ ಪ್ರಥಮತಃ ಈ ಪ್ರಕಾರ ಕಾಣತಾನೆಂತ ತಾತ್ಪರ್ಯ.

**ಮತ್ಸ್ಯಕೇತನ ಜನಕ ಹರಿ ಶ್ರೀ ।**
**ವತ್ಸಲಾಂಛನ ನಿಜಶರಣಜನ ।**
**ವತ್ಸಲ ವರಾರೋಹ ವೈಕುಂಠಾಲಯನಿವಾಸಿ ॥**
**ಚಿತ್ಸುಖಪ್ರದ ಸಲಹೆನಲು ಗೋ ।**
**ವತ್ಸಧ್ವನಿಗೊದಗುವ ತೆರದಿ ಪರ ।**
**ಮೋತ್ಸಹದಿ ಬಂದೊದಗುವನು ನಿರ್ಮತ್ಸರರ ಬಳಿಗೆ ॥ ೨೭ ॥**

ಪರಮಾತ್ಮನ್ನ ಕಾಣತಕ್ಕ ಲವಲವಿಕಿಯಿಂದ ನಿರ್ಮತ್ಸರರಾಗಿ ಪ್ರಾರ್ಥನಾ ಮಾಡತಾ ಬಂದರೆ, ಪ್ರತ್ಯಕ್ಷನಾಗತಾನೆ ಎಂತ ಹೇಳತಾರೆ.

ನಿರ್ಮತ್ಸರರು–ಅಹಂಮಮತಾದಿಗಳು, ಕಾಮಕ್ರೋಧಾದಿಗಳು, ಈಷಣತ್ರಯಗಳ ತ್ಯಾಗಮಾಡಿ ನಿರ್ಮತ್ಸರರಾದವರು ಗುಣಪೂರ್ಣನಾದ ಶ್ರೀ ಪರಮಾತ್ಮನ್ನ ಹೃದಯಾಕಾಶದಲ್ಲಿ ಧ್ಯಾನಮಾಡತಾ, ಮತ್ಸ್ಯಕೇತನ ಜನಕ–ಮೀನಧ್ವಜನಾದ ಮನ್ಮಥನ ತಂದಿಯಾದವನೇ, ಹರಿ–ಪಾಪಪರಿಹಾರಕನೇ, ಶ್ರೀವತ್ಸಲಾಂಛನ–ಶ್ರೀವತ್ಸ ಚಿನ್ಹೆ ಉಳ್ಳವನೇ, ನಿಜಶರಣಜನವತ್ಸಲ–ತನ್ನ ಭಕ್ತರಾಗಿಯೂ, ನಿಜವಾಗಿ ಶರಣು ಹೊಕ್ಕವರಾಗಿಯೂ, ಇರತಕ್ಕ ಜನರಲ್ಲಿ ವಾಂಛಲ್ಯವುಳ್ಳವನೇ, ವರಾರೋಹ–ಉತ್ತಮವಾದ ಗರುಡದೇವರೇ ವಾಹನವಾಗುಳ್ಳವನೇ, ವೈಕುಂಠಾಲಯನಿವಾಸಿ–ವೈಕುಂಠವೆಂಬ ಮನಿಯಲ್ಲಿ ನಿವಾಸನಾದವನೇ, ಚಿತ್ಸುಖಪ್ರದ–ಭಕ್ತರಿಗೆ ಸ್ವರೂಪಸುಖಪ್ರದನೇ, ಸಲಹೆನಲು–ಈ ಪ್ರಕಾರ ಸ್ತೋತ್ರಮಾಡಿ ಸಂರಕ್ಷಣಮಾಡು ಎಂದರೆ, ಪರಮೋತ್ಸಹದಿ–ಅತ್ಯಂತವಾಗಿ ಭಕ್ತರಲ್ಲಿ ಉತ್ಸಾಹದಿಂದಲಿ, ವತ್ಸಧ್ವನಿಗೆ–ಕರುವಿನ ಧ್ವನಿಗೆ, ಗೋ–ಆಕಳು, ಬಳಿಗೆ–

ಕರುವು ಇದ್ದ ಸ್ಥಳಕ್ಕೆ ಕರುವಿನ ಸಮೀಪಕ್ಕೆ, ಒದಗುವ ತೆರದಿ–ಎದುರಿಗೆ ಬಂದು ನಿಲ್ಲುವ ತೆರದಿ ಭಕ್ತರೆಂಬೋ ವತ್ಸಗಳ, ಸ್ತೋತ್ರವೆಂಬೋ ಧ್ವನಿ ಕೇಳಿ, ಬಂದು–ಆ ಕೇಳಿದ ಸ್ತೋತ್ರ ತನ್ನ ಚಿತ್ತಕ್ಕೆ ತಂದುಕೊಂಡು, ವತ್ಸಸದೃಶರಾದ ಭಕ್ತರಿಗೆ, ಒದಗುವನು–ಗೋಸದೃಶನಾದ ಶ್ರೀ ಪರಮಾತ್ಮ ಪ್ರತ್ಯಕ್ಷನಾಗುತ್ತಾನೆಂತ ತಾತ್ಪರ್ಯ.

**ವಿಶೇಷಾರ್ಥ :**–ವರಾರೋಹ ಎಂದರೆ "ಸ್ವರ್ಣಮಂಜೀರಸಂವೀತವಾರೂಢಂ ಜಗದಂಬಯಾ" ಎಂಬ ಶ್ರೀಮದಾಚಾರ್ಯರ ವಚನರೀತಿಯಾಗಿ ಉತ್ಕೃಷ್ಟಳಾದ ರಮಾ ದೇವಿಯನ್ನ ಟೊಂಕದಲ್ಲಿ ಎತ್ತಿಕೊಂಡಿರುವನೇ ಎಂತಲೂ ತಾತ್ಪರ್ಯವೇ.

**ಸೂರಿಗಳಿಗೆ ಸಮೀಪಗ ದುರಾ ।**
**ಚಾರಗಳಿಗೆಂದೆಂದು ದೂರಾ ।**
**ದ್ದೂರತರ ದುರ್ಲಭನೆನಿಸುವನು ದೈತ್ಯಸಂತತಿಗೆ ॥**
**ಸಾರಿಸಾರಿಗೆ ನೆನೆದು ಸುಖಿಸುವ ।**
**ಸಾರಹೃದಯರ ಸಂಸಾರದುಃಖವ ।**
**ಹೋರಗ ದ್ವಿಜರಾಜನೆನಿಸುವನು ದೈತ್ಯದಲ್ಲಣನು ॥ ೨೮ ॥**

ಶ್ರೀ ಪರಮಾತ್ಮ ಎಂಥಾವನೆಂದರೆ ಹೇಳುತಾರೆ.

ದೈತ್ಯದಲ್ಲಣನು–ಈ ಪರಮಾತ್ಮನಲ್ಲಿ ದ್ವೇಷಮಾಡತಕ್ಕ ಸ್ವರೂಪಸ್ವಭಾವವುಳ್ಳ ದೈತ್ಯರನ್ನ ಭಕ್ತರ ಕ್ಷೇಮಾರ್ಥವಾಗಿ ನಾಶಮಾಡತಕ್ಕ ಪರಮಾತ್ಮನು, ಸೂರಿಗಳಿಗೆ ಸಮೀಪಗ–ಹರಿಸರ್ವೋತ್ತಮ, ವಾಯುಜೀವೋತ್ತಮ ತಾರತಮ್ಯ ಪಂಚಭೇದ ಜ್ಞಾನವೇ ಸತ್ಯವೆನ್ನತಕ್ಕ ಜ್ಞಾನಿಗಳಿಗೆ, ಇವರ ಮನಸ್ಸು ಪರಮಾತ್ಮನ ಪಾದ ಸೇರಿ ಆ ಪಾದ ಸಮೀಪದಲ್ಲಿ ಇರೋಣದರಿಂದ ಪರಮಾತ್ಮನು ಮನಸ್ಸಿಗೆ ಸಮೀಪನಾಗಿ ಇರ್ತಾನೆ. ಅದಕ್ಕೆ (ಪರಮಾತ್ಮನ ಪಾದಕ್ಕೆ) ಇದು (ಮನಸ್ಸು) ಸಮೀಪವಾದರೆ ಇದೂ (ಪರಮಾತ್ಮ) ಸಮೀಪವಾಗುತವೆ. ಈ ರೀತಿಯಿಂದ ಭಕ್ತರ ಸಮೀಪನಾಗಿ ಇರ್ತಾನೆ. ದುರಾಚಾರಿಗಳಿಗೆ–ತಾರತಮ್ಯ ಅಂಗೀಕರಿಸದೆ, ಪಂಚಭೇದ ಅಂಗೀಕರಿಸದ ಸ್ವರೂಪ ಸ್ವಭಾವದವರಿಗೆ (ಎಂದರೆ ನಿತ್ಯಸಂಸಾರಿಗಳು ಎಂತ ಅರ್ಥ. ಇವರಿಗೆ), ದೂರಾತ್–ದರ್ಪಣಗತ ಪ್ರತಿಬಿಂಬವತ್ ದೂರದ ದೇಶೆಯಿಂದ ಇರತಕ್ಕವ (ಶ್ರೀಮದಾಚಾರ್ಯರ ವಾಕ್ಯ, ಶ್ರೀಮದ್ದ್ವಾದಶಸ್ತೋತ್ರ, "ದೂರಾದ್ದೂರತರಂ ಯತ್ತು ತದೇವಾಂತಿಕಮಂತಿಕಾತ್"), ದೈತ್ಯಸಂತತಿಗೆ–ಸಂಪೂರ್ಣ ದ್ವೇಷಿಗಳಾದ ದೈತ್ಯಕೂಟಕ್ಕೆ, ಎಂದೆಂದು–ಅನಾದ್ಯನಂತಕಾಲಕ್ಕೂ, ದೂರತರ–ಅತ್ಯಂತ ದೂರನಾಗಿ ಇರತಾನೆ. ದುರ್ಲಭನೆನಿಸುವನು–ಮುಕ್ತಿಯೋಗ್ಯಸ್ವರೂಪದವರಾದಕಾಲಕ್ಕೂ, ಅಹಂಮಮತಾದಿಗಳಿಂದ ಸಹಿತರಾಗಿ ಮನಸ್ಸನ್ನು ಪರಮಾತ್ಮನ ಪಾದದಲ್ಲಿ ಇಡದೆ ಇರೋಪರಿಯಂತ ಈವರಿಗೂನೂ ದುರ್ಲಭ ಎಂತಲೆ ಕರೆಸುತ್ತಾನೆ. ಉಳಿದ ದೈತ್ಯರಿಗೂ ಮಿಶ್ರದ್ವೇಷಿಗಳಿಗೂ ಅತಿ ದುರ್ಲಭನು.

ಸಾರಿಸಾರಿಗೆ ನೆನೆದು–ಅಹಂಮಮತಾದಿಗಳ ದೂರಮಾಡಿ ಪರಮಾತ್ಮನಲ್ಲಿ ನಿಷ್ಠವಾದ ಮನಸ್ಸುಳ್ಳವರಾಗಿ ಪದೇ ಪದೇ ಸ್ಮರಣೆಮಾಡಿ, ಸುಖಿಸುವ–ಸುಖವನ್ನು ಹೊಂದುವ, ಸಾರಹೃದಯರ–ಸಾರಭೂತನಾದ ಶ್ರೀ ಪರಮಾತ್ಮನ್ನ ಹೃದಯಾಕಾಶದಲ್ಲಿ ಧ್ಯಾನೋ ಪಾಸನಾಮಾಡತಕ್ಕ ತನ್ನ ಭಕ್ತರ, ಸಂಸಾರದುಃಖ–ಸಂಸಾರದುಃಖವೆಂಬೋ, ಮಹೋ ರಗ–ದೊಡ್ಡದಾದ ಸರ್ಪಕ್ಕೆ, ದ್ವಿಜರಾಜನೆನಿಸುವನು–ಪಕ್ಷಿರಾಜನಾದ ಗರುಡ ಎಂತ ಕರಿಸೋವನಾಗತಾನೆ ಎಂದರೆ, ಸರ್ಪವನ್ನ ಗರುಡ ಹ್ಯಾಗೆ ನಾಶಮಾಡತಾನೋ, ತದ್ವತ್ ಭಕ್ತರ ಜನನಮರಣಾಖ್ಯ ದುಃಖವನ್ನು ನಾಶಮಾಡಿ ಸುಖವನ್ನ ಕೊಡತಾನೆ ಎಂತ ತಾತ್ಪರ್ಯ.

**ಕ್ಷುಧೆಯುಗೋಸುಗ ಪೋಗಿ ಕಾನನ ।**
**ಬದರಿಫಲಗಳಪೇಕ್ಷೆಯಿಂದಲಿ ।**
**ಪೊದೆಯೊಳಗೆ ಸಿಗಬಿದ್ದು ಬಾಯ್ದೆರೆದವನ ತೆರನಂತೆ ॥**
**ವಿಧಿಪಿತನ ಪೂಜಿಸದೆ ನಿನ್ನಯ ।**
**ಉದರಗೋಸುಗ ಸಾಧುಲಿಂಗ ।**
**ಪ್ರದರುಶಕರಾರಾಧಿಸುತ ಬಳಲದಿರು ಭವದೊಳಗೆ ॥ ೨೯ ॥**

ಶ್ರೀಪರಮಾತ್ಮನ್ನ, ತತ್ತ್ವದೇವತೆಗಳ, ಭಗವದ್ಭಕ್ತರ ಭಜಿಸದೆ, ಅನ್ಯರ ಭಜಿಸಿ ದವರಿಗೆ ಆಗತಕ್ಕ ದುಃಖ, ದೃಷ್ಟಾಂತದಿಂದ ಹೇಳತಾರೆ.

ಕ್ಷುಧೆಯುಗೋಸುಗ–ಹಸಿವಿನ ನಿವಾರಣೆ ಆಗಬೇಕು ಎಂತ ಗ್ರಾಮಗತರಾದವರನ್ನ ಯಾಚನಾಮಾಡದೆ ಹಸಿವಿಗಾಗಿ, ಬದರಿಫಲಗಳಪೇಕ್ಷೆಯಿಂದಲಿ–ಕಂಟಕದಿಂದ ಸಹಿತ ವಾದ ಬೋರೆಹಣ್ಣಿನ ಅಪೇಕ್ಷೆಯಿಂದ, ಕಾನನ–ಗ್ರಾಮಗತ ಜನರನ್ನೂ ಗ್ರಾಮವನ್ನೂ ಬಿಟ್ಟು ಅಡವಿಯನ್ನು, ಪೋಗಿ–ಕುರಿತು ಹೋಗಿ, ಪ್ರವೇಶಮಾಡಿ, ಪೊದೆಯೊಳಗೆ ಸಿಗಬಿದ್ದು–ಮುಳ್ಳಿನಿಂದ ಯುಕ್ತವಾದ ಬೋರೆಯ ಪೊದೆಯಲ್ಲಿ ಸಿಕ್ಕಿದವನಾಗಿ, ಬಾಯ್ದೆರೆ ದವನ ತೆರನಂತೆ–ಆ ಪೊದೆಯನ್ನು ಬಿಡಿಸಿಕೊಂಡು ಹೊರಗೆ ಬಂದು ಸ್ವಸ್ಥಳ ತಾನು ಸೇರೋದಕ್ಕೆ ಸಾಮರ್ಥ್ಯ ಸಾಲದೆ, ಮಾರ್ಗ ತಿಳಿಯದೆ ಬಾಯಿಬಿಟ್ಟು ಕಷ್ಟಪಡತಾ ಇರೋವನೋಪಾದಿಯಲ್ಲಿ, ವಿಧಿಪಿತನ ಪೂಜಿಸದೆ–ತನ್ನ ದೇಹಾಖ್ಯ ಗ್ರಾಮಗತ ತತ್ತ್ವ ದೇವತಾಸಾಂಕೇತರಾದ ಜನರನ್ನು, ಬ್ರಹ್ಮನ ತಂದಿಯಾದ ಆತ್ಮರೂಪೀ ಪರಮಾತ್ಮನ್ನ, ಈ ತತ್ತ್ವದೇವತೆಗಳ ಭಜನಾರೂಪವಾದ ಯಾಚನಾದಿಂದ, ಜ್ಞಾನಾಖ್ಯ ಅಶನ ಸಂಪಾ ದಿಸಿ ಕ್ಷುತ್ತು ಎಂಬ ಅಜ್ಞಾನ ನಿವಾರಣ ಮಾಡಿಕೊಳ್ಳದೆ, ನಿನ್ನಯ ಉದರಗೋಸುಗ– ಜ್ಞಾನಾಖ್ಯ ಅಶನದ್ರವ್ಯದಿಂದ ನಿನ್ನ ಉದರ ಪೂರ್ತಿಮಾಡಿಕೊಂಬೋದಕ್ಕೋಸ್ಕರ, ಸಾಧುಲಿಂಗಪ್ರದರುಶಕರ–ಭಗವದ್ಭಕ್ತರಲ್ಲದ, ಬದರೀವೃಕ್ಷದೋಪಾದಿಯಲ್ಲಿ ದಿವ್ಯಫಲಗಳ ಪ್ರದರ್ಶನಮಾಡುತ್ತಾ ಸಮಗ್ರ ವೃಕ್ಷ ಕಂಟಕಯುಕ್ತವಾಗಿ ಹ್ಯಾಗಿರ್ತದೋ ತದ್ವತ್, ದೇಹದಲ್ಲಿ ಸಾಧುತ್ವ ಮಾತ್ರ ಪ್ರದರ್ಶನಮಾಡುತ್ತಾ ಅಂತರಂಗದಲ್ಲಿ ಭಗವದ್ಭಕ್ತರಲ್ಲದ

ಕಪಟಭಕ್ತಿಪ್ರದರ್ಶನ ಮಾಡತಕ್ಕವರ, ಆರಾಧಿಸುತ–ಆರಾಧನೆಮಾಡತಾ ಬಂದರೆ, ಅವರು ಸಂಸಾರಸಮುದ್ರದಲ್ಲಿ ನಾನಾಪ್ರಕಾರ ದುಃಖಪಡತಕ್ಕ ಮಾರ್ಗಪ್ರದರ್ಶನ ಮಾಡಿ ಬದರೀ ಪೊದೆಯೊಳಗೆ ಸಿಗಬಿದ್ದ ಪುರುಷನಂತೆ ಸಂಸಾರಾಖ್ಯ ಪೊದೆಯೊಳಗೆ ಸಿಗಬೀಳುವಂತೆ ಅವರು (ಕಪಟಭಕ್ತರು) ಮಾಡೋರು. ಆದ್ದರಿಂದ ಅಂಥಾವರ ಭಜಿಸಿ, ಭವದೊಳಗೆ–ಸಂಸಾರಾಖ್ಯ ಪೊದೆಯೊಳಗೆ ಸಿಗಬಿದ್ದು, ಬಳಲದಿರು–ದುಃಖ ಐದೋವನಾಗಬ್ಯಾಡ. ಭಗವಂತನ ಭಕ್ತರಾದ ತತ್ತ್ವದೇವತೆಗಳನ್ನೂ, ಇತರರಾದ ಭಗವದ್ಭಕ್ತರನ್ನೂ ಅನುಸರಿಸಿ ಅವರಲ್ಲಿ ಯಾಚನಪೂರ್ವಕ ಜ್ಞಾನಸಂಪಾದನ ಮಾಡಿ, ಅಜ್ಞಾನ ಪರಿಹರಿಸಿಕೊಂಡು ಸುಖಿಸು ಎಂತ ತಾತ್ಪರ್ಯ.

**ತಾ||** ನಿಷ್ಕಾಮನಾಗಿ ಪರಮಾತ್ಮನ್ನ ಭಜಿಸಿದರೆ ಸಂಸಾರ ಛೇದವಾಗಿ ಭಗವತ್ ಸಂದರ್ಶನವಾಗಿ ಕಡೆ ಸೇರತಾನೆ. ಸಕಾಮನಾಗಿ, ಅನ್ಯದೇವತಾರಾಧನಿ, ಧನವಂತರ ಸೇವಾದಿಗಳ ಮಾಡಿದರೆ ದುಃಖ ಐದತಾನೆ. ಸಾಧುಲಿಂಗಪ್ರದರ್ಶಕರು ಎಂದರೆ ಅಂತಃಶುದ್ಧಿ ಇಲ್ಲದೇನೆ ಅಹಂಮಮತಾವಿಶಿಷ್ಟರಾಗಿ ಬಹಿಃಯಲ್ಲಿ ಲಿಂಗ ಎಂದರೆ, ದೇಹವನ್ನ ತೊಳೆದು, ನಾಮಮುದ್ರೆಗಳಿಂದ ಅಲಂಕರಿಸಿ, ತುಲಸಿ ಕಮಲಾಕ್ಷ ಮಾಲೆಗಳ ಧರಿಸಿ, ದ್ರವ್ಯಾಕರ್ಷಣೆ ಗಾಗಿ ವೇದಾಂತವಾಕ್ಯಗಳ ಉಚ್ಚರಿಸುತ್ತ, ಸಂಚಾರಮಾಡತಾ, ಅಂತರಂಗದಲ್ಲಿ ಪರ ಮಾತ್ಮನ್ನ ತಿಳಿದು ಭಜಿಸದೆ, ದ್ರವ್ಯಾರ್ಜನೆಗಾಗಿ ವೇಷವನ್ನು ಧರಿಸಿ ತಿರುಗುವರೇ ಸಾಧು ಲಿಂಗಪ್ರದರ್ಶಕರು ಎಂತ ತಿಳೀಬೇಕು. ಈ ರೀತಿಯಿಂದ ತಿರುಗದೆ "ದಾರಾನ್ ಸುತಾನ್ ಪ್ರಿಯಾನ್ ಪ್ರಾಣಾನ್ ಪರಸ್ಮೈ ಸನ್ನಿವೇದಯೇತ್" ಎಂಬ ಪ್ರಮಾಣವನ್ನು ಅನುಸರಿಸಿ, ಎಲ್ಲಾ ಭಗವದಧೀನತ್ವೇನ ಅರ್ಪಣೆ ಮಾಡಿ, ಭಗವದ್ಧ್ಯಾನದಲ್ಲಿ ರತನಾಗಿ, ನಿಷ್ಕಾಮನಾಗಿ ಇದ್ದರೆ ಭಗವದನುಗ್ರಹವಾಗಿ ಸಂಸಾರದಿಂದ ಮುಕ್ತನಾಗುತ್ತಾನೆ. ಆದ್ದರಿಂದ ನಿಷ್ಕಾಮಕರ್ಮವನ್ನೇ ಆಚರಿಸಬೇಕೆಂದು ತಿಳಿಯಬೇಕು.

**ಚಕ್ರಶಂಖಗದಾಬ್ಜಧರ ದುರ ।**
**ತಿಕ್ರಮ ದುರಾವಾಸ ವಿಧಿ ಶಿವ ।**
**ಶಕ್ರ ಸೂರ್ಯಾದ್ಯಮರಪೂಜ್ಯಪದಾಬ್ಜ ನಿರ್ಲಜ್ಜ ॥**
**ಶುಕ್ರಶಿಷ್ಯನ ಅಶ್ವಮೇಧ ।**
**ಪ್ರಕ್ರಿಯವ ಕೆಡಿಸಬ್ಜಜಾಂಡವ ।**
**ತಿಕ್ರಮಿಸಿ ಜಾಹ್ನವಿಯ ಪಡೆದ ತ್ರಿವಿಕ್ರಮಾಹ್ವಯನು ॥ ೩೦ ॥**

ಶ್ರೀ ಪರಮಾತ್ಮನು ಎಂಥಾವನೆಂದರೆ ಹೇಳತಾರೆ.

ಚಕ್ರಶಂಖಗದಾಬ್ಜಧರ–ಚಕ್ರ, ಶಂಖ, ಗದಾ, ಪದ್ಮ ಈ ನಾಲ್ಕು ಆಯುಧಗಳನ್ನ ನಾಲ್ಕು ಹಸ್ತಗಳಲ್ಲಿ ಉಳ್ಳ, ಚತುರ್ಭುಜನಾದವನು, ದುರತಿಕ್ರಮ–ಜೈಸಲಿಕ್ಕೆ ಅಶಕ್ಯ ವಾದ ಪರಾಕ್ರಮವುಳ್ಳವನು, ದುರಾವಾಸ–ಚರಾಚರದಲ್ಲಿ ವಾಸವಾಗಿ ಇದ್ದರೂ ಅದಕ್ಕೆ

ದೂರನಾಗಿ ನಿರ್ಲಿಪ್ತನಾಗಿ ಇರತಕ್ಕವನು, ವಿಧಿ ಶಿವ ಶಕ್ರ ಸೂರ್ಯ–ಬ್ರಹ್ಮ, ರುದ್ರ, ಇಂದ್ರ, ಸೂರ್ಯ ಇವರೇ, ಆದಿ–ಮೊದಲಾದ ಯಾವತ್ತೂ, ಅಮರಪೂಜ್ಯಪದಾಬ್ಜ–ದೇವತೆಗಳಿಂದ ಪೂಜಿತವಾದ ಪಾದಕಮಲಗಳುಳ್ಳವ, ನಿರ್ಲಜ್ಜ–ಲಜ್ಜಾರಹಿತನಾದವ ಎಂದರೆ, ಇವನ ಸಾಮರ್ಥ್ಯಾದಿ ಗುಣಗಳ ನೋಡಿ ಸಮರ್ಥರೆನಿಸುವ ಬ್ರಹ್ಮಾದಿ ದೇವತೆಗಳೂ ಲಜ್ಜಾಯುಕ್ತರಾಗುತ್ತಾರೆ. ಇಂಥಾ ಲಜ್ಜಾರಹಿತನಾದವ ಪರಮಾತ್ಮ ಎಂತ ಅರ್ಥ. ಇಂಥಾ ಪರಮಾತ್ಮ ವಾಮನಾವತಾರ ಮಾಡಿದವನಾಗಿ, ಶುಕ್ರಶಿಷ್ಯನ–ದೈತ್ಯ ಗುರುಗಳಾದ ಶುಕ್ರಾಚಾರ್ಯರಿಗೆ, ಶಿಷ್ಯನಾದ ಬಲಿಚಕ್ರವರ್ತಿಯ, ಅಶ್ವಮೇಧ ಪ್ರಕ್ರಿಯವ ಕೆಡಿಸಿ–ವಿತರಣೆಯಿಂದ ಮಾಡತಕ್ಕ ಅಶ್ವಮೇಧಯಾಗವನ್ನು, ಇಂದ್ರದೇವರಿಗೋಸ್ಕರ ಕೆಡಿಸಿದವನಾಗಿ, ತ್ರಿವಿಕ್ರಮಾಹ್ವಯನು–ಅದೇ ವಾಮನದೇವರೇ ತ್ರಿವಿಕ್ರಮ ಎಂತ ದೊಡ್ಡದಾದ ರೂಪ ಧರಿಸಿದವನಾಗಿ, ಅಬ್ಜಜಾಂಡವತಿಕ್ರಮಿಸಿ–ಬ್ರಹ್ಮಾಂಡವನ್ನ ಅತಿಕ್ರಮಿಸಿ, ಬ್ರಹ್ಮಾಂಡವನ್ನ ಬಿಟ್ಟು ಹೊರಭಾಗದಲ್ಲಿ ಇದ್ದಂಥಾ, ಜಾಹ್ನವಿಯ–ಭಾಗೀರಥಿಯನ್ನು, ಪಡೆದ–ತನ್ನ ಪಾದಾಂಗುಷ್ಟದಿಂದ ಪಡಿಯೋವನಾದ. ಆದಕಡಿಯಿಂದ, ಶ್ರೀ ಪರಮಾತ್ಮನ ಮಹಾಮಹಿಮೆ ಇಂಥಾದ್ದು ಎಂತ ತಿಳಿದು ಉಪಾಸನಾ ಮಾಡಬೇಕು ಎಂತ ತಾತ್ಪರ್ಯ.

**ಶಕ್ತರೆನಿಸುವರಿಲ್ಲ ಹರಿವ್ಯತಿ ।**
**ರಿಕ್ತ ಸುರಗಣದೊಳಗೆ ಸರ್ವೋ ।**
**ದ್ರಿಕ್ತನೆನಿಸುವ ಸರ್ವರಿಂದಲಿ ಸರ್ವಕಾಲದಲಿ ॥**
**ಭಕ್ತಿಪೂರ್ವಕವಾಗಿ ಅನ್ಯಪ್ರ ।**
**ಸಕ್ತಿಗಳನೀಡಾಡಿ ಪರಮಾ ।**
**ಸಕ್ತನಾಗಿರು ಹರಿಕಥಾಮೃತಪಾನವಿಷಯದಲಿ ॥ ೩೦ ॥**

ಶ್ರೀ ಪರಮಾತ್ಮನ ಕಥಾವಿಷಯದಲ್ಲಿ ಆಸಕ್ತನಾಗಿರು ಎಂತ ಹೇಳತಾರೆ.

ಸುರಗಣದೊಳಗೆ–ದೇವತಾಗಣದೊಳಗೆ, ಹರಿವ್ಯತಿರಿಕ್ತ–ಶ್ರೀ ನಾರಾಯಣದೇವರ ವ್ಯತಿರಿಕ್ತ, ಶಕ್ತರೆನಿಸುವರಿಲ್ಲ–ಸಾಮರ್ಥ್ಯವಂತರು ಎಂತ ಎನಿಸತಕ್ಕವರು ಅನಾದ್ಯನಂತ ಕಾಲಕ್ಕೂ ಇಲ್ಲ, ಸರ್ವಕಾಲದಲಿ–ಭೂತಭವಿಷ್ಯದ್ವರ್ತಮಾನ ಕಾಲಗಳಲ್ಲೂ, ಸರ್ವರಿಂದಲಿ–ಸರ್ವ ಚರಾಚರಗಳಿಂದಲಿ, ಸರ್ವೋದ್ರಿಕ್ತನೆನಿಸುವ–ಸರ್ವವಿಷಯಗಳಿಂದಲೂ ಶ್ರೇಷ್ಠ, ಅಪರಿಚ್ಛಿನ್ನ ಎಂತ ಎನಿಸುವ, ಇಂಥಾ ಶ್ರೀ ಪರಮಾತ್ಮನ್ನ, ಅನ್ಯಪ್ರಸಕ್ತಿಗಳನು ಈಡಾಡಿ–ಅನ್ಯವಾದ, ಪರಮಾತ್ಮನ ವಿಸ್ಮೃತಿ ಕೊಡುವ ಪ್ರಸಕ್ತಿಗಳ ದೂರಮಾಡಿ; ಭಕ್ತಿಪೂರ್ವಕವಾಗಿ–ಅತ್ಯಂತ ಭಕುತಿಯಿಂದ ಸಹಿತನಾಗಿ, ಹರಿಕಥಾಮೃತಪಾನ ವಿಷಯದಲಿ–ಶ್ರೀ ಪರಮಾತ್ಮನ ಕಥಾ ಎಂಬ ಅಮೃತವನ್ನ ಶ್ರವಣೇಂದ್ರಿಯದಿಂದ ಪಾನಮಾಡೋ ವಿಷಯದಲ್ಲಿ, ಪರಮಾಸಕ್ತನಾಗಿರು–ಅತ್ಯಂತ ಆದರದಿಂದ ಯುಕ್ತನಾಗಿರಬೇಕು ಎಂತ ಹೇಳಿದ್ದಾರೆ.

**ಬಲ್ಲೆನೆಂಬುವರಿಲ್ಲವೀತನ ।**
**ಒಲ್ಲೆನೆಂಬುವರಿಲ್ಲ ಲೋಕದೊ ।**
**ಳಿಲ್ಲದಿಹ ಸ್ಥಳವಿಲ್ಲವಲ್ಲೈ ಜ್ಞಾತಜನರಿಲ್ಲ ॥**
**ಬೆಲ್ಲದಚ್ಚಿನ ಬೊಂಬೆಯಂದದಿ ।**
**ಎಲ್ಲರೊಳಗಿರುತಿಪ್ಪ ಶ್ರೀ ಭೂ ।**
**ನಲ್ಲ ಇವಗೆಣೆಯಿಲ್ಲ ಅಪ್ರತಿಮಲ್ಲ ಜಗಕೆಲ್ಲ ॥ ೩೨ ॥**

ಈತನ–ಪೂರ್ವೋಕ್ತನಾದ ಈ ಶ್ರೀ ಪರಮಾತ್ಮನ, ಒಲ್ಲೆನೆಂಬವರಿಲ್ಲವು–ನಾವು ಬಲ್ಲೆವು ಎನತಕ್ಕವರಿಲ್ಲ, ಎಂದರೆ, ಒಂದು ರೂಪವಾದಲ್ಲಿ ಆ ಒಂದು ರೂಪವನ್ನ ಒಂದಾವರ್ತಿ ನೋಡಿ, ಎರಡನೇ ಆವರ್ತಿ ಅದೇ ರೂಪ ಒಂದಾಗೇ ಇದ್ದರೆ, ಇದುವರಿಗೆ ಬಲ್ಲೆವು ಎಂತ ತಿಳಿಯಬಹುದು. ಅನಂತಾನಂತ ರೂಪಗಳು ಉಳ್ಳವನಾದ್ದರಿಂದ ಈ ರೂಪಗಳು ಬಲ್ಲೆನು ಅನ್ನತಕ್ಕವನು ಚರಾಚರದೊಳಗೆ ದಾರೂ ಇಲ್ಲ ಎಂತ ತಾತ್ಪರ್ಯ. ಒಲ್ಲೆನೆಂಬವರಿಲ್ಲ–ಈ ಪರಮಾತ್ಮನ್ನ ಬ್ಯಾಡಾ ಎಂತಲೂ, ಇವನ್ನ ನಾವು ಬಲ್ಲೆವು ಎನತಕ್ಕವರು ದಾರೂ ಇಲ್ಲ. ಪರಮಾತ್ಮ ಬ್ಯಾಡ ಎಂಬುವರನ್ನ ನಾವು ಒಲ್ಲೆವು. ನಾವೇ ಪರಮಾತ್ಮ ಎಂಬವರು ದಾರೋ ಅವರಿಗೆ, ಅವರ ಹೃದಯಾಕಾಶದಲ್ಲಿ ಪರಮಾತ್ಮ ಪ್ರತ್ಯಕ್ಷನಾಗೋದಿಲ್ಲ, ಅವರೇ ಭಗವದ್ದ್ವೇಷಿಗಳು. ಲೋಕದೊಳು ಇಲ್ಲದಿಹ ಸ್ಥಳವಿಲ್ಲವಲ್ಲೈ–ಚರಾಚರಾತ್ಮಕವಾದ ಲೋಕದೊಳು ಇವನ ವ್ಯಾಪ್ತಿ ಇಲ್ಲದೇ ಇರತಕ್ಕ ಸ್ಥಳವೇ ಇಲ್ಲ. ಜ್ಞಾತಜನರಿಲ್ಲ–ಇವನ ಮಹಿಮೆ ಸಾಕಲ್ಯೇನ ಬಲ್ಲವರು ಇಲ್ಲ. ಬೆಲ್ಲದಚ್ಚಿನ ಬೊಂಬೆಯಂದದಿ–ಬೆಲ್ಲದ ಪಾಕವನ್ನ ಬೊಂಬೆ ಆಕಾರದಿಂದ ಇರತಕ್ಕ ಅಚ್ಚಿನಲ್ಲಿ ಹಾಕಿದರೆ ತದಾತ್ಮಕ ಬೊಂಬೆಯು ಸರ್ವಾಯವಗಳಲ್ಲಿ 'ಮಧುರ' ಪೂರ್ಣವಾಗಿ ಹ್ಯಾಂಗೆ ಇರುತ್ತದೋ ತದ್ವತ್, ಪರಮಾತ್ಮನ ರೋಮಾದಿ ಸರ್ವಾವಯವಗಳೂ, ಸರ್ವಸಾಮರ್ಥ್ಯದಿಂದಲೂ, ಸರ್ವ ಗುಣಗಳಿಂದಲೂ ಪೂರ್ಣವಾಗಿಯೂ ಇರುತ್ತವೆ ಎಂತ ತಾತ್ಪರ್ಯ. ಎಲ್ಲರೊಳಗಿರುತಿಪ್ಪ–ಭಕ್ತಾಭಕ್ತ ತ್ರಿವಿಧಜೀವರಿಗೆ ಬಿಂಬನಾಗಿ ಇರೋವನಾಗಿದ್ದಾನೆ. ಶ್ರೀಭೂನಲ್ಲ–ಶ್ರೀದೇವೇರಿಗೂ, ಭೂದೇವೇರಿಗೂ ಪತಿಯಾದವನು, ಇವಗೆ ಎಣೆಯಿಲ್ಲ–ಇವಗೆ ಸಮಾನರು ಇಲ್ಲ, ಜಗಕೆಲ್ಲ–ಈ ಪರಮಾತ್ಮ ಸಮಸ್ತ ಜಗಕ್ಕೆಲ್ಲ, ಅಪ್ರತಿಮಲ್ಲ–ಅಪ್ರತಿಹತನಾದ ಪರಾಕ್ರಮವುಳ್ಳವನೆಂದು ತಾತ್ಪರ್ಯ.

**ವಿಶೇಷಾರ್ಥ :**–ಸರ್ವವ್ಯಾಪ್ತ ಎನಲಿಕ್ಕೆ ಪ್ರಮಾಣ :– ಸರ್ವತಃ ಪಾಣಿಪಾದಂ ತತ್ಸರ್ವತೋಕ್ಷಿಶಿರೋಮುಖಂ ॥ ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥

**ಪ್ರಣತಕಾಮದ ಭಕ್ತಚಿಂತಾ ।**
**ಮಣಿ ಮಣಿಮಯಾಭರಣಭೂಷಿತ ।**
**ಗುಣಿ ಗುಣತ್ರಯದೂರ ವರ್ಜಿತ ಗಹನಸನ್ಮಹಿಮ ॥**

**ಎಣಿಸ ಭಕ್ತರ ದೋಷಗಳ ಕುಂ ।**
**ಭಿಣಿಜೆಯಾಣ್ಮ ಶರಣ್ಯ ರಾಮಾ ।**
**ರ್ಪಣವೆನಲು ಕೈಗೊಂಡ ಶಬರಿಯ ಫಲವ ಪರಮಾತ್ಮ ॥ ೩೩ ॥**

ಇನ್ನೂ ಪರಮಾತ್ಮನ ಮಹಿಮಾ ಹೇಳತಾರೆ.

ಪ್ರಣತಕಾಮದ–ವಂದನಾಮಾಡತಕ್ಕ ಸ್ವರೂಪ, ಸ್ವಭಾವದಲ್ಲಿ ಉಳ್ಳ ಭಕ್ತರಿಗೆ ಇಷ್ಟಾರ್ಥವಾದ ತನ್ನ ಸಂದರ್ಶನ ಕೊಡತಕ್ಕವ, ಭಕ್ತಚಿಂತಾಮಣಿ–ಮತ್ತು ಭಕ್ತರಿಗೆ ಅಭೀಷ್ಟಗಳ ಪೂರ್ಣಮಾಡೋದರಲ್ಲಿ ಚಿಂತಾಮಣಿಸದೃಶನಾದವ, ಯೋಗ್ಯತಾನುಸಾರ ಚಿಂತಿಸಿದ್ದು ಕೊಡತಕ್ಕವ, ಮಣಿಮಯಾಭರಣಭೂಷಿತ–ತನ್ನ ಸ್ವಾಖ್ಯಗಳಾದ ನವ ರತ್ನಾದಿ ಮಣಿಮಯಗಳಾದ ಆಭರಣಗಳಿಂದ ಭೂಷಿತನಾದವ, ಗುಣಿ–ಸ್ವಾಖ್ಯ ಗುಣ ತ್ರಯಗಳುಳ್ಳವ, ಗುಣತ್ರಯದೂರ–ಪ್ರಾಕೃತ ಗುಣತ್ರಯಗಳಿಂದ ದೂರನಾದವ, ವರ್ಜಿತ–ಜೀವ, ದೇಹ ಈ ಎರಡರಲ್ಲಿ ಇದ್ದಕಾಲಕ್ಕೂ ಜೀವಭುಕ್ತದಿಂದ ವರ್ಜಿತನಾದವ, ಸ್ವಾಖ್ಯಗಳೇ ಭೋಜನಮಾಡತಕ್ಕವ, ಗಹನಸನ್ಮಹಿಮ–ದಾರಿಂದಲೂ ತಿಳಕೊಂಬೋ ದಕ್ಕೆ ಶಕ್ಯವಲ್ಲದ, ಅಸಾಧ್ಯವಾದ ಮಂಗಳಕರಗಳಾದ ಮಹಾಮಹಿಮೆ ಉಳ್ಳವ, ಕುಂಭಿಣಿಜೆಯ–ಭೂಮಿಯಲ್ಲಿ ಉತ್ಪನ್ನರಾದ ಲಕ್ಷ್ಮೀದೇವೇರಾದ ಸೀತಾದೇವಿಯರ, ಆಣ್ಮ–ಆಳತಕ್ಕವ, ಎಂದರೆ, ಈ ಸೀತಾದೇವಿಯರಿಗೆ ಪತಿಯಾದವ, ರಾಮ–ಶ್ರೀರಾಮಾವ ತಾರ ಮಾಡಿದವ, ಶರಣ್ಯ–ಭಕ್ತಜನರಿಂದ ವಂದನಮಾಡಿಸಿಕೊಳ್ಳಲ್ಪಟ್ಟವ, ಪರಮಾತ್ಮ–ಇಂಥಾ ಸರ್ವೋತ್ತಮನಾದ ಭಗವದಂಶಭೂತನಾದ ಶ್ರೀರಾಮಚಂದ್ರದೇವರು, ಶಬರಿಯ–ಶಬರಿ ಎನತಕ್ಕ ಸ್ತ್ರೀಯಿಂದ ಕೊಡಲ್ಪಟ್ಟ, ಫಲವ–ಫಲವನ್ನ, ಹಣ್ಣುಗಳನ್ನ, ಅರ್ಪಣ ವೆನಲು–' ನಿನಗೆ ಸಮರ್ಪಣ ಮಾಡಿದ್ದೇನು ' ಎಂತ ಅನ್ನಲು, ಕೈಗೊಂಡ–ಈ ಫಲಗಳನ್ನ ತಾನು ಸ್ವೀಕಾರಮಾಡಿದ. ಈ ಶಬರಿ ಕಚ್ಚಿ ಎಂಜಲುಮಾಡಿದ ಫಲಗಳಲ್ಲಿ ತನ್ನ ಸ್ವಾಖ್ಯ ರಸಗಳನ್ನು ಸ್ವೀಕಾರಮಾಡಿದನೇ ಹೊರ್ತು, ಅನ್ಯವಾದ ರಸವನ್ನ ಸ್ವೀಕಾರಮಾಡಲಿಲ್ಲ; ಇನ್ನೂ ಕೇವಲ ಭಕ್ತಿಯಿಂದ ಕೊಟ್ಟ ಫಲವನ್ನ ಸ್ವೀಕಾರಮಾಡಿ ಅವಳಲ್ಲಿ ಪರಮಾನುಗ್ರಹ ಮಾಡಿದನೇ ಹೊರ್ತು, ಅನ್ಯಥಾ ಮಾಡಲಿಲ್ಲ; ಮುಖ್ಯ, ಭಕ್ತಿ ಕಾರಣ. ಎಣಿಸ ಭಕ್ತರ ದೋಷಗಳ– ಈ ಪ್ರಕಾರ ಭಕ್ತಿಯುಕ್ತರಾದ ಭಕ್ತರ ದೋಷಗಳ ಗಣನಾಮಾಡದೆ ಉದ್ಧಾರ ಮಾಡತಾನೆ ಎಂತ ತಾತ್ಪರ್ಯ.

**ಶಬ್ದಗೋಚರ ಶಾರ್ವರೀಕರ ।**
**ನಬ್ದವಾಹನನನುಜ ಯದುಮಂ ।**
**ಶಾಬ್ಧಿಚಂದ್ರಮ ನಿರುಪಮ ಸುನಿಸ್ಸೀಮ ಸಮಿತಸಮ ॥**
**ಲಬ್ಧನಾಗುವ ತನ್ನವಗೆ ಪ್ರಾ ।**
**ರಬ್ಧಕರ್ಮಗಳುಣಿಸಿ ತೀವ್ರದಿ ।**
**ಕ್ಷುಬ್ಧಪಾವಕನಂತೆ ಬಿಡದಿಪ್ಪನು ದಯಾಸಾಂದ್ರ ॥ ೩೪ ॥**

ಇನ್ನೂ ಪರಮಾತ್ಮನ ಮಾಹಾತ್ಮ್ಯ ಹೇಳತಾರೆ.

ಶಬ್ದಗೋಚರ–ವೇದದಿಂದ ತಿಳಿಯತಕ್ಕವ, ಶಾರ್ವರೀಕರನು–ಚಂದ್ರನು ಎಂದರೆ, ಚಂದ್ರನೋಪಾದಿಯಲ್ಲಿ ಸಂಸಾರದಲ್ಲಿ ಕೇವಲ ತಪ್ತರಾದ ಭಕ್ತರಿಗೆ ತಾಪ ಪರಿಹರಿಸಿ ಶಾಂತಿ ಕೊಡತಕ್ಕವನು, ಅಬ್ದವಾಹನನನುಜ–ಮೇಘವಾಹನನಾದ ಇಂದ್ರನ ಸಹೋದರನಾದ ಉಪೇಂದ್ರ ಎಂತ ನಾಮ ಪಡೆದವನು, ಯದುವಂಶಾಬ್ಧಿ ಚಂದ್ರ–ಯದುವಂಶವೆಂಬ ಸಮುದ್ರದಲ್ಲಿ ಜನಿಸಿ, ಆ ಯದುವಂಶಕ್ಕೆ ಚಂದ್ರನೋಪಾದಿಯಲ್ಲಿ ಪ್ರಕಾಶನಾದವನು, ನಿರುಪಮ–ಉಪಮಾರಹಿತನು, ಸುನಿಸ್ಸೀಮ – ಸರ್ವರಿಂದಲೂ ಅಜೇಯನಾದವನು, ಸಮಿತಸಮ–ಮುಕ್ತರಿಂದ ಸಾಮವೇದದಿಂದ ಗಾನಮಾಡಿಸಿಕೊಂಡು ಅವರಕಡೆಯಿಂದ ವಂದಿತನಾದಂಥಾವನು; ಇನ್ನೂ ಸಮಿತಸಮ ಎಂದರೆ, ಸರ್ವರೂಪಗಳಲ್ಲೂ ಸಮವಾಗಿ ಸಂಪೂರ್ಣಗುಣವುಳ್ಳವನಾದ್ದರಿಂದ ಸಮಿತ ಎಂತ ಅನಿಸಿಕೊಂಡು ಸರ್ವತ್ರ ಸಮಾನನಾಗಿ ಇರುವನು ಅಥವಾ ದೇಶಕಾಲಗಳಲ್ಲಿ ಸಮವ್ಯಾಪ್ತಿಯುಳ್ಳ 'ಮಾ' ಎಂಬ ಲಕ್ಷ್ಮೀಸಮೇತ ಎಂತಲೂ ಅರ್ಥವೇ. ತನ್ನವಗೆ–ತನ್ನ ಭಕ್ತರಿಗೆ ಅಪರೋಕ್ಷ ಕೊಟ್ಟು, ಸಂಚಿತಾಗಾಮಿಗಳ ನಾಶನಮಾಡಿ, ಪ್ರಾರಬ್ಧಕರ್ಮಗಳುಣಿಸಿ–ಪ್ರಾರಬ್ಧಕರ್ಮಗಳ ಭೋಜನಮಾಡಿಸಿ, ಕ್ಷುಬ್ಧಪಾಪಕನಂತೆ – ಕಾಷ್ಠಸಂಬಂಧದಿಂದ ಪ್ರಜ್ವಲಿಸತಕ್ಕ ಅಗ್ನಿಯಂತೆ, ಬಿಡದಿಪ್ಪನು ದಯಾಸಾಂದ್ರ–ಜೀವಾಂತರ್ಗತನಾದ ದಯಾಳುವಾದ ಪರಮಾತ್ಮ, ಪ್ರಜ್ವಲಿಸುತ್ತ ಪ್ರತ್ಯಕ್ಷನಾಗಿ, ಜೀವನ್ನ ಬಿಟ್ಟು ವಿಯೋಗನಾಗದೆ, ಜೀವನಲ್ಲೇ ಇರೋವನಾಗಿದ್ದಾನೆ. ತೀವ್ರದಿ–ಇಂಥಾ ಶ್ರೀಪರಮಾತ್ಮನ್ನ ಪ್ರತ್ಯಕ್ಷೀಕರಿಸಿಕೋಬೇಕಾದರೆ, ಅತಿ ತೀವ್ರದಿಂದ ಅಹಂಮಮತಾದಿಗಳ ತ್ಯಜಿಸಿ, ಕೇವಲ ಭಕ್ತಿಯಿಂದ ಸಹಿತನಾಗಿ ತದೇಕನಿಷ್ಠನಾಗಿ ಇರತಕ್ಕವಗೆ ಬಹುಬ್ಯಾಗ, ಲಬ್ಧನಾಗುವ–ಅಪರೋಕ್ಷದಿಂದ ಸ್ವಾಧೀನನಾಗುತ್ತಾನೆ ಹೊರ್ತು, ಅನ್ಯಮಾರ್ಗದಿಂದ ಲಬ್ಧನಾಗತಕ್ಕವನಲ್ಲ. ಶ್ರೀಪರಮಾತ್ಮನ್ನ ಏಕಾಗ್ರಚಿತ್ತದಿಂದ ಭಜಿಸಿ ಮುಕ್ತನಾಗಬೇಕೆಂತ ತಾತ್ಪರ್ಯ.

**ಶ್ರೀವಿರಿಂಚಾದ್ಯಮರವಂದಿತ ।**
**ಈ ವಸುಂಧರೆಯೊಳಗೆ ದೇವಕಿ ।**
**ದೇವಿಜಠರದೊಳವತರಿಸಿದನು ಅಜನು ಜನದಂತೆ ॥**
**ರೇವತಿರಮಣಾನುಜನು ಸ್ವಪ ।**
**ದಾವಲಂಬಿಗಳನು ಸಲಹಿ ದೈ ।**
**ತ್ಯಾವಳಿಯ ಸಂಹರಿಸಿದ ಜಗನ್ನಾಥವಿಠ್ಠಲನು ॥ ೩೫ ॥**

ಶ್ರೀವಿರಿಂಚಾದ್ಯಮರವಂದಿತ–ಲಕ್ಷ್ಮೀದೇವೇರಿಂದಲೂ, ಬ್ರಹ್ಮಾದಿದೇವತೆಗಳಿಂದಲೂ ವಂದನಾ ಮಾಡಿಸಿಕೊಳ್ಳಲ್ಪಟ್ಟವ, ಅಜನು–ಶ್ರೀಪರಮಾತ್ಮ ಉತ್ಪತ್ತಿಯಿಂದ ಶೂನ್ಯನಾದವನು, ಈ ವಸುಂಧರೆಯೊಳಗೆ–ಈ ಭೂಮಿಯಲ್ಲಿ, ರೇವತಿರಮಣಾನುಜನು–ರೇವತೀದೇವೇರ ಪತಿಯಾದ ಬಲರಾಮದೇವರ ತಮ್ಮ ಎಂತ ಕರಿಸಿದವನಾಗಿ, ಜನದಂತೆ–

ಪ್ರಾಕೃತಜನರೋಪಾದಿಯಲ್ಲಿ, ದೇವಕಿದೇವಿ ಜಠರದೊಳು–ದೇವಕರಾಯನ ಮಗಳಾದ ದೇವಕೀ ಎಂತ ನಾಮಪಡೆದ, ವಸುದೇವನ ಪತ್ನಿಯಾದ ದೇವಕೀದೇವಿಯ ಉದರದಲ್ಲಿ, ಅವತರಿಸಿದನು–ಶ್ರೀಕೃಷ್ಣ ಎಂತ ನಾಮಾಂಕಿತನಾಗಿ ಅವತಾರಮಾಡೋವನಾದನು. ಹೀಂಗೆ ಅವತಾರಮಾಡಿದ, ಜಗನ್ನಾಥವಿಠ್ಠಲನು–ಪರಮಾತ್ಮನಾದ ಶ್ರೀಕೃಷ್ಣ, ಸಮಸ್ತ ಲೋಕಕ್ಕೆ ಸ್ವಾಮಿ ಎಂತಲೂ, ಭಕ್ತರ ಪಾಪಪರಿಹಾರಕ ಎಂತಲೂ ಎನಿಸಿ, ಸ್ವಪದಾವಲಂಬಿಗಳನು–ತನ್ನ ಪಾದವನ್ನೇ ನಂಬಿಕೊಂಡಿರುವ ಭಕ್ತರಾದ ಪಾಂಡವರನ್ನ, ಇನ್ನೂ ಅನೇಕ ಮಂದಿ ಭಕ್ತರನ್ನ, ಸಲಹಿ–ಸಂರಕ್ಷಣೆ ಮಾಡೋವನಾಗಿ, ದೈತ್ಯಾವಳಿಯ–ಭಕ್ತರ ದ್ವೇಷಿಗಳಾದ ದೈತ್ಯರನ್ನ, ಸಂಹರಿಸಿದ – ಸಂಹಾರಮಾಡೋವನಾಗಿದ್ದಾನೆ. ಶ್ರೀಪರಮಾತ್ಮನ ಮಹಾಮಾಹಾತ್ಮ್ಯವನ್ನು ತಿಳಿದು ಭಜನಾಮಾಡೋಣದರಿಂದ ಮಹಾ ಫಲವನ್ನ ಹೊಂದುತ್ತಾನಾದಕಡಿಯಿಂದ, ಪೂರ್ವೋಕ್ತ ಶ್ರೀಪರಮಾತ್ಮನ ಧ್ಯಾನೋಪಾಸನಮಾಡಿ ಕರ್ಮವಿಮೋಚನ ಮಾಡಿಕೋಬೇಕೆಂತ ತಾತ್ಪರ್ಯ.

**ಶ್ರೀಮತ್ಸತ್ಯಪರಾಯಣತೀರ್ಥಕರಕಮಲಸಂಜಾತಶ್ರೀಮತ್ಸಂಕರ್ಷಣ-ತೀರ್ಥವಿರಚಿತಾಯಾಂ ಶ್ರೀಮದ್ಧರಿಕಥಾಮೃತಸಾರಕನ್ನಡಭಾಷಾ-ಟೀಕಾಯಾಂ ಕರ್ಮವಿಮೋಚನಸಂಧಿವ್ಯಾಖ್ಯಾನಂ ಸಂಪೂರ್ಣಂ**

|| ಶ್ರೀ ಕೃಷ್ಣಾರ್ಪಣಮಸ್ತು ||

## ಹತ್ತೊಂಬತ್ತನೇಸಂಧಿಯಲ್ಲಿ ಮುಖ್ಯವಾದ ವಿಚಾರಗಳು :–

೮ನೇ ಶ್ಲೋಕ–ಉಪಕಾರ ಮಾಡಿದವನಲ್ಲಿ ಮಾಡತಕ್ಕ ಅನುಸಂಧಾನಕ್ರಮ, ಅಪಕಾರ ಮಾಡಿದರೆ ಅನುಸಂಧಾನ.

೧೦-೧೩ನೇ ಶ್ಲೋಕ–ವಿಧಿಕರ್ಮ ದಾವದು, ನಿಷಿದ್ಧಕರ್ಮ ದಾವದು, ಬಹಿರ್ಬಿಂಬ ಅಂತರಂಗಬಿಂಬಗಳ ವಿಚಾರ; ಪ್ರೇರಣೆ ವಿಚಾರ.

೧೧ನೇ ಶ್ಲೋಕ–ಆಕ್ಷೇಪಕ್ಕೆ ಸಮಾಧಾನ. ಪರಮಾತ್ಮ ಮಾಡಿಸಿದ ಪಾಪಪುಣ್ಯಗಳಿಗೆ, ಜೀವಗೆ ಸ್ವಾತಂತ್ರ್ಯ ಉಂಟು.

೧೪ನೇ ಶ್ಲೋಕ–ದ್ವಂದ್ವಕರ್ಮ ಅರ್ಪಣಾ.

೧೬ನೇ ಶ್ಲೋಕ–ಸಂಚಿತಾಗಾಮಿ ಕರ್ಮವಿಚಾರ.

೨೦-೨೧ನೇ ಶ್ಲೋಕ–ಅನ್ಯದೇವತಾ ಭಜನಿ ವಿಚಾರ.

೨೨ನೇ ಶ್ಲೋಕ–ದೇವರಪೂಜಾಕ್ಕೆ ವಿಧಿನಿಷೇಧ ವಿಚಾರ.

೨೮ನೇ ಶ್ಲೋಕ–ನಿತ್ಯಸಂಸಾರಿ, ತಮೋಯೋಗ್ಯರ ಅಪರೋಕ್ಷವಿಚಾರ.

|| ಓಂ ಶ್ರೀ ಗುರುಭ್ಯೋ ನಮಃ ಹರಿಃ ಓಂ ||

# ಇಪ್ಪತ್ತನೆಯ ಸಂಧಿ

## ಗುಣತಾರತಮ್ಯ ಸಂಧಿ

**ಹರಿಕಥಾಮೃತಸಾರ ಗುರುಗಳ ।**
**ಕರುಣದಿಂದಾಪನಿತು ಪೇಳುವೆ ।**
**ಪರಮ ಭಗವದ್ಭಕ್ತರಿದನಾದರದಿ ಕೇಳುವುದು || ಪ ||**

**ಮೂಲ :**

**ಶ್ರೀಧರಾ ದುರ್ಗಾಮನೋರಮ ।**
**ವೇಧಮುಖ ಸುಮನಸಗಣ ಸಮಾ ।**
**ರಾಧಿತ ಪದಾಂಭೋಜ ಜಗದಂತರ್ಬಹಿರ್ವ್ಯಾಪ್ತ ||**
**ಗೋಧರ ಫಣಿವರಾತಪತ್ರ ನಿ ।**
**ಷೇಧದೂರ ವಿಚಿತ್ರಕರ್ಮ ಸು ।**
**ಬೋಧ ಸುಖಮಯಗಾತ್ರ ಪರಮಪವಿತ್ರ ಸುಚರಿತ್ರ || ೧ ||**

**ಅವತಾರಿಕಾ :–** ಗುಣಪೂರ್ಣನಾದ ಪರಮಾತ್ಮನ್ನ ಸರ್ವೋತ್ತಮೋತ್ತಮ ಎಂತ ತಿಳದು ಉಪಾಸನ ಮಾಡಿದರೆ ಕರ್ಮವಿಮೋಚನ ಆಗತದೆ, ಎಂತ ಹಿಂದಿನ ಸಂಧಿಯಲ್ಲಿ ಹೇಳಿದರು. ಸರ್ವೋತ್ತಮತ್ವ ಹ್ಯಾಂಗೆಂದರೆ, ಅದಕ್ಕಾಗಿ ಪರಮಾತ್ಮನಲ್ಲಿ ವಿದ್ಯಮಾನವಾದ ಗುಣಗಳಿಗೂ, ತದನ್ಯರಲ್ಲಿ ವಿದ್ಯಮಾನವಾದ ಗುಣಗಳಿಗೂ ತಾರತಮ್ಯ ಹೇಳೋಣವಲ್ಲದೆ ಶ್ರೀದೇವೇರಾರಭ್ಯ ತೃಣಜಡಗಳ ಪರಿಯಂತ ತಾರತಮ್ಯ ತಿಳೀಬೇಕೆಂತಲೂ " ಸರ್ವೇಷಾಂ ಚ ಹರಿರ್ನಿತ್ಯಂ ನಿಯಂತಾ ತದ್ವಶಾಃ ಪರೇ | ತಾರತಮ್ಯಂ ತತೋ ಜ್ಞೇಯಂ ಸರ್ವೋಚ್ಚತ್ವಂ ಹರೇಸ್ತಥಾ | ಏತದ್ವಿನಾ ನ ಕಸ್ಯಾಪಿ ವಿಮುಕ್ತಿಃ ಸ್ಯಾತ್ ಕಥಂಚನ || " ಎಂತ ಭಾರತತಾತ್ಪರ್ಯನಿರ್ಣಯ ಪ್ರಥಮಾಧ್ಯಾಯೋಕ್ತ ಪ್ರಕಾರ, ಗುಣಪೂರ್ಣನಾದ ಶ್ರೀಪರಮಾತ್ಮನ ಆರಂಭಿಸಿ ಯಾವತ್ತೂ ವಿಷ್ಣುಭಕ್ತರಾದ ದೇವತೆಗಳ ಗುಣತಾರತಮ್ಯವನ್ನೂ, ಶ್ರೀಪರಮಾತ್ಮ ಎಂಥಾವನೆಂದೂ ಹೇಳತಾರೆ.

**ಟೀಕಾ :**

ಶ್ರೀ – ಶ್ರೀದೇವೇರು, ಧರಾ – ಭೂದೇವೇರು, ದುರ್ಗಾ – ದುರ್ಗಾದೇವೇರು, ಮನೋರಮ–ಈ ಮೂರು ಲಕ್ಷ್ಮೀರೂಪಗಳಿಗೆ ಇನ್ನೂ ಅನೇಕವಾದ ಲಕ್ಷ್ಮೀ ಅಂಶರೂಪ

ಗಳಿಗೆ ಮನೋಹರುಷಕನಾದವ, ಮುಖ–ಸರ್ವಜೀವೋತ್ತಮರಾದ, ಮುಖ್ಯರಾದ, ವೇಧ–ಬ್ರಹ್ಮದೇವರು, ಸುಮನಸಗಣ – ತದನ್ಯರಾದ ದೇವತೆಗಳ ಸಮೂಹದಿಂದ, ಸಮಾರಾಧಿತ – ಛಂದಾಗಿ ಆರಾಧಿತವಾದ, ಪದಾಂಭೋಜ – ಪಾದಕಮಲಗಳುಳ್ಳವ, ನಿರ್ಲಿಪ್ತನಾಗಿ, ಜಗದಂತರ್ಬಹಿರ್ವ್ಯಾಪ್ತ–ಜಗತ್ತಿನಲ್ಲಿ ಅಂತರ್ಬಹಿರ್ವ್ಯಾಪ್ತನಾಗಿರತಕ್ಕವ, ಗೋಧರ–ಭೂಮಿಯನ್ನು ಶಿರದಲ್ಲಿ ಧರಿಸಿದ, ಫಣಿವರ–ಸರ್ಪಶ್ರೇಷ್ಠರಾದ ಶೇಷದೇವರೇ ಆತಪತ್ರ – ಛತ್ರಿಯಾಗಿ ಉಳ್ಳವ, ನಿಷೇಧದೂರ – ನಿಷಿದ್ಧಸ್ವರೂಪರಾದ ದೈತ್ಯರಿಗೆ ಹೃದಯಾಕಾಶದಲ್ಲಿ ಪ್ರತ್ಯಕ್ಷನಾಗದೆ ದೂರನಾಗಿರತಕ್ಕವ, ವಿಚಿತ್ರಕರ್ಮ–ಅವತಾರಗಳ ಮಾಡಿ ಮಾನುಷಾದಿವತ್ ಪ್ರದರ್ಶನನಾಗಿ, ಲೋಕವನ್ನು ಆಶ್ಚರ್ಯಗೊಳಿಸತಕ್ಕ ಕರ್ಮ ರೂಪವಾದ ವ್ಯಾಪಾರಗಳ ಮಾಡಿದವ, ಸುಬೋಧ–ನಿರ್ದೋಷವಾದ ಜ್ಞಾನವೇನು, ಸುಖಮಯ–ಆನಂದವೇನು, ಈ ಎರಡು ಪ್ರಾಚುರ್ಯವಾದ, ತನ್ಮಯವಾದ, ಗಾತ್ರ– ಶರೀರವುಳ್ಳವ, ಪರಮಪವಿತ್ರ–ಅತ್ಯಂತ ಶ್ರೇಷ್ಠರಾದ ಮುಕ್ತಿಯೋಗ್ಯರ ದೋಷಗಳನ್ನ ದೂರಮಾಡಿ ಪವಿತ್ರರನ್ನಾಗಿ ಮಾಡಿದವ, ಸುಚರಿತ್ರ–ಸಮೀಚೀನವಾದ ಮನೋಹರ ವಾದ ಚರಿತ್ರೆಗಳುಳ್ಳವ, ಶ್ರೀಪರಮಾತ್ಮನೆಂದು ತಾತ್ಪರ್ಯ.

**ವಿಶೇಷಾರ್ಥ :**–ಶ್ರೀದೇವೇರಿಗೆ ಪತಿಯಾದ ವಿಷ್ಣುರೂಪದಿಂದಲೂ, ಭೂದೇವೇ ರಿಗೆ ಪತಿಯಾದ ಬ್ರಹ್ಮರೂಪದಿಂದಲೂ, ದುರ್ಗಾದೇವೇರಿಗೆ ಪತಿಯಾದ ರುಪ್ರರೂಪ ದಿಂದಲೂ, ಹರುಷಕೊಡತಾನೆ ಮತ್ತು ವಿಷ್ಣುರೂಪದಿಂದ ಜಗತ್ಸೃಷ್ಟಿ ಮಾಡತಾನೆ. ವೇಧಮುಖ ಸುಮನಸಗಣ ಸಮಾರಾಧಿತ ಪದಾಂಭೋಜ ಎಂದರೆ, ಜೀವೋತ್ತಮರಾದ ಬ್ರಹ್ಮದೇವರು ಎಂತ ಅರ್ಥ ಮತ್ತು ಬ್ರಹ್ಮದೇವರೇ ಮೊದಲಾದ ಸುಮನಸದೇವತೆಗಳು ಎಂತಲೂ ಅರ್ಥ ಮತ್ತು ಸುಮನಸ ಎಂದರೆ, ಸು–ಸಮಿಾಚೀನವಾದ, ಮನಸ–ಮನಸ್ಸಿ ನಿಂದ ಯುಕ್ತರಾದ (ಭೇದ ಜ್ಞಾನ, ಸ್ವರೂಪದಲ್ಲಿವುಳ್ಳ ಯಾವತ್ತೂ ಮುಕ್ತಿಯೋಗ್ಯ ರನ್ನು ಗ್ರಹಣಮಾಡಬೇಕು), ಗಣ ಎಂದರೆ, ಈ ಯಾವತ್ತೂ ಮುಕ್ತಿಯೋಗ್ಯರ ಸಮೂಹದಿಂದ ಛಂದಾಗಿ ಧ್ಯಾನ, ಪೂಜಾದಿಗಳ ಮಾಡಿಸಿಕೊಳ್ಳಲ್ಪಟ್ಟ, ಪದಾಂಭೋಜ– ಪಾದಗಳೆಂಬ ಕಮಲಗಳುಳ್ಳವ ಎಂದರೆ, ಮನೋರಮತ್ವ ಮುಕ್ತಿಯೋಗ್ಯರಿಗೇನು, ಆರಾಧಕತ್ವ ರಮಾದೇವೇರಿಗೇನು, ಇಲ್ಲವೆ ಎಂದರೆ, ಉಭಯರಿಗೂ ಉಭಯವೂ ಉಂಟು, ಅದರಲ್ಲಿ ಕ್ರಮ ಪ್ರತ್ಯೇಕ. ದಾವದೆಂದರೆ, ರಮಾದೇವೇರಿಗೆ ತ್ರಿಗುಣಬಂಧವಿಲ್ಲದಕಾರಣ, ಸದಾ ಸರ್ವಕಾಲವೂ ಸ್ವರೂಪಸಂಬಂಧವಾದ ಹರುಷವನ್ನು ವ್ಯಕ್ತಮಾಡಿಕೊಡತಕ್ಕವ. ಈಕಿಗೆ ಪರಮಾತ್ಮನ ಆರಾಧನಿಮಾಡಿ ಬಂಧನಿವೃತ್ತಿಮಾಡಿಕೊಂಡು ಸ್ವರೂಪಸುಖ ವ್ಯಕ್ತಿ ಎಂಬುದು ಇಲ್ಲವಾದ್ದರಿಂದ, ಆರಾಧನಿ ಶಬ್ದ ರಮಾದೇವೇರಿಗೆ ಪ್ರಯೋಗವಿಲ್ಲ. ಬ್ರಹ್ಮಾದಿ ತೃಣಾಂತವರಿಗೂ ಆರಾಧನಿಮಾಡಿಸಿಕೊಂಡು, ಲಿಂಗಭಂಗಾನಂತರದಲ್ಲಿ, ಸ್ವರೂಪ ಸಂಬಂಧ ಹರುಷವನ್ನ ಕೊಡುವನಾಗತಾನೆ. ಆದ್ದರಿಂದ, ಮನೋರಮಶಬ್ದ ಬ್ರಹ್ಮ ದೇವರಿಗೆ ಪ್ರಯೋಗವಿಲ್ಲ. ಇದು ಕಾರಣ, ಉಭಯರಿಗೂ ಆರಾಧನಿಯು, ಮನೋರಮ ತ್ವವು ಉಂಟು. ಅದರಲ್ಲಿ ಮುಕ್ತ್ಯನಂತರ ಸದಾ ಸರ್ವಕಾಲದಲ್ಲಿ ಬ್ರಹ್ಮಾದಿಗಳಿಗೆ ಉಂಟು.

ರಮಾದೇವೇರಿಗೆ ಆ ನೇಮ ಎಂಬುದು ಇಲ್ಲ. ನಿತ್ಯಮುಕ್ತರಾದಪ್ರಯುಕ್ತ, ರಮಾ ದೇವೇರಿಗೆ ಹರುಷಕೊಡತಕ್ಕವ ಎಂಬೋಣದರಿಂದ ರಮಾದೇವೇರಿಗೆ ಅಸ್ವತಂತ್ರವೂ, ಪರಮಾತ್ಮಗೆ ಸ್ವತಂತ್ರವೂ ಸಿದ್ಧಿಸೋದಾಯಿತು. ಆದ್ದರಿಂದ, ಪರಮಾತ್ಮ ಲಕ್ಷ್ಮೀ ದೇವೇರಿಗಿಂತಲೂ ಉತ್ತಮ ಎಂತಲೂ, ರಮಾದೇವೇರು ಅವರರು ಎಂತಲೂ ತಾರತಮ್ಯ ಸಿದ್ಧಿಸೋದಾಯಿತು. ಮತ್ತು ಬ್ರಹ್ಮಾದಿಗಳು ಬಂಧನಿವೃತ್ತಿ ಉದ್ದಿಶ್ಯ ಪರಮಾತ್ಮನ್ನ ಆರಾಧನಿಮಾಡತಾರೆ. ರಮಾದೇವೇರು ಅಂಥ ಬಂಧನಿವೃತ್ತಿಗಾಗಿ ಆರಾಧನಿಮಾಡೋ ದಿಲ್ಲ. ಆಕಿಗೆ ಬಂಧವೂ ಇಲ್ಲ ಅಂದಮ್ಯಾಲೆ ರಮಾದೇವೇರಿಗೂ, ಬ್ರಹ್ಮಾದಿಗಳಿಗೂ ತಾರತಮ್ಯ ಸಿದ್ಧಿಸಿ ರಮಾದೇವೇರು ಉತ್ತಮ ಎಂತಲೂ, ತದನ್ಯರು, ಅವರರು ಎಂತಲೂ ತಾರತಮ್ಯ ಸಿದ್ಧಿಸೋದಾಯಿತು. ಮತ್ತು ಪರಮಾತ್ಮನ ವ್ಯಾಪ್ತಿ ಎಂಥಾ ದ್ದೆಂದರೆ, ಚರಾಚರ ಯಾವತ್ತೂ ಜಗತ್ತಿನಲ್ಲಿ ಒಳಗೂ ಹೊರಗೂ ವ್ಯಾಪ್ತನಾದವ. ಇಂಥಾ ವ್ಯಾಪ್ತಿ ರಮಾದೇವೇರಿಗೂ ಉಂಟು. ಪರಮಾತ್ಮನಲ್ಲಿ ಏನು ವೈಶಿಷ್ಟ್ಯವೆಂದರೆ, ಪರಮಾತ್ಮನ ರೂಪಗಳು ಅಣುರೂಪ ಒಂದು, ಮಹದ್ರೂಪ ಒಂದು, ಇವೆರಡರಿಂದ ವ್ಯಾಪ್ತನಾಗಿದ್ದಾನೆ. ಜಗದಂತರ್ಗತರೂಪ ಅಣುರೂಪ; ಬ್ರಹ್ಮಾಂಡದ ಹೊರಗಿನ ರೂಪ ಮಹದ್ರೂಪ ; ಅಂತೂ ಎರಡು ರೂಪಗಳು. ಈ ಎರಡು ಸ್ಥಳಗಳಲ್ಲಿ ರಮಾದೇವೇರ ವ್ಯಾಪ್ತಿ ಇಲ್ಲ. ತದ್ವ್ಯತಿರಿಕ್ತ ಸ್ಥಳಗಳಲ್ಲಿ ರಮಾದೇವೇರ ವ್ಯಾಪ್ತಿ ಉಂಟು, ಹ್ಯಾಂಗೆಂದರೆ, ಸರ್ವಜೀವಾಂತರ್ಗತರಾಗಿ ರಮಾದೇವೇರು ಅವಿಯೋಗಿನಿಯರಾಗಿ ಅಣುರೂಪರಾಗಿ ಇದ್ದಾರೆ. ಅಣುರೂಪರಾದ ರಮಾದೇವೇರಿಗೆ ತದಪೇಕ್ಷಯಾ ಅಣುರೂಪದಿಂದ ಪರಮಾತ್ಮ, ನಿಯಾಮಕನಾಗಿ ಬಿಂಬನಾಗಿದ್ದಾನೆ. ರಮಾದೇವೇರಿಗೆ ತಮ್ಮ ಅಣು ರೂಪಕ್ಕೆ ಬಿಂಬನಾದ ಪರಮಾತ್ಮನಲ್ಲಿ ವ್ಯಾಪ್ತಿಯಿಲ್ಲ. ತದ್ವತ್, ಬ್ರಹ್ಮಾಂಡ ನವಾವರಣ ದಾಟಿ ಅದರ ಆಚೇಲಿ ಕೂಡಾ ರಮಾದೇವೇರು ಸ್ಥೂಲರೂಪದಿಂದ ವ್ಯಾಪ್ತರಾ ಗಿದ್ದಾರೆ. ಆ ಸ್ಥೂಲರೂಪಕ್ಕೆ ಬಿಂಬನಾದ ಸ್ಥೂಲರೂಪಿ ಪರಮಾತ್ಮ, ಸ್ಥೂಲಾಕಾರ ದಿಂದ ಬಿಂಬನಾಗಿ ನಿಯಾಮಕನಾಗಿದ್ದಾನೆ. ಆದ್ದರಿಂದ, ಈ ಸ್ಥೂಲದಲ್ಲಿ ರಮಾದೇವೇರ ವ್ಯಾಪ್ತಿ ಇಲ್ಲ. ಅತ ಏವ, ಅಂತರ್ಬಹಿರ್ವ್ಯಾಪ್ತಿ ಪರಮಾತ್ಮಗೆ ಎಂಬ ವಿಶೇಷಣ ಪ್ರಯೋ ಗವು. ಆದರೆ, ರಮಾದೇವೇರು ನಿತ್ಯಾವಿಯೋಗಿನಿ ಎಂತ ಹೇಳತಕ್ಕ ಪ್ರಮಾಣಕ್ಕೆ ಗತಿ ಏನು ಅಂದರೆ, ಪರಮಾತ್ಮನ್ನ ಬಿಟ್ಟು ಇರೋದಿಲ್ಲ, ಅಂತ ಪ್ರಮಾಣ ಹೇಳತದೇ ಹೊರ್ತು, ಅಪರಿಚ್ಛಿನ್ನ ವ್ಯಾಪ್ತನಾದ ಪರಮಾತ್ಮಗೆ ಸದೃಶವಾಗಿ ಅಪರಿಚ್ಛಿನ್ನ ವ್ಯಾಪ್ತರು ಅಂತ ಹೇಳಲಿಲ್ಲ. ಗುಣತಃ ಅಸಮಳು, ಅಂತ ಹೇಳಿದ ಮ್ಯಾಲೆ ರಮಾವ್ಯಾಪ್ತಿ ಇಲ್ಲದಂಥಾ ಗುಣಗಳುಳ್ಳವ ಎಂತಲೇ ಸಿದ್ಧಿಸೋದಾಗತದೆ. ಗುಣಹೇಳಿದಕಡಿ ರೂಪಗಳು, ರೂಪ ಹೇಳಿದಕಡಿ ದೇಶ, ದೇಶ ಹೇಳಿದಕಡಿ ಕಾಲ, ಇಷ್ಟೂ ಹೇಳಿದಕಡಿ ಅವನ ಗುಣದ ಕಾರ್ಯ ಹೇಳಬೇಕು. ಆದ್ದರಿಂದ, ಪರಮಾತ್ಮ ಅನ್ಯಪ್ರದೇಶ ಇಲ್ಲದ ಸ್ವಾಖ್ಯಪ್ರದೇಶ ಉಳ್ಳವ ಎಂತ ತಾತ್ಪರ್ಯ. ಅತ ಏವ, ಅಂಥಾ ವ್ಯಾಪ್ತಿ ರಮಾದೇವೇರಿಗೆ ಇಲ್ಲ ಎಂತ ತಾತ್ಪರ್ಯವು, ಮತ್ತು ನಿರ್ಲಿಪ್ತ ಎಂದರೆ, ರಮಾದೇವೇರು ಆರಂಭಮಾಡಿ ತ್ರಿವಿಧ

ಜೀವರು ಪರಮಾತ್ಮನಿಂದ ಲಿಪ್ತರು ಎಂದರೆ, ಪರಮಾತ್ಮನ್ನ ಹೊಂದಿದವರು, ಪರಮಾತ್ಮ ನಾದರೋ ದಾರಿಂದಲೂ ಲಿಪ್ತನಲ್ಲ ಎಂತ ತಾತ್ಪರ್ಯ. ಗೋಧರಫಣಿವರಾತಪತ್ರ ಎಂದರೆ, ಗೋ ಎಂದರೆ, ಭೂಮಿ, (ಭೂಮಿ) ಧರಾ–ಪರ್ವತ. ಭೂಮಿ ಧರಿಸಿರುವ ಪರ್ವತ ವೆನ್ನತಕ್ಕ ಗೋವರ್ಧನಪರ್ವತ. ಇಂಥಾ ಗೋವರ್ಧನಪರ್ವತವನ್ನು, ಫಣಿವರ–ಸರ್ಪ ಶ್ರೇಷ್ಠರಾದ ಶೇಷದೇವರು, ಆತಪತ್ರ – ಛತ್ರಿಯಾಗಿದ್ದೋಪಾದಿಯಲ್ಲಿ, ಗೋವರ್ಧನ ಪರ್ವತವನ್ನು ಛತ್ರಿಯಾಗಿಮಾಡಿಕೊಂಡು, ಗೋಗೋಪರನ ಕಾಯಿದವನೆಂತ ತಾತ್ಪರ್ಯ. ಮತ್ತು, ಗೋ–ಭೂಮಿಯನ್ನ ಶಿರದಲ್ಲಿ ಧರಿಸಿದ ಶೇಷದೇವರೇ ಛತ್ರಿಯಾಗುಳ್ಳವ ಎಂತಲೂ ತಾತ್ಪರ್ಯವೆ. ಗೋವರ್ಧನಪರ್ವತವನ್ನು ಛತ್ರಿಯಾಗಿ ಮಾಡಿ ತನ್ನ ನಂಬಿದ ಗೋ ಗೋಪರನ್ನ ಹ್ಯಾಂಗೆ ರಕ್ಷಣೆಮಾಡಿದನೋ ತದ್ವತ್, ನಂಬಿದವರ ಸಂರಕ್ಷಣೆಮಾಡತಕ್ಕವ ಎಂತ ತಾತ್ಪರ್ಯವೆ. ದೇವರು ರಕ್ಷಿಸಬೇಕೆಂದರೆ, ಕೆಡಸತಕ್ಕವರು ದಾರೂ ಕಾಣೆ. ಹಾಗೆ ಕೆಡಸಬೇಕೆಂದರೆ, ರಕ್ಷಿಸತಕ್ಕವರೂ ದಾರೂ ಕಾಣೆ. ಪರಮಾತ್ಮ ಇಂಥಾ ಸರ್ವೋತ್ತಮ ನಾದವ, ನಿಷೇಧದೂರ–ತನ್ನ ಭಕ್ತರ ನಿಷೇಧ ಎಂದರೆ, ದೋಷಗಳನ್ನು, ದೂರ–ದೂರ ದಲ್ಲಿ ಓಡಿಸತಕ್ಕವ ಮತ್ತು, ನಿಷೇಧ–ನಿಷೇಧ್ಯರಾದ ದೈತ್ಯರಿಗೆ ದೂರನಾದವ. ಇಂದ್ರ ದೇವರು ವರ್ಷ ಸುರಿಸಿದ ದೋಷ ನಿಷೇಧಮಾಡಿ ದೂರಮಾಡಿದ್ದೇ ಸಾಕ್ಷಿ. ಪವಿತ್ರ ಕರ್ಮ ಎಂದರೆ, ಪಾಪರೂಪವಾದ ಲಿಂಗ, ಭಂಗವಾಗಿ ಪವಿತ್ರನಾಗಬೇಕಾದರೆ, ಭಕ್ತಿಪೂರ್ವಕವಾಗಿ ಪರಮಾತ್ಮನ ನಾಮೋಚ್ಚಾರಣ ಕರ್ಮವೇ ಪವಿತ್ರಕರ್ಮ, ಎಂತ ತಾತ್ಪರ್ಯ. ಸುಬೋಧ ಎಂದರೆ, ಸು–ಸಮೀಚೀನವಾದ ಜ್ಞಾನದಿಂದ, ಬೋಧ ಎಂದರೆ ಮನಸ್ಸಿಗೆ ಬೋಧನಾಗತಕ್ಕವ. ಸುಖಮಯಗಾತ್ರ–ಸುಖಪ್ರಾಚುರ್ಯದಿಂದ ಸ್ವರೂಪ ದೇಹವುಳ್ಳವರು ಮುಕ್ತಿಯೋಗ್ಯರೇವೇ. ಪರಮಪವಿತ್ರ – ಅತ್ಯಂತ ಪವಿತ್ರಗಳಾದ, ಸುಚರಿತ್ರ – ಸು–ನಿರ್ದೋಷಗಳಾದ, ಚರಿತ್ರ–ಪರಮಾತ್ಮನ ವ್ಯಾಪಾರ ಚರಿತ್ರೆಗಳ ಕೊಂಡಾಡಿ ಸದ್ಗತಿ ಐದತಾನೆ. ತದನ್ಯರಿಗೆ ಈ ಭಾಗ್ಯವಿಲ್ಲ. ಆದ್ದರಿಂದ, ಇಂಥಾ ಮಹಿಮೋಪೇತನಾದ ಪರಮಾತ್ಮ ಇವ ಒಬ್ಬನೇ ಹೊರ್ತು, ಅನ್ಯರು ದಾರೂ ಇಲ್ಲ. ಅತ ಏವ, ವಿಷ್ಣು ಸರ್ವೋತ್ತಮನೆಂದು ತಿಳಿಯಬೇಕು. ಮ್ಯಾಲಿನ ವಿಶೇಷಣಪದ ಪರಮಾತ್ಮಗೂ ಸಮನ್ವಯಮಾಡಿಕೋಬೇಕು.

**ನಿತ್ಯನಿರ್ಮಲ ನಿಗಮವೇದ್ಯೋ ।**
**ತ್ಪತ್ತಿಸ್ಥಿತಿಲಯದೋಷವರ್ಜಿತ ।**
**ಸ್ತುತ್ಯ ಪೂಜ್ಯ ಪ್ರಸಿದ್ಧ ಮುಕ್ತಾಮುಕ್ತಗಣಸೇವ್ಯ ॥**
**ಸತ್ಯಕಾಮ ಶರಣ್ಯ ಶಾಶ್ವತ ।**
**ಭೃತ್ಯವತ್ಸಲ ಭಯನಿವಾರಣ ।**
**ಅತ್ಯಧಿಕಸಂಪ್ರಿಯತಮ ಜಗನ್ನಾಥ ಮಾಂ ಪಾಹಿ ॥ ೨ ॥**

ಇನ್ನೂ ದೇವರ ಸ್ತೋತ್ರವೇ ಹೇಳತಾರೆ.

ನಿತ್ಯ – ಅನಾದಿನಿತ್ಯನಾದ, ನಿರ್ಮಲ – ದೋಷರಹಿತಗಳಾದ, ನಿಗಮವೇದ್ಯ – ಅನಂತವೇದಗಳಿಂದ ಸ್ತುತ್ಯನಾದವ, ಅಧಿಕಾರಿಗಳಿಗೆ ವೇದಮೂಲಕವಾಗಿ ಸರ್ವೋತ್ತಮ ನೆಂದು ವೇದ್ಯನಾದವ, ಉತ್ಪತ್ತಿ ಸ್ಥಿತಿ ಲಯ–ಜನನ, ಸ್ಥಿತಿ, ಮರಣಗಳೆಂಬೋ, ದೋಷ ವರ್ಜಿತ – ದೋಷದಿಂದರಹಿತನಾದವ, ಸ್ತುತ್ಯ ಪೂಜ್ಯ – ಸರ್ವರಿಂದಲೂ ಸ್ತೋತ್ರ, ಪೂಜಾದಿಗಳ ಮಾಡಿಸಿಕೊೋತಕ್ಕವ, ಪ್ರಸಿದ್ಧ–ಮುಕ್ತಿಯೋಗ್ಯರಿಂದ ಪ್ರಸಿದ್ಧನಾದವ, ಮುಕ್ತಾಮುಕ್ತಗಣಸೇವ್ಯ–ಮುಕ್ತರಾದ ಬ್ರಹ್ಮಾದಿ ತೃಣಾಂತ ಜೀವರಿಂದಲೂ, ಅಮುಕ್ತ ರಾದ ಬ್ರಹ್ಮಾದಿ ತೃಣಾಂತ ಜೀವರಿಂದಲೂ ಸೇವ್ಯನಾದವ (ಗಣಶಬ್ದ ಸಮೂಹವಾಚ ಕವು), ಸತ್ಯಕಾಮ–ಸತ್ಯವಾದ ಸಂಕಲ್ಪವುಳ್ಳವನು, ಶರಣ್ಯ–ಅನ್ಯರಿಂದ ಶರಣುಮಾಡಿಸಿ ಕೋತಕ್ಕವ. ತಾನು ಅನ್ಯರಿಗೆ ಶರಣಾಗತನಾದವನಲ್ಲ. ಭೃತ್ಯ–ಸ್ವಾಮಿಭೃತ್ಯನ್ಯಾಯ ದಿಂದ ಭಜಿಸಿದ ಭೃತ್ಯರಲ್ಲಿ, ಶಾಶ್ವತ–ಶಾಶ್ವತವಾದ, ವತ್ಸಲ–ವಾಂಛಲ್ಯವುಳ್ಳವ, ಭಯ ನಿವಾರಣ–ಭಕ್ತರ ಭಯ ಪರಿಹಾರಮಾಡತಕ್ಕವ, ಅತ್ಯಧಿಕ ಸಂಪ್ರಿಯತಮ–ರಮಾ ದೇವೇರಿಗೂ, ದೇವತೆಗಳಿಗೂ ಅತ್ಯಧಿಕ ಪ್ರಿಯತಮನಾದವ. ಇಂಥಾ ಪರಮಾತ್ಮ, ಜಗನ್ನಾಥ–ಚರಾಚರ ಸರ್ವಜಗತ್ತಿಗೆ ಸ್ವಾಮಿಯಾದ, ಸರ್ವಾಭೀಷ್ಟ ಕೊಡತಕ್ಕ ಶ್ರೀ ನಾರಾಯಣದೇವರೇ, ಮಾಂ ಪಾಹಿ–ನನ್ನ ಸಂರಕ್ಷಣೆ ಮಾಡೋವನಾಗು ಎಂತ ಶ್ರೀ ಪರಮಾತ್ಮನ್ನ ಪ್ರಾರ್ಥನ ಮಾಡೋವರಾಗಿದ್ದಾರೆ.

**ವಿಶೇಷಾರ್ಥ :–** ನಿಗಮವೇದ್ಯ–ವೇದದಿಂದಲೇ ತಿಳಿಸಿಕೊೋತಕ್ಕವನೇ ಹೊರತು ಅನ್ಯವಿಷಯದಿಂದ ತಿಳಿಸಿಕೊೋತಕ್ಕವನಲ್ಲ. ಮತ್ತು ನಿಗಮವೇದ್ಯ ಎಂದರೆ ಅನಂತವೇದ ಗಳಿಂದಲೂನೂ, ವೇದ್ಯ–ಸಾಕಲ್ಯೇನ ತಿಳಿಸಿಕೊಂಬೋದಕ್ಕೆ ಸಾಧ್ಯವಲ್ಲದವ ಮತ್ತು ಉತ್ಪತ್ತಿ, ಸ್ಥಿತಿ, ಲಯ, ದೋಷವರ್ಜಿತ ಎಂದರೆ, ಪಾಂಚಭೌತಿಕದೇಹದಿಂದ ಉತ್ಪತ್ತಿ ಯಾಗಲೀ, ಅದೇ ದೇಹದಿಂದ ಕೆಲವುಕಾಲ ಇರೋಣವಾಗಲೀ, ಅದೇ ದೇಹವನ್ನು ಬಿಟ್ಟು ಪುನಶ್ಚ ದೇಹಾಂತರ ಐದೋಣಾಗಲೀ ಈ ದೋಷಗಳು ಇಲ್ಲದವ. ಮತ್ತು ರಮಾದೇವೇರ ಜ್ಞಾನ ಪರಮಾತ್ಮನ ವಿಷಯದಲ್ಲಿ ನೂತನ ನೂತನ ಕಾಣತಕ್ಕ ಜ್ಞಾನ ಉತ್ಪತ್ತಿ. ಅದು ಕೆಲವು ಕಾಲ ಸ್ಥಿತಿಯಾಗಿರೋಣ, ಅನಂತರ ಲಯವಾಗೋಣ, ಇಂಥಾ ಉತ್ಪತ್ತಿ, ಸ್ಥಿತಿ, ಲಯದಿಂದ ಯುಕ್ತವಾದ ಜ್ಞಾನ, ಪರಮಾತ್ಮನ ವಿಷಯದಲ್ಲಿ ರಮಾದೇವೇರಿಗೆ ಉಂಟು. ಯೋಗ್ಯತಾನುಸಾರ ತದನ್ಯರಿಗೆ ಉಂಟು. ಪರಮಾತ್ಮನಾದರೋ, ಲಕ್ಷ್ಮೀ ಆರಂಭ ಮಾಡಿ ತೃಣಾಂತ ಜೀವರ ಯೋಗ್ಯತಾ ಗುಣಗಳ ತಿಳಕೊಂಬೋ ವಿಷಯದಲ್ಲಿ ಪರಮಾತ್ಮನ ಜ್ಞಾನದಲ್ಲಿ, ಉತ್ಪತ್ತಿ ಸ್ಥಿತಿ ಲಯಾದಿಗಳು ಇಲ್ಲದಲೇ ನಿತ್ಯವ್ಯಕ್ತವಾದ ಜ್ಞಾನವುಳ್ಳವ ಎಂತ ತಾತ್ಪರ್ಯ ಮತ್ತು ಪರಮಾತ್ಮನ್ನ ಪ್ರಾಣಿಗಳು ವೇದದಿಂದಲೇ ತಿಳಕೊಂಡಂತೆ ತ್ರಿವಿಧಜೀವರನ್ನೂ ಪರಮಾತ್ಮ ವೇದದಿಂದಲೇ ತಿಳಿಯಬೇಕಾದ್ದಿಲ್ಲ. ಸ್ವತಃ ತಿಳಿಯತಕ್ಕವ ಎಂತಲೂ ತಾತ್ಪರ್ಯ.

**ಪರಮಪುರುಷನ ರೂಪಗುಣವನು ।**
**ಸರಿಸಿ ಕಾಂಬಳು ಪ್ರವಹದಂದದಿ ।**
**ನಿರುಪಮಳು ನಿರ್ದುಃಖ ಸುಖ ಸಂಪೂರ್ಣಳೆನಿಸುವಳು ॥**
**ಹರಿಗೆ ಧಾಮತ್ರಯಳೆನಿಸಿ ಆ ।**
**ಭರಣ ವಸನಾಯುಧಗಳಾಗಿ ।**
**ದ್ದರಿಗಳನು ಸಂಹರಿಸುವಳು ಅಕ್ಷರಳೆನಿಸಿಕೊಂಡು ॥ ೩ ॥**

ಲಕ್ಷ್ಮೀದೇವೇರ ತಾರತಮ್ಯವನ್ನ ಹೇಳತಾರೆ.

ಪರಮಪುರುಷನ–ಸರ್ವೋತ್ತಮನಾದ ಪುರುಷನಾಮಕ ಶ್ರೀ ನಾರಾಯಣದೇವರ, ರೂಪಗುಣವ – ರೂಪವೇನು, ಗುಣಗಳೇನು, ಇವುಗಳನ್ನ, ಅನುಸರಿಸಿ – ತಮ್ಮ ಯೋಗ್ಯತಾಕ್ಕೆ ಅನುಸರಿಸಿ, ನಿರುಪಮಳು–ಪರಮಾತ್ಮನ ತರುವಾಯ ನಿರುಪಮರಾದ, ನಿರ್ದುಃಖ–ದುಃಖಕರವಾದ ಇನ್ನೂ ಅಜ್ಞಾನಪ್ರದವಾದ ಲಿಂಗದೇಹದಿಂದ ಅನಾದಿಕಾಲ ದಿಂದಲೂ ರಹಿತರಾಗಿ, ತಜ್ಜನಿತ ದುಃಖಾದಿಗಳಿಂದ ರಹಿತರಾದ ನಿತ್ಯಮುಕ್ತರಾದ ರಮಾ ದೇವೇರು, ಪ್ರವಹದಂದದಿ–ಪರಮಾತ್ಮನ ಗುಣರೂಪಗಳ ಪ್ರವಾಹದೋಪಾದಿಯಲ್ಲಿ, ಕಾಂಬಳು–ಕಾಣೋವರಾಗತಾರೆ. ಎಂದರೆ, ಗಂಗಾಪ್ರವಾಹ ನಿಲ್ಲದೇ ಓಡತಾ ಪರಸ್ಪರ ಅವಿಚ್ಛಿನ್ನವಾಗಿ ಇರುತ್ತದೆ. ತದ್ವತ್, ಆದ್ಯಂತವಿಲ್ಲದ ಶ್ರೀಪರಮಾತ್ಮನ ಅನಂತಾನಂತ ರೂಪಗಳ, ಗುಣಗಳ, ಪ್ರವಾಹದೋಪಾದಿಯಲ್ಲಿ ಅಪರಿಚ್ಛಿನ್ನವಾಗಿ ನಾನಾ ವಿಚಿತ್ರತರ ಗಳಾದ ಆದ್ಯಂತಗಳು ಇಲ್ಲದೆ ಪ್ರವಹಿಸತಾ ಇರತಕ್ಕ ಗುಣರೂಪಗಳ ಕಾಣೋವರಾಗತಾರೆ. ಇನ್ನೂ, ಸುಖಸಂಪೂರ್ಣಳೆನಿಸುವಳು–ಪರಮಾತ್ಮನಪೇಕ್ಷಯಾ, ಬ್ರಹ್ಮಾದಿ ಜೀವರುಗಳಿ ಗಿಂತಲೂ ಅಧಿಕವಾದ ಜ್ಞಾನಾನಂದಾದಿಗಳಿಂದ ಛಂದಾಗಿ ಪೂರ್ಣರು ಎಂತ ಕರಿಸೋವ ರಾಗತಾರೆ. ಈ ರಮಾದೇವೇರು, ಹರಿಗೆ–ತಮ್ಮ ಪತಿಯಾದ ಶ್ರೀಪರಮಾತ್ಮಗೆ, ಧಾಮ ತ್ರಯಳೆನಿಸಿ–ಶ್ವೇತದ್ವೀಪ, ಅನಂತಾಸನ, ವೈಕುಂಠ ಈ ಮೂರು ಸ್ಥಳಗಳಲ್ಲಿ ತದ್ರೂಪ ರಾಗಿ ಲಕ್ಷ್ಮೀದೇವೇರು ಸಾಕ್ಷಾತ್ತಾಗಿ ತಾವೇ ದೇವರಿಗೆ ಮನಿರೂಪವಾಗಿ ಇದ್ದಾರೆ. ಇನ್ನೂ, ಆಭರಣ–ಈ ಧಾಮತ್ರಯಗತ ತಮ್ಮ ಪತಿಯಾದ ಪರಮಾತ್ಮಗೆ ಧರಿಸತಕ್ಕ ಸರ್ವಾಭರಣವೇನು, ವಸನ–ಉಡತಕ್ಕ, ಹೊದಿಯತಕ್ಕ ನಾನಾ ವಿಚಿತ್ರವಾದ ಪೀತಾಂಬ ರಾದಿ ವಸ್ತ್ರಗಳೇನು, ಆಯುಧಗಳಾಗಿ–ಧರಿಸತಕ್ಕ ನಾನಾವಿಧವಾದ ಆಯುಧಗಳೇನು, ತಾವೇ ಆಗಿ, ಇದ್ದು–ಈ ಪ್ರಕಾರ ಸರ್ವವೂ ತಾವೇ ಆಗಿದ್ದು, ಶ್ರೀಪರಮಾತ್ಮನ ಸೇವಾ ಮಾಡತಾ, ಅಕ್ಷರಳೆನಿಸಿಕೊಂಡು–ನಾಶಯುಕ್ತವಾದ ದೇಹದಿಂದ ಅನಾದ್ಯನಂತಕಾಲ ದಿಂದಲೂ ರಹಿತರು ಎಂತ ಕರಿಸಿಕೊಂಡು, ಅರಿಗಳನು ಸಂಹರಿಸುವಳು–ದುರ್ಗಾರೂಪ ದಿಂದ, ಭಗವಂತನಲ್ಲಿ ದ್ವೇಷಮಾಡತಕ್ಕ ಲಿಂಗಭಂಗರಾದ ದೈತ್ಯರಿಗೆ ಮಹಾದುಃಖಗಳ ಕೊಡುತ್ತ, ಸಲಿಂಗರಾದ ದೈತ್ಯರ ಸಂಹಾರಮಾಡತಾ ಇರತಾರೆಂತ ತಾತ್ಪರ್ಯ.

**ಈತಗಿಂತಾನಂತಗುಣದಲಿ ।**
**ಶ್ರೀತರುಣಿ ತಾ ಕಡಿಮೆಯೆನಿಸಳು ।**
**ನಿತ್ಯಮುಕ್ತಳು ನಿರ್ವಿಕಾರಳು ತ್ರಿಗುಣವರ್ಜಿತಳು ॥**
**ಧೌತಪಾಪ ವಿರಿಂಚಿ ಪವನರ ।**
**ಮಾತೆಯೆನಿಪ ಮಹಾಲಕುಮಿ ವಿ ।**
**ಖ್ಯಾತಳಾಗಿಹಳೆಲ್ಲಕಾಲದಿ ಶ್ರುತಿ ಪುರಾಣದೊಳು ॥ ೪ ॥**

ಇನ್ನೂ ಲಕ್ಷ್ಮೀದೇವೇರ ತಾರತಮ್ಯವನ್ನೇ ಹೇಳತಾರೆ.

ಈತಗಿಂತ–ಶ್ರೀ ಪರಮಾತ್ಮನಿಗಿಂತಲೂ, ಶ್ರೀತರುಣಿ ತಾ – ಕಾಂತಿಸಂಪನ್ನರಾದ ನಿತ್ಯಯೌವನೆಯರಾದ ಪರಮಾತ್ಮನ ಪತ್ನಿಯಾದ ಲಕ್ಷ್ಮೀದೇವೇರು, ತಾವು, ಅನಂತಗುಣ ದಲಿ–ಅನಂತಗುಣದಿಂದ, ಕಡಿಮೆಯೆನಿಸಳು–ಕೊರತೆ ಎಂತ ಎನಿಸೋವರಾಗಿದ್ದಾರೆ. ವಿಜಾತ್ಯಧಮರು ಎಂದರೆ, ಪರಮಾತ್ಮನಲ್ಲಿ ಸಜಾತಿ ವಿಜಾತಿ ಗುಣಗಳು ಅವೆ. ಸಜಾತಿ ಗುಣಗಳ ಕಾಣೋ ವಿಷಯದಲ್ಲಿ ರಮಾದೇವೇರಿಗೆ ಆಲೋಚನಿ ಇಲ್ಲ, ಅನಾಲೋಚನಿ ಯಿಂದ ಕಾಣತಾರೆ. ತಮ್ಮಲ್ಲಿ ಇಲ್ಲದೇ ಇರತಕ್ಕ ವಿಜಾತಿಗುಣಗಳು ಪರಮಾತ್ಮನಲ್ಲಿ ಅವಸ್ಥಾರೂಪದಿಂದ ಇರೋವಾಗಿ ಅವೆ. ಅವುಗಳೊಳಗೆ ಅನಂತಗುಣಗಳ ಪ್ರವಾಹತ್ವೇನ ನೂತನ ನೂತನವಾಗಿ ದೃಷ್ಟಿಯಿಂದ ನೋಡತಾರೆ. ಇದರ ಆಚೇಲಿ ನೋಡೋ ಯೋಗ್ಯತಿ ಇಲ್ಲ. ಆದ್ದರಿಂದ ಈ ವಿವಕ್ಷಯಾ ಅನಂತಗುಣಕ್ಕೆ ನೀಚರು. ವಿಜಾತಿಯಾದ, ತಮ್ಮಲ್ಲಿ ಇಲ್ಲದೇ ತಾವು ಕಾಣತಕ್ಕ ಅನಂತಗುಣಗಳಿಗೆ ಅಧಮರು ಎಂತ ತಿಳಿಯಬೇಕು. ಅಪರಿಚ್ಛಿನ್ನ ಗುಣಗಳು ಹಿಡಿದು ತಾರತಮ್ಯ ಹೇಳಿದ್ದಲ್ಲ. ಇದರ ವಿವರ ಮುಂದಿನ ಶ್ಲೋಕ ದಲ್ಲಿ ವಿವರಿಸುವರು. ನಿತ್ಯಮುಕ್ತಳು–ಅನಾದ್ಯನಂತಕಾಲದಿಂದಲೂ ಬಂಧನರಹಿತರು. ಪ್ರಮಾಣ :– 'ಶಯ್ಯಾಸನಂ ಪಾದುಕೇ ಚ ಆತಪತ್ರಮಭೂದ್ರಮಾ । ನಿತ್ಯಮುಕ್ತಾ ದೋಷದೂರಾ ತ್ವದೂನಾಧಿಕಸದ್ಗುಣಾ ॥ ತ್ವತ್ಪಾದಪೂಜನೇ ನಿತ್ಯಂ ಬದ್ಧಕಂಕಣ ಭೂಷಿತಾ ॥' ಇತಿ ಆದಿತ್ಯಪುರಾಣೇ. ನಿರ್ವಿಕಾರಳು–ಪ್ರಾಕೃತಗುಣತ್ರಯದ ವಿಕಾರ ದಿಂದ ಶೂನ್ಯರು. ತ್ರಿಗುಣವರ್ಜಿತಳು – ಅನಾದ್ಯನಂತಕಾಲದಿಂದಲೂ ತ್ರಿಗುಣಾತ್ಮಕ ಲಿಂಗದೇಹದಿಂದ ವರ್ಜಿತರು, ಧೌತಪಾಪ–ಅಸುರಾವೇಶಾದಿ ಅಜ್ಞಾನಾದಿ ಪಾಪವರ್ಜಿತ ರಾದ, ವಿರಿಂಚಿ ಪವನರ ಮಾತೆಯು–ಬ್ರಹ್ಮವಾಯುಗಳ ತಾಯಿಯಾದವರು, ಎನಿಪ ಮಹಾಲಕುಮಿ–ಈ ಪ್ರಕಾರ ಎನಿಸತಕ್ಕ ಮಹಾಲಕ್ಷ್ಮೀದೇವಿ, ಶ್ರುತಿಪುರಾಣದೊಳು– ವೇದ, ಶ್ರುತಿಗಳಲ್ಲಿ, ಪುರಾಣಗಳಲ್ಲಿ ಇಂಥಾ ಮಹಾತ್ಮರೆಂದು, ಎಲ್ಲ ಕಾಲದಿ–ಸದಾ ಸರ್ವ ಕಾಲದಲ್ಲಿ, ವಿಖ್ಯಾತಳಾಗಿಹಳು–ಪ್ರಸಿದ್ಧರಾಗಿ ಇದ್ದಾರೆ. ರಮಾದೇವೇರು ಅನಂತಗುಣ ದಿಂದ ನೀಚರು ಎಂತ ತಾತ್ಪರ್ಯ.

**ಕಮಲಸಂಭವ ಪವನರೀರ್ವರು ।**
**ಸಮರು ಸಮವರ್ತಿಗಳು ರುದ್ರಾ ।**
**ದ್ಯಮರಗಣಸಂಸೇವಿತ ಪರಬ್ರಹ್ಮನಾಮಕರು ॥**
**ಯಮಳರಿಗೆ ಮಹಲಕುಮಿ ತಾನು ।**
**ತ್ತಮಳು ಕೋಟಿ ಸಜಾತಿಗುಣದಿಂ ।**
**ದಮಿತ ಸುವಿಜಾತ್ಯಧಮರೆನಿಪರು ಬ್ರಹ್ಮವಾಯುಗಳು ॥ ೫ ॥**

ಬ್ರಹ್ಮ, ವಾಯುಗಳ ತಾರತಮ್ಯ ಹೇಳತಾರೆ.

ಕಮಲಸಂಭವ–ಬ್ರಹ್ಮದೇವರು, ಪವನರು–ವಾಯುದೇವರು, ಈರ್ವರು–ಇವರಿಬ್ಬರು, ಸಮರು – ಕಿಂಚಿತ್ ನ್ಯೂನಾಧಿಕ್ಯಸ್ಥಿತಿಕಾಲದಲ್ಲಿದ್ದಕಾಲಕ್ಕೂ ಸ್ವರೂಪತಃ ಸಮಾನರು, ಸಮವರ್ತಿಗಳು–ಸಮಾನರಾಗಿರತಕ್ಕವರು. ಅಂದರೆ, ಭಗವದ್ಗುಣೋಪಾಸನದಲ್ಲಿ ಸಮಾನರಾಗಿ ವರ್ತಿಸತಕ್ಕವರು. ಸ್ಪಷ್ಟತ್ವದಲ್ಲಿ ಕಿಂಚಿತ್‌ನ್ಯೂನತೆ ವಾಯುದೇವರಿಗೆ ಇರೋಣದರಿಂದ ಸ್ವಲ್ಪ ಕಡಿಮೆ ಎಂತ ಅರ್ಥ, ರುದ್ರಾದ್ಯಮರಗಣಸಂಸೇವಿತ–ರುದ್ರನೇ ಆದಿಯಾಗಿ ಸಮಸ್ತ ದೇವತೆಗಳಿಂದ ಛಂದಾಗಿ ಸೇವಿತರಾದವರು, ಪರಬ್ರಹ್ಮನಾಮಕರು– ತಿರೋಧಾನವಿಲ್ಲದ ಶ್ರೇಷ್ಠವಾದ ಪರಬ್ರಹ್ಮನ ಜ್ಞಾನವುಳ್ಳವರಾದ್ದರಿಂದ ಪರಬ್ರಹ್ಮರೆಂದು ನಾಮಾಂಕಿತರಾದವರು, ಯಮಳರಿಗೆ–ಬ್ರಹ್ಮವಾಯುಗಳಾದ ಈ ಉಭಯರಿಗೆ, ಮಹಲಕುಮಿ ತಾನು–ಮಹಾಲಕ್ಷ್ಮಿಯಾದ ತಾವು, ಕೋಟಿ–ಕೋಟಿಸಂಖ್ಯಾಕವಾದ, ಗುಣದಿಂದ–ಗುಣಗಳಿಂದ, ಉತ್ತಮಳು–ಉತ್ತಮರು, ಎಂದರೆ, ರಮಾದೇವೇರು ಪರಮಾತ್ಮನಗಿಂತಲೂ ಅನಂತಗುಣದಿಂದ ನೀಚರು, ಬ್ರಹ್ಮವಾಯುಗಳಿಗಿಂತಲೂ ಕೋಟಿವಿಜಾತಿಗುಣದಿಂದ ಅಧಿಕರು, ಸಜಾತಿ–ಬ್ರಹ್ಮವಾಯುಗಳಲ್ಲಿರತಕ್ಕ ಸಜಾತಿ ಗುಣಗಳಿಗೆ ಸಮಾನರು, ಸುವಿಜಾತಿ–ಸಮೀಚೀನಗಳಾದ ವಿಜಾತೀಯವಾದ, ಅಧಮರೆನಿಪರು–ರಮಾದೇವೇರಲ್ಲಿರತಕ್ಕ ಕೋಟಿವಿಜಾತಿಗುಣಗಳಿಂದ ಅಧಮರೆನಿಸಿಕೊಳ್ಳುವರು. ಬ್ರಹ್ಮವಾಯುಗಳು– ಈ ಬ್ರಹ್ಮವಾಯುಗಳು ರಮಾದೇವೇರಿಂದ ಕೋಟಿಗುಣಾಧಮರು, ಅಮಿತ–ಪರಮಾತ್ಮನಿಗಿಂತಲೂ ಅಮಿತಗುಣದಿಂದ ನೀಚರೆಂದು ತಾತ್ಪರ್ಯ. ಸಜಾತಿ, ವಿಜಾತಿ ಎಂದರೆ, ದೃಷ್ಟಾಂತ :– ವೇದಗಳು ನಾಲ್ಕು ; ಇದರಲ್ಲಿ ಎರಡು ವೇದಗಳ ಒಬ್ಬ ಓದೋವನಾಗಿದ್ದಾನೆ, ನಾಲ್ಕು ವೇದಗಳ ಒಬ್ಬ ಓದೋವನಾಗಿದ್ದಾನೆ. ಅದರಲ್ಲಿ ಎರಡು ವೇದಗಳು ಉಭಯರಲ್ಲಿ ಸಜಾತೀಯವಾಗಿ ಸಮವಾಯಿತು. ಉಳಿದ ಎರಡು ವೇದಗಳು ವಿಜಾತೀಯವಾಗಿ ಎರಡು ಓದಿದವ, ನಾಲ್ಕು ವೇದಗಳ ಓದಿದವಗಿಂತಲೂ, ಎರಡು ವೇದದಿಂದ ನ್ಯೂನ ಎಂತ ಕರಿಸತಾನೆ. ಇದೇ ಸಜಾತಿ, ವಿಜಾತಿ ಎಂಬುದೂನು ; ಸಜಾತಿಯಿಂದ ಸಮರು, ವಿಜಾತಿಯಿಂದ ಅಸಮರು. ಅಂದರೆ, ಅಧಮರು ಎಂಬುದಕ್ಕೆ ಇದು ತಾತ್ಪರ್ಯ. ಈ ರೀತ್ಯಾ ಗುಣತಾರತಮ್ಯವೆಂದು ತಿಳಿಯಬೇಕು. ಇನ್ನೊಂದು ದೃಷ್ಟಾಂತ :– ಹತ್ತು ವರಹ ಬೆಲೆ ಆಗತಕ್ಕ ರತ್ನಗಳು ನಾಲ್ಕು ನನ್ನಲ್ಲಿ ಇರೋವಾಗಿ

ಆವೆ. ನನಗಿಂತಲೂ ಭಾಗ್ಯವಂತನಾದ, ಶ್ರೇಷ್ಠನಾದವನಲ್ಲಿ ಹತ್ತು ವರಹ ಬೆಲಿ ಆಗತಕ್ಕ ನನ್ನಲ್ಲಿರತಕ್ಕ ರತ್ನಗಳಿಗೆ ಸದೃಶವಾದ ನಾಲ್ಕು ರತ್ನಗಳೇನು, ಇಪ್ಪತ್ತು ವರಹ ಬಾಳತಕ್ಕ ರತ್ನಗಳು ನಾಲ್ಕವೆ. ಅಂತು ಸ್ವಾವರರಿಗಿಂತಲೂ ಸ್ವೋತ್ತಮರಲ್ಲಿ ಮೂರು ವಿಧ ರತ್ನ ಗಳು ಇರೋವಾಗಿವೆ. ಸರ್ವರೂ ಯೋಗ್ಯತಾನುಸಾರ ರತ್ನಪರೀಕ್ಷೆ ಬಲ್ಲವರೇ, ಅವರಲ್ಲಿ ತಾರತಮ್ಯ ಉಂಟು. ಅವರನಾದ ನಾನು ಹತ್ತು ವರಹ ಬಾಳತಕ್ಕ ರತ್ನವ್ಯಾಪಾರದವ. ಅಂಥ ರತ್ನಗಳ ಪರೀಕ್ಷಾ, ಆಲೋಚನಿ ಇಲ್ಲವೆ, ಅದರ ಇಯತ್ತ (ದರ್ಜೆ) ಹೇಳಬಲ್ಲೆ. ಎಲ್ಲಿ ಇದ್ದದ್ದು ಅಂದರೆ, ನನ್ನಲ್ಲಿರತಕ್ಕ ರತ್ನಗಳಿಗೆ ಸದೃಶವಾದ ರತ್ನಗಳು, ನನಗಿಂತಲೂ ಸ್ವೋತ್ತಮರಲ್ಲಿರತಕ್ಕ ರತ್ನಗಳೆಂತ ತಾತ್ಪರ್ಯ. ನನ್ನಲ್ಲಿಲ್ಲದ, ಸ್ವೋತ್ತಮರಲ್ಲಿರತಕ್ಕ ವಿಜಾತೀಯವಾದ ಇಪ್ಪತ್ತು ವರಹ ಬಾಳತಕ್ಕ ರತ್ನಗಳ ಬೆಲಿ ನಿರ್ಧಾರಮಾಡೋದಕ್ಕೆ ವಿಜಾತಿ ರತ್ನಗಳಾದ್ದರಿಂದ ನೋಡಿ, ಆಯಾ ರತ್ನಗತ ವಿಶೇಷಗಳ ಕಂಡು ಆಶ್ಚರ್ಯ ಪಡೋವನಾಗತೇನೇ ಹೊರ್ತು, ಬೆಲಿ ಅಂತ (ಪರಿಮಿತಿ) ಕಾಣಲಾರೆ. ನೋಡೋದಕ್ಕೆ ಕೂಡ ಯೋಗ್ಯವಲ್ಲದ, ಸ್ವೋತ್ತಮರಲ್ಲಿರತಕ್ಕ ನಾಲ್ವತ್ತು ವರಹ ಬೆಲಿ ಬಾಳತಕ್ಕ ಮೂಲ ಧನ, ಸ್ವೋತ್ತಮರಲ್ಲಿ ಅದೆ ಎಂಬುದು ಶ್ರವಣತಾಡಿತವೇ ಹೊರ್ತು, ನೋಡೋದಕ್ಕೆ ಕೂಡ ಯೋಗ್ಯವಲ್ಲದ ರತ್ನಗಳು ಬ್ಯಾರೆ ಇರೋವಾಗಿವೆ. ಈ ದೃಷ್ಟಾಂತದಿಂದ ತೃಣಜೀವ ಆರಂಭಮಾಡಿ ಪರಮಾತ್ಮನವರಿಗೂ ಸಜಾತಿ, ವಿಜಾತಿ, ಉಭಯಾತೀತ ಜಾತಿ ಗುಣ ಗಳಿವೆ. ಅದರಲ್ಲಿ, ಅಸ್ವತಂತ್ರರಲ್ಲಿ ಅವಧಿಯುಕ್ತಗುಣಗಳು, ಪರಮಾತ್ಮನಲ್ಲಿ ಅವಧಿ ಇಲ್ಲದ ಗುಣಗಳೆಂತ ತಿಳಿಯಬೇಕು.

**ಪತಿಗಳಿಂದ ಸರಸ್ವತೀ ಭಾ ।**
**ರತಿಗಳಧಮರು ನೂರುಗುಣ ಪರಿ ।**
**ಮಿತ ವಿಜಾತ್ಯವರರು ಬಲಜ್ಞಾನಾದಿಗುಣದಿಂದ ॥**
**ಅತಿಶಯುಳು ವಾಗ್ದೇವಿ ಶ್ರೀ ಭಾ ।**
**ರತಿಗೆ ಪದದ ಪ್ರಯುಕ್ತ ವಿಧಿ ಮಾ ।**
**ರುತರವೋಲ್ ಚಿಂತಿಪುದು ಸದ್ಭಕ್ತಿಯಲಿ ಕೋವಿದರು ॥ ೬ ॥**

ಸರಸ್ವತೀ, ಭಾರತೀದೇವೇರುಗಳ ತಾರತಮ್ಯ ಹೇಳತಾರೆ.

ಸರಸ್ವತೀ–ಬ್ರಹ್ಮದೇವರ ಪತ್ನಿಯಾದ ಸರಸ್ವತೀವೇವೇರು, ಭಾರತಿಗಳು–ವಾಯು ದೇವರ ಪತ್ನಿ ಭಾರತೀದೇವೇರು ಇವರಿಬ್ಬರು, ಪತಿಗಳಿಂದ–ತಮ್ಮ ತಮ್ಮ ಪತಿಗಳಿಂದಲಿ, ವಿಜಾತಿ–ವಿಜಾತೀಯವಾದ, ಬಲಜ್ಞಾನಾದಿಗುಣದಿಂದ–ಬಲಜ್ಞಾನಾದಿ ಗುಣಗಳಿಂದ, ನೂರುಗುಣಪರಿಮಿತ–ಪರಿಮಿತವಾದ ನೂರು ಗುಣಗಳಿಂದ, ಅವರರು–ಕಡಿಮಿ ಆದವರು, ಹ್ಯಾಂಗೆಂದರೆ, ನೂರು ವಿಜಾತಿ ಗುಣದಿಂದ ಅಧಮರು, ನೂರು ಸಜಾತಿ ಗುಣದಿಂದ ಸಮಾನರು. ಬ್ರಹ್ಮ ವಾಯುಗಳು ತಮ್ಮ ತಮ್ಮ ಹೆಂಡಂದಿರುಗಳಿಗಿಂತ ನೂರು ಗುಣ ಉತ್ತಮರು, ವಾಗ್ದೇವಿ–ಸರಸ್ವತೀದೇವೇರು, ಪದದ ಪ್ರಯುಕ್ತ–ಸತ್ಯಲೋಕದ ಪದವಿ

ಪ್ರಯುಕ್ತ, ಶ್ರೀಭಾರತಿಗೆ– ಕಾಂತಿಸಂಪನ್ನರಾದ ಭಾರತೀದೇವೇರಿಗೆ, ಅತಿಶಯುಳು– ಕಿಂಚಿತ್ ಶ್ರೇಷ್ಠರು. ವಿಧಿ ಮಾರುತರವೋಲ್–ಬ್ರಹ್ಮವಾಯುಗಳೋಪಾದಿಯಲ್ಲಿ, ಈ ಸರಸ್ವತೀ, ಭಾರತಿಯರಿಬ್ಬರೂ ಅಧಮರಾದವರು. ಕೋವಿದರು–ಜ್ಞಾನಿಗಳಾದವರು ಇದನ್ನು, ಸದ್ಭಕ್ತಿಯಲಿ–ಸಮೀಚೀನವಾದ ಭಕ್ತಿಯಿಂದ, ಚಿಂತಿಪುದು–ಚಿಂತಿಸೋವ ರಾಗಬೇಕೆಂತ ತಾತ್ಪರ್ಯ.

**ಖಗಪ ಫಣಿಪತಿ ಮೃಡರು ಸಮ ವಾ ।**
**ಣಿಗೆ ಶತಗುಣಾಧಮರು ಮೂವ ।**
**ರ್ಮಿಗಿಲೆನಿಸುವನು ಶೇಷ ಪದದಿಂದಲಿ ತ್ರಿಯಂಬಕಗೆ ॥**
**ನಗಧರನ ಷಣ್ಮಹಿಷಿಯರು ಪ ।**
**ನ್ನಗವಿಭೂಷಣಗೈದು ಮೇನಕೆ ।**
**ಮಗಳು ವಾರುಣಿ ಸೌಪರಣಿಗಳಿಗಧಿಕವೆರಡುಗುಣ ॥ ೭ ॥**

ಗರುಡಾದಿಗಳ ತಾರತಮ್ಯ ಹೇಳುತಾರೆ.

ಖಗಪ – ಗರುಡದೇವರು, ಫಣಿಪತಿ – ಶೇಷದೇವರು, ಮೃಡರು – ರುದ್ರದೇವರು, ಇವರು ಮೂರುಮಂದಿ ಸಮ–ಸ್ವರೂಪತಃ ಸಮಾನರು, ಮೂವರ್–ಈ ಮೂರುಮಂದಿ ಯೊಳಗೆ, ಪದದಿಂದಲಿ – ಪದಪ್ರಯುಕ್ತವಾಗಿ, ರುದ್ರದೇವರಿಗಿಂತಲೂ, ಶೇಷ – ಶೇಷ ದೇವರು, ಮಿಗಿಲೆನಿಸುವನು–ಅಧಿಕರೆನಿಸುವರು. ಶೇಷ, ಗರುಡರು ಸಮಾನರು. ವಾಣಿಗೆ– ಸರಸ್ವತೀ, ಭಾರತೀಯುವರಿಗೆ, ಶತಗುಣಾಧಮರು–ಈ ಗರುಡ, ಶೇಷ, ರುದ್ರ ಈ ಮೂರು ಮಂದಿ ಸರಸ್ವತೀ, ಭಾರತೀ ದೇವೇರಿಗಿಂತಲೂ ನೂರು ವಿಜಾತಿ ಗುಣದಿಂದ ಅಧಮರು, ನೂರು ಸಜಾತಿ ಗುಣದಿಂದ ಸಮಾನರು. ಗರುಡಾದಿಗಳಿಗಿಂತಲೂ, ಸರಸ್ವತೀ, ಭಾರತೀ ದೇವಿಯರು ನೂರು ಗುಣದಿಂದ ಉತ್ತಮರು. ತ್ರಿಯಂಬಕಗೆ–ಮೂರು ನೇತ್ರವುಳ್ಳ ರುದ್ರ ಮತ್ತು ಶೇಷ, ಗರುಡ ಇವರಿಗೆ, ನಗಧರನ–ಗೋವರ್ಧನಪರ್ವತ ಧರಿಸಿದ ಶ್ರೀ ಕೃಷ್ಣನ, ಷಣ್ಮಹಿಷಿಯರು–ನೀಲಾ, ಭದ್ರಾ. ಮಿತ್ರವಿಂದಾ, ಲಕ್ಷಣಾ, ಕಾಳಿಂದೀ, ಜಾಂಬವತೀ ಎಂಬ ಆರುಜನ ಪತ್ನೇರು, ಐದು–ಐದು ವಿಜಾತಿ ಗುಣದಿಂದ ನೀಚರು, ಐದು ಸಜಾತಿ ಗುಣದಿಂದ ಸಮರು. ರುದ್ರಾದಿಗಳು, ಷಣ್ಮಹಿಷಿಯರಿಗೆ ಐದು ಗುಣದಿಂದ ಉತ್ತಮರು, ಪನ್ನಗವಿಭೂಷಣಗೆ–ಸರ್ಪಭೂಷಣನಾದ ರುದ್ರ, ಶೇಷಾದಿಗಳಿಗಿಂತಲೂ, ಅವರವರ ಪತ್ನೇರಾದ, ಮೇನಕೆ ಮಗಳು–ರುದ್ರದೇವರ ಪತ್ನಿ ಪಾರ್ವತೀದೇವೇರು, ವಾರುಣಿ– ಶೇಷದೇವರ ಪತ್ನಿ ವಾರುಣೀದೇವೇರು, ಸೌಪರಣಿಗಳಿಗೆ–ಗರುಡದೇವರ ಪತ್ನಿ ಸೌಪರಣೀ ದೇವೇರು, ಈ ಮೂರುಮಂದಿಗಳು, ಷಣ್ಮಹಿಷಿಯರಿಗಿಂತ ಎರಡು ವಿಜಾತಿ ಗುಣದಿಂದ ಅಧಮರು, ಎರಡು ಸಜಾತಿ ಗುಣದಿಂದ ಸಮರು, ಅಧಿಕವೆರಡುಗುಣ – ಆರುಮಂದಿ ಮಹಿಷಿಯರು, ಪಾರ್ವತ್ಯಾದಿಗಳಿಗಿಂತಲೂ ಎರಡುಗುಣ ಅಧಿಕರೆಂದು ತಾತ್ಪರ್ಯ.

**ಗರುಡ ಶೇಷ ಮಹೇಶರಿಗೆ ಸೌ ।**
**ಪರಣಿ ವಾರುಣಿ ಪಾರ್ವತಿಯು ಮೂ ।**
**ವರು ದಶಾಧಮರು ವಾರುಣಿಗೆ ಕಡಿಮೆಯೆನಿಸುವಳು ಗೌರಿ ॥**
**ಹರನ ಮಡದಿಗೆ ಹತ್ತು ಗುಣದಲಿ ।**
**ಸುರಪಕಾಮರು ಕಡಿಮೆ ಇಂದ್ರಗೆ ।**
**ಕೊರತೆಯೆನಿಸುವ ಮನ್ಮಥನು ಪದದಿಂದಲಾವಾಗ ॥ ೮ ॥**

ಇಂದ್ರಕಾಮರ ವಿಚಾರ, ತಾರತಮ್ಯವನ್ನ ಹೇಳತಾರೆ.

ಗರುಡ ಶೇಷ ಮಹೇಶರಿಗೆ–ಗರುಡ, ಶೇಷ, ರುದ್ರ ಇವರಿಗೆ, ಸೌಪರಣಿ ವಾರುಣಿ ಪಾರ್ವತಿಯು – ಗರುಡಾದಿಗಳ ಪತ್ನೇರಾದ ಸೌಪರಣೀ, ವಾರುಣೀ, ಪಾರ್ವತೀ, ಮೂವರು–ಈ ಮೂರುಮಂದಿ, ದಶಾಧಮರು–ಹತ್ತು ಗುಣ ಅಧಮರು (ಅಂದರೆ ಹತ್ತು ವಿಜಾತಿಗುಣದಿಂದ)ಹತ್ತು ಸಜಾತಿಗುಣದಿಂದ ಸಮಾನರು. ಗರುಡಾದಿಗಳು, ಸೌಪರ್ಣ್ಯಾದಿ ಗಳಿಗಿಂತಲೂ ಹತ್ತು ವಿಜಾತಿಗುಣದಿಂದ ಉತ್ತಮರು. ಗೌರಿ–ರುದ್ರದೇವರ ಪತ್ನಿಯಾದ ಗೌರೀಸಾಂಕೇತರಾದ ಪಾರ್ವತೀ, ವಾರುಣಿಗೆ–ಶೇಷದೇವರ ಪತ್ನಿ ವಾರುಣೀದೇವೇರಿಗೆ, ಕಡಿಮೆಯೆನಿಸುವಳು–ಪದಪ್ರಯುಕ್ತ ಕಡಿಮಿ ಎಂತ ಕರಿಸತಾರೆ. ವಾರುಣೀ, ಪದಪ್ರಯುಕ್ತ ಅಧಿಕಳು; ಸ್ವರೂಪತಃ ಸೌಪರ್ಣ್ಯಾದಿಗಳು ಮೂರುಮಂದಿಯೂ ತಮ್ಮ ತಮ್ಮೊಳಗೆ ಸಮಾನರು, ಹರನ ಮಡದಿಗೆ–ರುದ್ರಪತ್ನಿಯಾದ ಪಾರ್ವತೀ ಮೊದಲಾದ ಮೂರು ಮಂದಿಗೆ, ಸುರಪ ಕಾಮರು–ಇಂದ್ರದೇವರು, ಮನ್ಮಥ, ಹತ್ತುಗುಣದಲಿ–ಹತ್ತು ವಿಜಾತಿ ಗುಣದಿಂದ, ಕಡಿಮೆ–ಕಡಿಮಿ ಎನಿಸುತ್ತಾರೆ. ಹತ್ತು ಸಜಾತಿ ಗುಣದಿಂದ ಸಮಾನರು. ಪಾರ್ವತ್ಯಾದಿಗಳು, ಇಂದ್ರಕಾಮರಿಗಿಂತಲೂ ಹತ್ತು ವಿಜಾತಿ ಗುಣಗಳಿಂದ ಉತ್ತಮರು. ಇಂದ್ರಗೆ ಕೊರತೆಯನಿಸುವ–ಇಂದ್ರದೇವರಿಗೆ ಕಡಿಮಿಯೆನಿಸುವ, ಮನ್ಮಥನು, ಪದದಿಂದ ಲಾವಾಗ–ದಾವಾಗ್ಯೂ ಪದಪ್ರಯುಕ್ತ ಕಡಿಮಿ, ಸ್ವರೂಪತಃ ಸಮಾನರು (ಇಂದ್ರಕಾಮ ಎಂಬುದು, ರುದ್ರ ಶೇಷರ ಪದ ಹ್ಯಾಂಗೋ, ಬ್ರಹ್ಮವಾಯು ಪದ ಹ್ಯಾಂಗೋ, ಇಂದ್ರ ಕಾಮರ ಪದ ಅಂಥಾದ್ದೆ. ಕಾಮಗೆ ಇಂದ್ರಪದದಿಂದ ಮುಕ್ತಿ, ರುದ್ರಗೆ ಶೇಷಪದದಿಂದ ಮುಕ್ತಿ ಎಂಬುದು ಹ್ಯಾಂಗೋ, ಅದೇ ಪ್ರಕಾರವೆಂದು ತಾತ್ಪರ್ಯ. ಅತ ಏವ, ಪದಕೃತ ನ್ಯೂನಾಧಿಕ್ಯ ಎಂಬುದೇ ಇದರ ತಾತ್ಪರ್ಯ.)

**ಈರೈದುಗುಣ ಕಡಿಮೆಯಾಹಂ ।**
**ಕಾರಿಕಪ್ರಾಣನು ಮನೋಜ ನ ।**
**ಗಾರಿಗಳಿಗನಿರುದ್ಧ ರತಿ ಮನು ದಕ್ಷ ಗುರು ಶಚಿಯು ॥**
**ಆರುಜನ ಸಮ ಪ್ರಾಣನಿಂದಲಿ ।**
**ಹೌರಗೆನಿಪರು ಹತ್ತು ಗುಣದಲಿ ।**
**ನೂರಜಾದ್ಯರಿಗೈದು ಗುಣದಿಂಧಮ ಪ್ರವಹಾಖ್ಯ ॥ ೯ ॥**

ಆಹಂಕಾರಿಕ ಪ್ರಾಣಾದಿಗಳ ತಾರತಮ್ಯವನ್ನು ಹೇಳತಾರೆ.

ಮನೋಜ–ಮನ್ಮಥ, ನಗಾರಿಗಳಿಗೆ–ಪರ್ವತಗಳಿಗೆ ಶತ್ರುವಾದ ಇಂದ್ರದೇವರು, ಈ ಉಭಯರಿಗೆ, ಆಹಂಕಾರಿಕಪ್ರಾಣನು–ತ್ವಗಭಿಮಾನಿಯಾದ ಆಹಂಕಾರಿಕಪ್ರಾಣನು, ಈರೈದುಗುಣ ಕಡಿಮೆಯು–ಹತ್ತುಗುಣದಿಂದ ಕಡಿಮೆ ಎಂದರೆ, ವಿಜಾತಿಗುಣದಿಂದ; ಹತ್ತು ಸಜಾತಿಗುಣದಿಂದ ಸಮ. ಇಂದ್ರಕಾಮರು ಹತ್ತು ವಿಜಾತಿಗುಣದಿಂದ, ಅಹಂಕಾರಿಕ ಪ್ರಾಣನಿಗಿಂತ ಉತ್ತಮರು. ಪ್ರಾಣನಿಂದಲಿ–ಈ ಆಹಂಕಾರಿಕ ಪ್ರಾಣನಿಗಿಂತ, ಅನಿರುದ್ಧ–ಕಾಮಪುತ್ರ ಅನಿರುದ್ಧ, ರತಿ–ಮನ್ಮಥನ ಪತ್ನಿ ರತೀದೇವೇರು, ಮನು–ಸ್ವಾಯಂಭುವ ಮನು, ದಕ್ಷ–ದಕ್ಷಪ್ರಜೇಶ್ವರ, ಗುರು–ಬೃಹಸ್ಪತ್ಯಾಚಾರ್ಯರು, ಶಚಿಯು–ಇಂದ್ರದೇವರ ಪತ್ನಿ ಶಚೀದೇವೇರು, ಆರುಜನ ಸಮ–ಈ ಆರುಜನರು ಸಮರು. ಹತ್ತು ಗುಣದಲ್ಲಿ–ಹತ್ತು ಗುಣದಿಂದ, ಹೌರಗೆನಿಪರು–ಆಹಂಕಾರಿಕ ಪ್ರಾಣಗೆ ಹತ್ತು ವಿಜಾತಿ ಗುಣದಿಂದ ಕಡಿಮೆ ಎನಿಸುತ್ತಾರೆ. ಹತ್ತು ಸಜಾತಿಗುಣದಿಂದ ಸಮರು. ಆಹಂಕಾರಿಕ ಪ್ರಾಣ, ಪೂರ್ವೋಕ್ತ ಆರುಮಂದಿಗಿಂತಲೂ ಹತ್ತು ವಿಜಾತಿಗುಣದಿಂದ ಉತ್ತಮರು, ಮಾರಜಾದ್ಯರಿಗೆ–ಕಾಮಪುತ್ರ ಅನಿರುದ್ಧಾದಿ ಆರುಮಂದಿಗಿಂತಲೂ, ಪ್ರವಹಾಖ್ಯ–ಪ್ರವಹ ಮಾರುತನು, ಐದುಗುಣದಿಂದಧಮ–ಐದು ವಿಜಾತಿ ಗುಣದಿಂದ ಅಧಮನು, ಐದು ಸಜಾತಿ ಗುಣದಿಂದ ಸಮಾನನು. ಪೂರ್ವೋಕ್ತ ಅನಿರುದ್ಧಾದಿ ಆರುಮಂದಿಗಳೂ ಪ್ರವಹ ವಾಯುಗಿಂತಲೂ ಐದು ವಿಜಾತಿಗುಣಗಳಿಂದ ಅಧಿಕರೆಂತ ತಾತ್ಪರ್ಯ.

**ಗುಣದ್ವಯದಿಂ ಕಡಿಮೆ ಪ್ರವಹಗೆ ।**
**ಇನ ಶಶಾಂಕ ಯಮ ಸ್ವಯಂಭುವ ।**
**ಮನುಮಡದಿ ಶತರೂಪನಾಲ್ವರು ಪಾದಪಾದಾರ್ಧ ॥**
**ವನಧಿ ನೀಚ ಪದಾರ್ಧ ನಾರದ ।**
**ಮುನಿಗೆ ಭೃಗ್ವಗ್ನಿ ಪ್ರಸೂತಿಗ ।**
**ಳೆನಿಸುವರು ಪಾದಾರ್ಧಗುಣದಿಂದಧಮರಹುದೆಂದು ॥ ೧೦ ॥**

ಸೂರ್ಯ ಚಂದ್ರಾದಿಗಳ ತಾರತಮ್ಯ ಹೇಳತಾರೆ.

ಪ್ರವಹಗೆ – ಪ್ರವಹ ವಾಯುಗಿಂತಲೂ, ಇನ – ವಿವಸ್ವಾನ್ನಾಮಕಸೂರ್ಯ, ಶಶಾಂಕ–ಚಂದ್ರ, ಯಮ–ಯಮದೇವರು, ಸ್ವಯಂಭುವ ಮನು ಮಡದಿ–ಸ್ವಯಂಭುವ ಮನುವಿನ ಪತ್ನಿ, ಶತರೂಪ–ಶತರೂಪಾದೇವೇರು. ನಾಲ್ವರು–ಈ ನಾಲ್ಕುಮಂದಿಯೂ, ಗುಣದ್ವಯದಿಂ ಕಡಿಮೆ–ಎರಡು ವಿಜಾತಿ ಗುಣದಿಂದ ಅಧಮರು, ಎರಡು ಸಜಾತಿ ಗುಣದಿಂದ ಸಮರು. ಪ್ರವಹವಾಯು ವಿಜಾತಿ ಗುಣದ್ವಯದಿಂದ, ಸೂರ್ಯಾದಿ ನಾಲ್ವರುಗಳಿಗಿಂತಲೂ ಉತ್ತಮನು, ಈ ಸೂರ್ಯಾದಿ ನಾಲ್ವರೂ ತಮ್ಮತಮ್ಮೊಳಗೆ ಸಮರು. ವನಧಿ–ವರುಣದೇವರು, ಪೂರ್ವೋಕ್ತ ನಾಲ್ವರಿಗಿಂತಲೂ, ಪಾದಪಾದಾರ್ಧ–(೧೦)

ಪಾದಗುಣ ಅಂದರೆ, ಕಾಲುಗುಣ, ಅರ್ಧ–ಅರಿಕಾಲುಗುಣ, ಅಂತು, ಕಾಲೇ ಅರಿಕಾಲು ಎಂತರ್ಥ, ನೀಚ–ಕಡಿಮೆ ಅಂದರೆ, ಕಾಲೇ ಅರಿಕಾಲು ವಿಜಾತಿಗುಣದಿಂದ ಅಧಮನು. ಕಾಲೇ ಅರಿಕಾಲು ಸಜಾತಿಗುಣದಿಂದ ಸಮನು. ವರುಣನಿಗಿಂತಲೂ ಸೂರ್ಯಾದಿ ನಾಲ್ಕು ಮಂದಿಗಳು, ಕಾಲೇ ಅರಿಕಾಲು ವಿಜಾತಿ ಗುಣಗಳಿಂದ ಅಧಿಕರು. ನಾರದಮುನಿ, ವರುಣನಿಗಿಂತಲೂ ನಾರದಋಷಿ (ನಾರದ ಎಂದರೆ, ನಾರಂ–ಜ್ಞಾನಂ ದದಾತೀತಿ ನಾರದಃ, ಅರ–ನ ಭವತೀತಿ ವಾ) ಬ್ರಹ್ಮದೇವರ ಅಂಕದಿಂದ ಹುಟ್ಟಿದವರು, ಪದಾರ್ಥ– ವಿಜಾತಿ ಅರಿಕಾಲು ಗುಣದಿಂದ ಅಧಮರು. ಅರಿಕಾಲು ಸಜಾತಿ ಗುಣದಿಂದ ಸಮರು. ವರುಣನು ನಾರದಋಷಿಗಿಂತಲೂ ವಿಜಾತಿ ಅರಿಕಾಲು ಗುಣದಿಂದ ಉತ್ತಮರು. ನಾರದ ಮುನಿಗೆ–ಈ ನಾರದಋಷಿಗಳಿಗೆ, ಭೃಗುಪ್ರ–ಭೃಗುಋಷಿಗಳು, ಅಗ್ನಿ–ಅಗ್ನಿದೇವರು, ಪ್ರಸೂತಿಗಳು – ದಕ್ಷಪ್ರಜಾಪತಿಯ ಪತ್ನಿ ಪ್ರಸೂತಿದೇವಿ ಈ ಮೂರುಮಂದಿಗಳು, ಪಾದಾರ್ಧಗುಣದಿಂದ–ಅರಿಕಾಲು ಗುಣದಿಂದ, ಅಧಮರು ಎನಿಸುವರು–ಕಡಿಮೆಯಾದ ವರು ಎನಿಸುವರು, ಅಹುದೆಂದು–ನಿಶ್ಚಯವೆಂದು ತಾತ್ಪರ್ಯ. ಅಂದರೆ, ಅರಿಕಾಲು ವಿಜಾತಿ ಗುಣದಿಂದ ಅಧಮರು. ಅರಿಕಾಲು ಸಜಾತಿ ಗುಣದಿಂದ ಸಮರು. ನಾರದರು ಈ ಭೃಗ್ವಾದಿಗಳಿಗಿಂತಲೂ ಅರಿಕಾಲು ವಿಜಾತಿ ಗುಣದಿಂದ ಅಧಿಕರು. ಭೃಗು, ಅಗ್ನಿ ಮತ್ತು ಪ್ರಸೂತಿ, ಈ ಮೂರುಮಂದಿಗಳೂ ಸಮರು.

**ವಿಶೇಷಾರ್ಥ :** ದೇವರು ಅಪರಿಚ್ಛಿನ್ನ ಅವಧಿರಹಿತವಾದ ಗುಣದಿಂದ ಪೂರ್ಣ ನಾದ ಕಾಲಕ್ಕೂ, ತಾರತಮ್ಯಕ್ಕೆ ಅವಧಿಯುಕ್ತವಾದ ಗುಣಗಳ ರಮಾದೇವೇರಿಗೆ ತೋರಿ ಸೋವನಾಗಿದ್ದಾನೆ. ರಮಾದೇವೇರಿಗೆ ಎಷ್ಟು ಗುಣಗಳ ತೋರಿಸಿ ದಾವ ಗುಣಗಳು ಆಕಿಯಿಂದ ನೋಡಲ್ಪಟ್ಟಿದ್ದಾವೋ, ಆ ಗುಣಗಳದಾರಭ್ಯ ಗುಣತಾರತಮ್ಯವು. ರಮಾ ದೇವೇರು ಕಂಡ ಗುಣಗಳು ಎಷ್ಟು ಅಂದರೆ, ಸಜಾತಿಗುಣಗಳು ಆಲೋಚನಿ ಇಲ್ಲದೇ ನೋಡಿದ ಗುಣಗಳು ಅನಂತ. ಸಜಾತಿ ಗುಣಗಳಲ್ಲದ, ವಿಜಾತಿ ಗುಣಗಳ ನೋಡಿದ್ದು ಅನಂತ. ಇವು ಆಲೋಚನಿಯಿಂದ ನೋಡಿದ್ದು, ತಮ್ಮಲ್ಲಿಲ್ಲದೇ ಇದ್ದದ್ದು, ಅದಕ್ಕೆ ಮಿಂಚಿದ ಗುಣಗಳ ಕಾಣದೆ ಆನಂದಮಗ್ನಳಾದರು. ಆದರೆ ಅನಂತ ಅಂದರೆ, ಅವಧಿರಹಿತ ಎಂತ ಅರ್ಥವಾಗುತ್ತದೆ. ಅನಂತ ಎಂಬುದು ಹ್ಯಾಂಗೆ ಕೂಡತದೆ ಅಂದರೆ, ವಿವಕ್ಷಾಭೇದದಿಂದ ಅವಧಿ, ಅನವಧಿ ಎರಡೂ ಉಂಟು. ಅನಂತಕ್ಕೆ ಅವಧಿರಹಿತ ಅಂದರೂ ಸರಿಯೇವೆ. ಆದರೆ, ಪ್ರಕೃತ ಅನಂತ ಎಂಬುದು ಸಂಖ್ಯಾವಾಚಕವೂ ಖರೇನೇ. ಸಂಖ್ಯಾದೊಳಗೆ ಅನಂತ ಎಂತಲೂ ಒಂದು ಸಂಖ್ಯಾ ಉಂಟು. ಅದರ ಗಣನ ಈ ಕೆಳಗೆ ಉದಹರಿಸಿದೆ. ಅನಂತ ಎಂದರೆ, ಆ–ಸಮ್ಯಕ್ ಅಂತ ಎಂತಲೂ, 'ಅ' ಕಾರನಿಷೇಧಪರ ಮಾಡಿದರೆ ಅಂತರಹಿತ ಎಂತಲೂ ತಾತ್ಪರ್ಯವೇ. ಅಂತ ಹೇಳಿದ ಸಂಖ್ಯಾಕ್ಕೆ ಮ್ಯಾಲೆ ಗಣನಮಾಡೋದಕ್ಕೆ ಸಂಕೇತನಾಮ ಇಲ್ಲ. ಇದರನ್ನೇ ಪುನಃ ತೆಗೆದುಕೋಬೇಕೆಂತಲೂ ತಾತ್ಪರ್ಯವೇ. ೧. ಲಕ್ಷ, ೨. ಕೋಟಿ, ೩. ಅರ್ಬುದ, ೪. ನ್ಯರ್ಬುದ, ೫. ಖರ್ವ, ೬. ಮಹಾ ಖರ್ವ, ೭. ಪದ್ಮ, ೮. ಮಹಾಪದ್ಮ, ೯. ಶಂಖ, ೧೦. ಮಹಾಶಂಖ, ೧೧. ಕ್ಷೋಣಿ,

೧೨. ಮಹಾಕ್ಷೋಣಿ, ೧೩. ಕ್ಷಿತಿ, ೧೪. ಮಹಾಕ್ಷಿತಿ, ೧೫. ಕ್ಷೋಭ, ೧೬. ಮಹಾಕ್ಷೋಭ, ೧೭. ನಿಧಿ, ೧೮. ಮಹಾನಿಧಿ, ೧೯. ಸಮುದ್ರ, ೨೦. ಮಹಾಸಮುದ್ರ, ೨೧. ಅಂತ್ಯ, ೨೨. ಪರಾರ್ಧ, ೨೩. ಮಹಾಪರಾರ್ಧ, ೨೪. ಭೂರಿ, ೨೫. ಮಹಾಭೂರಿ, ೨೬. ಕೃತಭೂರಿ, ೨೭. ಗಗನ, ೨೮. ಲೋಕ, ೨೯. ಅನಂತ; ಅಂತೂ ಇಪ್ಪತ್ತೊಂಭತ್ತು. ಒಂದು ಹಾಕಿ ನೂರಾನಲವತ್ತೆರಡು ಸೊನ್ನೆಗಳ ಹಾಕಿದರೆ ಅನಂತ ವಾಗತದೆ. ಆದ್ದರಿಂದ ಆ ಅನಂತಕ್ಕೆ ಅವಧಿ ಸಾಂಕೇತ ಉಂಟು. ಅದರ ಮ್ಯಾಲೆ ಸಾಂಕೇತವಾದ ಸಂಖ್ಯಾ ಇಲ್ಲ. ದಶಾನಂತ ಎಂತಲೂ, ಕೋಟಿ ಅನಂತ ಎಂತಲೂ, ಅನಂತಾನಂತ ಎಂತಲೂ ಅವಧಿ ಹೇಳಬಹುದು. ಹ್ಯಾಂಗೆಂದರೆ, ಅನಂತ ಸಂಖ್ಯಾದಿಂದ ಮತ್ತೊಂದು ಅನಂತವನ್ನು ಹೆಚ್ಚು ಗುಣಿಸಿದರೆ, ಅನಂತಾನಂತವೆಂತಲೇ ಆ ವಿಧಿಯಿಂದ ಯುಕ್ತವಾಗತದೆ. ಆದರಮೇಲೆ ಆ ವಿಧಿಯುಕ್ತವಾದ ಸಂಖ್ಯಾ ಲೇಖನಮಾಡಬಹುದು. ಆ ಲೇಖನಸಂಖ್ಯಾವನ್ನ ಸಾಂಕೇತನಾಮದಿಂದ ಉಚ್ಚರಿಸಲಿಕ್ಕೆ ತದನುಗುಣವಾದ ಸಾಂಕೇತನಾಮವಿಲ್ಲ. ಅದರಮ್ಯಾಲೆ ಅನಂತಾನಂತವೆಂತಲೇ ಸಾಂಕೇತವು. ಈ ಕ್ರಮಾನುಸಾರ ಅನಂತಕ್ಕೆ ಆ ವಿಧಿ ಇರೋದಾಗಿದೆ. ಆದ್ದರಿಂದ ಇದನನುಸರಿಸಿ ಈ ರೀತ್ಯಾ :—

೧. ಪರಮಾತ್ಮ ವಿವಕ್ಷಾಭೇದದಿಂದ ಅನಂತದ್ವಯಗುಣಗಳುಳ್ಳವ ಎಂತ ತಾತ್ಪರ್ಯ. ಸಜಾತಿ ಅನಂತ ಒಂದು, ವಿಜಾತಿ ಅನಂತ ಒಂದು, ೨ ಅನಂತ (ಉಭಯಾತೀತ ಅಪರಿಚ್ಛಿನ್ನ ಒಂದು, ಇದು ತಾರತಮ್ಯಕ್ಕೆ ಬರತಕ್ಕದ್ದಲ್ಲ).

೨. ರಮಾ, ಅನಂತಗುಣಕ್ಕೆ ನೀಚಳು. ವಿಜಾತಿಗುಣಕ್ಕೆ ಎಂತ ತಾತ್ಪರ್ಯ. (ಅನಂತ)

೩. ಬ್ರಹ್ಮವಾಯುಗಳು, ಕೋಟಿಗುಣದಿಂದ ಅವರರು. (ಕೋಟಿ)

೪-೫. ಸರಸ್ವತೀ, ಭಾರತೀದೇವೇರು, ನೂರು ಗುಣದಿಂದ ಅಧಮರು. (ನೂರು)

೬. ಗರುಡಶೇಷರುದ್ರರು, ನೂರು ಗುಣ ಕಡಿಮೆ ಸರಸ್ವತ್ಯಾದಿಗಳಿಂದ. (ನೂರು)

೭. ಪರಮಾತ್ಮನ ಷಣ್ಮಹಿಷಿಯರು, ಐದು ಗುಣ ಕಡಿಮೆ. (ಐದು)

೮. ಸೌಪರ್ಣ್ಯಾದಿಗಳು, ತಮ್ಮ ತಮ್ಮ ಪತಿಗಳಿಗಿಂತ ದಶಗುಣ ಅವರರು, ಷಣ್ಮಹಿಷಿಯರಿಗಿಂತ ಎರಡು ಗುಣ ಕಡಿಮೆ. (ಎರಡು)

೯. ಇಂದ್ರ ಕಾಮರು, ಹತ್ತು ಗುಣದಿಂದ ನೀಚರು. (ಹತ್ತು)

೧೦. ಅಹಂಕಾರ ಪ್ರಾಣ, ಹತ್ತು ಗುಣದಿಂದ ನೀಚರು. (ಹತ್ತು)

೧೧. ಅನಿರುದ್ಧ ಆರಂಭಮಾಡಿ ಶಚಿಯವರೆಗೆ ಆರು ಮಂದಿ, ದಶಗುಣಾಧಮರು. (ಹತ್ತು)

೧೨. ಪ್ರವಹವಾಯು, ಐದು ಗುಣದಿಂದ ನೀಚರು. (ಐದು)

೧೩. ಸೂರ್ಯಾದಿ ನಾಲ್ವರು, ಎರಡು ಗುಣದಿಂದ ಕಡಿಮೆ. (ಎರಡು)

೧೪. ವರುಣ, ಕಾಲೇಅರಿಕಾಲು ಗುಣ ಕಡಿಮೆ. (೫/೮)

೧೫. ನಾರದರು, ಅರಿಕಾಲು ಗುಣ ಕಡಿಮೆ. (೧/೮)

೧೬. ಭೃಗ್ವಾದಿಗಳು, ನಾರದರಿಗಿಂತಲೂ ಅರಿಕಾಲು ವಿಜಾತಿಗುಣದಿಂದ ನೀಚ ರೆಂತ ಕರಿಸೋವರಾಗತಾರೆ. ಅಂದರೆ, ಅಷ್ಟು ಗುಣದಿಂದ ಅವರರೆಂತ ತಾತ್ಪರ್ಯ.

ಇಲ್ಲಿಗೆ ಹತ್ತು ಶ್ಲೋಕಗಳ ಟೀಕ ಸರಿಯಾಯಿತು.

**ಹುತವಹಗೆ ದ್ವಿಗುಣಾಧಮರು ವಿಧಿ ।**
**ಸುತ ಮರೀಚ್ಯಾದಿಗಳು ವೈವ ।**
**ಸ್ವತನು ವಿಶ್ವಾಮಿತ್ರರಿಗೆ ಕಿಂಚಿದ್ಗುಣಾಧಮನು ॥**
**ವ್ರತಿವರ ಜಗನ್ಮಿತ್ರ ವರ ನಿರ ।**
**ಋತಿ ಪ್ರಾವಹಿ ತಾರರಿಗೆ ಕಿಂ ।**
**ಚಿತ್ ಗುಣಾಧಮ ಧನಪ ವಿಷ್ವಕ್ಸೇನನೆನಿಸುವನು ॥ ೧೧ ॥**

ಸಪ್ತಋಷಿಗಳೇ ಮೊದಲಾದ ಹದಿನೈದು ಮಂದಿಯ ತಾರತಮ್ಯ ಹೇಳತಾರೆ. ೧. ಮರೀಚಿ, ೨. ಅತ್ರಿ, ೩. ಅಂಗಿರಸ, ೪. ಪುಲಸ್ತ್ಯ, ೫. ಪುಲಹ, ೬. ಕ್ರತು, ೭. ವಸಿಷ್ಠ, ೮. ವಿಶ್ವಾಮಿತ್ರ, ೯. ವೈವಸ್ವತಮನು, ೧೦. ಮಿತ್ರನಾಮಕ ಸೂರ್ಯ, ೧೧. ನಿಋತಿ, ೧೨. ಪ್ರಾವಹಿ, ೧೩. ತಾರಾ, ೧೪. ಧನಪ, ೧೫. ವಿಷ್ವಕ್ಸೇನ.

ಹುತವಹಗೆ–ಅಗ್ನಿಗೆ, ವಿಧಿಸುತ–ಬ್ರಹ್ಮದೇವರ ಪುತ್ರರಾದ, ಮರೀಚ್ಯಾದಿಗಳು–ಮರೀಚ್ಯಾದಿ ಸಪ್ತರ್ಷಿಗಳು, ವೈವಸ್ವತನು–ವೈವಸ್ವತಮನು, ವಿಶ್ವಾಮಿತ್ರರಿಗೆ–ವಿಶ್ವಾಮಿತ್ರ ಋಷಿ, ಅಂತೂ ಒಂಭತ್ತುಮಂದಿ, ದ್ವಿಗುಣಾಧಮರು–ಎರಡು ವಿಜಾತಿಗುಣದಿಂದ ಕಡಿಮಿ, ಎರಡು ಸಜಾತಿಗುಣದಿಂದ ಸಮರು. ಅಗ್ನ್ಯಾದಿಗಳು ಮರೀಚ್ಯಾದಿಗಳಿಗಿಂತಲೂ ಎರಡು ವಿಜಾತಿಗುಣದಿಂದುತ್ತಮರು. ಈ ಮರೀಚ್ಯಾದಿಗಳಿಗೆ, ವ್ರತಿವರ–ವ್ರತಶ್ರೇಷ್ಠನಾದ, ಜಗನ್ಮಿತ್ರ–ಜಗತ್ತಿಗೇ ಮಿತ್ರನಾದ ಮಿತ್ರನಾಮಕ ಸೂರ್ಯ, ವರನಿರಋತಿ–ಉತ್ತಮನಾದ ನಿರಋತಿ, ಪ್ರಾವಹಿ–ಪ್ರವಹವಾಯುಪತ್ನಿ ಪ್ರಾವಹೀ, ತಾರರಿಗೆ–ಗುರುಪತ್ನಿ ತಾರಾದೇವಿ, ಅಂತು ಈ ನಾಲ್ಕು ಮಂದಿಗೆ, ಕಿಂಚಿದ್ಗುಣಾಧಮರು–ಮ್ಯಾಲೆ ಗುಣವಿಭಾಗ ಪಾದಾರ್ಧ ಎಂತ ಹೇಳಿ, ನಂತರ ಕಿಂಚಿದ್ಗುಣಾಧಮರೆಂತ ಹೇಳೋಣದರಿಂದ ಪಾದಾರ್ಧವಾದ ಅರಿಕಾಲು ಗುಣದೊಳಗೆ ಅರ್ಧಸಾಂಕೇತವಾದ ಪಾದದಲ್ಲಿ ನಾಲ್ಕನೇ ಅಂಶವಾದ ವೀಸಗುಣ ಎಂತ ತಾತ್ಪರ್ಯ. ಅತಏವ ವೀಸಗುಣಾಧಮರೆಂತ ತಿಳಿಯಬೇಕು. ವಿಜಾತಿಗುಣದಿಂದ ಅಧಮರು, ಸಜಾತಿಗುಣದಿಂದ ಸಮರು. ಮರೀಚ್ಯಾದಿಗಳು ಮಿತ್ರಾದಿಗಳಿಗಿಂತ ವಿಜಾತಿ ವೀಸಗುಣದಿಂದ ಅಧಿಕರು. ಮಿತ್ರಾದಿ ನಾಲ್ಕುಮಂದಿಗೆ, ಧನಪ–

ಕುಬೇರ, ವಿಷ್ವಕ್ಸೇನ–ವಿಷ್ವಕ್ಸೇನ (ಗಣೇಶ), ಈ ಮೂರು ಮಂದಿ, ಕಿಂಚಿದ್ಗುಣಾಧಮರೆನಿಸುವರು–ವಿಜಾತಿಗುಣದಿಂದ ಅಧಮರೆಂತ ಕರಿಸತಾರೆ, ಸಜಾತಿಗುಣದಿಂದ ಸಮರು. ಮಿತ್ರಾದಿಗಳು ಕುಬೇರಾದಿಗಳಿಗಿಂತಲೂ ವಿಜಾತೀಯಗುಣದಿಂದ ಅಧಿಕರೆಂತ ತಾತ್ಪರ್ಯ.

**ವಿಶೇಷಾರ್ಥ :**–ಮಿತ್ರನಾಮಕ ಸೂರ್ಯ ಆರಂಭಮಾಡಿ ತಾರಾವರಿಗೂ ಸಮಾನರು. ಕುಬೇರ, ವಿಷ್ವಕ್ಸೇನನ ಸಂಗಡ ಗಣೇಶನ್ನ ಕೂಡ ಸೇರಿಸಿಕೋಬೇಕು. ಇವರು ಮೂವರೂ ಸಮರು. ತಾರಾದಿ ನಾಲ್ಕುಮಂದಿಗೆ ಕಿಂಚಿದ್ಗುಣಾಧಮರು. ಗಣೇಶಾದಿಗಳಿಗೆ ಸಮಾನರಾದವರ, ಮುಂದಿನ ಶ್ಲೋಕದಿಂದ ಹೇಳತಾರೆ. ಧನಪ ವಿಷ್ವಕ್ಸೇನನ ಕೂಡ ಗಣೇಶನನ್ನು ಸೇರಿಸಿಕೋಬೇಕೆಂದು ಮುಂದಿನ ಶ್ಲೋಕದಲ್ಲಿ ಉಕ್ತವಾಗತದೆ.

**ಧನಪ ವಿಷ್ವಕ್ಸೇನ ಗೌರೀ ।**
**ತನಯರಿಗೆ ಉಕ್ತೇತರರು ಸಮ ।**
**ರೆನಿಸುವರು ಎಂಭತ್ತೈದುಜನ ಶೇಷಶತರೆಂದು ॥**
**ದಿನಪರಾರೇಳಧಿಕನಾಲ್ವ ।**
**ತ್ತನಿಲರೇಳ್ವಸುರುದ್ರರೀರ್‍ಐ ।**
**ದನಿತು ವಿಶ್ವೇದೇವ ಋಭುವಶ್ವಿನಿ ದ್ಯಾವಾಪೃಥಿವಿ ॥ ೧೨ ॥**

ಕುಬೇರಾದಿಗಳಿಗೆ ಸಮಾನರಾದ ೧೮ ನೇ ಕಕ್ಷಾದವರ ತಾರತಮ್ಯ ಹೇಳತಾರೆ.

ಉಕ್ತ–೧೧ ನೇ ಶ್ಲೋಕದಲ್ಲಿ ಉಕ್ತರಾದ, ಧನಪ–ಕುಬೇರ, ವಿಷ್ವಕ್ಸೇನ–ವಾಯುಪುತ್ರ ವಿಷ್ವಕ್ಸೇನ, ಗೌರೀತನಯರಿಗೆ–ವಿಘ್ನೇಶ್ವರ, ಈ ಮೂರು ಜನಕ್ಕೆ, ಇತರರು–ಈ ಮೂರುಮಂದಿ ಅಲ್ಲದ ಇವರಿಗೆ ಇತರರಾದವರು, ದಿನಪರಾರು–ಆರುಮಂದಿ ಆದಿತ್ಯರು, ಅನಿಲರು–ಮರುತರು, ಏಳಧಿಕನಾಲ್ವತ್ತು–೪೭ ಮಂದಿ, ಏಳ್ವಸು–ಏಳುಮಂದಿ ವಸುಗಳು, ಈರೈದು–೧೦ ಸಂಖ್ಯಾಕರಾದ, ರುದ್ರರು–ರುದ್ರರು, ಅನಿತು ವಿಶ್ವೇದೇವ–ರುದ್ರಸಂಖ್ಯೆ ಎಷ್ಟೋ ಅಷ್ಟೇ ಸಂಖ್ಯಾ ವಿಶ್ವೇದೇವತೆಗಳು ೧೦ ಮಂದಿ, ಋಭುವು–ಋಭು ಒಬ್ಬ, ಅಶ್ವಿನೀ–ಅಶ್ವಿನೀದೇವತೆಗಳಿಬ್ಬರು, ದ್ಯಾವಾಪೃಥಿವಿ–ದ್ಯಾವಾಪೃಥ್ವೀ ಎರಡು, ಎಂಭತ್ತೈದು ಜನ–೮೫ ಜನ ಎಂದರೆ, ಮೇಲಿನ ಸಂಖ್ಯ ೮೭ ರ ಒಳಗೆ, ಅವರ (ಕಡಿಮಿ) ಕಕ್ಷದವರು ಇಬ್ಬರು. ದ್ಯಾವಾ ಹೊರ್ತು, ಪೃಥಿವೀದೇವಿ ಅವರ (ಕಡಮಿ) ಕಕ್ಷದವರು, ಆದಿತ್ಯರೊಳಗೆ ಪರ್ಜನ್ಯನಾಮಕ ಸೂರ್ಯ ಅವರ (ಕಡಿಮಿ) ಕಕ್ಷದವ. ಈ ಇಬ್ಬರಾದ ಪೃಥಿವೀ ಪರ್ಜನ್ಯ ಹೋಗತ -ಉಳಿದ ಈ ಎಂಭತ್ತೈದುಮಂದಿ, ಸಮರೆನಿಸುವರು – ಒಬ್ಬರಿಗೊಬ್ಬರು ಸಮಾನರೆನಿಸಿಕೊಳ್ಳುವರು. ಈ ಇಬ್ಬರೂ (ಪೃಥಿವೀ, ಪರ್ಜನ್ಯ) ಸಮರಲ್ಲ. ಶೇಷಶತರೆಂದು–ಈ ೮೫ ಜನ ದಾರೆಂದರೆ, ನೂರುಮಂದಿ ಒಳಗೆ, ಶೇಷ ಉಳಿದವರೆಂದು ಕರಿಸತಾರೆ. ವರ್ತಮಾನ ಹದಿನೆಂಟನೇ ಕಕ್ಷದವರು ದಾರೆಂದರೆ, ಮೇಲೆ

ಹೇಳಿದ ೮೫ ಮಂದಿ, ಅವರೇ ೧೮ ನೇ ಕಕ್ಷದವರು, ಎಲ್ಲರೂ ಸಮಾನರೆಂದು ಹೇಳೋ ನಿಮಿತ್ತ ಪ್ರವರ್ತಿಸಿದ ಕ್ರಮ ಇಲ್ಲಿಗೆ ಮುಗಿಯಿತು. ಇನ್ನೂ ಶೇಷ ದಾವುದು, ಶತ ದಾವುದೆಂದರೆ, ಅದರನ್ನ ಹೇಳತೇವೆ. ಇದರ ಕ್ರಮ ಬ್ಯಾರೆ, ಇದು ಎರಡನೇ ಪ್ರಕಾರ ವಿಭಾಗ.

ನೂರುಮಂದಿ ಸೋಮಪಾನಾರ್ಹರು. ೧೮ ನೇ ಕಕ್ಷದಲ್ಲಿ ಕೆಲವರು, ತದನ್ಯ ಉತ್ತಮ ಕಕ್ಷದಲ್ಲಿ ಸೇರಿದ ಕೆಲವರು, ೧೮ ನೇ ಕಕ್ಷಕ್ಕೆ ಅವರ (ಕಡಿಮೆ) ಕಕ್ಷದಲ್ಲಿ ಸೇರಿದವರು ಕೆಲವರು, ಅಂತು ಸೇರಿ ನೂರುಮಂದಿ ಸೋಮಪಾನಾರ್ಹರು. ಅದರಲ್ಲಿ ೧೮ ನೇ ಕಕ್ಷದವರೇ ಬಹಳ, ತದನ್ಯ ಉತ್ತಮ ಕಕ್ಷದವರು, ಅವರ (ಕಡಿಮೆ) ಕಕ್ಷದವರು ಬಹಳ ಸ್ವಲ್ಪವಾದ್ದರಿಂದ ಝಡಿತಿ ಬೋಧಾರ್ಥವಾಗಿ ೧೮ನೇ ಕಕ್ಷದಲ್ಲೇ ನೂರುಮಂದಿ ಹೇಳಿ ಅದರೊಳಗೆ ಉತ್ತಮ ಕಕ್ಷದವರ ಮತ್ತು ಅವರ ಕಕ್ಷದವರ ವ್ಯಾವರ್ತನಮಾಡತಾರೆ. ಅದರ ವಿವರ :—

| ೧೮ ನೇ ಕಕ್ಷದವರು. | ಉತ್ತಮ ಕಕ್ಷದವರು. | ಅಧಮ ಕಕ್ಷದವರು. | ಒಟ್ಟು ಸಂಖ್ಯಾ. |
|---|---|---|---|
| ೫ ಆದಿತ್ಯರು. | ೬ ಆದಿತ್ಯರು. | ೧ ಪರ್ಜನ್ಯ ನಾಮಕ ಸೂರ್ಯ. | ೧೨. |
| ೪೭ ಮರುತ್ತರು. | ೧ ಪ್ರವಹ ವಾಯು.<br>೧ ಪ್ರಧಾನ ವಾಯುದೇವರು.<br>೧ ಅಹಂಕಾರಿಕಪ್ರಾಣ. | .... | ೫೦. |
| ೭ ವಸುಗಳು. | ೧ ಅಗ್ನಿ. | .... | ೮. |
| ೧೦ ರುದ್ರರು. | ೧ ಕೈಲಾಸಪತಿ ರುದ್ರ. | .... | ೧೧. |
| ೧೦ ವಿಶ್ವೇದೇವತೆಗಳು. | .... | .... | ೧೦. |
| ೧ ಋಭು. | .... | .... | ೧. |
| ೨ ಅಶ್ವಿನೀದೇವತೆಗಳು. | .... | .... | ೨. |
| .... | ದ್ಯಾವಾ ಎಂದರೆ, ದ್ಯುಲೋಕಾಭಿಮಾನಿ ಭಾರತೀ. | ಪೃಥ್ವೀ. | ೨. |
| .... | ಪಿತೃಗಳು ಇಬ್ಬರು— ೧ ಯಮ, ೧ ಸೋಮ. | ಕವ್ಯವಹ ಪಿತೃಗಳು, ೧೮ ನೇ ಕಕ್ಷದಲ್ಲಿ ಸಪ್ತ ಪಿತೃಗಳಲ್ಲಿ ಸೇರಿದ್ದಾನೆ. | ೩. |
| .... | ೧ ಬೃಹಸ್ಪತಿ. | .... | |
| ಅಂತು ೮೨ ಮಂದಿ. | ೧೫ ಮಂದಿ. | ೩ ಮಂದಿ. | ಅಂತೂ, ೧೦೦ ಮಂದಿ. |

ಅಂತೂ ಈ ನೂರುಮಂದಿ ಸೋಮಪಾನಾರ್ಹರು. ಹದಿನೆಂಟನೇ ಕಕ್ಷದಲ್ಲಿ ನೂರುಮಂದಿ ಹೇಳಿ ಅದರೊಳಗೆ ಉತ್ತಮ ಕಕ್ಷದವರ, ಅವರ (ಕಡಿಮಿ) ಕಕ್ಷಾದವರ ವ್ಯಾವರ್ತನಮಾಡತಾರೆ. ಆದರ ವಿವರ ಝಡಿತಿ ರೀತ್ಯಾ ಹೇಳಲ್ಪಟ್ಟಿದೆ. ಇವರಲ್ಲಿ ಶೇಷ ಶತರೆಂದರೆ :–ಶತ ಎಂದರೆ ೧೦೦ ಮಂದಿ ಒಳಗೆ. ಶೇಷ–ಉತ್ತಮ ಕಕ್ಷದವರು ೧೫ ಮಂದಿ ಹೋಗತ ಉಳಿದವರು ೮೫ ಜನ ಎಂತ ತಾತ್ಪರ್ಯ. ಮತ್ತು ಶೇಷಶಬ್ದ ಆವರ್ತನವು. ೮೫ ಜನದೊಳಗೆ ಅವರ (ಕಡಿಮಿ) ಕಕ್ಷದವರು ೩ ಮಂದಿ ಹೋಗತ ಉಳಿದವರು ೮೨ ಜನ ಎಂತ ತಾತ್ಪರ್ಯ. ಈ ೮೨ ಮಂದಿ ೧೮ ನೇ ಕಕ್ಷದವರೆಂದು ತಿಳಿಯಬೇಕೆಂದು ತಾತ್ಪರ್ಯ.

**ವಿಶೇಷಾರ್ಥ :–**

ಮೇಲೆ ಹೇಳಿದ ಐದುಮಂದಿ ಸೂರ್ಯರ ಹೆಸರುಗಳು (೧೮ ನೇ ಕಕ್ಷದವರು) :–

೧. ಉರುಕ್ರಮದೇವರು.
೨. ಪುರಂದರನೆಂಬ ಇಂದ್ರ.
೩. ಮಿತ್ರನಾಮಕ ಸೂರ್ಯ.
೪. ವರುಣನಾಮಕ ಸೂರ್ಯ.
೫. ಪರ್ಜನ್ಯನಾಮಕ ಸೂರ್ಯ.

ಉಳಿದ ಆರುಮಂದಿ ಸೂರ್ಯರ ಹೆಸರುಗಳು :–

೧. ಅರ್ಯಮನಾಮಕ ಸೂರ್ಯ.
೨. ತ್ವಷ್ಟೃನಾಮಕ ಸೂರ್ಯ.
೩. ಭಗನಾಮಕ ಸೂರ್ಯ.
೪. ಪೂಷಾನಾಮಕ ಸೂರ್ಯ.
೫. ಸವಿತೃನಾಮಕ ಸೂರ್ಯ.
೬. ಧಾತೃನಾಮಕ ಸೂರ್ಯ.

ನಲವತ್ತೇಳುಮಂದಿ ಮರುತ್ತುಗಳ ಹೆಸರುಗಳು :–

| ೧. ಪ್ರಾಣಃ | ೧೩. ಉದ್ವಹಃ | ೨೫. ಶಚಿಃ | ೩೭. ಸಂಹುತಃ |
|---|---|---|---|
| ೨. ಅಪಾನಃ | ೧೪. ಸಂವಹಃ | ೨೬. ಸ್ವೇದಃ | ೩೮. ಸಿಂಧುಃ |
| ೩. ವ್ಯಾನಃ | ೧೫. ಸಂಯುವಃ | ೨೭. ಜಿತಃ | ೩೯. ರಕ್ತನಾಮಾ |
| ೪. ಉದಾನಃ | ೧೬. ವಿವಹಃ | ೨೮. ಗುರುಃ | ೪೦. ಕೃಷ್ಟಃ |
| ೫. ಸಮಾನಃ | ೧೭. ಶಂಕುಃ | ೨೯. ಜಂದುಃ | ೪೧. ಕಪಿಃ |
| ೬. ನಾಗಃ | ೧೮. ಕಾಲಃ | ೩೦. ಸಂವರ್ತಃ | ೪೨. ಶುಕಃ |
| ೭. ಕೃಕಲಃ | ೧೯. ಶ್ವಾಸಃ | ೩೧. ಕೀಲಹಃ | ೪೩. ಯತಿಃ |
| ೮. ಕೂರ್ಮಃ | ೨೦. ನಿಲಃ | ೩೨. ಶತಃ | ೪೪. ಭೀಮಃ |
| ೯. ದೇವದತ್ತಃ | ೨೧. ನಲಃ | ೩೩. ಸೌಮ್ಯಃ | ೪೫. ಹನೂಯಃ |
| ೧೦. ಧನಂಜಯಃ | ೨೨. ಪ್ರತಿಭವಃ | ೩೪. ಕವಿಃ | ೪೬. ಪಿಂಗಳಃ |
| ೧೧. ಅವಹಃ | ೨೩. ಕುಮುದಃ | ೩೫. ಜಡಃ | ೪೭. ಕಪನಃ |
| ೧೨. ಪರಾವಹಃ | ೨೪. ಕಾಂತಃ | ೩೬. ಮಂಡೂಕಃ. | |

ಅಂತೂ ೪೭ ಮಂದಿ.

ಹತ್ತುಮಂದಿ ರುದ್ರರ ಹೆಸರುಗಳು :—

೧. ರೈವತಃ. ೫. ವಾಮಃ. ೯. ಅಹಿರ್ಬುದ್ನ್ಯಃ.
೨. ಓಜಃ. ೬. ಉಗ್ರಃ. ೧೦. ಬಹುರೂಪಃ.
೩. ಭವಃ. ೭. ವೃಷಾಕಪಿಃ.
೪. ಭೀಮಃ. ೮. ಅಜೈಕಪಾತ್.

ಅಂತೂ ಹತ್ತುಮಂದಿ.

ಹತ್ತುಮಂದಿ ವಿಶ್ವೇದೇವತೆಗಳ ಹೆಸರುಗಳು :—

೧. ಪುರೂರವಾಃ. ೩. ಕಾಲಃ. ೫. ಧುರಿಃ. ೭. ಸತ್ಯಃ. ೯. ದಕ್ಷಃ
೨. ಆದ್ರವಾಃ. ೪. ಕಾಮಃ. ೬. ಲೋಚನಃ. ೮. ವಸುಃ. ೧೦. ಕ್ರತುಃ.

ಅಂತೂ ಹತ್ತುಮಂದಿ.

ಏಳುಮಂದಿ ವಸುಗಳ ಹೆಸರುಗಳು :—

೧. ದ್ರೋಣಃ. ೩. ಧ್ರುವಃ. ೫. ದೋಷಃ. ೭. ದ್ಯುನಾಮಕಃ.
೨. ಪ್ರಾಣಃ. ೪. ಅರ್ಕಃ. ೬. ವಸುಃ.

ಅಂತೂ ಏಳುಮಂದಿ.

ಅಶ್ವಿನೀದೇವತೆಗಳು ಎರಡುಮಂದಿ : ನಾಸತ್ಯ ಮತ್ತು ದಸ್ರ.

೧. ಋಭುಗಣ. ೨. ದ್ಯಾವಾ. ೩. ಪೃಥಿವಿ. ಅಂತೂ ಮೂರುಮಂದಿ.

ಮ್ಯಾಲೆ ಹೇಳಿದವರೆಲ್ಲಾ ಸೇರಿ ೮೫. ಇವರೇ ಉಕ್ತೇತರರು. ಮ್ಯಾಲೆ ಹೇಳಿದ ಉಕ್ತರು ೧೫ ಮಂದಿ, ಅಂತೂ ಸೇರಿ ನೂರು ಆಯಿತು. ಇವರೇ ಶತಸ್ಥರು ಎನತಕ್ಕವರು ಎಂತ ತಿಳಿಯಬೇಕು.

ಈ ಉಕ್ತೇತರರಾದ ೮೫ ಜನರಲ್ಲಿ ಅವರ (ಅಧಮ) ಪಾವಟಿಗೆಯಲ್ಲಿ ಪೃಥವೀ ದೇವೇರನ್ನ ಹೇಳಿದ್ದಾರೆ. ಎಲ್ಲಿ ಎಂದರೆ, ಕಕ್ಷತಾರಮ್ಯ ಸಂಧಿಯಲ್ಲೂನೂ, ಮತ್ತು ಈ ಸಂಧಿಯ ೧೫ ನೇ ಶ್ಲೋಕದಲ್ಲೀನೂ ಹೇಳಿದ್ದಾರೆ. ಅವತಾರ ತಾರತಮ್ಯದಲ್ಲಿರತಕ್ಕ ಧರಣೀದೇವೇರನ್ನ ಉಕ್ತೇತರಲ್ಲಿ ಸೇರಿಸಿದ್ದಾರೆ. ಅವರ (ಅಧಮ) ಪಾವಟಿಗೆಯಲ್ಲಿರತಕ್ಕ ಉಕ್ತರಲ್ಲೀನೂ, ಅವರ (ಅಧಮ) ಪಾವಟಿಗೆಯಲ್ಲಿರತಕ್ಕ ಧರಣೀದೇವೇರನ್ನ ಉಕ್ತರಲ್ಲೀನೂ ಸೇರಿಸೋವರಾಗಿದ್ದಾರೆ. ಪೃಥಿವೀದೇವೇರನ್ನ ಅವರ (ಅಧಮ) ಪಾವಟಿಗೆಯಲ್ಲಿ ಸೇರಿಸಕೂಡದು ಎಂತ ಕೆಲವರ ಪಕ್ಷ. ಪರಮಾತ್ಮನ ಪತ್ನಿಯಾದ ವಿರಾಟ್‌ದೇವಿಯೇ ಅವರ (ಅಧಮ) ಪಾವಟಿಗೆಯಾಗೇ ಇರೋಣದರಿಂದ ಪರಮಾತ್ಮಗೆ ಪತ್ನಿಯಾದ ಪೃಥಿವೀದೇವೇರನ್ನೂ ಅವರ ಪಾವಟಿಗೆಯಾಗೇ ಇಡೋಣವೆಂಬುದು ದೋಷವಲ್ಲ ಅಂತ ತಾತ್ಪರ್ಯ. ಇವರಿಬ್ಬರ ವ್ಯತಿರಿಕ್ತ ಉಳಿದವರು ಸಮಾನರೆಂತ ತಿಳಿಯಬೇಕು. ಅವರವರು ಆವೇಶಬಲದಿಂದ ಉತ್ತಮ ಕಕ್ಷಕ್ಕೆ ಬರೋವರಾಗಿದ್ದಾರೆ.

**ಇವರಿಗಿಂತಲಿ ಕೊರತೆಯೆನಿಪರು ।**
**ಚವನಸನಕಾದಿಗಳು ಪಾವಕ ।**
**ಕವಿ ಉಚಿಥ್ಯ ಜಯಂತ ಕಶ್ಯಪ ಮನುಗಳೇಕದಶ ॥**
**ಧೃವ ನಹುಷ ಶಶಿಬಿಂದು ಹೈಹಯ ।**
**ದವುಷಯಂತಿ ವಿರೋಚನನ ನಿಜ ।**
**ಕುವರ ಬಲಿ ಮೊದಲಾದ ಸಪ್ತೇಂದ್ರರು ಕಕುಸ್ಥ ಗಯ ॥ ೧೩ ॥**

ಶೇಷ ಶತಸ್ಥರಿಗೆ ಕಡಿಮೆಯಾದ ಕರ್ಮಜದೇವತೆಗಳ ತಾರತಮ್ಯ ಹೇಳತಾರೆ.

ಇವರಿಗಿಂತಲಿ–೧೮ ನೇ ಕಕ್ಷದವರಾದ ೮೫ ಜನರಿಗಿಂತಲೂ, ಕೊರತೆಯೆನಿಪರು– ಕಡಿಮಿ ಎನಿಸತಕ್ಕವರು ದಾರೆಂದರೆ, ಚವನ–ಚ್ಯವನಋಷಿಯು, ಸನಕಾದಿಗಳು–ಸನಕ, ಸನಂದನ, ಸನಾತನ, ಸನತ್ಕುಮಾರಾದಿಗಳು, ಪಾವಕ–ಅಗ್ನಿಪುತ್ರ ಪಾವಕ, ಕವಿ– ಶುಕ್ರಾಚಾರ್ಯರು, ಉಚಿಥ್ಯ – ಉಚಿಥ್ಯಮುನಿಯು, ಜಯಂತ – ಪಾದಾಭಿಮಾನಿ ಜಯಂತ, ಕಶ್ಯಪ–ಕಶ್ಯಪಋಷಿಯು, ಮನುಗಳೇಕದಶ–೧೧ ಮನುಗಳು (ಉಳಿದ ೩ ಮಂದಿ ಮನುಗಳು ಉತ್ತಮ ಕಕ್ಷದಲ್ಲಿ ಸೇರಿದವರು), ಧೃವ–ಧೃವರಾಯನು, ನಹುಷ – ನಹುಷರಾಯನು, ಶಶಿಬಿಂದು – ಶಶಿಬಿಂದುರಾಯನು, ಹೈಹಯ–ಹೈಹಯ ರಾಯನು, ದವುಷಯಂತಿ–ದೌಷ್ಯಂತಿರಾಯನು, ವಿರೋಚನನ–ವಿರೋಚನನ, ನಿಜ ಕುವರ – ಸ್ವಕೀಯಪುತ್ರನಾದ, ಬಲಿಮೊದಲಾದ – ಬಲಿ ಚಕ್ರವರ್ತಿಯೇ ಆದಿಯಾಗಿ, ಸಪ್ತೇಂದ್ರರು–ಏಳುಮಂದಿ ಇಂದ್ರರು (ಉಳಿದ ಏಳುಮಂದಿ ಇಂದ್ರರು ಉತ್ತಮ ಕಕ್ಷದಲ್ಲಿ ಸೇರಿದ್ದಾರೆ), ಕಕುಸ್ಥ–ಕಕುಸ್ಥರಾಯನು, ಗಯ–ಗಯರಾಯನು, ಇನ್ನೂ ಅವಶಿಷ್ಟ ಕರ್ಮಜರನ್ನು ಮುಂದಿನ ಶ್ಲೋಕದಲ್ಲಿ ಹೇಳತಾರೆ.

**ವಿಶೇಷಾರ್ಥ :**– ವಿವರ :– ೧. ಚ್ಯವನ, ೨. ಅದ್ಭುತ, ೩. ಶಂಭು, ೪. ವೈದ್ಯುತಿ, ೫. ದಿವಸ್ಪತಿ, ೬. ಸುಚಿ, ೭. ರಿತಧಾಮ.

ಮನುಗಳು :–

| | | |
|---|---|---|
| ೧. ಸ್ವಾರೋಚಿಷ | ೫. ಸಾವರ್ಣಿ | ೯. ದೇವಸಾವರ್ಣಿ |
| ೨. ಉತ್ತಮ | ೬. ದಕ್ಷಸಾವರ್ಣಿ | ೧೦. ರುದ್ರಸಾವರ್ಣಿ |
| ೩. ರೈವತ | ೭. ಬ್ರಹ್ಮಸಾವರ್ಣಿ | ೧೧. ಇಂದ್ರಸಾವರ್ಣಿ |
| ೪. ಚಾಕ್ಷುಷ | ೮. ಧರ್ಮಸಾವರ್ಣಿ | |

ಅಂತೂ ೧೧ ಮಂದಿ.

ವಿರೋಚನನ ನಿಜಕುವರ ಎಂದರೆ, ನಿಜ–ಜೀವನ ಸ್ವರೂಪದಲ್ಲಿ, ಬಾಹ್ಯದಲ್ಲಿ, ನಿಜವಾದ ತಾರತಮ್ಯ, ಪಂಚಭೇದಜ್ಞಾನವೇನು, ಪರಮಾತ್ಮನಲ್ಲಿ ನಿಜಭಕ್ತಿಯೇನು ಉಳ್ಳಂಥ, ದೈತ್ಯಯೋನಿಜನಾದಕಾಲಕ್ಕೂ ದೈತ್ಯನಲ್ಲದೆ ಇದ್ದಂಥ ಕುವರ, ವಿರೋಚನನ ಮಗನಾದಂಥ ಬಲಿಚಕ್ರವರ್ತಿಯೇ ಮೊದಲಾದ ಸಪ್ತೇಂದ್ರರು ಎಂದರೆ, ಎಲ್ಲಾ ಮಂದಿ ಇಂದ್ರರು, ಶಚಿಪತಿತ್ವ ಇಲ್ಲದೇನೇ, ಇಂದ್ರಪಟ್ಟ ಆಳತಕ್ಕ ಇಂದ್ರರು ಎಂತ ತಾತ್ಪರ್ಯ.

**ಪೃಥು ಭರತ ಮಾಂಧಾತ ಪ್ರೀಯ**
**ವ್ರತ ಮರುತ ಪ್ರಹ್ಲಾದ ಸುಪರಿ ।**
**ಕ್ಷಿತ ಹರಿಶ್ಚಂದ್ರಾಂಬರೀಷೋತ್ತಾನಪಾದ ಮುಖ ॥**
**ಶತ ಸುಪುಣ್ಯಶ್ಲೋಕರು ಗದಾ ।**
**ಭೃತಗಧಿಷ್ಠಾನರು ಸುಪ್ರಿಯ ।**
**ವ್ರತಗೆ ದ್ವಿಗುಣಾಧಮರು ಕರ್ಮಜರೆಂದು ಕರೆಸುವರು ॥ ೧೪ ॥**

ಅವಶಿಷ್ಟ ಕರ್ಮಜ ದೇವತೆಗಳನ್ನು ಹೇಳತಾರೆ.

ಪೃಥು–ಪೃಥು ಚಕ್ರವರ್ತಿ, ಮಾಂಧಾತ–ಮಾಂಧಾತ ಚಕ್ರವರ್ತಿ, ಪ್ರೀಯವ್ರತ–ಪ್ರಿಯವ್ರತರಾಯನು, ಭರತ–ಭರತರಾಯನು, ಮರುತ–ಮರುತರಾಯನು, ಪ್ರಹ್ಲಾದ–ಪ್ರಹ್ಲಾದರಾಯನು, ಸುಪರಿಕ್ಷಿತ–ಪರೀಕ್ಷಿದ್ರಾಯನು, ಹರಿಶ್ಚಂದ್ರ–ಹರಿಶ್ಚಂದ್ರರಾಯನು, ಅಂಬರೀಷರಾಯನು, ಉತ್ತಾನಪಾದ–ಉತ್ತಾನಪಾದರಾಯನು, ಮುಖ–ಮೊದಲಾದ, ಶತಪುಣ್ಯಶ್ಲೋಕರು–ನೂರು ಮಂದಿ ಪುಣ್ಯಶ್ಲೋಕರು, ಗದಾಭೃತಗೆ–ದುಷ್ಟನಿಗ್ರಹ, ಶಿಷ್ಟಪರಿಪಾಲನ ಮಾಡತಕ್ಕ, ಗದಾಯುಧ ಧರಿಸಿದ ರಾಜರಾಜೇಶ್ವರರೂಪನಾದ ಶ್ರೀ ಪರಮಾತ್ಮಗೆ, ಅಧಿಷ್ಠಾನರು–ಅಧಿಷ್ಠಾನರೂಪರು, ಅಂಥ ರೂಪದಿಂದ ಲೋಕರಕ್ಷಣಾರ್ಥ ಈ ನೂರು ಮಂದಿ ರಾಜರಲ್ಲಿ ಪ್ರವಿಷ್ಟರಾಗಿದ್ದಾರೆಂದು ತಾತ್ಪರ್ಯ. ಇವರು ಯಾವತ್ತೂ ಮಂದಿ, (ಪ್ರಮಾಣ :– "ಪೃಥುಹೈಹಯಾದಯೋ ಜೀವಾಸ್ತೇಷ್ವಾವಿಷ್ಟೋ ಹರಿಃ ಸ್ವಯಂ । ವಿಶೇಷಾವೇಶತಸ್ತೇಷು ಸಾಕ್ಷಾದ್ಧರ್ಯಂಶತಾವಚಃ ॥" ಇತಿ ಭಾಗವತೇ ಚತುರ್ದಶಾಧ್ಯಾಯೇ.) ಸುಪ್ರಿಯವ್ರತಗೆ–ಶ್ರೀಪರಮಾತ್ಮಗೆ ಪ್ರೀತಿಕರವಾದ ಸಮೀಚೀನವಾದ ಬ್ರಹ್ಮಚರ್ಯವ್ರತವುಳ್ಳ ಗಣೇಶಾದಿ ೬೫ ಮಂದಿಗೆ, ದ್ವಿಗುಣಾಧಮರು–ಎರಡು ಗುಣದಿಂದ ಅಧಮರು ; ಕರ್ಮಜರೆಂದು ಕರೆಸುವರು–ಪೂರ್ವೋಕ್ತರು ಕರ್ಮಜದೇವತೆಗಳೆಂದು ಕರಿಸುತ್ತಾರೆ ; ವಿಜಾತಿ ಎರಡು ಗುಣದಿಂದ ನೀಚರು, ಸಜಾತಿ ಎರಡು ಗುಣದಿಂದ ಸಮಾನರು. ಕುಬೇರಾದಿಗಳು ಕರ್ಮಜದೇವತೆಗಳಿಗೆ ಎರಡು ವಿಜಾತಿಗುಣದಿಂದ ಅಧಿಕರೆಂತ ತಾತ್ಪರ್ಯ.

**ವಿಶೇಷಾರ್ಥ :**–ಸುಪರೀಕ್ಷಿತ ಎಂದರೆ, ಸು–ಛಂದಾಗಿ ಪರಮಾತ್ಮನ ಚಕ್ರದಿಂದ, ಪರೀಕ್ಷಾರೂಪದಿಂದ ರಕ್ಷಿತನಾದಕಾರಣ, ಪರೀಕ್ಷಿದ್ರಾಜ ಎಂತ ತಾತ್ಪರ್ಯ. ಗದಾಭೃತಗಧಿಷ್ಠಾನರು ಎಂದರೆ, ಗದೆಯನ್ನು, ಭೃತ–ಧರಿಸಿ, ದುಷ್ಟಶಿಕ್ಷ, ಶಿಷ್ಟಪರಿಪಾಲನ ಮಾಡತಕ್ಕ ದಂಡರೂಪಿ ಪರಮಾತ್ಮಗೆ ಅಧಿಷ್ಠಾನರು, ಎಂದರೆ, ಪ್ರತಿಮಾ ಸದೃಶರಾದವರು. ಇವರಲ್ಲಿ ದಂಡರೂಪಿ ಪರಮಾತ್ಮನ ವಿಭೂತಿರೂಪದ ಸನ್ನಿಧಾನ, ಅತಿಶಯವೆಂತ ತಿಳಿಯಬೇಕು. ಕರ್ಮಜ ದೇವತೆಗಳು, ಎಂದರೆ, ಕರ್ಮದಿಂದ ದೇವತ್ವವನ್ನು ಹೊಂದಿದವರಾದ ಕಡಿಯಿಂದ ಕರ್ಮಜರೆಂತ ಕರಿಸೋವರಾಗತಾರೆ. ಆದರೆ, ನಿರಂಶರು ಕರ್ಮದಿಂದ ದೇವತೆ

ಗಳಾದವರೆಂತ ತಾತ್ಪರ್ಯವಲ್ಲ. ಅವರು ಸ್ವಾಭಾವಿಕರಾದ ದೇವತೆಗಳೇ. ದೇವತ್ವ, ಶಕ್ತ್ಯಾತ್ಮನಾ ಇದ್ದದ್ದು, ಕರ್ಮಸಾಧನದಿಂದ ವ್ಯಕ್ತವಾಗೋದಾಯಿತು. ಅಷ್ಟೇ ಹೊರತು, ನಿರಂಶರು ಕರ್ಮಮಾಡಿ ಅದರಿಂದ ದೇವತ್ವವನ್ನು ಹೊಂದಿದವರೆಂತ ತಿಳಿಯಬಾರದು. ಅದು ವಿಪರೀತಜ್ಞಾನ. ಇದರಿಂದ ಮಹಾನರಕಾದ್ಯನರ್ಥಗಳಾಗುತ್ತವೆ. ಆದ್ದರಿಂದ ವಿಪರೀತ ಜ್ಞಾನ ಆಗಬಾರದು.

**ನಳಿನಿ ಸಂಜ್ಞಾ ರೋಹಿಣೀ ಶ್ಯಾ ।**
**ಮಲ ವಿರಾಟ್ ಪರ್ಜನ್ಯರಧಮರು ।**
**ಎಲರಮಿತ್ರನ ಮಡದಿ ದ್ವಿಗುಣಾಧಮಳು ಬಾಂಬೊಳಿಗೆ ॥**
**ಜಲಮಯ ಬುಧಾಧಮ ದ್ವಿಗುಣದಿ ।**
**ಕೆಳಗೆನಿಸುವಳುಷಾ ಶನೈಶ್ಚರ ।**
**ರಿಳಿಯು ಈರುಗುಣಾಧಮನುಷಾದೇವಿ ದೆಶೆಯಿಂದ ॥ ೧೫ ॥**

ಇಪ್ಪತ್ತನೇ ಕಕ್ಷದ ಕರ್ಮಜರ ತಾರತಮ್ಯ ಹೇಳತಾರೆ.

ನಳಿನಿ–೧೯ ನೇ ಕಕ್ಷದವರಾದ ಕರ್ಮಜರಿಗಿಂತಲೂ ತದವರರಾದ, ೨೦ ನೇ ಕಕ್ಷದವರಾದ ಕರ್ಮಜರಾದ ವರುಣದೇವರ ಪತ್ನಿ ನಳಿನಿಸಂಜ್ಞಾಳಾದ (ಸಾಂಕೇತರಾದ) ಗಂಗಾದೇವೇರು, ಸಂಜ್ಞಾ–ಸೂರ್ಯದೇವರ ಪತ್ನಿ ಸಂಜ್ಞಾದೇವೇರು, ರೋಹಿಣೀ–ಚಂದ್ರದೇವರ ಪತ್ನಿ ರೋಹಿಣೀದೇವೇರು, ಶ್ಯಾಮಲ–ಯಮದೇವರ ಪತ್ನಿ ಶ್ಯಾಮಲಾದೇವೇರು, ವಿರಾಟ್–ಕಾಮಪುತ್ರ ಅನಿರುದ್ಧನ ಹೆಂಡತಿ ವಿರಾಟ್‌ದೇವೇರು (ಇವರಿಗೆ ಉಷಾದೇವಿ ಎಂತ ನಾಮವುಂಟು), ಪರ್ಜನ್ಯರು–ಪರ್ಜನ್ಯನಾಮಕ ಸೂರ್ಯದೇವರು, ಅಧಮರು–ಈ ಆರುಮಂದಿಯು ೧೯ ನೇ ಕಕ್ಷಾದವರಾದ, ಬಲ್ಯಾದಿ ಕರ್ಮಜರಿಗಿಂತ ಎರಡು ವಿಜಾತಿ ಗುಣದಿಂದ ಅಧಮರು, ಎರಡು ಸಜಾತಿ ಗುಣದಿಂದ ಸಮಾನರು. ೧೯ ನೇ ಕಕ್ಷದವರಾದ ಬಲ್ಯಾದಿ ಕರ್ಮಜರು ೨೦ ನೇ ಪಾವಟಿಗೆಗೆ ಅವರರಾದ, ಗಂಗಾ ಪರ್ಜನ್ಯಾದಿಗಳಿಗಿಂತ ವಿಜಾತಿ ದ್ವಿಗುಣೋತ್ತಮರು, ಎಲರಮಿತ್ರನ ಮಡದಿ–ಘಾಳಿಗೆ ಸ್ನೇಹಿತನಾದವ ಅಗ್ನಿ, ಆತನ ಪತ್ನಿ ಸ್ವಾಹಾದೇವೇರು, ದ್ವಿಗುಣಾಧಮಳು–ಗಂಗಾ ಪರ್ಜನ್ಯಾದಿಗಳಿಗಿಂತ ಎರಡು ವಿಜಾತಿ ಗುಣದಿಂದ ಅಧಮರು, ಎರಡು ಸಜಾತಿ ಗುಣದಿಂದ ಸಮಾನರು. ಗಂಗಾ ಪರ್ಜನ್ಯಾದಿಗಳು ಎರಡು ವಿಜಾತಿಗುಣದಿಂದ ಸ್ವಾಹಾದೇವಿಗೆ ಉತ್ತಮರು, ಜಲಮಯ ಬುಧ–ಜಲಾಭಿಮಾನಿಯಾದ ಬುಧ, ಬಾಂಬೊಳಿಗೆ–೨೦ ನೇ ಕಕ್ಷದವರಾದ ಗಂಗಾದೇವಿ ಮೊದಲಾದವರಿಗೆ, ದ್ವಿಗುಣದಿ–ಎರಡು ಗುಣದಿಂದ, ಅಧಮ–ಅಧಮನು ಎಂಬೋಣದರಿಂದ ೨೧ ನೇ ಕಕ್ಷದವರಾದ ಸ್ವಾಹಾದೇವೇರಿಗೆ ಒಂದು ಗುಣದಿಂದ ಕಡಿಮೆ ಎಂಬುದು ಅರ್ಥಾತ್ ಸಿದ್ಧವು; ಒಂದು ವಿಜಾತಿಗುಣದಿಂದ ಅಧಮ, ಒಂದು ಸಜಾತಿಗುಣದಿಂದ ಸಮನು. ಬುಧನಗಿಂತಲೂ ಸ್ವಾಹಾದೇವೇರು ಒಂದು ವಿಜಾತಿ

ಗುಣದಿಂದ ಉತ್ತಮರು. ಉಷಾ—ಅಶ್ವಿನೀ ಭಾರ್ಯೆ ಉಷಾದೇವೇರು, ಕೆಳಗೆನಿಸುವಳು—ಬುಧನಗಿಂತ ಎರಡು ವಿಜಾತಿ ಗುಣದಿಂದ ನೀಚರು ; ಎರಡು ಸಜಾತಿ ಗುಣದಿಂದ ಸಮರು ಎಂದೆನಿಸುವರು. ಎರಡು ವಿಜಾತಿಗುಣದಿಂದ ಬುಧನು ಉಷಾದೇವೇರಿಗಿಂತಲೂ ಉತ್ತಮನು. ಉಷಾದೇವಿ ದೆಶೆಯಿಂದ—ಉಷಾದೇವೇರಿಗಿಂತ, ಇಳೆಯು—ಭೂದೇವಿ ಎಂತ ಅರ್ಥ, ಈ ಪದದ ಆವರ್ತನವು ಈ ಭೂದೇವಿ ಎರಡು ವಿಜಾತಿ ಗುಣದಿಂದ ಉಷಾದೇವೇರಿಗೆ ನೀಚರು, ಎರಡು ಸಜಾತಿ ಗುಣದಿಂದ ಸಮಾನರು. ಉಷಾದೇವೇರು ಎರಡು ವಿಜಾತಿ ಗುಣದಿಂದ ಭೂದೇವಿಗೆ ಉತ್ತಮರು. ಶನೈಶ್ಚರ—ಶನೈಶ್ಚರನು, ಧರಣೀದೇವೇರಿಗಿಂತಲೂ, ಈರುಗುಣಾಧಮನು—ಎರಡು ವಿಜಾತಿ ಗುಣದಿಂದ ನೀಚನು. ಎರಡು ಸಜಾತಿ ಗುಣದಿಂದ ಸಮಾನನು ; ವಿಜಾತಿ ಎರಡು ಗುಣದಿಂದ ಧರಣೀದೇವಿ ಅಂದರೆ, ಭೂದೇವಿ, ಈ ಶನೈಶ್ಚರಗೆ ಉತ್ತಮರೆಂತ ತಾತ್ಪರ್ಯ. (೨೦) ಗಂಗಾದಿಗಳು ೨, (೨೧) ಸ್ವಾಹಾದೇವಿ ೨, (೨೨) ಬುಧ ೧.

**ಎರಡುಗುಣ ಕರ್ಮಾಧಿಪತಿ ಪು ।**
**ಷ್ಕರ ಕಡಿಮೆಯಾಜಾನ ದಿವಿಜರು ।**
**ಚಿರಪಿತೃಗಳಿಂದುತ್ತಮರು ಕಿಂಕರರು ಪುಷ್ಕರಗೆ ॥**
**ಸುರಪನಾಲಯ ಗಾಯಕೋತ್ತಮ ।**
**ರೆರಡೈದುಗುಣದಿಂದಧಮ ತುಂ ।**
**ಬುರಗೆ ಸಮ ನೂರುಕೋಟಿಋಷಿಗಳು ನೂರುಜನರುಳಿದು ॥ ೧೬ ॥**

ಪುಷ್ಕರ, ಆಜಾನಜರ ತಾರತಮ್ಯವಿಚಾರ ಹೇಳತಾರೆ.

ಕರ್ಮಾಧಿಪತಿ ಪುಷ್ಕರ—ಶನೈಶ್ಚರಗಿಂತಲೂ ಕರ್ಮಾಭಿಮಾನಿಯಾದ ಪುಷ್ಕರನು, ಎರಡುಗುಣ ಕಡಿಮೆಯು—ಎರಡು ವಿಜಾತಿ ಗುಣದಿಂದ ನೀಚನು, ಎರಡು ಸಜಾತಿಗುಣದಿಂದ ಸಮಾನನು ; ಎರಡು ವಿಜಾತಿಗುಣದಿಂದ ಶನೈಶ್ಚರನು ಪುಷ್ಕರನಿಗಿಂತ ಉತ್ತಮನು. ಆಜಾನದಿವಿಜರು—ಈ ಪುಷ್ಕರನ ತರುವಾಯ ತಾರತಮ್ಯದಲ್ಲಿ ಆಜಾನಜ ದೇವತೆಗಳು ; ದೇವಗಂಧರ್ವರ ಪರಿಯಂತ ಈ ಆಜಾನಜರು, ಪುಷ್ಕರಗೆ—ಪುಷ್ಕರಗೆ, ಕಿಂಕರರು—ಅವರರು (ಅಧಮರು) ; ಈ ಆಜಾನಜರಲ್ಲಿ ವಿವರ :— ಇವರಲ್ಲಿ ತಾರತಮ್ಯ ಎರಡು ಪ್ರಕಾರ ; ೧. ಆಖ್ಯಾತರು ; ಇವರು ಕರ್ಮಜರಿಂದ ಜನಿತರು ; ೨. ಅನಾಖ್ಯಾತರು ; ಇವರು ಆಖ್ಯಾತ ಆಜಾನಜರಿಂದ ಜನಿತರು ; ಅಂತು ಎರಡು ಪ್ರಕಾರ. ಆಖ್ಯಾತ ಆಜಾನಜರಿಂದ ಅನಾಖ್ಯಾತ ಆಜಾನಜರು ಅವರರು. ಈ ಅನಾಖ್ಯಾತ ಆಜಾನಜರಲ್ಲಿ ತಾರತಮ್ಯ ವಿವರ :— ವಿಬುಧರು (ಒಂದು), ಅಸುರರು ರಾಕ್ಷಸರು ಚಾರಣರು ಮೊದಲಾದವರು ಉತ್ತಮರು. ಇವರಿಗಿಂತಲೂ ನೂರು ಕಡಿಮೆ ನೂರು ಕೋಟಿ ಋಷಿಗಳು, ಮ್ಯಾಲಿನ ವಿಬುಧಾದಿಗಳಿಗಿಂತ ಅವರರು (ಎರಡು), ಇವರಿಗಿಂತ ಅವರರು ಚಿರಪಿತೃಗಳು (ಮೂರು), ಇವರಿಗಿಂತ ಅವರರು ದೇವಗಂಧರ್ವರು (ನಾಲ್ಕು). ಈ ನಾಲ್ಕು ಮಂದಿ ಅನಾಖ್ಯಾತರು.

ಆಜಾನಜರಲ್ಲಿ ಇರುವ ತಾರತಮ್ಯ ಇದು. ಆಖ್ಯಾತರು, ಅನಾಖ್ಯಾತರು ಎಂತ ಎರಡು ಪ್ರಕಾರ ಆಜಾನಜರಲ್ಲಿಯೂ ಇದ್ದಾರೆಂಬೋದಕ್ಕೆ ಪ್ರಮಾಣ :– "ಅನಾಖ್ಯಾತಾ ದೇವತಾಸ್ತು ಜಾತಾ ದೇವಕುಲೇ ಚ ಯಾಃ| ಆಜಾನದೇವತಾಸ್ತಾ ಹಿ ತಾಭ್ಯೋಽಗ್ರ್ಯಾಃ ಕರ್ಮದೇವತಾಃ || ಗಂಧರ್ವಾಸ್ತುಂಬುರಮುಖಾಃ ಶತಮಪ್ಸರಸಾಂ ಶತಂ | ನಾರದಾದೀನುಚಿಥ್ಯಂತಾನ್ ವಿನಾ ತು ಋಷಯೋಽಖಿಲಾಃ ||" ಅರ್ಥ: ಆಜಾನಜರ ಸಮೂಹವೊಂದು, ಅದರಲ್ಲಿ ಎರಡು ಪ್ರಭೇದ. ಅದರನ್ನ ವಿವರಮಾಡುತ್ತೇವೆ :– ಕರ್ಮದೇವತೆಗಳು ಅಂತ ಒಂದು; ಇವರು ಕರ್ಮಜ ದೇವತೆಗಳಿಂದ ಜನಿತರಾದ್ದರಿಂದ, ಕರ್ಮದೇವತೆಗಳೆಂದು ಕರೆಸಿದರು. ಇವರೇ ಆಖ್ಯಾತಸಾಂಕೇತ ಆಜಾನಜರು. ಅನಾಖ್ಯಾತರು ಅಂತ ಒಂದು; ಇವರು ಆಖ್ಯಾತರಾದ ಆಜಾನಜರಿಂದ ಉತ್ಪನ್ನರಾದವರಾದ್ದರಿಂದ ಅನಾಖ್ಯಾತರೆಂದು ಕರೆಸಿದರು. ಆಖ್ಯಾತ ಅನಾಖ್ಯಾತಕ್ಕೆ ವಿವರ :–ಕರ್ಮಜ ದೇವತೆಗಳು ಅಮುಖ್ಯ ತತ್ತ್ವಾಭಿಮಾನಿಗಳೆಂದು ಖ್ಯಾತರಾದ್ದರಿಂದ, ಇವರಿಂದ ಜನಿಸಿದವರು, ಆಖ್ಯಾತರೆಂದು ಕರೆಸಿದರು. ಈ ಆಖ್ಯಾತರು ತತ್ತ್ವಾಭಿಮಾನಿಗಳೆಂದು ಖ್ಯಾತರಲ್ಲ. ಆದ್ದರಿಂದ, ಇವರಿಂದ ಜನಿಸಿದವರು ಅನಾಖ್ಯಾತರೆಂದು ಕರೆಸಿದರು. ಆಖ್ಯಾತ, ಅನಾಖ್ಯಾತರೆಂಬೋದಕ್ಕೆ ಇದು ಕಾರಣವು.

ನೂರುಕೋಟಿ ಋಷಿಗಳು–ನೂರುಕೋಟಿ ಋಷಿಗಳು ಇವರೊಳಗೆ, ನೂರು ಜನರುಳಿದು – ೧೦೦ ಜನ ಹೋಗತ, ಅವಶಿಷ್ಟ ಉಳಿದ ಋಷಿಗಳೆಂತ ಅರ್ಥ. ಇಂದುತ್ತಮರು–ಅವಶಿಷ್ಟ ಉಳಿದ ಈ ಋಷಿಗಳಿಗಿಂತ ಉತ್ತಮರಾದವರು : ೧. ವಿಬುಧರು, ೨. ರಾಕ್ಷಸರು, ೩. ಅಸುರರು, ೪. ಚಾರಣರು, ಇವರೇ ಮೊದಲಾದ ಅನೇಕ ಮಂದಿ, ಉತ್ತಮರು–ವಿಬುಧಾದಿಗಳಿಗಿಂತ ಉತ್ತಮರು. ಆಖ್ಯಾತರಾದವರು ನೂರು ಕಡಿಮೆ ನೂರುಕೋಟಿ ಋಷಿಗಳು. ೧೦೦೦ ಘೃತಾಚಿ, ಮೇನಕಾ, ರಂಭಾ, ಊರ್ವಶಿ, ತಿಲೋತ್ತಮೇ, ಸುಕೇಶೀ, ಶಬರೀ, ಮಂಜುಘೋಷಾ, ಪಿಂಗಳಾ, ಇತ್ಯಾದಿ "ಗಂಧರ್ವಾಪ್ಸರಸಾಂ ಸಾಹಸ್ರಂ ಪರಿಕೀರ್ತಿತಂ | ಆಜಾನಜಸಮಾ ಹ್ಯೇತಾಃ ಕರ್ಮಜಾಶ್ಚ ಶತಾವರಾಃ |" ಇದರಲ್ಲಿ ೯೨ ಮಂದಿ, ಕರ್ಮಜರಲ್ಲಿ ಸೇರಿದ್ದಾರೆ. ೧೬,೧೦೦ ಗೋಪ ಸ್ತ್ರೀಯರು, ೯೨ ಮಂದಿ ಗಂಧರ್ವರು, ಇವರೇಮೊದಲಾದವರು ಆಖ್ಯಾತರಾದ ಆಜಾನಜ ದೇವತೆಗಳು. ಅನಾಖ್ಯಾತರೊಳಗೆ ತಾರತಮ್ಯ, "ಇಂದುತ್ತಮರು" ಎಂಬುದು ಆವರ್ತನ. ನೂರು ಕಡಿಮೆ ನೂರುಕೋಟಿ ಋಷಿಗಳಿಂದ ಉತ್ತಮರಾದ, ಆಖ್ಯಾತರಿಂದ ಅವರರಾದ ಪೂರ್ವೋಕ್ತರಾದ ೧. ವಿಬುಧರು, ೨. ರಾಕ್ಷಸರು, ೩. ಅಸುರರು, ೪. ಚಾರಣರು, ಇವರೇ ಮೊದಲಾದ ಅನೇಕಮಂದಿ ಅನಾಖ್ಯಾತ ದೇವತೆಗಳು, ಆಖ್ಯಾತರಿಂದ ಅವರರು. "ನೂರುಕೋಟಿ ಋಷಿಗಳು ನೂರುಜನರುಳಿದು" ಈ ಪದವೂ ಆವರ್ತನವೇ. ನೂರು ಕೋಟಿ ಋಷಿಗಳ ಒಳಗೆ ನೂರುಜನ ಹೊರ್ತು, ಅವಶಿಷ್ಟರಾದ ಋಷಿಗಳು ೨೭ ನೇ ಕಕ್ಷದವರಾದ ಅನಾಖ್ಯಾತರಾದ ವಿಬುಧಾದಿಗಳಿಗಿಂತಲೂ ನೀಚರು. ವ್ಯಾಲಿನ ಈ ಋಷಿಗಳಿಗಿಂತಲೂ ವಿಬುಧಾದಿಗಳು ಉತ್ತಮರೆಂದು ಹೇಳಿರೋಣದರಿಂದ, ವಿಬುಧಾದಿ

ಗಳಿಗಿಂತ ಈ ಋಷಿಗಳು ಅವರರೆಂಬುದು ಅರ್ಥಾತ್ ಸಿದ್ಧವು. ಇವರೂನೂ ಅನಾಖ್ಯಾತರಲ್ಲಿ ಗಣನ. ಚಿರಪಿತೃಗಳು–ನೂರು ಕಡಿಮೆ ನೂರುಕೋಟಿ ಋಷಿಗಳಿಗಿಂತ ಅವರರಾದವರು ಚಿರಪಿತೃಗಳು, ಸುರಪನಾಲಯ – ದೇವೇಂದ್ರನ ಆಲಯ (ಸ್ವರ್ಗದಲ್ಲಿ), ಗಾಯಕ–ಗಾನಮಾಡತಕ್ಕ ದೇವಗಂಧರ್ವರೆಂದು ತಾತ್ಪರ್ಯ. ಇವರು ಚಿರಪಿತೃಗಳಿಗಿಂತ ಅವರರು. ಎರಡೈದುಗುಣದಿಂದಧಮ–(ಎರಡೈದು) ಹತ್ತು ಗುಣದಿಂದ ಅಧಮರು ಅಂದರೆ, ೨೬ ನೇ ಕಕ್ಷದಾರಭ್ಯ ೩೦ ನೇ ಕಕ್ಷದವರಿಗೂ ಪರಸ್ಪರ ದಶಗುಣಾಧಮರು ; ಹತ್ತು ಸಜಾತಿ ಗುಣದಿಂದ ಸಮಾನರು, ಹತ್ತು ವಿಜಾತಿ ಗುಣದಿಂದ ಉತ್ತಮರು. ತುಂಬುರಗೆ ಸಮ–ನೂರುಕೋಟಿ ಋಷಿಗಳೊಳಗೆ ನೂರು ಕಡಿಮೆ ಎಂತ ಹೇಳಿದ ಈ ನೂರು ಋಷಿಗಳು, ತುಂಬುರಾದಿ ಗಂಧರ್ವರಿಗೆ ಸಮರು. ತುಂಬುರರ ಸಂಗಡ ಕರ್ಮಜರಲ್ಲಿ ಸೇರಿದ್ದಾರೆ. ತದ್ವತ್, ನೂರುಕೋಟಿ ಋಷಿಗಳಲ್ಲಿ ಕಡಿಮೆ ಆದ ನೂರು ಋಷಿಗಳೂ ಕರ್ಮಜರಲ್ಲಿ ಸೇರಿದ್ದಾರೆ. ೨೬ನೇ ಕಕ್ಷದಾರಭ್ಯ ೩೦ನೇ ಕಕ್ಷದವರಿಗೂ ಯಾವತ್ತೂರೂ, ಆಜಾನಜರು. ಇದರಲ್ಲಿ ೨೬ ನೇ ಕಕ್ಷದವರು ಆಖ್ಯಾತ ಆಜಾನಜರು, ೨೭ ನೇ ಕಕ್ಷದಾರಭ್ಯ ೩೦ ನೇ ಕಕ್ಷದವರಿಗೂ ಇರತಕ್ಕ ದೇವತೆಗಳು ಅನಾಖ್ಯಾತ ಆಜಾನಜರೆಂದು ತಾತ್ಪರ್ಯ.

**ಅವರವರ ಪತ್ನಿಯರು ಅಪ್ಸರ ।**
**ಯುವತಿಯರು ಸಮ ಉತ್ತಮರನುಳಿ ।**
**ದವರರೆನಿಪರು ಮನುಜಗಂಧರ್ವರು ದ್ವಿಷಡ್ಗುಣದಿ ॥**
**ಕುವಲಯಾಧಿಪರೀರೈದು ಗುಣ ।**
**ವವನಿಪ ಸ್ತ್ರೀಯರು ದಶೋತ್ತರ ।**
**ನವತಿಗುಣದಿಂದಧಮರೆನಿಪರು ಮಾನುಷೋತ್ತಮರು ॥ ೧೭ ॥**

ಆಜಾನಜಪತ್ನೇರು ಮೊದಲಾದವರ ತಾರತಮ್ಯ ಹೇಳತಾರೆ. ಆಜಾನಜರು, ಚಿರಪಿತೃಗಳು, ಋಷಿಗಳು, ದೇವಗಂಧರ್ವರು, ಇವರಿವರ ಪತ್ನೇರು ಅಪ್ಸರಸ್ತ್ರೀಯರಿಗೆ ಸಮಾನರು.

ಉಳಿದ–ದೇವಗಂಧರ್ವರ ತರುವಾಯ ಉಳಿದವರು ದಾರೆಂದರೆ, ಅವರವರ ಪತ್ನಿಯರು–ಆಯಾ ಆಜಾನಜ ದೇವತೆಗಳ ಪತ್ನಿಯರು, ಅಪ್ಸರ ಯುವತಿಯರು–ಅನ್ಯರಾದ ಕೇವಲ ಅಪ್ಸರಸ್ತ್ರೀಯರು, ಇವರೊಳಗೆ, ಸಮ–ಸಮರು. ಉತ್ತಮರನು–ಉತ್ತಮರ ತಿಳಿಯಬೇಕೆಂದು ತಾತ್ಪರ್ಯ. ಕಿಂಚಿತ್ ನ್ಯೂನಾಧಿಕ್ಯದಿಂದ ತಾರತಮ್ಯವೆಂದು ತಾತ್ಪರ್ಯ. ಇವರು ದೇವಗಂಧರ್ವರಲ್ಲೇ ಅಂತರ್ಭೂತರು. ಆದರೂ ತಾರತಮ್ಯದಲ್ಲಿ ದೇವಗಂಧರ್ವರಿಗಿಂತ ಅವರರು. ಆದ್ದರಿಂದ ಪ್ರತ್ಯೇಕ ತಾರತಮ್ಯ ಹೇಳಿದ್ದಾರೆ. ಮಾನುಷೋತ್ತಮರ ನಂತರ ಇರತಕ್ಕ ತೃಣಜೀವರ ತಾರತಮ್ಯ ಎಂಬುದು ಬಿಟ್ಟು ಮಾನುಷೋತ್ತಮರ ಪರಿಯಂತ ಕೆಲವು ಗ್ರಂಥಾಂತರಗಳಲ್ಲಿ ಹೇಳಿ, ತೃಣಾದಿಗಳು ಮಾನು

ಷೋತ್ತಮರಲ್ಲಿ ಅಂತರ್ಭೂತರೆಂದು ಹೇಳೋವರಾಗಿದ್ದಾರೆ. ಅದರಂತೆ ದೇವಗಂಧರ್ವಾನಂತರ ಬರತಕ್ಕ ತಾರತಮ್ಯದವರನ್ನು ವಿಶೇಷ ಪ್ರಸಿದ್ಧಿಮಾಡದೇಬಿಡೋವರಾಗಿದ್ದಾರೆ. ೩೩ನೇ ಕಕ್ಷದ ಮನುಜಗಂಧರ್ವರು, ಇವರಲ್ಲಿ ಇಬ್ಬರು, ದೇವಗಂಧರ್ವರಲ್ಲಿ ಅಂತರ್ಭೂತರೆಂದು ತಾತ್ಪರ್ಯ. ಅವರರೆನಿಪರು—ಆಜಾನಜರ ಪತ್ನಿಯರಿಗಿಂತ ಅವರರೆನಿಸಿಕೊಳ್ಳುತ್ತಾರೆ. ದ್ವಾರೆಂದರೆ, ಮನುಜಗಂಧರ್ವರು—ನಿರಂಶರಾದ ಮಾನುಷಗಂಧರ್ವರು, ದ್ವಿ—ಎರಡುಗುಣದಿಂದ ಅವರರೆಂತ ಅರ್ಥ. ಈ ದಿಕ್ಪ್ರದರ್ಶನದಿಂದ ಆಜಾನಜಪತ್ನಿಯರು ದೇವಗಂಧರ್ವರಿಗೆ ಎರಡು ಗುಣದಿಂದ ಅವರರೆಂದು ತಾತ್ಪರ್ಯ. ೩೪ನೇ ಕಕ್ಷದ ಮಾನುಷಚಕ್ರವರ್ತಿಗಳು, ಕುವಲಯಾಧಿಪರು—ಮಾನುಷಗಂಧರ್ವರಿಗಿಂತ ಭೂವಲಯಕ್ಕೆ ಅಧಿಪರಾದ ಮಾನುಷಚಕ್ರವರ್ತಿಗಳು, ಷಡ್ಗುಣದಿ—ಆರು ವಿಜಾತಿಗುಣದಿಂದಧಮರು. ವಿಜಾತಿ ಅಧಮ ; ಸಜಾತಿ ಸಮ ; ವಿಜಾತಿ ಉತ್ತಮ. ಇವು ಮೂರೂ ಪೂರ್ವೋಕ್ತದಂತೆ ಸರ್ವರಿಗೂ ಗ್ರಾಹ್ಯಮಾಡಿಕೋಬೇಕು. ೩೫ನೇ ಕಕ್ಷದ ಅವನಿಪಸ್ತ್ರೀಯರು, ಅವನಿಪಸ್ತ್ರೀಯರು—ಮಾನುಷಚಕ್ರವರ್ತಿಗಳಿಗಿಂತ ಅಧಮರಾದವರು, ಮಾನುಷಚಕ್ರವರ್ತಿಗಳ ಪತ್ನಿಯರು. ಈರೈದುಗುಣವು—ಹತ್ತುವಿಜಾತಿಗುಣದಿಂದ ಅಧಮರೆಂದು ತಾತ್ಪರ್ಯ. ೩೬ನೇ ಕಕ್ಷದ, ಮಾನುಷೋತ್ತಮರು—ಅವನಿಪಸ್ತ್ರೀಯರಿಂದ ನೀಚರು ಮಾನುಷೋತ್ತಮರು, ದಶೋತ್ತರನವತಿಗುಣದಿಂದ—ನೂರು ಗುಣದಿಂದ, ಅಧಮರೆನಿಪರು—ವಿಜಾತಿ ಗುಣದಿಂದ ಅಧಮರೆಂತ ಕರೆಸುವರಾಗುತಾರೆಂತ ತಾತ್ಪರ್ಯ.

**ಸತ್ತ್ವಸತ್ತ್ವರು ಸತ್ತ್ವರಾಜಸ ।**
**ಸತ್ತ್ವತಾಮಸ ಮೂವರು ರಜ ।**
**ಸ್ವತತ್ತ್ವಾಧಿಕಾರಿಗಳು ಭಗವದ್ಭಕ್ತರೆನಿಸುವರು ॥**
**ನಿತ್ಯಬದ್ಧರು ರಜೋರಜರು ।**
**ತೃತ್ತಿ ಭೂ ಸ್ವರ್ಗದೊಳು ನರಕದಿ ।**
**ಪೃಥ್ವಿಯೊಳು ಸಂಚರಿಸುತಿಪ್ಪರು ರಜಸ್ತಾಮಸರು ॥ ೧೮ ॥**

ಮುಕ್ತಿಯೋಗ್ಯರ, ನಿತ್ಯಸಂಸಾರಿಗಳ ಗುಣತಾರತಮ್ಯ ಹೇಳತಾರೆ.

ರಜಸ್ಸತ್ತ್ವಾಧಿಕಾರಿಗಳು—ಸೃಷ್ಟಿಪ್ರಾರಂಭದಲ್ಲಿ, ಅಸಂಸೃಷ್ಟಗುಣತ್ರಯಗಳ ತೆಗೆದು ಒಂದರಲ್ಲಿ ಒಂದಧಿಕ ನ್ಯೂನತೆಗಳಿಂದ ಮೇಳನಮಾಡಿ, ಗುಣತ್ರಯಗಳ ವೈಷಮ್ಯಐದಿಸಿ೧, ಸತ್ತ್ವಪ್ರಾಚುರ್ಯಯುಕ್ತ ರಜಗುಣವನ್ನ ಏರ್ಪಡಿಸಿ, ಪ್ರಾಚುರ್ಯವಿಶೇಷದಿಂದ ಸತ್ತ್ವಗುಣವನ್ನಾಗಿ ಮಾಡಿದ. ತದ್ವತ್, ರಜಃಪ್ರಾಚುರ್ಯದಿಂದ ರಜೋಗುಣವನ್ನಾಗಿ ಮಾಡಿದ. ತದ್ವತ್, ತಮಃಪ್ರಾಚುರ್ಯದಿಂದ ತಮೋಗುಣವನ್ನಾಗಿ ಮಾಡಿದ.

ಅಂತೂ, ಸೃಷ್ಟಿಗೆ ಯೋಗ್ಯವಾದ ಸತ್ತ್ವಗುಣ, ರಜೋಗುಣ, ತಮೋಗುಣ ಈ ಮೂರು ಗುಣಗಳ ಈ ಪ್ರಕಾರ ಸೃಷ್ಟಿಮಾಡೋವನಾದ. ಈ ಒಂದೊಂದರಲ್ಲಿ ಮೂರು ಮೂರು ಪ್ರಕಾರ ವಿಭಾಗ ಮಾಡೋವನಾದ.

ಅದರ ವಿವರ :–

| | | |
|---|---|---|
| ೧. ಸತ್ತ್ವಗುಣದಲ್ಲಿ ಮೂರುಭಾಗ— | ೧. ಸತ್ತ್ವಸತ್ತ್ವಃ | ೧. |
| | ೧. ಸತ್ತ್ವರಜಃ | ೨. |
| | ೧. ಸತ್ತ್ವತಮಃ | ೩. |
| ೧. ಮ್ಯಾಲಿನ ರಜೋಗುಣದಲ್ಲಿ ಮೂರುಭಾಗ— | ೧. ರಜಃಸತ್ತ್ವಃ | ೪. |
| | ೧. ರಜೋರಜಃ | ೫. |
| | ೧. ರಜಸ್ತಮಃ | ೬. |
| ೧. ಮ್ಯಾಲಿನ ತಮೋಗುಣದಲ್ಲಿ ಮೂರುಭಾಗ— | ೧. ತಮಸ್ಸತ್ತ್ವಃ | ೭. |
| | ೧. ತಮೋರಜಃ | ೮. |
| | ೧. ತಮಸ್ತಮಃ | ೯. |

ಅಂತೂ ೯ ವಿಭಾಗ

ರಜಃಸತ್ತ್ವಾಧಿಕಾರಿಗಳೆಂದರೆ, ಸತ್ತ್ವ ಪ್ರಾಚುರ್ಯವಾದ ರಜಃ ಎಂತ ತಾತ್ಪರ್ಯ. ಏತಾದೃಶ ಸತ್ತ್ವಗುಣದಿಂದ ದೇಹಗಳುಳ್ಳ ಅಧಿಕಾರಿಗಳು ದಾರೆಂದರೆ ಅವರನ್ನ ಹೇಳತಾರೆ. ಸತ್ತ್ವಸತ್ತ್ವರು–ಪೂರ್ವೋಕ್ತ ಸತ್ತ್ವಗುಣದಲ್ಲಿ ವಿಭಾಗವಾದ ಸತ್ತ್ವ ಪ್ರಾಚುರ್ಯವಾದ ಸತ್ತ್ವ ಶರೀರ ಉಳ್ಳವರು, ಬ್ರಹ್ಮಾದಿ ಪುಷ್ಕರಾಂತ ದೇವತೆಗಳು. ಇವರಲ್ಲಿ ಅಂತರಾಂತರ ತಾರತಮ್ಯ ಬಹಳವದೆ. ಸತ್ತ್ವರಾಜಸ–ಪೂರ್ವೋಕ್ತ ಸತ್ತ್ವಗುಣದಲ್ಲಿ ವಿಭಾಗವಾದ ರಜಃಪ್ರಾಚುರ್ಯ ಸತ್ತ್ವಗುಣ ಉಳ್ಳ ಶರೀರ ಉಳ್ಳವರು, ಅಜಾನಜರ ಆರಂಭಮಾಡಿ ದೇವಗಂಧರ್ವಾಂತ ದೇವತೆಗಳು. ಇವರಲ್ಲಿ ಅಂತರಾಂತರ ತಾರತಮ್ಯ ಬಹಳವದೆ. ಸತ್ತ್ವತಾಮಸ– ಪೂರ್ವೋಕ್ತ ಸತ್ತ್ವಗುಣದಲ್ಲಿ ವಿಭಾಗವಾದ ತಮಃಪ್ರಾಚುರ್ಯ ಸತ್ತ್ವಶರೀರ ಉಳ್ಳವರು, ನಿರಂಶರಾದ ಮಾನುಷಗಂಧರ್ವರಾರಭ್ಯ ತೃಣಾಂತ ಜೀವರು. ಇವರಲ್ಲಿ ಅಂತರಾಂತರ ತಾರತಮ್ಯ ಬಹಳವದೆ. ಇಲ್ಲಿಗೆ ಸತ್ತ್ವಗುಣದಲ್ಲಿ ವಿಭಾಗಮಾಡಿದ ಮೂರು ಭಾಗವೂ ಮುಗಿಯಿತು. ರಜೋಗುಣ ಭಾಗತ್ರಯ ವಿಚಾರ ಹೇಳತಾರೆ. ಈ ಮೂರುವಿಧ ಗುಣ ಉಳ್ಳವರು ಉತ್ತಮರೆಂತ ತಾತ್ಪರ್ಯ, ಮೂವರು–ಈ ಮೂರು ವಿಧರಾದವರೂ, ಭಗವದ್ಭಕ್ತರೆನಿಸುವರು – ಸ್ವರೂಪತಃ ಶ್ರೀಪರಮಾತ್ಮನ ಭಕ್ತರೆಂತ ಕರಿಸೋವರಾಗತಾರೆ. ರಜೋರಜರುತ್ಪತ್ತಿ–ರಜ ಎಂದರೆ ಪೂರ್ವೋಕ್ತ ರಜೋಗುಣದಲ್ಲಿ ವಿಭಾಗವಾದ ಭಾಗತ್ರಯದಿಂದ ಮಿಶ್ರಜ್ಞಾನಿಗಳಾದ ರಜರು, ಎಂದರೆ, ನಿತ್ಯಸಂಸಾರಿ ತ್ರಯರ ಉತ್ಪತ್ತಿ. ನಿತ್ಯಸಂಸಾರಿಗಳೊಳಗೆ ಮೂರು ವಿಧ :– ಸ್ವರ್ಗಪ್ರಚುರರು, ನಿರಯಪ್ರಚುರರು, ಭೂಪ್ರಚುರರು. ಇವರ ವಿಚಾರ : ಭೂ–ಭೂಪ್ರಚುರರು ಸ್ವರೂಪ ದಲ್ಲಿ ಸುಖದುಃಖಸಮಾನವಾಗುಳ್ಳವರು, ಸ್ವರ್ಗ–ಸ್ವರೂಪದಲ್ಲಿ ಸುಖ ಅಧಿಕ, ದುಃಖ ತದ್ವಿಪಕ್ಷಯಾ ಕಡಿಮಿ, ಇವರು ಸ್ವರ್ಗಪ್ರಚುರರು ; ನರಕ–ಸ್ವರೂಪದಲ್ಲಿ ದುಃಖ ಅಧಿಕ, ತದ್ವಿಪಕ್ಷಯಾ ಸುಖ ಕಡಿಮಿ, ಇವರು ನಿರಯಪ್ರಚುರರು. ಈ ಪ್ರಕಾರ, ಭೂ, ಸ್ವರ್ಗ, ನರಕಾದಿ ಲಿಂಗಭಂಗಾತ್ಪೂರ್ವ ಜೀವನ್ಮುಕ್ತದಶಾದಲ್ಲಿ, ಅವರವರು ಆಯಾ

ಸ್ಥಾನಗಳಲ್ಲಿದ್ದು ಭೋಗಮಾಡತಕ್ಕ ಸ್ವರೂಪಸ್ವಭಾವ ಉಳ್ಳವರು, ನಿತ್ಯಬದ್ಧರು–ತಾರ ತಮ್ಯಾನುಸಾರ ಸ್ವಭಾವದೊಳು ಸುಖದುಃಖಮಿಶ್ರರೂಪವಾದ ಬದ್ಧತ್ವ ಅನಾದಿಯಿಂದ ನಿತ್ಯವಾಗಿರೋಣದರಿಂದ, ನಿತ್ಯಬದ್ಧರೆಂತ ಕರಿಸತಾರೆ. ಈ ನಿತ್ಯಬದ್ಧತ್ವ ಎಂಬುದು ಏಕಕಾಲಾವಚ್ಛೇದೇನ ಭೋಗ ಎಂಬುದು, ಲಿಂಗಭಂಗಾತ್ಪೂರ್ವದಲ್ಲಿ ಇಲ್ಲ. ಲಿಂಗ ಭಂಗಾನಂತರ ನಿತ್ಯಬದ್ಧರಾದ ನಿತ್ಯಸಂಸಾರಿಗಳಿಗೆ ಆವಾಸಕ್ಕೆ ಯೋಗ್ಯವಾದ, ದೊಳು– ಸಾಂತಾನಿಕಲೋಕದಲ್ಲಿ ಪ್ರವೇಶಮಾಡಿಸಿದ ಕಾಲದಲ್ಲಿ, ಏಕಕಾಲಾವಚ್ಛೇದೇನ ಇರೋ ದಾಗಿರ್ತದೆ. ಆ ಸಾಂತಾನಿಕಲೋಕಗಳು ತ್ರಿವಿಧರ ಸ್ವರೂಪಯೋಗ್ಯತಾನುಸಾರ ತ್ರಿವಿಧ ಸ್ಥಾನಗಳು ಬ್ಯಾರೆ ಬ್ಯಾರೆ ಇರೋವಾಗವೆ. ಆಯಾ ಸ್ಥಾನಗಳಲ್ಲಿ ಅವರವರ ಸ್ವರೂಪಾನು ಸಾರ ಮಿಶ್ರಭೋಗಯುಕ್ತರಾಗಿರುತ್ತಾರೆ. ಪೃಥ್ವಿಯೊಳು–ಸಾಂತಾನಿಕಲೋಕವೆಂಬುದು ಭೂಲೋಕದಲ್ಲಿ ವಿದ್ಯಮಾನವಾದ ಲೋಕಾಲೋಕಪರ್ವತಕ್ಕೆ ಆಚೇಲಿರುವ ಅಂಧಂ ತಮಸ್ಸಿಗೆ ಮ್ಯಾಲಿನ ಭಾಗದಲ್ಲಿ ಸ್ವರ್ಗಲೋಕಕ್ಕೆ ಅಧೋಭಾಗದಲ್ಲಿ, ಈ ಮಧ್ಯಪ್ರದೇಶ ದಲ್ಲಿ ಸಾಂತಾನಿಕ, ಸಾಂಕೇತಿಕವೆಂಬ ಎರಡು ನಾಮದಿಂದ ಸಾಂಕೇತವಾದ ನಿತ್ಯಸಂಸಾರಿ ಲೋಕವದೆ. ಲಿಂಗಭಂಗಾನಂತರ ಈ ಲೋಕದೊಳು, ಸಂಚರಿಸುತಿಪ್ಪರು–ಸಂಚಾರ ಮಾಡತಾ ಇರ್ತಾರೆ. ಆದ್ದರಿಂದ ಪೃಥ್ವಿಯೊಳು ಎಂದರೆ, ಲಿಂಗಭಂಗಾನಂತರ ಕೂಡ ಪೂರ್ವೋಕ್ತಪ್ರಕಾರ ಭೂಲೋಕದಲ್ಲೇ ಸಂಚಾರಮಾಡತಾರೆಂದು ತಾತ್ಪರ್ಯ. ರಜ ಸ್ತಾಮಸರು – ರಜಸ್ತಾಮಸರೆಂಬ ದಿಕ್ಪ್ರದರ್ಶನದಿಂದಲೂ, ಉಪಲಕ್ಷಣದಿಂದಲೂ ರಜಃ ಸತ್ತ್ವಃ, ರಜೋರಜಃ, ರಜಸ್ತಮಃ ಈ ಮೂರೂ ಗ್ರಾಹ್ಯ. ತ್ರಿವಿಧ ನಿತ್ಯಸಂಸಾರಿಗಳ ಶರೀರ, ರಜೋಗುಣದಿಂದ ಉತ್ಪತ್ತಿ. ಅದರ ವಿವರ :– ಮ್ಯಾಲಿನ ರಜೋಗುಣದಲ್ಲಿ ವಿಭಾಗವಾದ ಭಾಗತ್ರಯಗಳೊಳಗೆ, ೧. ರಜಃಸತ್ತ್ವದಿಂದ ಉತ್ಪನ್ನರು ಸ್ವರ್ಗಪ್ರಚುರರು, ೨. ರಜೋರಜದಿಂದ ಉತ್ಪನ್ನರಾದವರು ಭೂಪ್ರಚುರರು, ೩. ರಜಸ್ತಮದಿಂದ ಉತ್ಪನ್ನ ರಾದವರು ನಿರಯಪ್ರಚುರರು ; ಇವರೇ ರಜಃಸ್ತಾಮಸರೆಂದು ಕರಿಸತಕ್ಕವರು. ಈ ಪ್ರಕಾರ ತ್ರಿವಿಧನಿತ್ಯಸಂಸಾರಿಗಳ ಉತ್ಪತ್ತಿಯನ್ನೂ ಹಾಗೂ ಮುಕ್ತಿಯೋಗ್ಯರ, ನಿತ್ಯಸಂಸಾರಿಗಳ ಉತ್ಪತ್ತಿಯನ್ನೂ ತಿಳಿಯಬೇಕು. ಮುಂದಿನ ಶ್ಲೋಕದಲ್ಲಿ ತಮೋಯೋಗ್ಯರ ವಿಚಾರ ಹೇಳತಾರೆ. ಮುಕ್ತಿಯೋಗ್ಯರಿಗೆ ಅವರರು, ನಿತ್ಯಸಂಸಾರಿಗಳೆಂತ ತಾತ್ಪರ್ಯ.

**ವಿಶೇಷಾರ್ಥ :–** ಬ್ರಹ್ಮದೇವರಾರಭ್ಯ ಮನುಷ್ಯೋತ್ತಮರವರಿಗೂ ತಾರತಮ್ಯ ಹೇಳಿದರು. ಮನುಷ್ಯೋತ್ತಮರಾರಭ್ಯ ತೃಣಾಂತವರಿಗೂ ಮುಕ್ತಿಯೋಗ್ಯರ ತಾರ ತಮ್ಯ ಉಂಟು, ಮನುಷ್ಯೋತ್ತಮರಲ್ಲೇ ಅಂತರ್ಭೂತ ಎಂತ ತಿಳಿಯಬೇಕು. ತ್ರಿವಿಧ ಜೀವರಲ್ಲಿ ತಾರತಮ್ಯ ಎಂಬುದು ಮುಕ್ತಿಯೋಗ್ಯಜೀವರಂತೆ ತಿಳಿಯಬೇಕು. ತ್ರಿವಿಧ ಜೀವರು, ದಾರು ದಾರು, ದಾವ ದಾವ ಗುಣವಿಶಿಷ್ಟರು ಎಂದರೆ, ಗುಣವಿಭಾಗವಿಚಾರ ಬಹಳ ಉಂಟು. ಅದರ ವಿಚಾರ ವ್ಯಾಖ್ಯಾನದಲ್ಲಿ ವಿಸ್ತಾರಮಾಡಬೇಕಾದರೆ ಬಹಳ ವಾಗುತ್ತದೆ. ಆದ್ದರಿಂದ ಮೂಲದಲ್ಲಿ ಇದ್ದಮಟ್ಟಿಗೆ ವಿವರ :– ಸತ್ತ್ವಸತ್ತ್ವಗುಣದಿಂದ,

ಮುಕ್ತಿಯೋಗ್ಯರ ಸೃಷ್ಟಿ ; ರಜೋಗುಣದಿಂದ, ನಿತ್ಯಸಂಸಾರಿಗಳ ಸೃಷ್ಟಿ ; ತಮೋಗುಣ ದಿಂದ, ತಮೋಯೋಗ್ಯರ ಸೃಷ್ಟಿ ಎಂತ ತಿಳಿಯಬೇಕು. ಸತ್ತ್ವಗುಣದಿಂದ ಮೂರು ಪ್ರಕಾರ ಸೃಷ್ಟಿ. ಸತ್ತ್ವರಲ್ಲಿ ವಿಭಾಗಗಳು ಮೂರು : ಸತ್ತ್ವಸತ್ತ್ವರು, ಸತ್ತ್ವರಾಜಸರು, ಸತ್ತ್ವತಾಮಸರು ಎಂತ ವಿಭಾಗವಾಗಿ ಮೂವರು ಎಂದರೆ, ಮೂರು ವಿಧರಾದ ಮುಕ್ತಿ ಯೋಗ್ಯರು ಜನನರಾದರು. ಈ ಸತ್ತ್ವ ಎನ್ನತಕ್ಕದ್ದು ಶುದ್ಧಸತ್ತ್ವವಲ್ಲ. ರಜಃಸತ್ತ್ವ ಎಂದರೆ, ತ್ರಿಗುಣಗಳು ಸೇರಿ ಒಂದು ರಜೋಗುಣವೆಂದು ಕರೆಸಿ, ಅದರಲ್ಲಿ ಸತ್ತ್ವಪ್ರಾಚುರ್ಯವಿಶಿಷ್ಟ ವಾಗಿ ಒಂದು ಸತ್ತ್ವ ; ರಜಃಪ್ರಾಚುರ್ಯವಿಶಿಷ್ಟವಾಗಿ ಒಂದು ರಜ ; ತಮಃಪ್ರಾಚುರ್ಯ ವಿಶಿಷ್ಟವಾಗಿ ಒಂದು ತಮ ; ಈ ಮೂರೂ ಅಭಿವ್ಯಕ್ತಿಯಾಗಿ, ರಜೋಗುಣದಿಂದ ಹೊರಟ ಸತ್ತ್ವಪ್ರಾಚುರ್ಯವಿಶಿಷ್ಟವಾದ ರಜಸ್ಸತ್ತ್ವ ಎಂತ ಕರೆಸಿದ್ದರೊಳಗೆ, ಪೂರ್ವೋಕ್ತ ಮುಕ್ತಿ ಯೋಗ್ಯರೊಳಗೆ ಮೂರು ಭಾಗವಾಗಿ ಮೂರು ಪ್ರಕಾರ ಸೃಷ್ಟಿ. ಅತಏವ, ರಜಸ್ಸತ್ತ್ವಾಧಿ ಕಾರಿಗಳು ಭಗವದ್ಭಕ್ತರೆನಿಸುವರು ಅಂದರೆ, ರಜಸ್ಸತ್ತ್ವದಿಂದ ಸೃಷ್ಟಿಯಾಗತಕ್ಕ ಅಧಿಕಾರ ಅಂದರೆ, ಯೋಗ್ಯತಾ ಎಂತ ತಾತ್ಪರ್ಯ. ಸ್ವರೂಪದಲ್ಲಿ ಪರಮಾತ್ಮನ ಭಕ್ತಿ ದಾರಿಗೆ ಅದೋ, ಅವರ ವ್ಯತಿರಿಕ್ತ ಅನ್ಯರಿಗೆ ರಜಸ್ಸತ್ತ್ವದಿಂದ ಸೃಷ್ಟಿ ಆಗೋ ಅಧಿಕಾರ ಅಂದರೆ, ಯೋಗ್ಯತಾ ಇಲ್ಲ ಎಂತ ತಾತ್ಪರ್ಯ. ನಿತ್ಯಬದ್ಧರು ಎಂದರೆ, ನಿತ್ಯವಾದ ಅನಾದಿಭೂತ ವಾದ ಬದ್ಧ, ಎಂದರೆ ಸ್ವರೂಪದಲ್ಲಿ ಸುಖದುಃಖಗಳೆರಡೂ ಬದ್ಧವಾಗಿರತಕ್ಕ ಸ್ವರೂಪ ಸ್ವಭಾವವುಳ್ಳ ಜೀವರು ದಾರೋ, ಅವರು ನಿತ್ಯಬದ್ಧರೆಂದು ಕರಿಸತಾರೆ. ಹ್ಯಾಂಗೆಂದರೆ, ಅವರ ಸ್ವರೂಪವೇ ಸುಖದುಃಖಮಿಶ್ರದಿಂದ ಬದ್ಧಸ್ವರೂಪವಾದ್ದರಿಂದ ನಿತ್ಯಬದ್ಧರು, ಅವರೇವೇ ನಿತ್ಯಸಂಸಾರಿಗಳು ; ಅವರ ಉತ್ಪತ್ತಿ ಎಂಬುದು ರಜೋರಜಗುಣದಿಂದ. ಈ ರಜೋರಜಗುಣದಲ್ಲೀನೂ ಮೂರು ಪ್ರಕಾರ ವಿಭಾಗ ; ರಜೋರಜಸ್ಸತ್ತ್ವ, ರಜೋ ರಜರಜ, ರಜೋರಜಸ್ತಮ, ಅಂತೂ ಮೂರು. ರಜೋರಜಸ್ಸತ್ತ್ವರು ಸ್ವರ್ಗಪ್ರಚುರರು, ರಜೋರಜರಜರು ಭೂಪ್ರಚುರರು, ರಜೋರಜಸ್ತಮರು ನಿರಯಪ್ರಚುರರು. ಈ ತ್ರಿವಿಧ ಜೀವರು ಸ್ವರ್ಗ, ಭೂ, ನರಕದಲ್ಲಿ ಸಂಚಾರಮಾಡತಾ ಇರ್ತಾರೆ. ಜೀವನ್ಮುಕ್ತಿ ಆದ ನಂತರದಲ್ಲಿ ಸ್ಥಿತಿಕಾಲದ ಕ್ರಮ ಹ್ಯಾಂಗೆಂದರೆ, ಸ್ವರ್ಗಪ್ರಚುರರಿಗೆ ಯಜ್ಞಾಧಿಕಾರ ಉಂಟು. ಭೂಪ್ರಚುರರು ಸ್ವರ್ಗಕ್ಕೆ ಎಂದಿಗೂ ಹೋಗೋದಿಲ್ಲ ; ಪುಣ್ಯವಿಶೇಷದಿಂದ, ಭೂಲೋಕದಲ್ಲಿ ಖಂಡವಿಶೇಷಗಳಲ್ಲಿ ಸುಖಾನುಭವವುಂಟು. ಇವರಿಗೆ ಯಜ್ಞಯಾಗಾದಿ ಗಳ ಮಾಡೋ ಅಧಿಕಾರವಿಲ್ಲ, ಆದ್ದರಿಂದ ಇವರಿಗೆ ಸ್ವರ್ಗಪ್ರಾಪ್ತಿ ಇಲ್ಲ. ಭೂಪ್ರದೇಶದಲ್ಲಿ ಸುಖ ಅನುಭವಿಸಿ ನರಕಕ್ಕೆ ಹೋಗಿ ಅಲ್ಲಿಂದ ಭರತಖಂಡಕ್ಕೆ ಒಂದು ಜನ್ಮ ಎತ್ತುತ್ತಾರೆ. ನಿರಯಪ್ರಚುರರಿಗೆ ಪುಣ್ಯವಿಶೇಷದಿಂದ ಭರತಖಂಡದಲ್ಲಿ ಮಹದೈಶ್ವರ್ಯ ಸ್ವರ್ಗಸದೃಶ ಎನ್ನಿಸತಕ್ಕ ಭೋಗಗಳ ಭೋಗಿಸಿ, ಮೃತರಾಗಿ ನರಕ ಸೇರಿ ಪುನಃ ಭರತಖಂಡದಲ್ಲಿ ಜನಿಸತಾರೆ. ಇವರಿಗೆ ಕ್ವಚಿತ್ ಇತರ ಖಂಡಗಳಲ್ಲಿ ಸುಖಪ್ರಾಪ್ತಿಯುಂಟು. ಭೂಪ್ರಚುರ ರಿಗೆ ಕ್ವಚಿತ್ ಸ್ವರ್ಗ ವ್ಯತಿರಿಕ್ತ, ಸ್ವರ್ಗದ ಅಧೋಭಾಗದಲ್ಲಿ ಇರತಕ್ಕ ಲೋಕಗಳಲ್ಲಿ ಪ್ರವೇಶ ಉಂಟು. ತ್ರಿವಿಧಜೀವರಿಗೆ ಪರಿಯವಸಾನಕ್ಕೆ " ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ "

ಎಂದರೆ, ನಕ್ಷತ್ರಲೋಕಪ್ರವೇಶರಾಗಿ ಅವಶಿಷ್ಟ ಪುಣ್ಯಭೋಗ ಮಾಡಿ, ಅಲ್ಲಿಂದ ಭೂಪತನರಾಗುತ್ತಾರೆ. ಇದರಲ್ಲಿ ಇನ್ನೂ ವಿಶೇಷ ಬಹಳ ಉಂಟು, ಗ್ರಂಥಾಂತರದಿಂದ ತಿಳಿಯತಕ್ಕದ್ದು. ಈ ಉಭಯರು ಅಲ್ಲದೆ, ರಜಸ್ತಾಮಸರು ಎಂದರೆ, ರಜಸ್ತಮಗುಣದಿಂದ ಉತ್ಪನ್ನರಾದ ತಮೋಯೋಗ್ಯರು ಭೂಮಿಯಲ್ಲೇ ಸಂಚಾರಮಾಡತಾ ಇರ್ತಾರೆ. ಇವರು ಮಾಡಿದ ಪುಣ್ಯಗಳಿಗೆ ಪ್ರಾಯಶಃ ಭೂಲೋಕದಲ್ಲಿ ಭೋಗವೇ ಹೊರ್ತು ಇತರ ಸ್ಥಳಗಳಲ್ಲಿ ಭೋಗವಿಲ್ಲ. ಈ ತಮೋಯೋಗ್ಯರಲ್ಲಿ ತ್ರಿವಿಧಪ್ರಕಾರ ಉಂಟು. ರಜಸ್ತಮಗುಣವು ತ್ರಿವಿಧಪ್ರಕಾರ ವಿಭಾಗವಾಗತದೆ. ಇದರ ವಿವರ ಮುಂದಿನ ಶ್ಲೋಕದಲ್ಲಿ ಇರೋದಾಗಿ ಇದೆ.

**ತಮಸ್ಸಾತ್ತ್ವಿಕರೆನಿಸಿಕೊಂಬರು ।**
**ಅಮಿತನಾಖ್ಯಾತ ಸುರಗಣವಿದೆ ।**
**ತಮೋರಾಜಸವೆನಿಸಿಕೊಂಬರು ದೈತ್ಯಸಮುದಾಯ ॥**
**ತಮಸ್ತಾಮಸ ಕಲಿ ಪುರಂಧ್ರಿಯು ।**
**ಅಮಿತ ದುರ್ಗುಣಪೂರ್ಣ ಸರ್ವಾ ।**
**ಧಮರೊಳಧಮಾಧಮ ದುರಾತ್ಮನು ಕಲಿಯೆನಿಸಿಕೊಂಬ ॥ ೧೯ ॥**

ತಮೋಯೋಗ್ಯರ ಉತ್ಪತ್ತಿಕ್ರಮ, ತಾರತಮ್ಯ ಹೇಳತಾರೆ.

ತಮಸ್ಸಾತ್ತ್ವಿಕರೆನಿಸಿಕೊಂಬರು–೧೮ನೇ ಶ್ಲೋಕದಲ್ಲಿ ತಮೋಗುಣದಲ್ಲಿ ವಿಭಾಗವಾದ ಭಾಗತ್ರಯದೊಳಗೆ ತಮಃಸಾತ್ತ್ವಿಕದಿಂದ ಉತ್ಪನ್ನರಾದವರೆಂದು ಎನಿಸಿಕೊಂಬೋವರಾಗತಾರೆ. ಅಮಿತ–ಮಿತರಹಿತವಾದ, ಅನಾಖ್ಯಾತ–ಖ್ಯಾತಿಯಿಂದ ರಹಿತರಾದವರು ಅಸಂಖ್ಯಾತರಾಗಿದ್ದಾರೆಂತ ಅರ್ಥ. ಅಸುರಗಣವಿದೆ–ಈ ಪ್ರಕಾರ ಅಸುರಗಣ ಇರೋದಾಗಿ ಇದೆ. ತಮಃಸಾತ್ತ್ವಿಕದಿಂದ ಉತ್ಪನ್ನರಾದ ಅಸುರರೊಳಗೆ ನಿರಂಶರು ತೃಣಾಂತವರಿಗೂ, ತಮೋರಾಜಸವೆನಿಸಿಕೊಂಬರು – ತಮೋಗುಣದಲ್ಲಿ ವಿಭಾಗವಾದ ತಮೋರಜದಿಂದ ಉತ್ಪನ್ನರಾದವರೆಂದೆನಿಸಿಕೊಂಬರು. ದೈತ್ಯಸಮುದಾಯ–ದೇವತೆಗಳೊಳಗೆ ಆಜಾನಜರು ಇದ್ದೋಪಾದಿಯಲ್ಲಿ ದೈತ್ಯರಲ್ಲಿ ತದ್ವತ್ ಇರತಕ್ಕ ದೈತ್ಯಸಮುದಾಯ, ತಮಸ್ತಾಮಸ ಕಲಿ–ತಮೋಗುಣದಲ್ಲಿ ವಿಭಾಗವಾದ ತಮಃತಮದಿಂದ ಮುಕ್ತಿಯೋಗ್ಯರಲ್ಲಿ ಬ್ರಹ್ಮ ಆರಂಭಮಾಡಿ ಪುಷ್ಕರಾಂತ ದೇವತೆಗಳಿದ್ದೋಪಾದಿಯಲ್ಲಿ, ತಮೋಯೋಗ್ಯರಲ್ಲಿ ಕಲಿ ಆರಂಭಮಾಡಿ ಇರತಕ್ಕ ದೈತ್ಯರು, ತಮಸ್ತಮದಿಂದ ಉತ್ಪನ್ನರಾದವರು ; ಪುರಂಧ್ರಿಯು–ಕಲಿಪತ್ನಿ ಪುರಂಧ್ರಿ ಎಂತ ನಾಮವುಳ್ಳವಳು. ಈ ಕಲಿ ಎಂಥಾವನೆಂದರೆ, ಅಮಿತ ದುರ್ಗುಣಪೂರ್ಣ–ಮಿತರಹಿತವಾದ ದುರ್ಗುಣದಿಂದ ಪೂರ್ಣನಾದವ ; ಸರ್ವಾಧಮರೊಳಧಮ–ಅಧಮಳಾದವಳು ಕಲಿಪತ್ನಿ ಪುರಂಧ್ರಿ, ಅಧಮ–ತನ್ನ ಪತ್ನಿ ಪುರಂಧ್ರಿಗಿಂತಲೂ ಅಧಮನಾದವನು, ದುರಾತ್ಮನು–ಪಾಪಸ್ವರೂಪವುಳ್ಳವನೆಂದು, ಕಲಿಯೆನಿಸಿ

ಕೊಂಬ-ಕಲಿ ಎಂತ ಕರಿಸತಾನೆ. ಇವರು ನಿತ್ಯಸಂಸಾರಿಗಳಿಗಿಂತಲೂ ಅಧಮರೆಂತ ತಾತ್ಪರ್ಯ.

**ಇವನ ಪೋಲುವ ಪಾಪಿಜೀವರು ।**
**ಭುವನಮೂರರೊಳಿಲ್ಲ ನೋಡಲು ।**
**ನವವಿಧದ್ವೇಷಗಳಿಗಾಕರನೆನಿಸಿಕೊಳುತಿಪ್ಪ ॥**
**ಬವರದಲಿ ಬಂಗಾರದಲಿ ನಟಿ ।**
**ಯುವತಿದ್ಯೂತಾಪೇಯ ಮೃಷದಲಿ ।**
**ಕವಿಸಿ ಮೋಹದಿ ಕೆಡಿಸುವನು ಎಂದರಿದು ತ್ಯಜಿಸುವುದು ॥ ೨೦ ॥**

ಈ ಕಲಿಪುರುಷನ ಅಯೋಗ್ಯತೆ, ಗುಣಗಳ ಹೇಳತಾರೆ.

ಇವನ ಪೋಲುವ–ಇವನ ಹೋಲಿಕೆಗೆ ಸದೃಶರಾದ, ಪಾಪಿಜೀವರು–ಪಾಪಸ್ವರೂಪವುಳ್ಳ ಜೀವರು ಭುವನಮೂರರೊಳು – ಈ ಬ್ರಹ್ಮಾಂಡದಲ್ಲಿ ಹದಿನಾಲ್ಕು ಲೋಕಗಳಲ್ಲಿ, ನೋಡಲು ಇಲ್ಲ–ವಿಚಾರಿಸಿ ನೋಡಲು ದಾರುದಾರೂನೂ ಇಲ್ಲ. ನವವಿಧದ್ವೇಷಗಳಿಗೆ–ನವವಿಧದ್ವೇಷಗಳು ದಾವುವೆಂದರೆ, ೧. ಜೀವೇಶ್ವರರಿಗೆ ಅಭೇದಚಿಂತನ ; ೨. ದೇವರು ನಿರ್ಗುಣ, ನಿರಾಕಾರ, ಶೂನ್ಯ ಎಂಬುವುದು ; ೩. ಬ್ರಹ್ಮಾದಿಗಳು ಶ್ರೀವಿಷ್ಣುವಿಗೆ ಸಮಾನರೆಂಬುವುದು ; ೪. ಶಿವಾದಿಗಳು ಶ್ರೀವಿಷ್ಣುವಿಗಿಂತ ಅಧಿಕರೆಂಬುವುದು ; ೫. ಶ್ರೀರಾಮ ಕೃಷ್ಣಾದ್ಯವತಾರಗಳ ಭೇದ ಚಿಂತನ ; ೬. ಪೃಥು, ನಾರದಾದಿಗಳನ್ನು ದೇವರ ಅವತಾರರೆಂಬುವುದು ; ೭. ವ್ಯಾಸ, ಕಪಿಲ, ಭೃಗುರಾಮ ಇವರುಗಳು ಋಷಿಗಳೆಂತ ತಿಳಿಯುವುದು ; ೮. ನಿಶ್ಚಯಜ್ಞಾನರಾದ ವಿಷ್ಣುಭಕ್ತರಲ್ಲಿ ದ್ವೇಷಮಾಡುವುದು ; ೯. ಭಗವದ್ಭಕ್ತರು ಮಾಡಿದ, ಹೇಳುವ ಸ್ಮೃತಿಗಳು, ಶ್ರುತಿಗಳು ಕಲ್ಪಿತಗಳೆಂದು ದೂಷಿಸುವುದು ; ಈ ಪ್ರಕಾರ ನವವಿಧದ್ವೇಷಗಳಿಗೆ, ಆಕರನೆನಿಸಿಕೊಳುತಿಪ್ಪ–ಆಶ್ರಯಭೂತನೆಂದೆನಿಸಿಕೊಳ್ಳುತ್ತಿರುವನಾಗಿದ್ದಾನೆ. ಎಂದರೆ, ನವವಿಧದ್ವೇಷಸ್ವರೂಪನಾಗಿ, ಅವುಗಳಿಗೆ ಮಾತೃಸ್ಥಾನಾಪನ್ನನಾದವ ಇವನು, ಬವರದಲಿ–ಯುದ್ಧಕ್ರಿಯಾದಲ್ಲಿ, ಬಂಗಾರದಲಿ–ಬಂಗಾರದಲ್ಲಿ, ನಟಿಯುವತಿ–ನಾಟ್ಯವಾಡತಕ್ಕ ವೇಶ್ಯಾಸ್ತ್ರೀ, ದ್ಯೂತ–ಜೂಜು ಮೊದಲಾದ ಆಟಗಳಲ್ಲಿ, ಅಪೇಯ–ಪಾನಕ್ಕೆ, ಭಕ್ಷಣಕ್ಕೆ ಯೋಗ್ಯವಲ್ಲದ ಮದ್ಯಾದಿಗಳಲ್ಲಿ, ಮೃಷದಲಿ–ಅಪದ್ಧದಲ್ಲಿ, ಕವಿಸಿ–ವಿಶೇಷಾಕಾರವಾಗಿ ಇವುಗಳಲ್ಲಿ ಸನ್ನಿಧಾನದಿಂದ ಯುಕ್ತನಾಗಿದ್ದು, ಮೋಹದಿ–ಇತ್ಯಾದಿಗಳಲ್ಲಿ ಮೋಹ ಹುಟ್ಟಿಸಿ, ಆ ಮೋಹದಿಂದ, ಕೆಡಿಸುವನು–ಆಸಕ್ತರನ್ನಾಗಿ ಮಾಡಿ ಕೆಡಿಸುವನು, ಎಂದರಿದು–ಆದಕಡಿಯಿಂದ ಇವರನ್ನ ತಿಳಿದು, ತ್ಯಜಿಸುವುದು–ಪೂರ್ವೋಕ್ತಗಳಲ್ಲಿ ಆಸೆಮಾಡದೆ ತ್ಯಾಗಮಾಡಬೇಕು ಮತ್ತು ಕಲಿಮಾರ್ಗದಲ್ಲಿ ಸಂಗತ್ಯಾಗಮಾಡಬೇಕೆಂತ ತಾತ್ಪರ್ಯ.

**ತ್ರಿವಿಧ ಜೀವಪ್ರತತಿಗಳ ಸಂ ।**
**ಘಾವಳಿಯ ಆಲಯನಿರ್ಮಿಸಿ ।**
**ಯುವತಿಯರ ಒಡಗೂಡಿ ಕ್ರೀಡಿಸುವನು ಕೃಪಾಸಾಂದ್ರ ॥**
**ದಿವಿಜ ದಾನವ ತಾರತಮ್ಯದ ।**
**ವಿವರ ತಿಳಿವ ಮಹಾತ್ಮರಿಗೆ ಜಾ ।**
**ಹ್ನವಿಸಖ ತಾನೊಲಿದು ಉದ್ಧರಿಸುವನು ಭವದಿಂದ ॥ ೨೧ ॥**

ಪೂರ್ವೋಕ್ತಪ್ರಕಾರ ತಾರತಮ್ಯ ತಿಳಿದವರನ್ನ, ಶ್ರೀಪರಮಾತ್ಮ ಉದ್ಧಾರಮಾಡ ತಾನೆಂತ ಹೇಳತಾರೆ.

ಜೀವಸಂಘ–ಜೀವರುಗಳ ಸಮೂಹವು, ತ್ರಿವಿಧ–ಸಾತ್ತ್ವಿಕಾದಿಭೇದೇನ ಮೂರು ಪ್ರಕಾರ, ಪ್ರತತಿಗಳ–ಪ್ರಕರ್ಷೇಣ ಸಾತ್ತ್ವಿಕಸಮೂಹ ೧, ರಾಜಸಸಮೂಹ ೧, ತಾಮಸ ಸಮೂಹ ೧, ಈ ಪ್ರಕಾರ ತ್ರಿವಿಧಸಮೂಹಗಳೆಂಬ, ಆವಳಿಯ–ಪಙ್ಕ್ತಿಗಳ ವ್ಯವಸ್ಥೆ ಯಿಂದ, ಆಲಯ ನಿರ್ಮಿಸಿ–ಪೂರ್ವೋಕ್ತಪ್ರಕಾರ ಸತ್ತ್ವಾದಿ ಗುಣಗಳಿಂದ ದೇಹಗಳ ನಿರ್ಮಾಣಮಾಡಿ, ಯುವತಿಯರ ಒಡಗೂಡಿ – ಪತ್ನೀರಿಂದ ಕೂಡಿಕೊಂಡವನಾಗಿ, ಕೃಪಾಸಾಂದ್ರ–ಕೃಪಾಸಮುದ್ರನಾದ ಶ್ರೀಪರಮಾತ್ಮ, ಕ್ರೀಡಿಸುವನು–ಅವರವರ ಸ್ಥೂಲ ದೇಹೇಂದ್ರಿಯಾದಿಗಳಲ್ಲಿದ್ದು ಆಟಗಳ ಆಡೋವನಾಗತಾನೆ. ದಿವಿಜದಾನವ–ದೇವ, ದೈತ್ಯರ, ನಿತ್ಯಸಂಸಾರಿಗಳ, ತಾರತಮ್ಯದ ವಿವರ–ತಾರತಮ್ಯದ ಕ್ರಮವನ್ನು ಛಂದಾಗಿ, ತಿಳಿವ ಮಹಾತ್ಮರಿಗೆ–ಭಕ್ತಿಪೂರ್ವಕವಾಗಿ ತಿಳಿದು ಅನುಷ್ಠಾನಮಾಡತಕ್ಕ ತನ್ನ ಭಕ್ತ ರಾದವರಿಗೆ, ಜಾಹ್ನವಿಸಖ-ಭಾಗೀರಥೀದೇವಿಗೆ ಸ್ನೇಹಿತನಾದ ಶ್ರೀ ತ್ರಿವಿಕ್ರಮಾಹ್ವಯನಾದ ಶ್ರೀ ವಾಮನದೇವರು, ತಾನೊಲಿದು–ತಾನಾಗಿಯೇ ಒಲಿದಂಥಾವನಾಗಿ, ಭವದಿಂದ–ಸಂಸಾರಸಮುದ್ರದಿಂದ, ಉದ್ಧರಿಸುವನು–ದಾಟಿಸಿ ಮುಕ್ತರನ್ನಾಗಿ ಮಾಡಿ ಸ್ವರೂಪಾ ನಂದವ ಉಣಿಸತಾನೆಂತ ತಾತ್ಪರ್ಯ.

**ದೇವ ದೈತ್ಯರ ತಾರತಮ್ಯವು ।**
**ಪಾವಮಾನಿಮತಾನುಗರಿಗಿದು ।**
**ಕೇವಲಾವಶ್ಯಕವು ತಿಳಿವುದು ಸರ್ವಕಾಲದಲಿ ॥**
**ದಾವಶಿಖಿ ಪಾಪಾಟವಿಗೆ ನವ ।**
**ನಾವೆಯೆನಿಪುದು ಭವಸಮುದ್ರಕೆ ।**
**ಪಾವಟಿಗೆ ವೈಕುಂಠಲೋಕಕಿದೆಂದು ಕರೆಸುವುದು ॥ ೨೨ ॥**

ತಾರತಮ್ಯಜ್ಞಾನದ ಮಾಹಾತ್ಮ್ಯೆ ಹೇಳತಾರೆ.

ದೇವದೈತ್ಯರ ತಾರತಮ್ಯವು–ದೇವದೈತ್ಯರ ತಾರತಮ್ಯವೆಂಬುದು, ಪಾವಮಾನಿ ಮತಾನುಗರಿಗೆ – ಶ್ರೀ ವಾಯ್ವಂಶರಾದ ಶ್ರೀ ಮಧ್ವಾಚಾರ್ಯರ ಮತದಲ್ಲಿರತಕ್ಕವರಿಗೆ,

ಇದು—ಈ ತಾರತಮ್ಯಜ್ಞಾನವು, ಕೇವಲಾವಶ್ಯಕವು–ಅವಶ್ಯ ತಿಳಕೋಬೇಕಾದ ವಿಷಯವು. ಈ ತಾರತಮ್ಯಜ್ಞಾನ ತಿಳಕೊಂಬೋದರಿಂದ ಆಗತಕ್ಕ ಪ್ರಯೋಜನವೇನೆಂದರೆ, ಪಾಪಾಟವಿಗೆ– ಪಾಪವೆಂಬೋ ಅಡವಿಗೆ, ದಾವಶಿಖಿ – ದಾವಾಗ್ನಿಯು, ಕಾಡ್ಗಿಚ್ಚು, ಭವಸಮುದ್ರಕೆ ನವನಾವೆಯೆನಿಪುದು–ಸಂಸಾರವೆಂಬ ಸಮುದ್ರಕ್ಕೆ ನೂತನವಾದ ನಾವಿ ಎಂತ ಕರೆಸುತ್ತದೆ ; ವೈಕುಂಠಲೋಕಕೆ– ಮುಕ್ತನಾಗಿ ವೈಕುಂಠಲೋಕಪ್ರವೇಶಕ್ಕೆ, ಪಾವಟಿಗೆ–ಪಡತರೆ, ಸೋಪಾನ, ಇದೆಂದು ಕರೆಸುವುದು–ಇದು ಎಂತ ಎನಿಸೋದಾಗತದೆ. "ತಾರತಮ್ಯಂ ತತೋ ಜ್ಞೇಯಂ ಸರ್ವೋಚ್ಚತ್ವಂ ಹರೇಸ್ತಥಾ | ಏತದ್ವಿನಾ ನ ಕಸ್ಯಾಪಿ ವಿಮುಕ್ತಿಃ ಸ್ಯಾತ್ಕಥಂಚನ ||" ಎಂತ ನಿರ್ಣಯೋಕ್ತಿ ಇರುವದ್ದರಿಂದ, ತಾರತಮ್ಯಜ್ಞಾನ, ಪಾಪವನ್ನು ಸುಡತಕ್ಕದ್ದು, ಸಂಸಾರಸಮುದ್ರ ದಾಟಿಸತಕ್ಕದ್ದು ವೈಕುಂಠಲೋಕಕ್ಕೆ, ಸೋಪಾನ ಎಂತ ಕರಿಸತಕ್ಕದ್ದು. ಆದ್ದರಿಂದ, ಸರ್ವಕಾಲದಲಿ ತಿಳಿವುದು–ಸದಾಸರ್ವ ಕಾಲದಲ್ಲಿ ಅನುಸಂಧಾನವಿರಬೇಕು.

**ತಾರತಮ್ಯಜ್ಞಾನ ಮುಕ್ತಿ |**
**ದ್ವಾರವೆನಿಪುದು ಭಕ್ತಜನರಿಗೆ |**
**ತೋರಿ ಪೇಳಿ ಸುಖಾಬ್ಧಿಯೊಳು ಲೋಲಾಡುವುದು ಬುಧರು ||**
**ಕ್ರೂರಮಾನವರಿಗಿದು ಕರ್ಣಕ |**
**ಠೋರವೆನಿಪುದು ನಿತ್ಯದಲಿ ಅಧಿ |**
**ಕಾರಿಗಳಿಗಿದನರುಪುವುದು ದುಷ್ಕರ್ಮಗಳ ಬಿಟ್ಟು || ೨೩ ||**

ಈ ತಾರತಮ್ಯಜ್ಞಾನವನ್ನು ಸಜ್ಜನರಿಗೆ ಉಪದೇಶಮಾಡುವುದು ಎಂತ ಹೇಳತಾರೆ.

ತಾರತಮ್ಯಜ್ಞಾನ–ತಾರತಮ್ಯಜ್ಞಾನವೆಂಬುದು, ಮುಕ್ತಿದ್ವಾರವೆನಿಪುದು–ದುಃಖ ರೂಪವಾದ ಸಂಸಾರದಿಂದ ಮುಕ್ತನಾಗೋದಕ್ಕೆ ಮಾರ್ಗವೆನಿಸುವುದು. ಈ ಮಾರ್ಗ ವನ್ನು, ಭಕ್ತಜನರಿಗೆ–ಭಗವದ್ಭಕ್ತರಾದ ಜನರಿಗೆ, ತೋರಿ–ಸುಮಾರ್ಗವಿದೆಂದು ಮನಸ್ಸಿಗೆ ನಾಟುವಂತೆ, ಪೇಳಿ–ಈ ತಾರತಮ್ಯಕ್ರಮವನ್ನು ಹೇಳಿ, ಸುಖಾಬ್ಧಿಯೊಳು–ತದನು ಷ್ಠಾನರೂಪವಾದ ಸುಖವಾದ ಸಮುದ್ರದಲ್ಲಿ, ಲೋಲಾಡುವುದು–ಹೊರಳಾಡುವುದು, ಈಸುತ್ತಾ ಇರುವುದು, ದಾರೆಂದರೆ, ಬುಧರು–ಜ್ಞಾನಿಗಳಾದವರು ; ಇದು–ಈ ತಾರ ತಮ್ಯವನ್ನು, ಕ್ರೂರಮಾನವರಿಗೆ–ಭಗವದ್ದ್ವೇಷಿಗಳಾದ ಜನರಿಗೆ, ಕರ್ಣಕಠೋರ ವೆನಿಪುದು–ಹೇಳಿದರೆ, ಅವರ ಶ್ರವಣೇಂದ್ರಿಯಕ್ಕೆ ಮತ್ತು ಮನಸ್ಸಿಗೆ ಆಯುಧರೂಪವಾದ ಬಾಣದಿಂದ ಪೊಡಿಚಿದರೆ, ಚುಚ್ಚಿದರೆ ಹ್ಯಾಂಗಿರತದೋ ತದ್ವತ್, ಮನಸ್ಸಿಗೆ ಬಹಳ ದುಃಖವಾಗಿರುತ್ತದೆ ; ದುಷ್ಕರ್ಮಗಳ ಬಿಟ್ಟು–ಆದಕಡಿಯಿಂದ ದುಷ್ಟಪ್ರಯೋಜಕಗಳಾದ ಕರ್ಮಗಳ ತೊರೆದು, ನಿತ್ಯದಲಿ–ಪ್ರತಿದಿನದಲ್ಲೂ, ಇದನು–ತಾರತಮ್ಯವನ್ನೂ, ಈ ಗ್ರಂಥ ವನ್ನೂ, ಅಧಿಕಾರಿಗಳಿಗೆ–ಭಗವದ್ಭಕ್ತರಾದ, ಈ ಗ್ರಂಥವನ್ನು ಆದರದಿಂದ ಪಠನಮಾಡಿ ತಿಳಕೋಬೇಕೆಂತಿದ್ದವರಿಗೆ, ಅರುಪುವುದು–ಉಪದೇಶಮಾಡೋವನಾಗಬೇಕು ಎಂತಲೂ,

ಅನಧಿಕಾರಿಗಳಿಗೆ ಮತ್ತು ಈ ಗ್ರಂಥದಲ್ಲಿ ಶ್ರದ್ಧೆ ಇಲ್ಲದವರಿಗೆ ಉಪದೇಶ ಮಾಡಕೂಡ ದೆಂತಲೂ ತಾತ್ಪರ್ಯ.

**ಹರಿ ಸಿರಿ ವಿರಿಂಚೀರ ಭಾರತಿ ।**
**ಗರುಡ ಫಣಿಪತಿ ಷಣ್ಮಹಿಷಿಯರು ।**
**ಗಿರಿಜ ನಾಕೇಶಸ್ಮರಪ್ರಾಣಾನಿರುದ್ಧ ಶಚಿ ॥**
**ಗುರು ರತೀ ಮನು ದಕ್ಷ ಪ್ರವಹಾ ।**
**ಮರುತ ಮಾನವಿ ಯಮ ಶಶಿ ದಿವಾ ।**
**ಕರ ವರುಣ ನಾರದ ಸುರಾಸ್ಯ ಪ್ರಸೂತಿ ಭೃಗುಮುನಿಪ ॥ ೨೪ ॥**

ಸಂಕ್ಷಿಪ್ತವಾಗಿ ಅಥವಾ ಸಂಪುಟಾಕಾರದಿಂದ ತಾರತಮ್ಯ ಹೇಳತಾರೆ.

ಹರಿ–ಗುಣಪೂರ್ಣನಾದ ಪರಮಾತ್ಮ ಪ್ರಥಮಕಕ್ಷ (೧), ಸಿರಿ–ರಮಾದೇವೇರು (೨), ವಿರಿಂಚಿ–ಬ್ರಹ್ಮದೇವರು, ಈರ–ವಾಯುದೇವರು (೩), ಭಾರತಿ–ಭಾರತೀದೇವಿ ಯರು (೪), ಗರುಡ–ಗರುಡದೇವರು, ಫಣಿಪತಿ–ಶೇಷದೇವರು (೫), ಷಣ್ಮಹಿಷಿಯರು– ನೀಲಾದಿ ಷಣ್ಮಹಿಷಿಯರು (೬), ಗಿರಿಜ–ಪಾರ್ವತೀದೇವೇರು (೭), ನಾಕೇಶ–ಇಂದ್ರ, ಸ್ಮರ–ಮನ್ಮಥ (೮), ಪ್ರಾಣ–ಅಹಂಕಾರಿಕ ಪ್ರಾಣದೇವರು (೯), ಅನಿರುದ್ಧ–ಅನಿರುದ್ಧ, ಶಚಿ–ಇಂದ್ರದೇವರ ಪತ್ನಿ ಶಚೀದೇವೇರು, ಗುರು–ಬೃಹಸ್ಪತಿ, ರತೀ–ರತೀದೇವೇರು, ಮನು–ಸ್ವಾಯಂಭುವಮನು, ದಕ್ಷ–ದಕ್ಷಪ್ರಜಾಪತಿ (೧೦), ಪ್ರವಹಾಮರುತ–ಪ್ರವಹ ವಾಯು (೧೧), ಮಾನವಿ–ಸ್ವಾಯಂಭುವಮನುವಿನ ಪತ್ನಿ ಶತರೂಪಾದೇವೇರು, ಯಮ– ಯಮದೇವರು, ಶಶಿ–ಚಂದ್ರ, ದಿವಾಕರ–ವಿವಸ್ವಾನ್ ಸೂರ್ಯ (೧೨), ವರುಣ–ವರುಣ ದೇವರು (೧೩), ನಾರದ–ನಾರದಋಷಿಗಳು (೧೪), ಸುರಾಸ್ಯ–ಅಗ್ನಿ, ಪ್ರಸೂತಿ– ದಕ್ಷಪತ್ನಿ ಪ್ರಸೂತಿದೇವಿಯರು, ಭೃಗುಮುನಿಪ–ಹರಿಸರ್ವೋತ್ತಮನೆಂದು ಯಜ್ಞ ಮಾಡುವ ಋಷಿಗಳಿಗೆ ತಿಳಿಸಿ, ಯಜ್ಞವನ್ನು ಪಾಲನಿಮಾಡಿದ ಭೃಗುಋಷಿಗಳು (೧೫) ; ಇಲ್ಲಿಗೆ ೧೫ ಕಕ್ಷದವರದಾಯಿತು.

**ವ್ರತತಿಜಾಸನ ಪುತ್ರರೆನಿಸುವ ।**
**ವ್ರತಿವರತ್ರಿ ಮರೀಚಿ ವೈವ ।**
**ಸ್ವತನು ತಾರಾಮಿತ್ರ ನಿರಋತಿ ಪ್ರವಹಮಾರುತನ ॥**
**ಸತಿ ಧನೇಶಾಶ್ವಿನಿಗಳಿರ್ಗಣ ।**
**ಪತಿಯು ವಿಷ್ವಕ್ಸೇನ ಶೇಷ ಸು ।**
**ಶತರು ಮನುಗಳುಚಿಥ್ಯಚವ್ಯನಮುನಿಗಳಿಗೆ ನಮಿಪೆ ॥ ೨೫ ॥**

ಇನ್ನೂ ಸಂಕೋಚದಿಂದಲೇ ತಾರತಮ್ಯವನ್ನು ಹೇಳತಾರೆ.

ಪ್ರತತಿಜಾಸನ–ಬ್ರಹ್ಮದೇವರ, ಪುತ್ರರೆನಿಸುವ–ಮಕ್ಕಳೆನಿಸುವ, ಪ್ರತಿವರ–ಭಗವನ್ನಿಷ್ಠವಾದ ವ್ರತಶ್ರೇಷ್ಠ ಉಳ್ಳವರಾದ, ಅತ್ರಿ ಮರೀಚಿ ವೈವಸ್ವತನು–ಅತ್ರಿ, ಮರೀಚಿ, ವೈವಸ್ವತಮನು, ತಾರಾ–ತಾರಾದೇವಿಯರು, ಮಿತ್ರ–ಮಿತ್ರನಾಮಕ ಸೂರ್ಯ, ನಿರಋತಿ–ನಿರಋತಿಯು, ಪ್ರವಹಮಾರುತನ ಸತಿ–ಪ್ರವಹವಾಯುದೇವರ ಪತ್ನಿ ಪ್ರಾವಹೀದೇವಿಯರು, ಇವರುಗಳು ೧೭ನೇ ಕಕ್ಷದವರು, ಧನೇಶ–(೧೯ನೇ ಕಕ್ಷ) (೧.) ಕುಬೇರ, ಅಶ್ವಿನಿಗಳಿರ್–(೨ ಮತ್ತು ೩) ಅಶ್ವಿನಿದೇವತೆಗಳಿಬ್ಬರು, ಗಣಪತಿಯು–(೪) ವಿಘ್ನೇಶ್ವರ, ವಿಷ್ವಕ್ಸೇನ–(೫) ವಾಯುಪುತ್ರ ವಿಷ್ವಕ್ಸೇನ, ಶೇಷಸುಶತರು–೮೫ ಮಂದಿ ಸೋಮಪಾನಾರ್ಹರಾದ ೧೦೦ ಮಂದಿ ಒಳಗೆ ಉತ್ತಮಕಕ್ಷದವರು ಹೋಗತಾ ಉಳಿದ ಶೇಷರು ೮೫ ಮಂದಿಗಳು, ಮನುಗಳು–ಮನುಗಳು ದಾರೆಂದರೆ, ಉಚಿಥ್ಯ ಚ್ಯವನಮುನಿಗಳಿಗೆ–ಉಚಿಥ್ಯ, ಚ್ಯವನ, ಮೇಲೆ ಉಕ್ತರಾದ ಮೂರು ಮಂದಿ (ದಕ್ಷ, ಸ್ವಾಯಂಭು, ವೈವಸ್ವತ) ಮನುಗಳು ಹೋಗತಾ ಉಳಿದ ೧೧ ಮಂದಿ ಇವರೇ ಮೊದಲಾದ ಮುನಿಗಳಿಗೆ, ನಮಿಪೆ–ನಮಸ್ಕಾರಮಾಡುವೆ.

**ಶತಸುಪುಣ್ಯಶ್ಲೋಕರೆನಿಸುವ ।**
**ಕ್ಷಿತಿಪರಿಗೆ ನಮಿಸುವೆನು ಭಾಗೀ ।**
**ರಥಿ ವಿರಾಟ್ ಪರ್ಜನ್ಯ ರೋಹಿಣಿ ಶಾಮಲಾ ಸಂಜ್ಞಾ ॥**
**ಹುತವಹನ ಮಹಿಳಾ ಬುಧೋಷಾ ।**
**ಕ್ಷಿತಿ ಶನೈಶ್ಚರ ಪುಷ್ಕರರಿಗಾ ।**
**ನತಿಸಿ ಬಿನ್ನೈಸುವೆನು ಭಕ್ತಿ ಜ್ಞಾನವಿಯಲೆಂದು ॥ ೨೬ ॥**

ಇನ್ನೂ ಅವಶಿಷ್ಟದಿಂದ ಸಂಕೋಚವಾಗಿ ತಾರತಮ್ಯ ಹೇಳತಾರೆ.

ಶತಸುಪುಣ್ಯಶ್ಲೋಕರೆನಿಸುವ–ಪುಣ್ಯಶ್ಲೋಕರೆನಿಸತಕ್ಕ ೧೦೦ ಸಂಖ್ಯಾತರಾದ, ಕ್ಷಿತಿಪರಿಗೆ ನಮಿಸುವೆನು – ೧೯ ನೇ ಕಕ್ಷದವರಾದ ಭೂಪಾಲಕರಾದವರಿಗೆ ವಂದನೆಯ ಮಾಡುವೆನು, ಭಾಗೀರಥೀ ವಿರಾಟ್ ಪರ್ಜನ್ಯ ರೋಹಿಣಿ ಶಾಮಲಾ ಸಂಜ್ಞಾ–೨೦ ನೇ ಕಕ್ಷದವರಾದ, ಗಂಗಾದೇವಿ (೧), ವಿರಾಟ್ (೨), (೨೧) ಪರ್ಜನ್ಯನಾಮಕ ಸೂರ್ಯ (೩), ರೋಹಿಣಿ (೪), ಶ್ಯಾಮಲಾದೇವಿ (೫), ಸಂಜ್ಞಾದೇವಿ (೬), ಹುತವಹನ ಮಹಿಳಾ–೨೨ ನೇ ಕಕ್ಷದವರಾದ ಅಗ್ನಿದೇವರ ಪತ್ನಿ ಸ್ವಾಹಾದೇವಿ, (೨೩) ಬುಧ–ಬುಧನು, (೨೪) ಉಷಾ – ಉಷಾದೇವಿ, ಕ್ಷಿತಿ – ಭೂದೇವಿ, (೨೫) ಶನೈಶ್ಚರ – ಶನೀದೇವ, (೨೬) ಪುಷ್ಕರರಿಗೆ–ಕರ್ಮಾಭಿಮಾನಿ ಪುಷ್ಕರನೇ ಮೊದಲಾದ ಈ ಯಾವತ್ತೂ ಮಂದಿಗೆ, ಆನತಿಸಿ–ನಾನು ಛಂದಾಗಿ ವಂದನ ಮಾಡಿ, ಭಕ್ತಿ ಜ್ಞಾನವಿಯಲೆಂದು–ಭಗವದ್ವಿಷಯಕವಾದ ಭಕ್ತಿ ಏನು, ಜ್ಞಾನವೇನು, ಇವುಗಳನ್ನು ಕೊಡಲೆಂದು, ಬಿನ್ನೈಸುವೆನು – ವಿಜ್ಞಾಪನೆಮಾಡಿಕೊಂಬೆನು ಎಂತ ತಾತ್ಪರ್ಯ. (ಇಲ್ಲಿಗೆ ೨೬ ನೇ ಕಕ್ಷ ಆಯಿತು.)

**ನೂರಧಿಕವಾಗಿಪ್ಪ ಮತ್ಥದಿ ।**
**ನಾರುಸಾವಿರ ನಂದಗೋಪಕು ।**
**ಮಾರನರ್ಧಾಂಗಿಯರಗಸ್ತ್ಯಾದಿಕ ಮುನೀಶ್ವರರು ॥**
**ಊರ್ವಶೀ ಮೊದಲಾದ ಅಪ್ಸರ ।**
**ನಾರಿಯರು ಶತ ತುಂಬುರರು ಕಂ ।**
**ಸಾರಿಗುಣಗಳ ಕೀರ್ತನೆಯ ಮಾಡಿಸಲಿ ಎನ್ನಿಂದ ॥ ೨೭ ॥**

ಇನ್ನೂ ಸಂಕ್ಷಿಪ್ತವಾಗಿ ಅವಶಿಷ್ಟ ತಾರತಮ್ಯ ಹೇಳತಾರೆ.

ನೂರಧಿಕವಾಗಿಪ್ಪ – ನೂರೇ ಅಧಿಕವಾಗಿರುವ, ಮತ್ಥದಿನಾರುಸಾವಿರ – ಮತ್ತು ಹದಿನಾರುಸಾವಿರ (೧೬,೧೦೦), ನಂದಗೋಪಕುಮಾರನ–ನಂದಗೋಪನ ಕುಮಾರ, ಅಂದರೆ, ಶ್ರೀ ಕೃಷ್ಣದೇವರ, ಅರ್ಧಾಂಗಿಯರು–೨೭ನೇ ಕಕ್ಷದ ೧೬,೧೦೦ ಮಂದಿ ಹೆಂಡಂದಿರು, ಊರ್ವಶೀಮೊದಲಾದ ಅಪ್ಸರ ನಾರಿಯರು–೯೦೮ ಊರ್ವಶೀ ಮೊದಲಾದ ಅಪ್ಸರ ಸ್ತ್ರೀಯರು ಸಾವಿರದ ಒಳಗೆ ಕರ್ಮಜರಲ್ಲಿ ಸೇರಿದವರು ಹೋಗತಾ ಉಳಿದ, ಶತತುಂಬುರರು–೯೨ ತುಂಬುರಾದಿ ಗಂಧರ್ವರು ನೂರುಮಂದಿ ಒಳಗೆ, ಕರ್ಮಜರಲ್ಲಿ ಸೇರಿದವರು ಹೋಗತಾ ಉಳಿದ ಗಂಧರ್ವರು ಇವರೇ ಮೊದಲಾದವರು ಆಖ್ಯಾತ ಆಜಾನಜರು, ವಿಭುದಾದಿಗಳು ೨೮ ನೇ ಕಕ್ಷದವರು. ಅಗಸ್ತ್ಯಾದಿಕ ಮುನೀಶ್ವರರು– ನೂರುಕೋಟಿ, ಅದರಲ್ಲಿ ನೂರುಮಂದಿ ಕರ್ಮಜರಲ್ಲಿ ಸೇರಿದವರು ಹೋಗತಾ ಉಳಿದ ಋಷಿಗಳು ೨೮, ೨೯ ನೇ ಎರಡು ಕಕ್ಷದವರು, ಅನಾಖ್ಯಾತ ಆಜಾನಜರು, ಎನ್ನಿಂದ–ಈ ಯಾವತ್ತೂ ಮಂದಿ, ನನ್ನಿಂದ ಕಂಸಾರಿಗುಣಗಳ–ಕಂಸನಿಗೆ ಶತ್ರುವಾದ ಶ್ರೀ ಕೃಷ್ಣನ ಕಲ್ಯಾಣಗುಣಗಳನ್ನು, ಕೀರ್ತನೆಯ ಮಾಡಿಸಲಿ–ಗಾಯನಮಾಡಿಸಲಿ ಎಂತ ಪ್ರಾರ್ಥನಾ ಮಾಡೋವರಾಗಿದ್ದಾರೆಂದು ತಾತ್ಪರ್ಯ.

**ಪಾವನರು ಶುಚಿ ಶುದ್ಧನಾಮಕ ।**
**ದೇವತೆಗಳಾಜಾನ ಚಿರಪಿತೃ ।**
**ದೇವ ನರ ಗಂಧರ್ವರವನಿಪ ಮಾನುಷೋತ್ತಮರು ॥**
**ಈ ವಸುಮತಿಯೊಳುಳ್ಳ ವೈಷ್ಣವ ।**
**ರಾವಳಿಯೊಳಿಹನೆಂದು ನಿತ್ಯದಿ ।**
**ಸೇವಿಪುದು ಸಂತೋಷದಿಂ ಸರ್ವಪ್ರಕಾರದಲಿ ॥ ೨೮ ॥**

ಇನ್ನೂ ಸಂಕ್ಷಿಪ್ತವಾಗಿ ಅವಶಿಷ್ಟ ತಾರತಮ್ಯವನ್ನ ಹೇಳತಾರೆ.

ಪಾವನರು ಶುಚಿ ಶುದ್ಧನಾಮಕ ದೇವತೆಗಳು–೨೯ ನೇ ಕಕ್ಷದವರಾದ, ಪಾವನ, ಶುಚಿ, ಶುದ್ಧ ಏತಾದೃಶರಾದ ನಾಮ ಪಡೆದು ಇರುವ ಅನೇಕ ದೇವತೆಗಳು,

ಚಿರಪಿತೃ–೩೦ ನೇ ಕಕ್ಷದ ಚಿರಪಿತ್ರಾಖ್ಯ ದೇವತೆಗಳು, ದೇವನರಗಂಧರ್ವರು–೩೧ ನೇ ಕಕ್ಷದವರಾದ ದೇವಗಂಧರ್ವರು, ೩೨ ನೇ ಕಕ್ಷದವರಾದ ಆಜಾನಜರ ಪತ್ನೀರುಗಳು, ಮಾನುಷಗಂಧರ್ವರು, ಅವನಿಪ–೩೩ ನೇ ಕಕ್ಷದವರಾದ ಮಾನುಷಚಕ್ರವರ್ತಿಗಳು, ಅವರ ಪತ್ನೀರು, ಮಾನುಷೋತ್ತಮರು–೩೪ ನೇ ಕಕ್ಷದವರಾದ ಮಾನುಷೋತ್ತಮರು, ಈ ವಸುಮತಿಯೊಳುಳ್ಳ–ಈ ಭೂಮಿಯೊಳಗಿರುವ, ವೈಷ್ಣವರ–ಮಧ್ವಮತಾವಲಂಬಿಗಳಾದ ವೈಷ್ಣವರ, ಆವಳಿಯೊಳಗಿಹನೆಂದು–ತಾರತಮ್ಯರೂಪವಾದ ದೇವಮಾನುಷಪಂಕ್ತಿಯೊಳಗೆ ಪರಮಾತ್ಮ ಅಂತರ್ಗತನಾಗಿದ್ದಾನೆಂದು ತಿಳಿದು, ಸಂತೋಷದಿಂ–ಸಂತೋಷದಿಂದ, ಸರ್ವಪ್ರಕಾರದಲಿ–ಸರ್ವಪ್ರಕಾರದಿಂದಲೂ, ನಿತ್ಯದಿ ಸೇವಿಪುದು–ಪ್ರತಿದಿನದಲ್ಲೂ ಸೇವೆ ಮಾಡೋವನಾಗಬೇಕು, ಆಜಾನ–೨೮ ನೇ ಕಕ್ಷ ಆರಂಭಮಾಡಿ, ೩೩ ನೇ ಕಕ್ಷದವರಿಗೂ ಅನಾಖ್ಯಾತ ಆಜಾನಜರೆಂದು ತಾತ್ಪರ್ಯ.

**ಮಾನುಷೋತ್ತಮರನುವಿಡಿದು ಚತು ।**
**ರಾನನಾಂತ ಶತೋತ್ತಮತ್ವ ಕ್ರ ।**
**ಮೇಣ ಚಿಂತಿಪ ಭಕ್ತರಿಗೆ ಚತುರವಿಧ ಪುರುಷಾರ್ಥ ॥**
**ಶ್ರೀನಿಧಿ ಜಗನ್ನಾಥವಿಠಲ ।**
**ತಾನೆ ಒಲಿದೀವನು ನಿರಂತರ ।**
**ಸಾನುರಾಗದಿ ಪಠಿಸುವುದು ಪ್ರಾಜ್ಞರಿದ ಮರೆಯದಲೆ ॥ ೨೯ ॥**

ತಾರತಮ್ಯ ಫಲಸ್ತುತಿ ಹೇಳತಾರೆ.

ಮಾನುಷೋತ್ತಮರನುವಿಡಿದು–ಮಾನುಷೋತ್ತಮರ ಮೊದಲುಗೊಂಡು, ಚತುರಾನನಾಂತ – ಬ್ರಹ್ಮದೇವರವರಿಗೂ ಆರೋಹಣ, ಕ್ರಮೇಣ – ತಾರತಮ್ಯಕ್ರಮದಿಂದ, ಶತೋತ್ತಮತ್ವ–ನೂರುನೂರು ಗುಣದಿಂದ ಅಧಿಕರು ಎಂತ, ಚಿಂತಿಪ ಭಕ್ತರಿಗೆ–ಚಿಂತನಾ ಮಾಡತಕ್ಕ ಭಗವದ್ಭಕ್ತರಿಗೆ, ಶ್ರೀನಿಧಿ ಜಗನ್ನಾಥವಿಠಲ–ಕಾಂತಿ, ಐಶ್ವರ್ಯ, ಇವುಗಳೇ ಸಮುದ್ರವಾಗುಳ್ಳ, ಜಗತ್ತಿಗೇ ಸ್ವಾಮಿಯಾದ, ವಿಠ್ಠಲಸಾಂಕೇತನಾದ ಶ್ರೀಪರಮಾತ್ಮ, ತಾನೆ ಒಲಿದು–ತನಗೆ ತಾನೇ ಒಲಿದು, ಚತುರವಿಧ ಪುರುಷಾರ್ಥ–ಸಾಯುಜ್ಯ, ಸಾರೂಪ್ಯ, ಸಾಮೀಪ್ಯ, ಸಾಲೋಕ್ಯ ಎಂಬ ನಾಲ್ಕು ವಿಧ ಪುರುಷಾರ್ಥಗಳ, ಈವನು–ಅವರವರ ಯೋಗ್ಯತಾಕ್ಕೆ ಅನುಸರಿಸಿದ್ದನ್ನು ಕೊಡೋವನಾಗತಾನೆ. ಪ್ರಾಜ್ಞರು–ಆದ್ದರಿಂದ ಜ್ಞಾನಿಗಳಾದವರು, ಇದ ಮರೆಯದಲೆ–ಈ ತಾರತಮ್ಯವನ್ನ ಮರೆಯಧಾಂಗೆ, ನಿರಂತರ–ಪ್ರತಿದಿನದಲ್ಲೂ, ಸಾನುರಾಗದಿ–ಆದರದಿಂದ ಸಹಿತರಾಗಿ, ಪಠಿಸುವುದು–ಪಠನಮಾಡುವುದು ಎಂತ ತಾತ್ಪರ್ಯ.

ಈ ಸಂಧಿಯಲ್ಲಿ ನಿರೂಪಿಸಲ್ಪಟ್ಟಿರುವ ತಾರತಮ್ಯ ವಿಷಯ ಕ್ರೋಢೀಕರಿಸಲ್ಪಟ್ಟು ಇಲ್ಲಿ ಬರೆದಿದೆ, ಝಡಿತ್ಯಾ ಬೋಧಾರ್ಥ ವಿವರ :

| ಕಕ್ಷ ಸಂಖ್ಯೆ ೧ | ದೇವತೆಗಳ ಹೆಸರು ೨ | ಗುಣತಾರತಮ್ಯ ಸಂಖ್ಯೆ ೩ |
|---|---|---|
| ೧. | ಶ್ರೀ ವಿಷ್ಣುಃ .... | ಸಮಸ್ತ ಗುಣದಿಂದ ಪೂರ್ಣನು. |
| ೨. | ಶ್ರೀ ರಮಾದೇವೀ .... | ಅನಂತಗುಣ ಅಧಮರು. |
| ೩. | ಬ್ರಹ್ಮವಾಯೂ .... | ಕೋಟಿಗುಣಾಧಮರು. |
| ೪. | ಸರಸ್ವತೀಭಾರತ್ಯೌ .... | ಶತಗುಣಾಧಮರು (೧೦೦ ಗುಣ) |
| ೫. | ಗರುಡ–ಶೇಷ–ರುದ್ರಾಃ .... | ,, (೧೦೦ ಗುಣ) |
| ೬. | ಲಕ್ಷ್ಮಣಾದಿಷಣ್ಮಹಿಷ್ಯಃ .... | ಪಂಚಗುಣಾಧಮಾಃ (೫ ಗುಣ) |
| ೭. | ಸೌಪರ್ಣೀ, ವಾರುಣೀ, ಪಾರ್ವತೀ | ದ್ವಿಗುಣಾಧಮಾಃ (೨ ಗುಣ) |
| ೮. | ಇಂದ್ರಕಾಮೌ .... | ದಶಗುಣಾಧಮೌ (೧೦ ಗುಣ) |
| ೯. | ಅಹಂಕಾರಪ್ರಾಣಃ .... | ,, (೧೦ ಗುಣ) |
| ೧೦. | ಅನಿರುದ್ಧಃ, ಗುರುಃ, ಸ್ವಾಯಂಭು ಮನುಃ, ದಕ್ಷಪ್ರಜಾಪತಿಃ, ಶಚೀ, ರತೀ. | ,, (೧೦ ಗುಣ) |
| ೧೧. | ಪ್ರವಹವಾಯುಃ .... | ಪಂಚಗುಣಾಧಮಃ (೫ ಗುಣ) |
| ೧೨. | ಸೂರ್ಯಃ, ಚಂದ್ರಃ, ಶತರೂಪಾ, ಯಮಃ–ಇತಿ ಚತ್ವಾರಃ. | ದ್ವಿಗುಣಾಧಮಾಃ (೨ ಗುಣ) |
| ೧೩. | ವರುಣಃ .... | ಸಾರ್ಧಪಾದೈಕಗುಣಾಧಮಃ (೧/೨ ಗುಣ) |
| ೧೪. | ನಾರದಃ .... | ಪಾದಾರ್ಧಗುಣಾಧಮಃ (೧/೨ ಗುಣ) |
| ೧೫. | ಅಗ್ನಿಃ, ಭೃಗುಃ, ಪ್ರಸೂತಿಃ – ಇತಿ ತ್ರಯಃ ಕಿಂಚಿದ್ಗುಣಾಧಮಾಃ, ವರುಣಾತ್ ಪಾದಗುಣಾಧಮಾಃ. | ,, (೧/೨ ಗುಣ) |
| ೧೬. | ಮರೀಚ್ಯಾದಿಸಪ್ತರ್ಷಯಃ, ವೈವಸ್ವತ ಮನುಃ, ವಿಶ್ವಾಮಿತ್ರಃ, ಇತ್ಯೇತೇ. | ದ್ವಿಗುಣಾಧಮಾಃ (೨ ಗುಣ) |
| ೧೭. | ಮಿತ್ರನಾಮಕಸೂರ್ಯಃ, ಕೋಣಾಧಿ ಪತಿಃ ನಿರ್‌ಋತಿಃ, ಗುರುಭಾರ್ಯಾ ತಾರಾ, ಪ್ರಾವಹೀ ಇತ್ಯೇತೇ. | ಕಿಂಚಿದ್ಗುಣಾಧಮಾಃ (........) ಕೇಚಿತ್ಸಾಂಕೇತಃ ಪಾದೇ ಚತುರ್ಥಾಂಶಃ (೧/೪ ಗುಣ ) |
| ೧೮. | ಧನಪವಿಷ್ವಕ್ಸೇನಗಜಾನನಾದಿ ಶತಸ್ಥ ಕಕ್ಷಮಧ್ಯೇ ಉಕ್ತಾಃ ಉಕ್ತ ಶೇಷಾಃ ಗಣನೀಯಾಃ. | ಪೂರ್ವವತ್ (........) |

| ೧ | ೨ | ೩ |
|---|---|---|
| ೧೯. | ಕರ್ಮಜಾಃ, ಕರ್ಮಜಮಧ್ಯೆ ಗಣಿತಾಃ –ಶತಸಂಖ್ಯಾಕಾಃ ಋಷ್ಯುತ್ತಮಾಃ –ಏತೇ ಋಷಯಃ ಶತಕೋಟಿ ಋಷೀಣಾಂ ಮಧ್ಯೇ ಪಠಿತಾಃ ಋಷಯಃ, ತನ್ಮಧ್ಯೇ ವರ್ತಮಾನ ಕರ್ಮಜಮಧ್ಯೇ ಗಣಿತಾಃ ಋಷಯಃ ಕೇಚಿತ್. ತದನ್ಯೇ ಉತ್ತಮತಾರ ತಮ್ಯಮಧ್ಯೇ ಗಣಿತಾಃ ಋಷಯಃ ಕೇಚಿತ್. ತದ್ವಿವರಣಂ :–<br>೧. ನಾರದಃ; ೨. ಭೃಗುಃ;<br>೩. ಪುಲಹಃ; ೪. ಅತ್ರಿಃ;<br>೫. ಅಂಗಿರಾಃ; ೬. ಪುಲಸ್ತ್ಯಃ;<br>೭. ಕ್ರತುಃ; ೮. ವಸಿಷ್ಟಃ;<br>೯. ವಿಶ್ವಾಮಿತ್ರಃ.<br>ಅವಶಿಷ್ಟಶತಕೋಟಿಋಷಯಃ ಆಜಾನಜಮಧ್ಯೇ ಪಠಿತಾಃ.<br>ಇತ್ಯೇತಾನ್, ಋಷ್ಯುತ್ತಮಾನ್, ವಿಹಾಯ ಅವಶಿಷ್ಟನವತಿಸಂಖ್ಯಾಕಾಃ ಚ್ಯವನೋಚಥ್ಯಪೂರ್ವಾಃ, ಋಷ್ಯುತ್ತಮಾಃ, ಕರ್ಮಜಮಧ್ಯೇ ಪಠಿತಾಃ. | ಅಗ್ನ್ಯಾದಿತಾತ್ತ್ವಿಕದೇವೇಭ್ಯಃ ಶತಗುಣಾಧಮಾಃ, ಧನಪ ವಿಷ್ವಕ್ಸೇನಾದಿ ದ್ವಿಗುಣಾಧಮಾಃ (೨ ಗುಣ) |
| ೨೦. | ಕರ್ಮಜದೇವೇಭ್ಯಃ, ಪರ್ಜನ್ಯಾದಿ ಷಟ್. | ಚತುರ್ಗುಣಾಧಮಾಃ (೪ ಗುಣ) |
| ೨೧. | ಬ್ರಹ್ಮಾದಿಪುಷ್ಕರಾಂತನವಕೋಟಿ, ದೇವೇಷು ಮಧ್ಯೇ ಅಪ್ರಸಿದ್ಧಾಧಿಕಾರಿಣಃ ಕೇಚನ ದೇವಾಃ. | ಕಿಂಚಿದ್ಗುಣಾಧಮಾಃ (೧/೪ ಗುಣ) |
| ೨೨. | ಸ್ವಾಹಾ .... | ಕಿಂಚಿದ್ಗುಣಾಧಮಾ (೧/೪ ಗುಣ) |
| ೨೩. | ಬುಧಃ .... | ಕಿಂಚಿದ್ಗುಣಾಧಮಃ (೧/೪ ಗುಣ) |
| ೨೪. | ಅಶ್ವಿನೀಭಾರ್ಯಾ ಉಷಾ .... | ಕಿಂಚಿದ್ಗುಣಾಧಮಾ (೧/೪ ಗುಣ) |

| ೧ | ೨ | ೩ |
|---|---|---|
| ೨೫. | ಶನಿಃ .... | ಕಿಂಚಿದ್ಗುಣಾಧಮಃ (೧/೪ ಗುಣ) |
| ೨೬. | ಪುಷ್ಕರಃ .... | ಕಿಂಚಿದ್ಗುಣಾಧಮಃ (೧/೪ ಗುಣ) |
| ೨೭. | ಆಖ್ಯಾತಾ ಆಜಾನಜಾಃ. ತದ್ವಿವರಣಂ –ಅಗ್ನೇಃ ಜ್ಯೇಷ್ಠಪುತ್ರಂ, ಪಾವಕಂ ವಿಹಾಯ ಹರೇಃ ಶತದ್ವ್ಯಷ್ಟ ಸಾಹಸ್ರಪತ್ನಿತ್ವಂ ಗತಾಃ ಜ್ವಲನಸುತ ಗುಣಃ, ಶತಗಂಧರ್ವಾಃ ಆಖ್ಯಾತಾಃ. | ಇತ್ಯೇತೇ ಕಿಂಚಿತ್ ಗುಣಾಧಮಾಃ (೧/೪ ಗುಣ) |
| ೨೮. | ಕಾಶ್ಚನ ಅಪ್ಸರಸಃ, ವಿಬುಧಾದಯಃ | ಇತ್ಯೇತೇ ಕಿಂಚಿದ್ಗುಣಾಧಮಾಃ (\|" ಗುಣ) |
| ೨೯. | ಶತಕೋಟಿಸಂಖ್ಯಾಕಾಃ ಋಷಯಃ ತೇಷು ಶತಸಂಖ್ಯಾ೯, ಋಷ್ಯುತ್ತಮಾ೯ ವಿಹಾಯ ಅವಶಿಷ್ಟಾ ಋಷಯಃ \| ಅನಾಖ್ಯಾತಾ ಆಜಾನಜಾಃ \| | ಇತ್ಯೇತೇ ಕಿಂಚಿದ್ಗುಣಾಧಮಾಃ (\|" ಗುಣ) |
| ೩೦. | ಚಿರಪಿತರಃ – ಚಿರಪಿತೃಭ್ಯೋನ್ಯಃ ಚಿರಪಿತಃ. | ಶತಗುಣಾಧಮಾಃ (೧೦೦ ಗುಣ) |
| ೩೧. | ಅಷ್ಟೋತ್ತರಶತಸಂಖ್ಯಾ೯, ದೇವ ಗಂಧರ್ವಾನ್ ವಿಹಾಯ ಅವಶಿಷ್ಟ ದೇವಗಂಧರ್ವಸಿದ್ಧಚಾರಣಾಃ, ವಿದ್ಯಾಧರಾಃ, ಕಿನ್ನರಾಃ, ಕಿಂಪುರುಷಾಃ. | ಶತಗುಣಾಧಮಾಃ (೧೦೦ ಗುಣ) |
| ೩೨. | ಮನುಷ್ಯಗಂಧರ್ವಾಃ .... | ಶತಗುಣಾಧಮಾಃ (೧೦೦ ಗುಣ) |
| ೩೩. | ಚಕ್ರವರ್ತಿನಃ .... | ಶತಗುಣಾಧಮಾಃ (೧೦೦ ಗುಣ) |
| ೩೪. | ಮನುಷ್ಯೋತ್ತಮಬ್ರಾಹ್ಮಣಾಃ .... | ಶತಗುಣಾಧಮಾಃ (೧೦೦ ಗುಣ) ಪಾದಗುಣ ನ್ಯೂನಾಃ ; |
| ೩೫. | ಪರಮಹಂಸಾಃ | ,, ೧. ಶಿಖಾಯಜ್ಞೋಪವೀತವಿಹೀನಾಃ ಏಕದಂಡಿನಃ ಪರಮಹಂಸಾಃ (೧/೪ ಗುಣ) |
| ೩೬. | ಹಂಸಾಃ (೧. ಯತಯಃ) | ,, ೨. ಯಜ್ಞೋಪವೀತವಂತಃ, ಏಕದಂಡಿನಃ ಹಂಸಾಃ (೧/೪ ಗುಣ) |
| ೩೭. | ಬಹುದಾಃ | ,, ೩. ತ್ರಿಕಾಲೇ ಸ್ನಾನನಿಯಮಹೀನಾಃ ಅಕಾಲಜಲಸ್ನಾನಾಃ ತ್ರಿದಂಡಿನಃ ಬಹುದಾಃ (೧/೪ ಗುಣ) |

| ೧ | ೨ | | ೩ |
|---|---|---|---|
| ೩೮. | ಕುಟೀಚಕಾಃ | ೧. ಯತಯಃ | ಪಾದಗುಣನ್ಯೂನಾಃ ; ೪. ಸ್ವಗೃಹೇ ಸ್ಥಿತ್ವಾ ಪುತ್ರಾದಿನಾ ದತ್ತಾನ್ನೇನ ಜೀವನಕರ್ತಾರಃ ಕುಟೀಚಕಾಃ (೧೦ ಗುಣ) |
| ೩೯. | ಫೇನಾಃ. | ೨. ವನಸ್ಥಾಃ | ಪಾದಗುಣನ್ಯೂನಾಃ ; ೫. ವತ್ಸಫೇನಭಕ್ಷಾಃ ಫೇನಾಃ (೧/೪ ಗುಣ) |
| ೪೦. | ಔದುಂಬರಾಃ. | | ೬. ಮೂಲಭಕ್ಷಕಾಃ ಔದುಂಬರಾಃ (೧/೪ ಗುಣ) |
| ೪೧. | ವಾಲಖಿಲ್ಯಾಃ. | | ೭. ಫಲಭಕ್ಷಕಾಃ ವಾಲಖಿಲ್ಯಾಃ (೧/೪ ಗುಣ) |
| ೪೨. | ವೈಖಾನಸಾಃ. | | ೮. ಸರ್ವಭಕ್ಷಕಾಃ ವೈಖಾನಸಾಶ್ಚೇತಿ (೧/೪ ಗುಣ) |
| ೪೩. | ಶಿಲೋಂಛಾಃ. | ೩. ಗೃಹಸ್ಥಾಃ | ಪಾದಗುಣನ್ಯೂನಾಃ ; ೯. ಸಸ್ಯಕ್ಷೇತ್ರೇಷು ಗಳಿತೈಃ ವ್ರೀಹ್ಯಾದಿ ಧಾನ್ಯೈಃ ಜೀವನಕರ್ತಾರಃ ಶಿಲೋಂಛಾಃ. (೧/೪ ಗುಣ) |
| ೪೪. | ಶಾಲೀನಾಃ. | | ೧೦. ಏಕವರ್ಷಪರ್ಯಂತಂ ಧಾನ್ಯ ಸಂಗ್ರಹಕಾರಿಣಃ ಶಾಲೀನಾಃ. (೧/೪ ಗುಣ) |
| ೪೫. | ಅಸಂಚಯಾಃ. | | ೧೧. ಏಕಾಹಿವ್ರತೇ ಸ್ಥಿತಾಃ ಅಸಂಚಯಾಃ (೧/೪ ಗುಣ) |
| ೪೬. | ವಾರ್ತಾಃ. | | ೧೨. ಯಾಯಿವಾರೇಷು ಜೀವನಾಃ ವಾರ್ತಾಃ. (೧/೪ ಗುಣ) |
| ೪೭. | ಬೃಹತ್ತ್ರಾರಾಃ. | ೪. ಬ್ರಹ್ಮಚಾರಿಣಃ | ದ್ವಿಗುಣನ್ಯೂನಾಃ ; ೧೩. ನೈಷ್ಠಿಕಸಂಜ್ಞಿತೇ ವ್ರತೇ ಯಾವಜ್ಜೀವಬ್ರಹ್ಮಚರ್ಯೇ ಸ್ಥಿತಾಃ ಬೃಹತ್ತ್ರಾರಾಃ. (೨ ಗುಣ) |
| ೪೮. | ಬ್ರಾಹ್ಮಾಃ. | | ೧೪. ಯಾವದ್ವಿವಾಹಕಾಲಪರ್ಯಂತಂ ವೇದಾಧ್ಯಯನಕರ್ತಾರಃ ಬ್ರಾಹ್ಮಾಃ. (೨ ಗುಣ) |

| ೧ | ೨ | ೩ |
|---|---|---|
| ೪೯. | ತೇಭ್ಯಃ ಪ್ರಾಜಾಪತ್ಯಾಃ (ಬ್ರಾಹ್ಮಣರು (೪)) | ದ್ವಿಗುಣನ್ಯೂನಾಃ ; ೧೫. ಏಕಭಾರ್ಯಾಃ ಋತುಗಾಮಿನಃ ಪ್ರಾಜಾಪತ್ಯಾಃ. (೨ ಗುಣ) |
| ೫೦. | ತೇಭ್ಯಃ ಸಾವಿತ್ರಾಃ | ೧೬. ದ್ವಾದಶವರ್ಷಪರ್ಯಂತಂ ಗುರು ಕುಲವಾಸಪೂರ್ವಕಂ ವೇದಾಧ್ಯಯನಕರ್ತಾರಃ ಸಾವಿತ್ರಾಃ. (೨ ಗುಣ) |
| | (ಈ ಮೇಲಿನ ನಾಲ್ಕು ಬ್ರಾಹ್ಮಣರಲ್ಲಿ ವಿಧಗಳು) | (ಬ್ರಾಹ್ಮಣರಲ್ಲಿ ಇವು ವಿಶೇಷಗಳು). |
| ೫೧. | ಸಾವಿತ್ರೇಭ್ಯಃ (ಕ್ಷತ್ರಿಯಾಃ) .... | ಚತುರ್ಗುಣಾಧಮಾಃ (೪ ಗುಣ) |
| ೫೨. | ತೇಭ್ಯಃ ವೈಶ್ಯಾಃ .... | ಪಂಚಗುಣಾಧಮಾಃ (೫ ಗುಣ) |
| ೫೩. | ತೇಭ್ಯಃ ಶೂದ್ರಾಃ .... | ಷಡ್ಗುಣಾಧಮಾಃ (೬ ಗುಣ) |
| ೫೪. | ತೇಭ್ಯಃ ಅನುಲೋಮಾಃ .... | ಸಪ್ತಗುಣಾಧಮಾಃ (೭ ಗುಣ) |
| ೫೫. | ತೇಭ್ಯಃ ಪ್ರತಿಲೋಮಾಃ .... | ಅಷ್ಟಗುಣಾಧಮಾಃ (೮ ಗುಣ) |
| ೫೬. | ತೇಭ್ಯಃ ಅಂತ್ಯಜಾಃ .... | ದ್ವಿಗುಣಾಧಮಾಃ (೯ ಗುಣ) |
| ೫೭. | ತೇಭ್ಯಃ ಗಜಾಃ .... | ದಶಗುಣಾಧಮಾಃ (೧೦ ಗುಣ) |
| ೫೮. | ತೇಭ್ಯಃ ಅಶ್ವಾಃ .... | ದ್ವಿಗುಣಾಧಮಾಃ (೨ ಗುಣ) |
| ೫೯. | ತೇಭ್ಯಃ ಮೃಗಾಃ .... | ದ್ವಿಗುಣಾಧಮಾಃ (೨ ಗುಣ) |
| ೬೦. | ತೇಭ್ಯಃ ಮೃಗೇಭ್ಯಃ, ಪಶುಭಿಶ್ಚ ಜಲಚರಾಃ. | ದ್ವಿಗುಣಾಧಮಾಃ (೨ ಗುಣ) |
| ೬೧. | ಪಕ್ಷಿಭ್ಯಃ ಜಲಚರೇಭ್ಯಶ್ಚ ಕ್ಷುದ್ರ ಜೀವಾಃ. | ದ್ವಿಗುಣಾಧಮಾಃ (೨ ಗುಣ) |
| ೬೨. | ತೇಭ್ಯಃ ವೃಕ್ಷಾಃ .... | ದ್ವಿಗುಣಾಧಮಾಃ (೨ ಗುಣ) |
| ೬೩. | ತೇಭ್ಯಃ ಲತಾಃ .... | ದ್ವಿಗುಣಾಧಮಾಃ (೨ ಗುಣ) |
| ೬೪. | ತೇಭ್ಯಃ ಗುಲ್ಮಾಃ .... | ದ್ವಿಗುಣಾಧಮಾಃ (೨ ಗುಣ) |
| ೬೫. | ತೇಭ್ಯಃ ಓಷಧಯಃ .... | ದ್ವಿಗುಣಾಧಮಾಃ (೨ ಗುಣ) |
| ೬೬. | ಓಷಧೀಭ್ಯಃ ತೃಣಜೀವಾಃ .... | ದ್ವಿಗುಣಾಧಮಾಃ (೨ ಗುಣ) |
| ೬೭. | ತೃಣಜೀವಾತ್ ಜಡಾಃ ನೀಚಾಃ.... | — — |

ಕ್ರಮೇಣ ಗೃಹಸ್ಥಚಾತುರ್ವಿಧ್ಯಪರ್ಯಂತಂ ಪಾದಗುಣಾಧಮತ್ವಂ. ತತ್ರ ವಾರ್ತೇಭ್ಯಃ ಬೃಹತ್ತಾರಾಃ ದ್ವಿಗುಣಾಧಮಾಃ | ಬೃಹತ್ತಾರೇಭ್ಯಃ ಬ್ರಾಹ್ಮಾಃ ದ್ವಿಗುಣಾಧಮಾಃ | ತೇಭ್ಯಃ ಪ್ರಾಜಾಪತ್ಯಾಃ ದ್ವಿಗುಣಾಧಮಾಃ | ತೇಭ್ಯಃ ಸಾವಿತ್ರಾಃ ದ್ವಿಗುಣಾಧಮಾಃ ||

ಏವಂ ಕ್ಷತ್ರಿಯೇಷು ವೈಶ್ಯೇಷ್ವಪಿ ದ್ರಷ್ಟವ್ಯಂ ॥ ಸಾವಿತ್ರೇಭ್ಯಃ ಕ್ಷತ್ರಿಯಾಃ ಚತುರ್ಗುಣಾಧಮಾಃ—ತೇಭ್ಯಃ ವೈಶ್ಯಾಃ ಪಂಚಗುಣಾಧಮಾಃ—ತೇಭ್ಯಃ ಶೂದ್ರಾಃ ಷಡ್ಗುಣಾಧಮಾಃ—ತೇಭ್ಯಃ ಅನುಲೋಮಾಃ ಅಧಮಾಃ—ತೇಭ್ಯಃ ಪ್ರತಿಲೋಮಾಃ ಅಧಮಾಃ—ತೇಭ್ಯಃ ಅಂತ್ಯಜಾಃ ದ್ವಿಗುಣಾಧಮಾಃ—ತೇಭ್ಯಃ ಗಜಾಃ ಬಹುಳಾಂಶೇನ ಅಧಮಾಃ—ತೇಭ್ಯಃ ಅಶ್ವಾಃ ದ್ವಿಗುಣಾಧಮಾಃ—ತೇಭ್ಯಃ ಮೃಗಾಃ ಪಶವಶ್ಚ ದ್ವಿಗುಣಾಧಮಾಃ—ತೇಭ್ಯಃ ಮೃಗೇಭ್ಯಃ ಪಶುಭಿಶ್ಚ ಪಕ್ಷಿಣೋ ಜಲಚರಾಶ್ಚ ದ್ವಿಗುಣಾಧಮಾಃ—ಪಕ್ಷಿಭ್ಯಃ ಜಲಚರೇಭ್ಯಶ್ಚ ಕ್ಷುದ್ರಜೀವಾಃ ದ್ವಿಗುಣಾಧಮಾಃ—ತೇಭ್ಯಃ ವೃಕ್ಷಾಃ ದ್ವಿಗುಣಾಧಮಾಃ— ತೇಭ್ಯಃ ಲತಾಃ ದ್ವಿಗುಣಾಧಮಾಃ—ತೇಭ್ಯಃ ಗುಲ್ಮಾಃ ದ್ವಿಗುಣಾಧಮಾಃ—ತೇಭ್ಯಃ ಓಷಧಯಃ ದ್ವಿಗುಣಾಧಮಾಃ — ತೇಭ್ಯಃ ತೃಣಜೀವಾಃ ದ್ವಿಗುಣಾಧಮಾಃ ॥ ಇತಿ ಗುಣ ತಾರತಮ್ಯ ಪ್ರಕರಣಂ ॥

## ೩೩ ಕೋಟಿ ದೇವತೆಗಳ ವಿವರ.

| | |
|---|---|
| ಬ್ರಹ್ಮದೇವಮಾರಭ್ಯ ಶತಸ್ಥಪರಿಯಂತ ತ್ರಿಶತೋತ್ತರತ್ರಿಸಾಹಸ್ರಸಂಖ್ಯಾಕಾ ದೇವಾಃ ಮುಖ್ಯತಃ ತತ್ತ್ವಾಭಿಮಾನಿತ್ವಾತ್ತಾತ್ತ್ವಿಕಾ ಇತ್ಯುಚ್ಯಂತೇ, ಸೃಷ್ಟ್ಯಾದಾವೇವ ದೇವತ್ವಪ್ರಾಪ್ತೇಃ ನ ಹ್ಯೇಷಾಂ ಕಾರ್ಮಿಕಾಣಾಮಿವ ಅಂತರಾ ದೇವತ್ವಪ್ರಾಪ್ತಿಃ ॥ | ೩,೩೦೦ |
| ಪಾವಕಪಾವಮಾನಾದಿಕರ್ಮಜ ದೇವಾನ್ ಆರಭ್ಯ ಶನ್ಯಂತಾಃ ತ್ರಿಶತೋತ್ತರತ್ರಿಸಹಸ್ರನ್ಯೂನತ್ರಯಸ್ತ್ರಿಂಶತ್ಸಹಸ್ರ ಸಂಖ್ಯಾಃ ದೇವಾಃ ಅಮುಖ್ಯತಃ ತತ್ತ್ವಾಭಿಮಾನಿನಃ ॥ | ೨೯,೭೦೦ |
| ತತಃ ಬುಧಶನಿಭಾರ್ಯಾದಯಃ ಸಾರ್ಧತ್ರಿಕೋಟಿ ತೀರ್ಥಾಭಿಮಾನಿದೇವಾಶ್ಚ. ತೇ ಚ ಶನೇಃ ಕಿಂಚಿದಧಮಾಃ, ಏತೇ ತೀರ್ಥಾಭಿಮಾನಿದೇವತಾಃ ಪುಷ್ಕರಾಂತಾಃ ತ್ರಯಸ್ತ್ರಿಂಶತ್ಸಹಸ್ರ ನ್ಯೂನನವಕೋಟಿಸಂಖ್ಯಾಃ ದೇವಾಃ ಸರ್ವದಾ ತತ್ತ್ವಾಭಿಮಾನ **ರಹಿತಾಃ ನಪ್ರಸಿದ್ಧಾಧಿಕಾರಿಣಃ** ॥ | ೮,೯೯,೬೭,೦೦೦ |
| | ೯,೦೦,೦೦,೦೦೦ |
| ತತಃ ಏತೇಭ್ಯಃ ಅಧಮಾಃ ಅಧಿಕಾರಿತ್ವರಹಿತಾಃ ಅನಾಖ್ಯಾತಾಃ ಚತುರ್ವಿಂಶತಿಕೋಟಿಸಂಖ್ಯಾಃ ದೇವಾಃ ॥ | ೨೪,೦೦,೦೦,೦೦೦ |

ಮೂವತ್ತುಮೂರುಕೋಟಿ ಆಜಾನಜರಲ್ಲಿ ಪತಿತರಾದ ನೂರು ಕಡಿಮೆ ನೂರು ಕೋಟಿ ಋಷಿಗಳು ಮೂವತ್ತುಮೂರುಕೋಟಿ ಒಳಗೆ ಸೇರಲಿಲ್ಲ. ಇವರು ಅನ್ಯರು.

**ಶ್ರೀಮತ್ಸತ್ಯಪರಾಯಣತೀರ್ಥಕರಕಮಲಸಂಜಾತಶ್ರೀಮತ್ಸಂಕರ್ಷಣ-ತೀರ್ಥವಿರಚಿತಾಯಾಂ ಶ್ರೀಮದ್ಧರಿಕಥಾಮೃತಸಾರಕನ್ನಡಭಾಷಾ-ಟೀಕಾಯಾಂ ಗುಣತಾರತಮ್ಯಸಂಧಿವ್ಯಾಖ್ಯಾನಂ ಸಂಪೂರ್ಣಂ**

॥ ಶ್ರೀ ಕೃಷ್ಣಾರ್ಪಣಮಸ್ತು ॥

|| ಓಂ ಶ್ರೀ ಗುರುಭ್ಯೋ ನಮಃ ಹರಿಃ ಓಂ ||

# ಇಪ್ಪತ್ತೊಂದನೆಯ ಸಂಧಿ

## ಬೃಹತ್ತಾರತಮ್ಯ ಸಂಧಿ

**(ಆವೇಶಾವತಾರಸಂಧಿ ಪ್ರಾರಂಭಃ)**

**ಹರಿಕಥಾಮೃತಸಾರ ಗುರುಗಳ ।**
**ಕರುಣದಿಂದಾಪನಿತು ಪೇಳುವೆ ।**
**ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥ ಪ ॥**

**ಮೂಲ :** (ಸಂಧಿಸೂಚನೆ)

**ಹರಿ ಸಿರಿ ವಿರಿಂಚೀರಮುಖ ನಿ ।**
**ರ್ಜರರ ಆವೇಶಾವತಾರಗಳ ।**
**ಸ್ಮರಿಸು ಗುಣಗಣ ಸರ್ವಕಾಲದಿ ಭಕ್ತಿಪೂರ್ವಕದಿ ॥**

ಗುಣಪೂರ್ಣನಾದ ಶ್ರೀ ನಾರಾಯಣದೇವರ ಅವತಾರಗಳನ್ನು ಹೇಳತಾರೆ.

ಪ್ರಮಾಣ :– "ಅವತಾರಾನ್ ಹರೇಃ ಜ್ಞಾತ್ವಾ ನಾವತಾರಾನ್ ಹರೇಶ್ಚ ಯೇ । ತಥಾವೇಶಾನ್ ತಥಾ ಸಮ್ಯಕ್ ಜ್ಞಾತ್ವಾ ಮುಕ್ತಿರ್ನ ಚಾನ್ಯಥಾ ॥" ಎಂಬ ವಚನ ರೀತ್ಯಾ ದೇವರ, ತಥಾ ದೇವತೆಗಳ ಅವತಾರ ಆವೇಶ ತಿಳಿಯಬೇಕೆಂತ ಹೇಳಿ ಪ್ರಥಮದಲ್ಲಿ ದೇವರ ಅವತಾರ ರೂಪಗಳ ಹೇಳತಾರೆ.

**ಟೀಕಾ :**

ಹರಿ–ಸರ್ವೋತ್ತಮನಾದ ಗುಣಪೂರ್ಣನಾದ ಶ್ರೀ ಪರಮಾತ್ಮನ, ಸಿರಿ–ಸಿತ್ಯಾವಿಯೋಗಿನಿಯರಾದ, ನಿತ್ಯಮುಕ್ತರಾದ ಪರಮಾತ್ಮನಪೇಕ್ಷಯಾ ಅಸ್ವತಂತ್ರರಾದ ಈ ಶ್ರೀ ಪರಮಾತ್ಮಗೆ ಪತ್ನಿಯರಾದ ಶ್ರೀ ಲಕ್ಷ್ಮೀದೇವೇರ, ವಿರಿಂಚಿ–ಜೀವೋತ್ತಮರಾದ, ಅಸುರಾವೇಶದಿಂದಲೂ, ಅಜ್ಞಾನಾದಿ ದೋಷದಿಂದಲೂ ದೂರರಾದ ಋಜುಗಣದಲ್ಲಿ ಶ್ರೇಷ್ಠರಾದ ಬ್ರಹ್ಮದೇವರ, ಈರ–ಭಾವೀಬ್ರಹ್ಮರಾದ, ಬ್ರಹ್ಮದೇವರೋಪಾದಿಯಲ್ಲಿ ಲಕ್ಷಣಗಳುಳ್ಳ, ಸರ್ವೇಂದ್ರಿಯನಿಯಾಮಕರಾದ ಶ್ರೀ ವಾಯುದೇವರ, ಮುಖನಿರ್ಜರರ–ಇವರೇ ಮೊದಲಾದ ದೇವತೆಗಳ, ಅವತಾರಗಳ–ಅವತಾರಗಳ, ಆವೇಶ–ಈ ಪೂರ್ವೋಕ್ತ ದೇವತೆಗಳಲ್ಲಿ ಸ್ವೋತ್ತಮದೇವತೆಗಳ ಆವೇಶ, ಗುಣಗಣ–ಆಯಾ ದೇವತೆಗಳು ಪರಮಾತ್ಮನ ಸಮೀಚೀನವಾದ ಗುಣಗಳ ಸಮೂಹ, ಇವು ಯಾವತ್ತೂ, ಭಕ್ತಿಪೂರ್ವಕದಿ–ತಾರತಮ್ಯ

ಪಂಚಭೇದಪೂರ್ವಕವಾಗಿ, ಭಕ್ತಿಯಿಂದ ಸಹಿತನಾಗಿ, ಅವರವರ ತಾರತಮ್ಯಾನುಸಾರ ಅವರವರಲ್ಲಿ ಭಕ್ತಿಮಾಡುತ್ತಾ, ಸರ್ವಕಾಲದಿ–ಸದಾಸರ್ವಕಾಲದಲ್ಲಿ, ಸ್ಮರಿಸು–ಸ್ಮರಿಸೋವ ನಾಗಬೇಕು ಎಂತ ತಾತ್ಪರ್ಯ.

**ಮೀನ ಕೂರ್ಮ ಕ್ರೋಡ ನರಹರಿ ।**
**ಮಾಣವಕ ಭೃಗುರಾಮ ದಶರಥ ।**
**ಸೂನು ಯಾದವ ಬುದ್ಧ ಕಲಿಕೀ ಕಪಿಲ ವೈಕುಂಠ ॥**
**ಶ್ರೀನಿವಾಸ ವ್ಯಾಸ ಋಷಭ ಹ ।**
**ಯಾನನ ನಾರಾಯಣೀ ಹಂ ।**
**ಸಾನಿರುದ್ಧ ತ್ರಿವಿಕ್ರಮ ಶ್ರೀಧರ ಹೃಷೀಕೇಶ ॥ ೧ ॥**

ಪ್ರಥಮತಃ ಮೂಲರೂಪನಾದ ನಾರಾಯಣದೇವರಿಂದ ಅಂಶತ್ವೇನ ಹೊರಟ ಅವತಾರಗಳ ಹೇಳತಾರೆ.

ಮೀನ – ಮಚ್ಛಾವತಾರ, ಕೂರ್ಮ – ಕೂರ್ಮಾವತಾರ, ಕ್ರೋಡನರಹರಿ – ವರಾಹಾವತಾರ, ನರಸಿಂಹಾವತಾರ, ಮಾಣವಕ–ಬ್ರಹ್ಮಚಾರಿಯಾದ ಶ್ರೀ ವಾಮನಾವ ತಾರ, ಭೃಗುರಾಮ – ಪರಶುರಾಮಾವತಾರ, ದಶರಥಸೂನು – ದಶರಥರಾಯನ ಪುತ್ರನಾದ ಶ್ರೀ ರಾಮಾವತಾರ, ಯಾದವ – ಯದುವಂಶೋದ್ಭವನಾದ ಶ್ರೀಕೃಷ್ಣಾವತಾರ, ಬುದ್ಧ ಕಲಿಕೀ–ಬೌದ್ಧಾವತಾರ, ಕಲ್ಕ್ಯವತಾರ, ಕಪಿಲ–ಸಾಂಖ್ಯ ಶಾಸ್ತ್ರ ಬೋಧಮಾಡಿದ ಕಪಿಲಾವತಾರ, ವೈಕುಂಠ–ಋಷಿಪತ್ನಿಯಾದ ವಿಕುಂಠಾನಲ್ಲಿ ಅವತಾರ, ಶ್ರೀನಿವಾಸ–ತಿರುಪತಿ ಕ್ಷೇತ್ರದಲ್ಲಿ ಅವತಾರಮಾಡಿದ ಶ್ರೀ ವೆಂಕಟೇಶದೇವರು, ವ್ಯಾಸ–ಪರಾಶರಋಷಿಗಳ ಪುತ್ರನಾದ ಶ್ರೀ ವೇದವ್ಯಾಸದೇವರು, ಋಷಭ–ಋಷಭಾವ ತಾರ, ಹಯಾನನ–ಬ್ರಹ್ಮದೇವರಿಗೆ ಜ್ಞಾನೋಪದೇಶಮಾಡಿದ ಶ್ರೀಹಯವದನದೇವರು, ನಾರಾಯಣೀ–ಅಮೃತವಿಭಾಗಮಾಡಿದ ಶ್ರೀ ನಾರಾಯಣೀರೂಪ, ಹಂಸ ಅನಿರುದ್ಧ– ಹಂಸನಾಮಕ ಪರಮಾತ್ಮ, ಅನಿರುದ್ಧರೂಪ, ತ್ರಿವಿಕ್ರಮ–ವಾಮನರೂಪದಿಂದ ಅಭಿವೃದ್ಧ ನಾದ ತ್ರಿವಿಕ್ರಮ, ಶ್ರೀಧರ–ಲಕ್ಷ್ಮೀದೇವೇರನ್ನ ವಕ್ಷಸ್ಥಳದಲ್ಲಿ ಉಳ್ಳವ, ಹೃಷೀಕೇಶ– ಇಂದ್ರಿಯನಿಯಾಮಕನಾದ ಶ್ರೀಪರಮಾತ್ಮ. ಇವು ಯಾವತ್ತೂ, ಇನ್ನೂ ಅನಂ ತಾನಂತಾವತಾರಗಳು ಶ್ರೀ ಪರಮಾತ್ಮಗೆ ಎಂತ ತಾತ್ಪರ್ಯ.

**ಹರಿಯು ನಾರಾಯಣನು ಕೃಷ್ಣಾ ।**
**ಸುರಕುಲಾಂತಕ ಸೂರ್ಯಸಮಪ್ರಭ ।**
**ಕರೆಸುವನು ನಿರ್ದುಷ್ಟಸುಖಪರಿಪೂರ್ಣ ತಾನೆಂದು ॥**
**ಸರ್ವದೇವೋತ್ತಮನು ಸರ್ವಗ ।**
**ಪರಮಪುರುಷ ಪುರಾತನ ಜರಾ ।**
**ಮರಣವರ್ಜಿತ ವಾಸುದೇವಾದ್ಯಮಿತರೂಪಾತ್ಮ ॥ ೨ ॥**

ಶ್ರೀ ಪರಮಾತ್ಮನ ಗುಣವರ್ಣನ ಮಾಡುತ್ತಾರೆ.

ಹರಿಯು–ಸರ್ವಪ್ರಾಣಿಗಳಿಗೆ ಬಿಂಬರೂಪಿಯಾದವ, ಪಾಪ ಪರಿಹಾರಮಾಡತಕ್ಕವ, ನಾರಾಯಣನು–ಮೂಲರೂಪಿಯಾದ ಶ್ರೀ ನಾರಾಯಣದೇವರು, ಕೃಷ್ಣ–ಕೃಷ್ಣರೂಪದಿಂದ ವರ್ತಮಾನ ಕಲಿಯುಗಕ್ಕೆ ಅಭಿಮಾನಿಯಾದವ, ಅಸುರಕುಲಾತಂಕ–ಈ ಪೂರ್ವೋಕ್ತ ದಶಾವತಾರಗಳು ಭಗವದ್ದ್ವೇಷಿಗಳಾದ ದೈತ್ಯರ ಕುಲವನ್ನು ನಾಶಮಾಡಿ, ಭಕ್ತರಿಗೆ ಸುಖ ಕೊಟ್ಟ ರೂಪಗಳು. ಸೂರ್ಯಸಮಪ್ರಭ–ಸೂರ್ಯನ ಕಾಂತಿಗೆ ಸಮಾನವಾದ ಕಾಂತಿಯುಳ್ಳವ, ನಿರ್ದುಷ್ಟ–ತನಗೆ ಸಮಾನರೇನು, ಅಧಿಕರೇನು ಇಲ್ಲದವ, ಸುಖಪರಿಪೂರ್ಣ–ಆನಂದದಿಂದ ಪೂರ್ಣನಾದವ, ಸರ್ವದೇವೋತ್ತಮನು–ಸರ್ವದೇವತೆಗಳಿಗಿಂತಲೂ ಶ್ರೇಷ್ಠನಾದವ, ಸರ್ವಗ–ಚರಾಚರ ಸರ್ವತ್ರ ವ್ಯಾಪ್ತನಾದವನು, ಪರಮಪುರುಷ–ಕ್ಷರಾಕ್ಷರ ಪುರುಷರಿಂದ ಉತ್ತಮನಾದವನು, ಪುರಾತನ–ಅನಾದಿಯಾದವನು, ಜರಾಮರಣವರ್ಜಿತ–ಉತ್ಪತ್ತಿ ಮರಣದಿಂದ ರಹಿತನಾದವನು, ವಾಸುದೇವಾದ್ಯಮಿತರೂಪಾತ್ಮ–ವಾಸುದೇವರೂಪದಿಂದ ಅನೇಕ ರೂಪಗಳು ಉತ್ಪತ್ತಿ ಆಗಿರುವದ್ದರಿಂದ ಅನಂತರೂಪವುಳ್ಳ ಶ್ರೀ ಪರಮಾತ್ಮ, ತಾನೆಂದು–ಇಂಥಾವನು ತಾನು ಎಂತ, ಕರೆಸುವನು–ಹೇಳಿಸಿಕೊಳ್ಳಲ್ಪಟ್ಟವನಾಗಿದ್ದಾನೆ.

**ಈ ನಳಿನಭವಜನನಿ ಲಕುಮೀ ।**
**ಜ್ಞಾನಬಲಭಕ್ತ್ಯಾದಿ ಗುಣಸಂ ।**
**ಪೂರ್ಣಳೆನಿಪಳು ಸರ್ವಕಾಲದಿ ಹರಿಕೃಪಾಬಲದಿ ॥**
**ಹೀನಳೆನಿಪಳೆನಂತಗುಣದಿ ಪು ।**
**ರಾಣಪುರುಷಗೆ ಪ್ರಕೃತಿಗಿನ್ನು ಸ ।**
**ಮಾನರೆನಿಸುವರಿಲ್ಲ ಮುಕ್ತಾಮುಕ್ತಸುರರೊಳಗೆ ॥ ೩ ॥**

ಲಕ್ಷ್ಮೀದೇವೇರ ತಾರತಮ್ಯ ಹೇಳತಾರೆ.

ಈ ನಳಿನಭವ–ವರ್ತಮಾನ ಕಮಲಸಂಭವರಾದ ಬ್ರಹ್ಮದೇವರ, ಜನನಿ–ತಾಯಿಯಾದ, ಪರಮಾತ್ಮಗೆ ಪತ್ನಿಯಾದ, ಲಕುಮಿ–ಲಕ್ಷ್ಮೀದೇವೇರು, ಹರಿಕೃಪಾಬಲದಿ–ತಮ್ಮ ಪತಿಯಾದ ನಾರಾಯಣದೇವರ ಕೃಪಾಬಲದಿಂದ, ಜ್ಞಾನಬಲ–ಜ್ಞಾನದಿಂದ, ಬಲದಿಂದ, ಭಕ್ತಿ–ಅವಿಚ್ಛಿನ್ನವಾದ ಸ್ನೇಹವೆಂಬ ಭಕ್ತಿ, ಆದಿಗುಣ–ಇವುಗಳೇ ಮೊದಲಾದ ಅನೇಕ ಸುಗುಣಗಳಿಂದ, ಸರ್ವಕಾಲದಿ–ಸದಾಸರ್ವಕಾಲಗಳಲ್ಲೂ, ಸಂಪೂರ್ಣಳೆನಿಪಳು–ಸಂಪೂರ್ಣರು ಎಂತ ಕರಿಸುತ್ತಾರೆ; ಬ್ರಹ್ಮಾದ್ಯಪೇಕ್ಷಯಾ ಹೊರತು, ಈಶಾದ್ಯಪೇಕ್ಷಯಾ ಅಲ್ಲ. ಪುರಾಣಪುರುಷಗೆ–ತನ್ನ ಪತಿಯಾದ ಪುರಾಣಪುರುಷನಾದ, ಆದಿಪುರುಷನಾದ ಶ್ರೀ ನಾರಾಯಣದೇವರಿಗೆ, ಅನಂತಗುಣದಿ – ಅನಂತಗುಣದಿಂದ, ಹೀನಳೆನಿಪಳು – ಕಡಿಮೆ ಎಂತ ಎನಿಸತಾರೆ; ಪ್ರಕೃತಿಗಿನ್ನು–ಲಕ್ಷ್ಮೀದೇವೇರಿಗೆ ಪ್ರಕೃತಿ ಎಂತ ನಾಮ,

ಪುರುಷನಾಮಕ ಪರಮಾತ್ಮನ ಪತ್ನಿಯಾದ, ಕಡಿಯಿಂದ ; ಈ ರಮಾದೇವೇರಿಗೆ, ಇನ್ನು ಸಮಾನರೆನಿಸುವರು—ಸಮಾನರು ಎಂತ ಕರೆಸತಕ್ಕವರು, ಮುಕ್ತ—ಲಿಂಗಭಂಗರಾಗಿ ಮುಕ್ತರಾದ, ಅಮುಕ್ತ—ಲಿಂಗಭಂಗರಾಗದ, ಸುರರೊಳಗೆ—ಈ ಉಭಯವಿಧ ದೇವತೆಗಳ ಒಳಗೆ, ಇಲ್ಲ—ದಾರೂನೂ ಇಲ್ಲ ; ಎಲ್ಲಾರೂ ರಮಾದೇವೇರಿಗಿಂತಲೂ ಅವರರಾದವರೇವೇ. ಶ್ರೀಪರಮಾತ್ಮಗೆ ರಮಾದೇವೇರು ಅನಂತಗುಣದಿಂದ ನೀಚರೆಂದಮೇಲೆ, ಪರಮಾತ್ಮ ರಮಾದೇವೇರಿಗಿಂತಲೂ ಅನಂತಗುಣದಿಂದ ಉತ್ತಮ ಎಂತ ಹೇಳಿದಂತಾಗತದೆ. 'ಅನಂತ' ಶಬ್ದಕ್ಕೆ ಅಪ್ರಂತರಹಿತ ಎಂತ ಅರ್ಥಮಾಡಿದರೆ ರಮಾದೇವೇರಿಗಿಂತಲೂ ಬ್ರಹ್ಮದೇವರು ಕೋಟಿಗುಣ ನೀಚರು ಎಂತ ಹೇಳೋಣದರಿಂದ, ರಮಾದೇವೇರು ಅನಂತಗುಣ ನೀಚರು ಎಂಬೋದು ಅನಂತಕ್ಕೆ ಅವಧಿ ಹೇಳದಹೋದರೆ, ಬ್ರಹ್ಮದೇವರು ಕೋಟಿಗುಣಕ್ಕೆ ನೀಚರು ಎಂತ ಹೇಳೋದಕ್ಕೆ ಆಗೋದಿಲ್ಲ. ಇದಕ್ಕೆ ಸಮಾಧಾನ : ರಮಾದೇವೇರು ಬ್ರಹ್ಮದೇವರಿಗಿಂತಲೂ ಕೋಟಿಗುಣದಿಂದ ಅಧಿಕರು ; ರಮಾದೇವೇರಿಗಿಂತಲೂ, ಪರಮಾತ್ಮ ಅನಂತಗುಣದಿಂದ ಅಧಿಕ, ಈ ಅನಂತ ಅವಧಿಯುಕ್ತವಾದದ್ದು. ಪರಮಾತ್ಮನ ಒಂದೊಂದು ಗುಣದಲ್ಲಿ ಅನಂತಗುಣಗಳು ಅವೆ. ಅದರಲ್ಲಿ ರಮಾದೇವೇರು ತಮ್ಮಲ್ಲಿ ಇರತಕ್ಕ ಕೋಟಿ ಗುಣಗಳಿಗೆ ಸರಿತೂಗತಕ್ಕ ಗುಣಗಳ ಅನಾಲೋಚನೆಯಿಂದ ಕಾಣತಾರೆ. ಕೋಟಿಗುಣ ಹೋಗತಾ ತದನ್ಯ ಅನಂತಗುಣಗಳ ಆಲೋಚನೆಯಿಂದ ಕಾಣತ ಆನಂದಸಮುದ್ರದಲ್ಲಿ ಮುಣಗತಾರೆ. ತದನ್ಯ ಅಪರಿಚ್ಛಿನ್ನ ಅನಂತಾನಂತ ಗುಣಗಳ ನೋಡೋ ಇಚ್ಛ್ಯಾನೂ ಇಲ್ಲ, ಕಾಣೋಣವೂ ಇಲ್ಲ. ಈ ರೀತ್ಯಾ ಅನಂತಗುಣಗಳಿಗೆ ನೀಚರೆಂದು ತಾತ್ಪರ್ಯ. ಆದ್ದರಿಂದ ಪ್ರಕೃತ ಅನಂತಶಬ್ದಕ್ಕೆ ಪರಿಮಿತ ಸಾಂಕೇತವು ಎಂತ ತಾತ್ಪರ್ಯ.

**ಗುಣಗಳತ್ರಯಮಾನಿ ಶ್ರೀ ಕುಂ ।**
**ಭಿಣಿ ಮಹಾದುರ್ಗಾಂಭ್ರಣೀ ರು ।**
**ಗ್ಮಿಣಿಯು ಸತ್ಯ ಶಾಂತಿ ಕೃತಿ ಜಯ ಮಾಯ ಮಹಲಕುಮಿ ॥**
**ಜನಕಜಾ ಕಮಲಾಲಯಾ ದ ।**
**ಕ್ಷಣೆಯು ಪದ್ಮಾ ತ್ರಿಲೋಕೇಶ್ವರಿ ।**
**ಅಣು ಮಹತ್ತಿನೊಳಿದ್ದು ಉಪಮಾರಹಿತಳೆನಿಸುವಳು ॥ ೪ ॥**

ಲಕ್ಷ್ಮೀದೇವೇರ ಅವತಾರಗಳ ಹೇಳತಾರೆ.

ಗುಣಗಳತ್ರಯಮಾನಿ — ಮೂಲ ಜಡಪ್ರಕೃತ್ಯಾತ್ಮಕ ಉಪಾದಾನಭೂತವಾದ ಗುಣತ್ರಯಗಳಿಗೇನೂ, ಅನಾದಿಲಿಂಗ ಗುಣತ್ರಯಗಳಿಗೇನೂ, ಅಭಿಮಾನಿಯಾದ ಲಕ್ಷ್ಮೀದೇವೇರ ಅವತಾರ ರೂಪಗಳು, ಶ್ರೀ—ಶ್ರೀದೇವೇರು, ಉದಕರೂಪರು ; ಕುಂಭಿಣಿ—ಭೂದೇವೇರು, ವಟಪತ್ರರೂಪರು ; ಮಹಾದುರ್ಗಾ—ಮಹಾಪ್ರಳಯಕಾಲದಲ್ಲಿ ದುರ್ಗಾದೇವೇರು, ಅಂಧಕಾರರೂಪರು ; ಅಂಭ್ರಣೀ—ಸೃಷ್ಟಿಮಾಡೋ ಉದ್ದಿಶ್ಯ ಪರಮಾತ್ಮನ್ನ

ಸ್ತೋತ್ರಮಾಡಿದ ಲಕ್ಷ್ಮೀದೇವೇರ ರೂಪ, ರುಗ್ಮಿಣಿಯು–ಭೀಷ್ಮಕರಾಯನ ಪುತ್ರಿ ರುಗ್ಮಿಣೀದೇವೇರು, ಸತ್ಯ–ಸತ್ರಾಜಿದ್ರಾಯನ ಮಗಳು ಸತ್ಯಭಾಮಾದೇವೇರು, ಶಾಂತಿ–ನೀಲವರ್ಣ ಅನಿರುದ್ಧನ ಪತ್ನಿ ಶಾಂತೀದೇವೇರು, ಕೃತಿ–ರಕ್ತವರ್ಣ ಪ್ರದ್ಯುಮ್ನದೇವರ ಪತ್ನಿ ಕೃತೀದೇವೇರು, ಜಯ–ಪಿಂಗಳವರ್ಣ ಸಂಕರ್ಷಣದೇವರ ಪತ್ನಿ ಜಯಾದೇವೇರು, ಮಾಯ–ಕೃಷ್ಣವರ್ಣ ವಾಸುದೇವನ ಪತ್ನಿ ಮಾಯಾದೇವೇರು, ಮಹಲಕುಮಿ–ಸ್ವರ್ಣವರ್ಣನಾದ ಶ್ರೀ ನಾರಾಯಣದೇವರ ಪತ್ನಿ ಮೂಲರೂಪ ಲಕ್ಷ್ಮೀದೇವೇರು, ಜನಕಜಾ–ಜನಕರಾಯನ ಪುತ್ರಿ ಸೀತಾದೇವೇರು, ಕಮಲಾಲಯ – ಪದ್ಮಾವತೀದೇವೇರು, ದಕ್ಷಿಣೆಯು–ಯಜ್ಞನಾಮಕ ಪರಮಾತ್ಮನ ಭಾರ್ಯರಾದ ದಕ್ಷಿಣಾದೇವೇರು, ಪದ್ಮಾ–ಭೃಗುಪುತ್ರಿ ಎಂತ ಅವತಾರಮಾಡಿದವರು, ತ್ರಿಲೋಕೇಶ್ವರಿ – ಮೂರುಲೋಕಕ್ಕೂ ತಾಯಿಯಾದ ಲಕ್ಷ್ಮೀದೇವೇರ ರೂಪಗಳು, ಇನ್ನೂ ಅನಂತರೂಪಗಳು ಉಂಟು; ಈ ರೂಪಗಳುಳ್ಳ ರಮಾದೇವಿ, ಅಣು–ಅಣುವಾದ ಜೀವನಲ್ಲಿ, ಮಹತ್ತಿನೊಳಿದ್ದು–ನವಾವರಣಸಹಿತವಾದ ಬ್ರಹ್ಮಾಂಡದ ಒಳ ಹೊರಗೆ ಈ ಅಣುಮಹತ್ತಿನೊಳಿದ್ದು, ಉಪಮಾರಹಿತಳೆನಿಸುವಳು–ಅಸ್ವತಂತ್ರ ಚೇತನರೊಳು ಉತ್ತಮರು, ಸಮಾನರಹಿತರು, ಬ್ರಹ್ಮಾದಿಗಳು ಈಕಿಗೆ ಅವರರಾದವರು ಎಂತ ತಾತ್ಪರ್ಯ.

**ಘೋಟಕಾಸ್ಯನ ಮಡದಿಗಿಂತಲಿ ।**
**ಹಾಟಕೋದರ ಪವನರೀರ್ವರು ।**
**ಕೋಟಿಗುಣದಿಂದಧಮರೆನಿಪರು ಆವ ಕಾಲದಲಿ ॥**
**ಖೇಟಪತಿ ಶೇಷಾಮರೇಂದ್ರರ ।**
**ಪಾಟುಮಾಡದೆ ಶ್ರೀಶನ ಕೃಪಾ ।**
**ನೋಟದಿಂದಲಿ ಸರ್ವರೊಳು ವ್ಯಾಪಾರ ಮಾಡುವರು ॥ ೫ ॥**

ಬ್ರಹ್ಮವಾಯುಗಳ ತಾರತಮ್ಯ ಹೇಳತಾರೆ.

ಘೋಟಕಾಸ್ಯನ – ಹಯವದನದೇವರ, ಮಡದಿಗಿಂತಲಿ – ಪತ್ನಿಯಾದ ಲಕ್ಷ್ಮೀದೇವೇರಿಗಿಂತಲೂ, ಹಾಟಕೋದರ – ಹಿರಣ್ಯಗರ್ಭನಾದ ಬ್ರಹ್ಮದೇವರು, ಪವನರು–ವಾಯುದೇವರು, ಈರ್ವರು–ಈ ಉಭಯರು ಸಮಾನರು ಎಂತ ತಾತ್ಪರ್ಯ. ಬಾಹ್ಯದಲ್ಲಿ, ಪದಕೃತ, ಸಾಧನೀಕೃತ ತಾರತಮ್ಯ ಯಾವತ್ತೂ ಇರೋಣದರಿಂದ ವರ್ತಮಾನದಲ್ಲಿ ಹೇಳತಕ್ಕ ತಾರತಮ್ಯ ಯಾವತ್ತೂ ಸ್ವರೂಪ ತಾರತಮ್ಯವೇ ಹೊರ್ತು ಬಾಹ್ಯವಲ್ಲ. ಕೋಟಿಗುಣದಿಂದಧಮರೆನಿಪರು–ರಮಾದೇವೇರಿಗಿಂತಲೂ ಕೋಟಿಗುಣದಿಂದ ಅಧಮರು ಎಂತ ಅನಸತಾರೆ; ರಮಾದೇವೇರು ಕೋಟಿ ವಿಜಾತಿ ಗುಣದಿಂದ ಅಧಿಕರು ಎಂತ ತಾತ್ಪರ್ಯ. ಗುಣಗಳೊಳಗೆ ಸಜಾತಿ ಗುಣಗಳೆಂತಲೂ, ವಿಜಾತಿ ಗುಣಗಳೆಂತಲೂ ಎರಡುವಿಧ; ಸಜಾತಿ ಗುಣಗಳೆಂದರೆ ಬ್ರಹ್ಮವಾಯುಗಳಲ್ಲಿ ಇರತಕ್ಕ ಗುಣಗಳು, ರಮಾದೇವೇರಲ್ಲಿ ಇರೋಣ; ವಿಜಾತಿ ಗುಣಗಳೆಂದರೆ ಬ್ರಹ್ಮವಾಯುಗಳಲ್ಲಿ ಇಲ್ಲದೇ ಇರುವ

ಗುಣಗಳು, ರಮಾದೇವೇರಲ್ಲಿ ಇರೋಣ; ಇವೇ ಸಜಾತಿ, ವಿಜಾತಿ ಎಂಬುದು. ಬ್ರಹ್ಮ ವಾಯುಗಳು ರಮಾದೇವೇರಿಗಿಂತಲೂ ವಿಜಾತಿ ಕೋಟಿ ಗುಣದಿಂದ ಅಧಮರು. ಇದೇ ಪ್ರಕಾರ ಪರಮಾತ್ಮನಿಗಿಂತಲೂ, ರಮಾದೇವೇರು ಅನಂತ ವಿಜಾತಿ ಗುಣದಿಂದ ಅಧಮ ರೆಂದು ತಾತ್ಪರ್ಯ. ಇದೇಪ್ರಕಾರ ಸರ್ವತಾರತಮ್ಯವು, ಆವಕಾಲದಲ್ಲಿ–ಅನಾದ್ಯನಂತ ಕಾಲಕ್ಕೂ, ಲಿಂಗಭಂಗಾನಂತರವೂ, ಕೋಟಿಗುಣಕ್ಕೆ ಅವರರೆಂದು ತಾತ್ಪರ್ಯ, ಈ ಬ್ರಹ್ಮ, ವಾಯುಗಳು. ಖೇಟಪತಿ–ಖೇ–ಆಕಾಶವಲ್ಲಿ, ಅಟ–ಸಂಚಾರಮಾಡುವ ಸಕ್ಷಿ ಗಳಿಗೆ, ಪತಿ–ಸ್ವಾಮಿಯಾದ ಗರುಡದೇವರು, ಶೇಷ–ಶೇಷದೇವರು, ಅಮರೇಂದ್ರರ– ದೇವತಾಶ್ರೇಷ್ಠನಾದ ಇಂದ್ರದೇವರು, ಇವರೇ ಮೊದಲಾದ ತತ್ತ್ವದೇವತೆಗಳ, ಪಾಟು ಮಾಡದೆ–ಲಕ್ಷ್ಯಮಾಡದೆ, ಶ್ರೀಶನ–ಲಕ್ಷ್ಮೀಪತಿಯಾದ ನಾರಾಯಣದೇವರ, ಕೃಪಾ ನೋಟದಿಂದಲಿ – ಅಂತಃಕರಣಯುಕ್ತವಾದ ವೀಕ್ಷಣದಿಂದ, ಸರ್ವರೊಳು – ರುದ್ರಾದಿ ತೃಣಾಂತ ತ್ರಿವಿಧ ಜೀವರೊಳು, ವ್ಯಾಪಾರಮಾಡುವರು–ಇತರ ದೇವತಾ ಅಭಿಮನ್ಯ ಮಾನವಾದ ತತ್ತ್ವವ್ಯಾಪಾರಗಳ ಅವರವರ ಸ್ಥೂಲದೇಹದಲ್ಲಿ ಇವರೇ ಮಾಡುವರು, ಇಂಥಾ ಯೋಗ್ಯತೆ ಉಳ್ಳವರು. ತದನ್ಯರಿಗೆ ಈ ಯೋಗ್ಯತಾ ಎಲ್ಲಾ ಎಂತ ತಾತ್ಪರ್ಯ.

**ಪುರುಷ ಬ್ರಹ್ಮ ವಿರಿಂಚಿ ಮಹಾ ।**
**ಮ್ಮರುತ ಮುಖ್ಯಪ್ರಾಣ ಧೃತಿ ಸ್ಮೃತಿ ।**
**ಗುರುವರ ಮಹಾಧ್ಯಾತ ಬಲ ವಿಜ್ಞಾತ ವಿಖ್ಯಾತ ॥**
**ಗರಳಭುಗ್ಭವರೋಗಭೇಷಜ ।**
**ಸ್ವರ ವರಣ ವೇದಸ್ಥ ಜೀವೇ ।**
**ಶ್ವರ ವಿಭೀಷಣ ವಿಶ್ವಚೇಷ್ಟಕ ವೀತಭಯ ಭೀಮ ॥ ೬ ॥**

ಬ್ರಹ್ಮ, ವಾಯುಗಳ ಅವತಾರಗಳ ಹೇಳತಾರೆ.

ಪುರುಷಬ್ರಹ್ಮ–ಪುರುಷನಾಮಕ ಬ್ರಹ್ಮ, ವಿರಿಂಚಿ–ಮಹತತ್ತ್ವತನುವಾದ ಈ ವಿರಿಂಚಿ ಬ್ರಹ್ಮನು ಶಾಂತೀದೇವೇರಲ್ಲಿ ಅನಿರುದ್ಧನಿಂದ ಜನಿತನು; ಕಾಲನಾಮಕನು ಮಾಯಾದೇವಿಯಲ್ಲಿ ವಾಸುದೇವನಿಂದ ಜನಿತನು; ಅಂಡದ ಒಳಗೆ ಲಕ್ಷ್ಮೀನಾರಾಯಣ ರಿಂದ ಚತುರ್ಮುಖ ಬ್ರಹ್ಮನು ಜನಿತನು; ಅಂತು ನಾಲ್ಕು ಬ್ರಹ್ಮರೂಪಗಳು. ಮರುತ– ಮರುತಗಣದೊಳಗೆ, ಮಹತು–ಶ್ರೇಷ್ಠರಾದ ಜೀವೋತ್ತಮರಾದ, ಧೃತಿ–ರುದ್ರಾದಿ ದೇವತಾಪೇಕ್ಷಯಾ ಧೈರ್ಯಶಾಲಿಗಳಾದ, ಸ್ಮೃತಿ–ಭಗವದ್ವಿಷಯದಲ್ಲಿ ತಿರೋಧಾನ ರಹಿತರಾದ ಸ್ಮೃತಿಯುಕ್ತರಾದ, ಗುರುವರ–ಸ್ವೋತ್ತಮ, ಸ್ವೋತ್ತಮಗುರುಗಳೊಳಗೆ ಉತ್ತಮರಾದ, ಮಹಾ–ತ್ರಿವಿಧಜೀವರೊಳಗೆ ಶ್ರೇಷ್ಠರಾದ ರುದ್ರಾದಿ ಮುಕ್ತಿಯೋಗ್ಯ ಜೀವರಿಂದ, ಧ್ಯಾತ–ಧ್ಯಾನಮಾಡಿಸಿಕೊಂಬೋದಕ್ಕೆ ಯೋಗ್ಯರಾದ, ಬಲ–ದೇಹದಲ್ಲಿ ಬಲಿಷ್ಠರಾದ, ವಿಜ್ಞಾತ–ರುದ್ರಾದ್ಯಪೇಕ್ಷಯಾ ಜಗದ್ವಿಷಯಕವಾದ ಜ್ಞಾನವನ್ನ ವಿಶೇಷಾ

ಕಾರವಾಗಿ ತಿಳಿದವರಾದ, ಗರಳಭುಕ್–ಸಮುದ್ರಮಥನಕಾಲದಲ್ಲಿ ಉತ್ಪನ್ನವಾದ ಹಾಲಾಹಲವನ್ನು ಉಂಡವರು, ಭವರೋಗ–ಸಂಸಾರವೆಂಬೋ ರೋಗಕ್ಕೆ, ಭೇಷಜ–ಔಷಧರೂಪವಾದ ಜ್ಞಾನಪ್ರದರಾದ, ಸ್ವರ–ಉದಾತ್ತಾನುದಾತ್ತಾದಿ ಸ್ವರಗಳಲ್ಲೇನು, ವರಣ–ಅಕಾರಾದಿ ಅಕ್ಷರಗಳಲ್ಲೇನು, ವೇದ–ಇವುಗಳಲ್ಲಿ, ಚತುರ್ವೇದಗಳಲ್ಲಿ, ಸ್ಥ–ತದಾಕಾರದಿಂದ ಇರತಕ್ಕವರು, ಜೀವೇಶ್ವರ – ರಮಾಮಧುಸೂದನರ ವ್ಯತಿರಿಕ್ತ, ರುದ್ರಾದಿ ತೃಣಾಂತ ತ್ರಿವಿಧಜೀವರಿಗೆ ಸ್ವಾಮಿಯಾದವರಾದ, ವಿಭೀಷಣ – ಭಗದ್ವೇಷಿಗಳಾದ ದೈತ್ಯರಿಗೆ ಭಯಂಕರರಾದ ಹನುಮದ್ರೂಪವೇನು, ವಿಶ್ವಚೇಷ್ಟಕ–ಚರಾಚರದಲ್ಲಿ ವ್ಯಾಪ್ತರಾಗಿ, ಜೀವರಲ್ಲಿ ಸರ್ವವ್ಯಾಪಾರಗಳ ಮಾಡಿಸತಕ್ಕವರು, ಮುಖ್ಯಪ್ರಾಣ–ಸೂತ್ರನಾಮಕರಾದ ಈ ಪ್ರಾಣದೇವರು, ವೀತಭಯ – ದೈತ್ಯರ ಭಯವಿಲ್ಲದವರು, ಭೀಮ – ದ್ವಿತೀಯಾವತಾರರಾದ ಭೀಮಸೇನದೇವರು, ವಿಖ್ಯಾತ–ಸರ್ವವಿಷಯದಲ್ಲೂ ಈ ವಾಯುದೇವರು ಶ್ರೀ ಪರಮಾತ್ಮನಲ್ಲಿ ಅತಿಶಯವಾದ ಖ್ಯಾತಿ ಹೊಂದಿದವರು ಎಂತ ತಾತ್ಪರ್ಯ.

**ಅನಿಲ ಸ್ಥಿತಿ ವೈರಾಗ್ಯನಿಧಿ ರೋ ।**
**ಚನ ವಿಮುಕ್ತಿಗ ನಂದ ದಳನುತಿ ।**
**ಅನಿಮಿಷೇಶಾನಿದ್ರ ಶುಚಿ ಸತ್ವಾತ್ಮಕಶರೀರ ॥**
**ಅಣು ಮಹದ್ರೂಪಾತ್ಮಕಾನ್ಮೃತ ।**
**ಹನುಮದಾದ್ಯವತಾರ ಪದ್ಮಾ ।**
**ಸನ ಪದವಿ ಸಂಪ್ರಾಪ್ತ ಪರಿಸರ ಆಖಣಾಶ್ಮಸಮ ॥ ೭ ॥**

ಶ್ರೀ ವಾಯುದೇವರ ವಿಚಾರವೇ ಹೇಳತಾರೆ.

ಅನಿಲ–ವಾಯುದೇವರು, ಸ್ಥಿತಿ–ಸರ್ವಪ್ರಾಣಿಗಳ ಸ್ಥೂಲದೇಹಗಳಲ್ಲಿ ಸ್ಥಿತರಾಗಿ ಇದ್ದರೆ, ದೇಹಗಳು ಸ್ಥಿತವಾಗಿ ಇರುತ್ತವೆ. ವಾಯುದೇವರು ಹೊರಟುಹೋದರೆ, ದೇಹಗಳು ಸ್ಥಿತಿ ತಪ್ಪಿ ನಾಶವಾಗುತ್ತವೆ ಎಂತ ಅರ್ಥ. ವಿಮುಕ್ತಿಗ–ವಿಶೇಷಾಕಾರವಾಗಿ ಹೊಗಳಲ್ಪಟ್ಟ ಜ್ಞಾನಾದಿಗಳಿಂದ, ನಂದ–ಆನಂದಯುಕ್ತರಾದವರು ; ಅಮುಕ್ತರಾದವರು, ಅಮುಕ್ತರ ಶರೀರಗಳಲ್ಲಿ ಇದ್ದು, ಭಗವದುಪಾಸನಾದಿಗಳಿಂದ ಆನಂದಪಡತಕ್ಕವರು ; ಮುಕ್ತರ ಶರೀರದಲ್ಲಿ ಪ್ರವೇಶ ಇಲ್ಲದವರು ; ಅನಿಮಿಷೇಶ–ರೆಪ್ಪೆ ಮುಚ್ಚದೆ ಇರತಕ್ಕ ದೇವತೆಗಳಿಗೆ ಸ್ವಾಮಿಯಾದವರು, ಎಂದರೆ ದೇವತಾಶ್ರೇಷ್ಠರು, ಅನಿದ್ರ–ಪ್ರಳಯಕಾಲದಲ್ಲಿ ದೇವತೆಗಳು ನಿದ್ರಾಯುಕ್ತರಾಗುತ್ತಾರೆ ; ಈ ವಾಯುದೇವರು ನಿದ್ರಾ ಇಲ್ಲದೆ ಇರುತ್ತಾರೆ ; ಇನ್ನೂ ಸ್ಥೂಲಶರೀರದಲ್ಲಿ ಜೀವರ ನಿದ್ರಾಕಾಲದಲ್ಲಿ ತಾವು ನಿದ್ರಾ ಇಲ್ಲದೆ ಶ್ವಾಸಕಾರ್ಯ ಮಾಡುತ್ತಾರೆ ; ಆದಕಡಿಯಿಂದ ಈ ವಾಯುದೇವರು ನಿದ್ರಾದಿಂದಲೂ, ಅಜ್ಞಾನದಿಂದಲೂ ಹೀನರು. ಶುಚಿ–ಅಸುರಾವೇಶ, ಅಜ್ಞಾನಾದಿ ದೋಷಗಳಿಂದ ರಹಿತರಾಗಿ ಕೇವಲ ಶುಚಿರ್ಭೂತರಾಗಿ ಇರತಕ್ಕ, ಸತ್ವಾತ್ಮಕಶರೀರ – ಅತ್ಯಲ್ಪ ರಜಸ್ತಮವು,

ಸತ್ತ್ವಗುಣವೇ ಪ್ರಾಚುರ್ಯವಾದ ಸ್ಥೂಲಶರೀರ ಉಳ್ಳವರು, ಅಣು–ರುದ್ರಾದ್ಯಪೇಕ್ಷಯಾ ತಮ್ಮ ಸ್ಥೂಲಶರೀರವನ್ನು ಅಣುವಾಗಿ ಮಾಡತಕ್ಕವರು, ಎಂದರೆ, ರುದ್ರಾದಿಗಳು ತಮ್ಮ ತಮ್ಮ ಸ್ಥೂಲಶರೀರಗಳ ಎಷ್ಟು ಅಣುವಾಗಿ ಮಾಡಿಕೋತಾರೋ, ತದಪೇಕ್ಷೆಯಾ, ನೂರಂಶದಿಂದ ಅಧಿಕವಾಗಿಯೂ ವಾಯುದೇವರು ತಮ್ಮ ಸ್ಥೂಲಶರೀರವನ್ನ ಅಣುವಾಗಿ ಮಾಡಿಕೊಳ್ಳಲಿಕ್ಕೆ ಸಾಮರ್ಥ್ಯದಿಂದ ಯುಕ್ತರಾದವರು. ಮಹತ್–ಪೂರ್ವೋಕ್ತಪ್ರಕಾರವೇ ದೊಡ್ಡರೂಪ ಧರಿಸತಕ್ಕವರು, ರೂಪಾತ್ಮಕ–ಪತಾವೃಶ ಅಣುಮಹದ್ರೂಪಗಳಿಂದ ಪ್ರಚುರರಾದವರು ಎಂದರೆ, ಅಣುಲಿಂಗದಲ್ಲಿ ರುದ್ರಾದಿಗಳ ಪ್ರವೇಶ ಇಲ್ಲ. ಅಷ್ಟು ಅಣುತ್ವ ರುದ್ರಾದಿಗಳಿಗೆ ಇಲ್ಲ, ವಾಯುದೇವರಿಗೆ ಉಂಟು. ಅಂಡಾವರಣದ ಗುಣತ್ರಯ ದವರೆಗೂ ರುದ್ರಾದಿಗಳಿಗೆ ಪ್ರವೇಶ ಇಲ್ಲ; ಇಷ್ಟು ದೊಡ್ಡ ರೂಪ ಇವರಿಗೆ ಇಲ್ಲ, ವಾಯುದೇವರಿಗೆ ಉಂಟು ಎಂತ ತಾತ್ಪರ್ಯ. ಅಮೃತ–ರುದ್ರಾದಿ ದೇವತೆಗಳ ಅವತಾರ ಗಳಿಗೆ ದೇಹತ್ಯಾಗರೂಪವಾದ ಮೃತಿ ಉಂಟು. ವಾಯುದೇವರ ಅವತಾರರೂಪಗಳಿಗೆ ಅಂಥಾ ಮೃತಿ ಇಲ್ಲವಾದಕಡಿಯಿಂದ, ಈ ವಾಯುದೇವರು ಮುಂದಕ್ಕೆ, ಪದ್ಮಾಸನ ಪದವಿ – ಬ್ರಹ್ಮದೇವರ ಸತ್ಯಲೋಕಪದವಿಯನ್ನ, ಸಂಪ್ರಾಪ್ತ – ಹೊಂದತಕ್ಕವರು, ಆಖಣಾಶ್ಮಸಮ–ಪರ್ವತಗಳನ್ನು ಭೇದನಮಾಡತಕ್ಕ ಉಕ್ಕಿನ ಮುಖದೋಪಾದಿಯಲ್ಲಿ ದಾರಢ್ಯವಾಗಿ ಇರುವ ಶರೀರ ಉಳ್ಳವರು, ಅಸುರರೆಂಬೋ ಪರ್ವತಗಳ ನಾಶಮಾಡ ತಕ್ಕವರು, ಪರಿಸರ–ಇಂಥಾ ವಾಯುದೇವರ ರೂಪಗಳು ಮ್ಯಾಲೆ ಹೇಳಿದ, ೧. ಸೂತ್ರ ನಾಮಕ ರೂಪ, ೨. ಹನುಮದ್ರೂಪ, ೩. ಭೀಮರೂಪ, ಈ ರೂಪಗಳು ಅಲ್ಲದೆ, ರೋಚನ–ರೋಚನನಾಮಕ ಎರಡನೇದಾದ ಇಂದ್ರರೂಪ, ದಶಮತಿ–ಪೂರ್ಣವಾದ ಜ್ಞಾನವುಳ್ಳ ಶ್ರೀಮಧ್ವಾಚಾರ್ಯರ ಅವತಾರರೂಪ, ವೈರಾಗ್ಯನಿಧಿ–ಈ ರೂಪ ಸಮಿಾಚೀನವಾದ, ಜ್ಞಾನ, ಭಕ್ತಿ, ವೈರಾಗ್ಯವೆಂಬ ಸಮುದ್ರಕ್ಕಿಂತ, ಗಂಭೀರವಾದ ನಿಧಿ ಉಳ್ಳವರು, ಹನುಮದಾದ್ಯವತಾರ–ಈ ಪ್ರಕಾರ ವಾಯುದೇವರ ಅವತಾರಗಳು ಎಂತ ತಾತ್ಪರ್ಯ.

ಪ್ರಮಾಣಗಳು :–ಏಳನೇ ಶ್ಲೋಕದಲ್ಲಿ 'ಅಮೃತ' ಎಂಬ ಪದಕ್ಕೆ 'ವಾಯು ರಪ್ಯಮೃತಃ ಸ್ಮೃತಃ' ಎಂತ ತಾತ್ಪರ್ಯ.

'ಪದ್ಮಾಸನಪದವಿ ಸಂಪ್ರಾಪ್ತ' ಎಂದರೆ ಬ್ರಹ್ಮಪದವಿ ಹೊಂದಿದವರು, ಎಂದರೆ, ಮುಂದೆ ಆ ಬ್ರಹ್ಮಪದವಿ ನಿಶ್ಚಯವಾಗಿರುವುದ್ದರಿಂದ, ಬರುವುದಕ್ಕಿಂತ ಮುಂಚೆ 'ಬಂದೆ' ಎಂತ ಹೇಳುವಂತೆ, 'ಏಷ್ಯತ್ವನಿಶ್ಚಯೋ ಯತ್ರ ತದೀಶತ್ವೇನ ಭಣ್ಯತೇ' ಎಂಬ ವಚನಾನುಸಾರ ಆದಂತೆ ಪ್ರಯೋಗಿಸಬಹುದು ಎಂತ ಅರ್ಥ.

'ಪರಿಸರ' ಎಂದರೆ ಸರ್ವತ್ರ ಅತಿವೇಗದಿಂದ ಗಮನಶಕ್ತಿ ಇರುವದ್ದರಿಂದ.

'ಆಖಣಾಶ್ಮ' ಎಂದರೆ ಪ್ರಕಾರಾಂತರ ಅರ್ಥ–"ಯ ಏವಾಯಂ ಮುಖ್ಯ ಪ್ರಾಣಸ್ತ– ಮುದ್ಗೀಥಮುಪಾಸಾಂಚಕ್ರಿರೇ ತಂ ಹಾಸುರಾ ಋತ್ವಾ ವಿದಧ್ವಸುರ್ಯಥಾಶ್ಮಾನಮಾಖಣ

ಮೃತ್ವಾ ವಿಧ್ವಂಸತೇ ಯದಾ ವಿದಧ್ವಸುಃ ಪ್ರಾಣಂ ವಿಧ್ವಸ್ತಾಸ್ತೇ ತದಾಸುರಾಃ | ಅಖನ್ಯಾಶ್ಮಾನಮೇವಾಪ್ಯ ಲೋಷ್ಟೋ ವಿಧ್ವಂಸತೇ ಯಥಾ ||" ಎಂತ ಛಾಂದೋಗ್ಯೋಪನಿಷದ್ಭಾಷ್ಯದಲ್ಲಿ ಇರುವದ್ದರಿಂದ, 'ವರೆ' ಇಲ್ಲದ ಕಲ್ಲಿನಂತೆ ದೃಢಶರೀರ ಉಳ್ಳವರು ಎಂತ ಅರ್ಥ.

**ಮಾತರಿಶ್ವ ಬ್ರಹ್ಮರು ಜಗ |**
**ನ್ಮಾತೆಗಧಮಾಧೀನರೆನಿಪರು |**
**ಶ್ರೀತರುಣಿ ವಲ್ಲಭನು ಈರ್ವರೊಳಾವಕಾಲದಲಿ ||**
**ನೀತ ಭಕ್ತಿ ಜ್ಞಾನ ಬಲ ರೂ |**
**ಪಾತಿಶಯದಿಂದಿದ್ದು ಚೇತನಾ |**
**ಚೇತನಗಳೊಳು ವ್ಯಾಪ್ತರೆನಿಸುವ ತತ್ತದಾಹ್ವಯದಿ || ೮ ||**

ವಾಯುದೇವರ, ಬ್ರಹ್ಮದೇವರ ವಿಚಾರ ಹೇಳತಾರೆ.

ಮಾತರಿಶ್ವ – ಸಮಸ್ತ ವೇದಗಳಲ್ಲಿ ಸಂಚಾರಮಾಡತಕ್ಕವರಾದಕಡಿಯಿಂದ ಈ ವಾಯುದೇವರು, ಬ್ರಹ್ಮರು–ಬ್ರಹ್ಮದೇವರು (ಇವರಿಬ್ಬರೂ), ಜಗನ್ಮಾತೆಗೆ–ಚರಾಚರ ಜಗತ್ತನ್ನ ಪರಮಾತ್ಮನದ್ವಾರ ಸೃಷ್ಟಿಮಾಡಿದ, ಜಗತ್ತಿಗೇ ತಾಯಿಯಾದ ಶ್ರೀ ಲಕ್ಷ್ಮೀದೇವೇರಿಗೆ, ಅಧಮಾಧೀನರೆನಿಪರು–ಜ್ಞಾನ ಭಕ್ತ್ಯಾದಿ ಸರ್ವಗುಣದಿಂದ ಅಧಮರು, ಲಕ್ಷ್ಮೀದೇವೇರಿಗೆ ಅಧೀನರಾದವರು ಎಂತ ಎನಿಸೋವರಾಗತಾರೆ, ಶ್ರೀ ತರುಣಿವಲ್ಲಭನು–ನಿತ್ಯಯೌವನೆಯರಾದ ಶ್ರೀದೇವೇರಿಗೆ ಪತಿಯಾದ ಶ್ರೀ ನಾರಾಯಣದೇವರು, ಈರ್ವರೊಳು–ಈ ಬ್ರಹ್ಮ ವಾಯುಗಳೊಳು, ಆವಕಾಲದಲಿ–ಅನಾದ್ಯನಂತಕಾಲಕ್ಕೂ, ನಿರಂತರ, ನೀತ–ನೀತನಾಗಿ ಬಿಂಬರೂಪಿಯಾಗಿ, ಅತಿಶಯದಿಂದ–ರುದ್ರಾದ್ಯಪೇಕ್ಷಯಾ ಬ್ರಹ್ಮ ವಾಯುಗಳ ಸ್ವರೂಪಸ್ವಭಾವದಲ್ಲಿ ಅತಿಶಯದಿಂದ ಇರತಕ್ಕ, ಭಕ್ತಿ–ಪರಮಾತ್ಮನ ವಿಷಯಕವಾದ ಭಕ್ತಿ, ಜ್ಞಾನ–ಭಗವದ್ವಿಷಯಕವಾದ ಜ್ಞಾನ, ಬಲ–ಶರೀರದಲ್ಲಿ ಸಮಿಾಚೀನವಾದ ದಾರಢ್ಯ, ಧೈರ್ಯಾದಿಗಳು, ರೂಪ–ದುರ್ಲಕ್ಷಣರಹಿತವಾದ ಸಂಪೂರ್ಣ ಲಕ್ಷಣೋಪೇತವಾದ ರೂಪದಿಂದ, ಇದ್ದು–ಇತ್ಯಾದಿಗಳಲ್ಲಿ ಬಿಂಬರೂಪಿಯಾದ ಪರಮಾತ್ಮ ತದಾಕಾರನಾಗಿ ಇದ್ದು, ಸ್ಥೂಲದೇಹದಿಂದ ಸಹಿತರಾದ ಬ್ರಹ್ಮ ವಾಯುಗಳ, ಚೇತನ–ಚೇತನ ಜೀವರು, ಅಚೇತನಗಳೊಳು–ಜಡಜೀವರು, ಈ ಉಭಯವಿಧರಾದ ಜೀವರ ಸ್ಥೂಲದೇಹದಲ್ಲಿ, ಅಚೇತನಶಬ್ದದಿಂದ ಶುದ್ಧವಾದ ಜಡಗಳಲ್ಲಿ, ಈ ಯಾವತ್ತರೊಳು, ತತ್ತದಾಹ್ವಯದಿ–ಆದರದರಲ್ಲಿ ತದಾಕಾರ ತನ್ನಾಮದಿಂದ, ವ್ಯಾಪ್ತರೆನಿಸುವ–ವ್ಯಾಪ್ತರಾಗಿ ಇರತಕ್ಕವರೆಂದು ಎನಿಸಿದವರಾಗಿ, ಜಗತ್ಕಾರ್ಯ ಮಾಡತಾರೆ ಎಂದರೆ, ರುದ್ರಾದಿಗಳು ವ್ಯಾಪ್ತರಾದಕಾಲಕ್ಕೂ ಜಗತ್ಕಾರ್ಯನಡಿಸೋದರಲ್ಲಿ ಸಮರ್ಥರಲ್ಲ. ಈ ಬ್ರಹ್ಮ, ವಾಯುಗಳು ಸಮರ್ಥರಾಗಿ ಸರ್ವಕಾರ್ಯಗಳ ಪರಮಾತ್ಮನ ಆಜ್ಞಾದಿಂದ ಮಾಡತಾರೆ ಎಂತ ತಾತ್ಪರ್ಯ.

**ಸರಸವತಿ ವೇದಾತ್ಮಿಕಾ ಭುಜಿ ।**
**ನರಹರಿ ಗುರುಭಕ್ತಿ ಬ್ರಾಹ್ಮೀ ।**
**ಪರಮ ಸುಖ ಬಲಪೂರ್ಣೆ ಶ್ರದ್ಧಾ ಪ್ರೀತಿ ಗಾಯತ್ರಿ ॥**
**ಗರುಡಶೇಷರ ಜನನಿ ಶ್ರೀಸಂ ।**
**ಕರುಷಣ ಜಯಾತನುಜೆ ವಾಣೀ ।**
**ಕರಣನೀಯಾಮಕೆ ಚತುರ್ದಶಭುವನಸನ್ಮಾನ್ಯೆ ॥ ೯ ॥**

ಈ ಬ್ರಹ್ಮ ವಾಯುಗಳಿಗೆ ಅವರರಾದ ಸರಸ್ವತೀದೇವೇರ ವಿಚಾರ ಹೇಳತಾರೆ.

ಸರಸವತಿ–( " ಚತುರ್ಮುಖಸ್ಯ ಭಾರ್ಯಾ ತು ಸರಸ್ವತೀ " ಎಂತ ಇರುವದ್ದರಿಂದ), ಸರಸ್ವತೀ ಎಂತ ನಾಮ ಪಡೆದವರು. ವೇದಾತ್ಮಿಕಾ–ಪಠ್ಯಮಾನ ವೇದಾಭಿಮಾನಿಯಾದ ವರು, ನರಹರಿ–ಶ್ರೀ ನರಸಿಂಹರೂಪಿ ಪರಮಾತ್ಮನೇನು, ಗುರು–ತನಗೆ ಪತಿಯೂ, ಗುರುವೂ ಆದಂಥಾ ಬ್ರಹ್ಮದೇವರೇನು, ಭಕ್ತಿ–ಈ ಉಭಯರಲ್ಲಿ ಭಕ್ತಿಮಾಡಿ, ಅವರಲ್ಲಿ ಇರತಕ್ಕ ಮಾಹಾತ್ಮ್ಯಗಳ ತಿಳಿದು, ಅದರಿಂದ ಜನಿತವಾದ ಆನಂದಾಖ್ಯ ಫಲವನ್ನ, ಪ್ರೀತಿ-ಅತ್ಯಂತ ಪ್ರೀತಿಯಿಂದ, ಭುಜಿ-ಭೋಜನಮಾಡತಕ್ಕವರು, ಬ್ರಾಹ್ಮೀ-ಎಂತ ನಾಮ ಪಡೆದವರು (ಬ್ರಹ್ಮನ ಪತ್ನಿಯರಾದಕಡಿಯಿಂದ), ಪರಮಸುಖ–( " ಸದಾ ಸುಖಸ್ವರೂಪ ತ್ವಾದ್ಭಾರತೀ ತು ಸುಖಾತ್ಮಿಕಾ " ಎಂತ ಇರುವದ್ದರಿಂದ), ರುದ್ರಾದ್ಯಪೇಕ್ಷಯಾ ಅತ್ಯಂತ ಉತ್ತಮವಾದ, ಅಜ್ಞಾನಾದಿ ದೋಷದಿಂದ ರಹಿತವಾದ ಸಮಾಚೀನವಾದ ಸುಖವೇನು, ಬಲಪೂರ್ಣೆ–ಬಲ ಇವುಗಳಿಂದ ಪೂರ್ಣರಾದಂಥಾವರು, ಶ್ರದ್ಧಾ–(ರೋಚನೇಂದ್ರಸ್ಯ ಭಾರ್ಯಾ ಸಾ ಶ್ರದ್ಧೇತಿ ಪರಿಕೀರ್ತಿತಾ ಎಂತ ಗಾರುಡೇ), ರೋಚನನಾಮಕ ವಾಯು ದೇವರ ಪತ್ನಿಯಾದವರು ಎಂತ ಅರ್ಥ. ಆಸ್ತಿಕ್ಯಬುದ್ಧಿಗೆ ಅಭಿಮಾನಿ. ಗಾಯತ್ರಿ–( " ಮಹಾವಿರಿಂಚಭಾರ್ಯಾ ತು ಗಾಯತ್ರೀ ಪರಿಕೀರ್ತಿತಾ " ಎಂತ ಗರುಡಪುರಾಣೋಕ್ತಿ ಇರುವದ್ದರಿಂದ) ಗಾಯತ್ರೀ ಎಂತ ನಾಮ, ಗರುಡಶೇಷರ ಜನನಿ–("ಪುರುಷಾಖ್ಯವಿರಿಂಚಸ್ಯ ಸರಸ್ವತ್ಯಾಂ ಖಗೇಶ್ವರಃ ಪ್ರಧಾನಸಂಜ್ಞಕೋ ದೇವೋ ವೈ ಜಾತಃ ಶೇಷೋ ಮಹಾಬಲಃ" ಎಂತ ಇರುವುದರಿಂದ), ಗರುಡಶೇಷರಿಗೆ ತಾಯಿಯಾದಂಥಾವರು, ಶ್ರೀಸಂಕರುಷಣ–ಕಾಂತಿಸಂಪನ್ನನಾದ ಸಂಕರ್ಷಣದೇವರ ಪತ್ನಿಯಾದ, ಜಯಾ–ಜಯಾನಾಮಕ ಲಕ್ಷ್ಮೀ ದೇವೇರಿಗೆ, ತನುಜೆ–ಪುತ್ರಿಯಾದಂಥಾವರು, ವಾಣೀ–(" ವಾಣೀತಿ ಸಂಜ್ಞಿಕಾ ವೀಂದ್ರ ಬ್ರಹ್ಮಾಣೀತಿ ಚ ಕೀರ್ತಿತಾ " ಎಂತ ಇರುವದ್ದರಿಂದ), ವಾಣೀ ಎಂತ ನಾಮ ಪಡೆದವರು, ಕರಣನೀಯಾಮಕೆ–ಸ್ತ್ರೀಯರ ಏಕಾದಶೇಂದ್ರಿಯಗಳಿಗೂ ನಿಯಾಮಕರು, ಚತುರ್ದಶ ಭುವನ–ಬ್ರಹ್ಮಾಂಡಾಂತ ಚತುರ್ದಶ ಲೋಕಗಳಲ್ಲಿ ಇರತಕ್ಕ ಸಮಸ್ತರಾದ, ಸತ್–ಸಜ್ಜನರಿಂದ, ಮಾನ್ಯೆ–ಪೂಜಿತರಾದವರು. ಅಂತು ಸರಸ್ವತೀರೂಪಗಳು ೧. ಸರಸ್ವತೀ, ೨. ಶ್ರದ್ಧಾ, ೩. ಗಾಯತ್ರೀ, ೪. ಸಾವಿತ್ರೀ ಎಂತ ನಾಲ್ಕು ರೂಪಗಳು ಎಂತ ತಾತ್ಪರ್ಯ.

**ವಿಶೇಷಾರ್ಥ :–** ಶ್ರದ್ಧೆ, ಆಸ್ತಿಕ್ಯಬುದ್ಧಿಗೆ ಅಭಿಮಾನಿ.

**ಕಾಳಿ ದ್ರೌಪದಿ ಕಾಶಿಜೆ ಪಾಂ ।**
**ಚಾಲಿ ಶಿವಕನ್ಯೇಂದ್ರಸೇನಾ ।**
**ಕಾಲಮಾನಿ ಚಂದ್ರ ದ್ಯುಸಭಾನಾಮ ಭಾರತಿಗೆ ॥**
**ಫಾಳಿ ಬ್ರಹ್ಮರ ಯುವತಿಯರು ಏ ।**
**ಳೇಳು ಐವತ್ತೊಂದು ಗುಣದಿಂ ।**
**ಕೀಳು ಎನಿಪರು ತಮ್ಮ ಪತಿಗಳಿಂದಲಾವಾಗ ॥ ೧೦ ॥**

ಭಾರತೀದೇವೇರ ಅವತಾರ ವಿಚಾರ ಹೇಳತಾರೆ.

ದ್ಯುಸಭಾನಾಮ ಭಾರತಿಗೆ–ಕೃತೀನಾಮ ಲಕ್ಷ್ಮೀದೇವೇರ ಪತಿಯಾದ ಪ್ರದ್ಯುಮ್ನ ನಿಂದ ಜನಿತರಾದ, ವಾಯುದೇವರ ಪತ್ನಿಯಾದ ದ್ಯುಸಭಾನಾಮ ಭಾರತೀದೇವೇರ ಅವತಾರಗಳು, ಕಾಳಿ–"ಕಾಳೀನಾಮ್ನಾ ತು ಸಾ ಜ್ಞೇಯಾ ಭೀಮಸೇನಪ್ರಿಯಾ ಸದಾ" ಎಂತ ಗರುಡಪುರಾಣ ವಚನದಿಂದ ಭಾರತೀದೇವೇರಿಗೆ ಕಾಳೀ ಎಂತ ನಾಮ; ದ್ರೌಪದಿ– ದ್ರುಪದರಾಯನ ಪುತ್ರಿಯಾಗಿ ಅವತಾರಮಾಡಿದ ದ್ರೌಪದೀದೇವೇರು, "ವೇದಿಮಧ್ಯಾತ್ಸಮುದ್ಭೂತಾ ಭೀಮಸೇನಾರ್ಥಮೇವ ಚ" ಎಂತ ಅವತಾರ; ಕಾಶಿಜೆ–"ಕೇವಲಾ ಭಾರತೀ ಜ್ಞೇಯಾ ಕಾಶೀರಾಜಸ್ಯ ಕನ್ಯಕಾ" ಎಂಬ ಪ್ರಮಾಣಾನುಸಾರ ಕಾಶೀರಾಯನ ಮಗಳು ಎಂತ ಅವತಾರ; ಪಾಂಚಾಲಿ–ಪಾಂಚಾಲದೇಶದ ಪ್ರಭುವಿನ ಪುತ್ರಿ ಎಂತ ನಾಮ; ಶಿವಕನ್ಯಾ–"ದೇಹಂ ತ್ಯಕ್ತ್ವಾ ವಿಶಿಷ್ಟ ಇವ ಕಾಲಡೀಗ್ರಾಮಸಂಜ್ಞಕೇ । ಶಂಕರಸ್ಯ ಗೃಹೇ ಚಂದ್ರಾ ಭವಿಷ್ಯತಿ ಕಲೌ ಯುಗೇ ॥" ಎಂಬ ಪ್ರಮಾಣಾನುಸಾರ ಶಿವ ನಾಮಕ ಬ್ರಾಹ್ಮಣನ ಮಗಳಾಗಿ ಕಾಲಡೀಗ್ರಾಮದಲ್ಲಿ ಅವತಾರ; ಇಂದ್ರಸೇನಾ – "ದಮಯಂತ್ಯಾಂ ನಳಾಜ್ಜಾತಾ ಇಂದ್ರಸೇನೇತಿ ಸಂಜ್ಞಿಕಾ" ಎಂತ ಪ್ರಮಾಣಾನುಸಾರ ನಳಚಕ್ರವರ್ತಿ ಮಗಳಾಗಿ ಅವತಾರ; ಕಾಲಮಾನಿ–ಕಾಲಮಾನಿ ಎಂತ ಅವತಾರ; ಚಂದ್ರ–ಚಂದ್ರ ಎಂತ ನಾಮ ಪಡೆದ ಅವತಾರ; ಏತಾದೃಶ ನಾಮಗಳಿಂದ ಭಾರತೀ ದೇವೇರ ಅವತಾರರೂಪಗಳು; ಫಾಳಿಬ್ರಹ್ಮರ – ವಾಯುದೇವರು, ಬ್ರಹ್ಮದೇವರು, ಈ ಉಭಯರ, ಯುವತಿಯರು–ಪತ್ನೇರಾದ ಭಾರತೀ, ಸರಸ್ವತೀದೇವೇರುಗಳು, ತಮ್ಮ ಪತಿಗಳಿಂದಲಿ–ತಮ್ಮತಮ್ಮ ಪತಿಗಳಿಗಿಂತಲೂ, ಏಳೇಳು ಐವತ್ತೊಂದು–ನಾಲತ್ತೊಂಭತ್ತು ಮತ್ತು ಐವತ್ತೊಂದು, ಅಂತು ನೂರು, ಗುಣದಿಂದಲಿ–ನೂರು ಗುಣದಿಂದ, ಆವಾಗ– ಸದಾ ಸರ್ವಕಾಲವೂ, ಕೀಳು ಎನಿಪರು–ಅಧಮರು ಎಂತ ಕರೆಸೋವರಾಗತಾರೆ. (ವಾಯು ದೇವರಿಗಿಂತ ಭಾರತೀದೇವೇರು ನೂರು ಗುಣ ಅವರರು; ಬ್ರಹ್ಮದೇವರಿಗಿಂತ ಸರಸ್ವತೀ ದೇವೇರು ನೂರು ಗುಣ ಅವರರು; ಅಂದರೆ ತಮ್ಮ ಪತಿಗಳಿಗಿಂತಲೂ ವಿಜಾತೀ ಗುಣದಿಂದ ಕಡಿಮೆ ಆದವರು.)

**ಹರಿಸಮೀರಾವೇಶ ನರ ಸಂ ।**
**ಕರುಷಣಾವೇಶಯುತ ಲಕ್ಷ್ಮಣ ।**
**ಪರಮಪುರುಷನ ಶುಕ್ಲಕೇಶಾವೇಶ ಬಲರಾಮ ॥**
**ಹರ ಸದಾಶಿವ ತಪ ಅಹಂಕೃತು ।**
**ಮರುತಯುಕ್ತ ಶುಕೋರ್ಧ್ವಪಟಿ ತ ।**
**ತ್ಪುರುಷ ಜಯಗೀಷ್ಯೌರ್ವ ದ್ರೌಣಿ ವ್ಯಾಧ ದೂರ್ವಾಸ ॥ ೧೧ ॥**

ರುದ್ರದೇವರ, ಶೇಷದೇವರ ವಿಚಾರ ಹೇಳುತಾರೆ.

ನರ–"ಶಾಮಲಾಯಾಂ ಚ ಧರ್ಮಾಚ್ಚ ಸರೋಜಾತಸ್ತು ಭೂತಲೇ । ಶೇಷಃ ಸ ಏವ ವಿಜ್ಞೇಯಃ ಭಕ್ತೋ ನಾರಾಯಣಸ್ಯ ಚ ॥" ಎಂಬ ಗರುಡಪುರಾಣೋಕ್ತ ರೀತ್ಯಾ ಶೇಷದೇವರ ಅವತಾರಗಳು ; ಲಕ್ಷ್ಮಣ – "ಸುಮಿತ್ರಾಯಾಂ ದಶರಥಾಜ್ಜಾತೋ ಯೋ ಲಕ್ಷ್ಮಣಾಭಿಧಃ" ಎಂತ ರಾಮದೇವರ ತಮ್ಮನಾದ ಲಕ್ಷ್ಮಣದೇವರ ಅವತಾರ ಒಂದು ; ಪರಮಪುರುಷನ– ಸರ್ವೋತ್ತಮನಾದ ಪುರುಷಶಬ್ದವಾಚ್ಯನಾದ ಶ್ರೀಕೃಷ್ಣ ದೇವರ ಅಣ್ಣನಾದ, ಬಲರಾಮ–"ಬಲಭದ್ರಸ್ತು ರೋಹಿಣ್ಯಾಂ ವಸುದೇವಾದಭೂತ್ ಖಗ । ಸೋಽಪಿ ಶೇಷಸ್ತು ವಿಜ್ಞೇಯಃ ಸ್ವವಂಶಾಭ್ಯಾಂ ಚ ಸಂಯುತಃ" ಅಂದರೆ ಬಲರಾಮ ದೇವರು ಎಂತ ಅವತಾರ ಒಂದು ; ಅಂತು ಎರಡು ಅವತಾರಗಳು. ಹರಿ–ಶ್ರೀ ನರಸಿಂಹ ದೇವರು, ಸಮೀರ–ಜೀವೋತ್ತಮರಾದ ವಾಯುದೇವರು, ಆವೇಶ–ಈ ಉಭಯರ ಆವೇಶ ಶೇಷದೇವರಲ್ಲಿ ; ಸಂಕರುಷಣ–ಶ್ರೀ ಸಂಕರ್ಷಣರೂಪೀ ಪರಮಾತ್ಮನ, ಆವೇಶಯುತ– ಆವೇಶದಿಂದ ಯುಕ್ತರಾದವರು ಲಕ್ಷ್ಮಣದೇವರು ; ಶುಕ್ಲಕೇಶಾವೇಶ–ಶ್ರೀಪರಮಾತ್ಮನ ದೇಹಗತ ಶುಕ್ಲರೋಮದ ಆವೇಶಯುತರಾದವರು ಬಲರಾಮದೇವರು ; (ಇಲ್ಲಿಗೆ ಶೇಷ ದೇವರ ವಿಚಾರ ಮುಗಿಯಿತು.) ಹರ – ರುದ್ರದೇವರು (ಇವರ ಅವತಾರಗಳು) ; ಸದಾಶಿವ–"ತಮೋಭಿಮಾನೀ ಸ ಜ್ಞೇಯೋ ಹ್ಯಶಿವತ್ವಾತ್ಸದಾಶಿವಃ" ; ತಪ–"ದಶಕಲ್ಪ ತಪಃ ಕರ್ತುಂ ವಿವೇಶ ಲವಣಾಂಭಸಿ । ಅತೋ ರುದ್ರಃ ತಪಃಸಂಜ್ಞಾಂ ಹ್ಯವಾಪ ಖಗ ಸತ್ತಮಃ ॥" ಎಂತ ಇರುವದ್ದರಿಂದ 'ತಪ' ಎಂತ ರುದ್ರದೇವರ ಅವತಾರ ; ಅಹಂಕೃತು– "ಯೋಽಹಂಕಾರಾತ್ಮಕೋ ರುದ್ರಃ ಸ ಏವಾಭೂತ್ ಖಗೇಶ್ವರಃ" ಎಂತ ಇರುವದ್ದರಿಂದ, ಶುಕ–"ವ್ಯಾಸಪುತ್ರ ಶುಕಃ ಪ್ರೋಕ್ತಃ ವಾಯೋರಾವೇಶಸಂಯುತಃ" ಎಂತ ಇರುವದ್ದ ರಿಂದಲೂ, "ರುದ್ರಾವತಾರೋ ವಿಜ್ಞೇಯೋ ಜ್ಞಾನಾರ್ಥಂ ಹ್ಯಭವನ್ಮುನಿಃ" ಎಂತ ಶುಕಾಚಾರ್ಯರ ಅವತಾರ ; ಊರ್ಧ್ವಪಟ – ಊರ್ಧ್ವಪಟ ಎಂತ ಅವತಾರ ; ತತ್ಪುರುಷ–ತತ್ಪುರುಷ ಎಂತ ಅವತಾರ ; ಔರ್ವ – "ಉರೋಃ ಪುತ್ರಸ್ತು ಚೌರ್ವಸ್ತು ರುದ್ರ ಏವ ಪ್ರಕೀರ್ತಿತಃ । ಉರುಃ ಉತ್ಕೃಷ್ಟವಾಚಿತ್ವಾದುರೋ ರೋದನವಾಚಕಃ ॥ ಉರೋ ರುದ್ರೋ ಹ್ಯತಃ ಪ್ರೋಕ್ತಸ್ತತ್ಪುತ್ರಶ್ಚೌರ್ವಸಂಜ್ಞಕಃ ಉರ್ವರಿತಂ ರೋದನಂ ಕರ್ತುಂ ಔರ್ವೋ ಭೂದ್ರುದ್ರ ಏವ ಸಃ ॥" ಎಂತ ಗರುಡಪುರಾಣವಚನರೀತ್ಯಾ ಔರ್ವ

ಅವತಾರ; ಜೈಗೀಷ – ಜೈಗೀಷ ಎಂತ ಅವತಾರ; ದ್ರೌಣಿ – "ದ್ರೋಣಾಜ್ಜಾತೋ ದ್ರೌಣಿಸಂಜ್ಞಃ ರುದ್ರ ಏವ ಪ್ರಕೀರ್ತಿತಃ" ಎಂತ ಇರುವದ್ದರಿಂದ ದ್ರೋಣಾಚಾರ್ಯರ ಪುತ್ರ ಅಶ್ವತ್ಥಾಮಾಚಾರ್ಯರ ಅವತಾರ; ವ್ಯಾಧ – ವ್ಯಾಧ ಎಂತ ಅವತಾರ; ದೂರ್ವಾಸ – "ಅತ್ರಿಪತ್ನ್ಯನಸೂಯಾಯಾಂ ಜಜ್ಞೇ ರುದ್ರೋ ಮಹಾತಪಾಃ | ದೂರ್ವಾಸಾ ಸ ತು ವಿಜ್ಞೇಯಃ ಮಾನಭಂಗಾಯ ಭೂಭೃತಾಂ" ಎಂತ ದೂರ್ವಾಸ ನಾಮ ಪಡೆದ ಅವತಾರ; ಈ ಪ್ರಕಾರ ರುದ್ರದೇವರ ಅವತಾರಗಳು. "ವೀಂದ್ರಸ್ಯಾವತಾರೋಸ್ಮಿ ಭೂಮ್ಯಾಂ ಚಾಸ್ವಾಂ ತಥಾ ಹರೇಃ" ಎಂತ ಇರುವದ್ದರಿಂದ ಗರುಡದೇವರಿಗೆ ಅವತಾರವಿಲ್ಲ.

**ವಿಶೇಷಾರ್ಥ :–** ತತ್ಪುರುಷ ಎಂದರೆ "ತತ್ಪುರುಷಾಯ ವಿದ್ಮಹೇ | ಮಹಾದೇವಾಯ ಧೀಮಹಿ | ತನ್ನೋ ರುದ್ರಃ ಪ್ರಚೋದಯಾತ್" ಎಂಬ ರುದ್ರಗಾಯತ್ರೀ ರೂಪ. ಜೈಗೀಷವ್ಯರೂಪ ದಾವದೆಂದರೆ, ಜಾಂಬವತೀದೇವೇರಿಗೆ ಜ್ಞಾನೋಪದೇಶ ಅವತಾರ ರುದ್ರರೂಪ. "ಶುಕ ಗತಾವಿತಿ ಧಾತೋಃ ಪರಬ್ರಹ್ಮಣ್ಯವ್ಯಾಹತಬುದ್ಧಿಗತಿತ್ವಾತ್ ಶುಕಃ".

**ಗರುಡ ಶೇಷ ಶಶಾಂಕದಳಶೇ |**
**ಖರರು ತಮ್ಮೊಳು ಸಮರು ಭಾರತಿ |**
**ಸರಸಿಜಾಸನ ಪತ್ನಿಗಧಮರು ನೂರು ಗುಣದಿಂದ ||**
**ಹರಿಮಡದಿ ಜಾಂಬವತಿಯೊಳು ಶ್ರೀ |**
**ತರುಣಿಯಾವೇಶವಿಹುದೆಂದಿಗು |**
**ಕೊರತೆ ಎನಿಪರು ಗರುಡ ಶೇಷರಿಗೈವರೈದುಗುಣ || ೧೨ ||**

ಗರುಡ ಶೇಷಾದಿಗಳ ವಿಚಾರವೂ, ಷಣ್ಮಹಿಷಿಯರ ವಿಚಾರವೂ ಹೇಳತಾರೆ.

ಗರುಡ ಶೇಷ–ಗರುಡದೇವರು, ಶೇಷದೇವರು, ಶಶಾಂಕದಳಶೇಖರರು – ಚಂದ್ರದೇವರ ಏಕದೇಶಕಳಾವಿಶೇಷವನ್ನು ಶಿರದಲ್ಲಿ ಉಳ್ಳ ರುದ್ರದೇವರು, ಈ ಮೂರು ಮಂದಿಗಳು, ತಮ್ಮೊಳು ಸಮರು–ತಮ್ಮೊಳಗೆ ಪರಸ್ಪರ ಸ್ವರೂಪತಃ ಸಮಾನರು. ಶೇಷರುದ್ರರು ಭಿನ್ನಜೀವರು, ಪದ ಒಂದೇವೇ; ಇವರು ಮೂರು ಮಂದಿಗಳು, ಭಾರತಿ–ವಾಯುದೇವರ ಪತ್ನಿ ಭಾರತೀದೇವೇರು, ಸರಸಿಜಾಸನಪತ್ನಿಗೆ–ಬ್ರಹ್ಮದೇವರ ಪತ್ನಿಯಾದ ಸರಸ್ವತೀದೇವೇರು, ಇವರಿಬ್ಬರಿಗೆ, ನೂರು ಗುಣದಿಂದ – ಒಂದುನೂರು ವಿಜಾತಿ ಗುಣದಿಂದ, ಅಧಮರು–ಕಡಿಮಿ ಆದವರು. (ಇಲ್ಲಿಗೆ ಗರುಡ ಶೇಷಾದಿಗಳ ವಿಚಾರ ಮುಗಿಯಿತು. ಇನ್ನುಮೇಲೆ ಇವರಿಗೆ ಅವರರಾದ ಷಣ್ಮಹಿಷಿಯರು); ಹರಿಮಡದಿ–ಗುಣಪೂರ್ಣನಾದ ಶ್ರೀಕೃಷ್ಣನ ಹೆಂಡಿರು, ಐವರು–ನೀಲಾದೇವಿ ಮೊದಲಾದ ಐದು ಮಂದಿ, ಜಾಂಬವತಿಯೊಳು–ಜಾಂಬವಂತನ ಪುತ್ರಿ ಜಾಂಬವತೀದೇವೇರು; ಅಂತು ಈ ಆರುಮಂದಿ ಒಳಗೆ, ಲಕ್ಷ್ಮೀದೇವೇರ ಆವೇಶ ಉಂಟು. ಅದರೊಳು ಜಾಂಬವತಿಯಲ್ಲಿ, ಶ್ರೀತರುಣಿಯ–

ನಿತ್ಯಯೌವನೆಯರಾದ ಲಕ್ಷ್ಮೀದೇವೇರ, ಆವೇಶವಿಹುದು–ಆವೇಶ ಎಂಬುದು ಇತರರಾದ ನೀಲಾದಿ ಐದು ಮಂದಿ ಅಪೇಕ್ಷಯಾ ಅಧಿಕವಾಗಿ ಇರೋದಾಗಿದೆ. "ತಯ್ಯೈವಾನ್ಯಾಃ ಸರ್ವದಾನುಪ್ರವಿಷ್ಟಾಸ್ತಾಸಾಂ ಮಧ್ಯೇ ಜಾಂಬವತೀ ಪ್ರಧಾನಾ" ಎಂತ ನಿರ್ಣಯೋಕ್ತಿ ಇರುವದ್ದರಿಂದ ಜಾಂಬವತೀದೇವೇರು ಕಿಂಚಿತ್ ಅಧಿಕರೆಂದು ಕರಿಸುತ್ತಾರೆ; ಸ್ವರೂಪತಃ ಆರು ಮಂದಿ ಸಮಾನರು. ಈ ಆರು ಮಂದಿಗಳ ಹೆಸರು ಮುಂದೆ ಹೇಳತಾರೆ. ಗರುಡ ಶೇಷರಿಗೆ–ಈ ನೀಲಾದಿ ಆರುಮಂದಿ ಷಣ್ಮಹಿಷಿಯರು ಗರುಡಶೇಷಾದಿಗಳಿಗೆ, ಐದುಗುಣ– ಐದು ವಿಜಾತಿ ಗುಣದಿಂದ, ಎಂದಿಗು–ಅನಾದ್ಯನಂತಕಾಲಕ್ಕೂ, ಕೊರತೆ ಎನಿಸರು– ಒಲಜ್ಞಾನಾದಿ ಸರ್ವವಿಷಯದಲ್ಲೂ ಕಡಿಮೆ ಎಂತ ಕರಿಸತಾರೆ ಎಂತ ತಾತ್ಪರ್ಯ.

**ನೀಲ ಭದ್ರಾ ಮಿತ್ರವಿಂದಾ ।**
**ಮೇಲೆನಿಪ ಕಾಳಿಂದಿ ಲಕ್ಷಣೆ ।**
**ಬಾಲೆಯರಿಗಿಂತಧಮ ವಾರುಣಿ ಸೌಪರಣಿ ಗಿರಿಜಾ ॥**
**ಶ್ರೀಲಕುಮಿಯುತ ರೇವತೀ ಸಿರಿ ।**
**ಮೂಲರೂಪದಿ ಪೇಯುಳೆನಿಪಳು ।**
**ಶೈಲಜಾದ್ಯರು ದಶಗುಣಾಧಮ ತಮ್ಮ ಪತಿಗಳಿಗೆ ॥ ೧೩ ॥**

ಷಣ್ಮಹಿಷಿಯರ ವಿಚಾರವೂ, ವಾರುಣೀ ಮೊದಲಾದವರ ವಿಚಾರವೂ ಹೇಳ ತಾರೆ.

ಕೃಷ್ಣದೇವರ ಪತ್ನೀರಾದ ಆರು ಮಂದಿಯರ ಹೆಸರುಗಳು: ನೀಲಾ–ನೀಲಾದೇವಿ (೧), ಭದ್ರಾ–ಭದ್ರಾದೇವಿ (೨), ಮಿತ್ರವಿಂದಾ–ಮಿತ್ರವಿಂದಾದೇವಿ(೩), ಮೇಲೆನಿಪ– ರಮಾವೇಶ ಆಧಿಕ್ಯದಿಂದ ನೀಲಾದಿಗಳಿಗಿಂತಲೂ ಅಧಿಕರೆನಿಸುವ ಜಾಂಬವತೀದೇವೇರು(೪), ಕಾಳಿಂದಿ–ಕಾಳಿಂದೀದೇವೇರು (೫), ಲಕ್ಷಣೆ–ಲಕ್ಷಣಾದೇವೇರು (೬); ಅಂತು ೬ ಮಂದಿ ಒಳಗೆ ಜಾಂಬವತೀದೇವೇರು ತುಲಸ್ಯತ್ವೇನ ಅವತಾರಮಾಡೋವರಾಗಿದ್ದಾರೆ. ಪ್ರಮಾಣ: "ತುಲಸೀ ಜಾಂಬವತೀತ್ಯುಕ್ತಾ ಲಕ್ಷ್ಮ್ಯಾವೇಶೇನ ಸಂಯುತಾ । ತಯಾ ಸಂಪೂಜಯೇ ದ್ಭಕ್ತ್ಯಾ ವಿಷ್ಣುಲೋಕಮವಾಪ್ನುಯಾತ್ ॥" ಇತಿ ಪಾದ್ಮೇ ಉತ್ತರಖಂಡೇ ಉಮಾ ಮಹೇಶ್ವರಸಂವಾದೇ. ಬಾಲೆಯರಿಗಿಂತಧಮ–ಪೂರ್ವೋಕ್ತ ನೀಲಾದಿ ಆರು ಮಂದಿಯರಿ ಗಿಂತಲೂ ಐದು ವಿಜಾತೀ ಗುಣದಿಂದ ಅಧಮರು ದಾರೆಂದರೆ, ವಾರುಣಿ–ಶೇಷದೇವರ ಪತ್ನಿ ವಾರುಣೀದೇವೇರು, ಸೌಪರಣಿ – ಗರುಡದೇವರ ಪತ್ನಿ ಸೌಪರ್ಣೀದೇವೇರು, ಗಿರಿಜಾ–ರುದ್ರದೇವರ ಪತ್ನಿ ಪಾರ್ವತೀದೇವೇರು, ಶೈಲಜಾ–ಹಿಮಾಚಲನ ಪುತ್ರಿಯಾದ ಪಾರ್ವತೀದೇವೇರು, ಆದ್ಯರು–ಪಾರ್ವತೀ ಮೊದಲಾದ ಈ ಮೂರು ಮಂದಿ, ತಮ್ಮ ಪತಿಗಳಿಗೆ–ಅವರವರ ಪತಿಗಳಿಗಿಂತ, ದಶಗುಣಾಧಮ–ರುದ್ರರಗಿಂತಲೂ ಪಾರ್ವತೀದೇವಿ ಹತ್ತು ಗುಣ, ಶೇಷದೇವರಿಗಿಂತಲೂ ವಾರುಣೀದೇವಿ ಹತ್ತು ಗುಣ, ಗರುಡದೇವರಿ ಗಿಂತಲೂ ಸೌಪರ್ಣೀದೇವಿ ಹತ್ತುಗುಣ ಈ ಪ್ರಕಾರ ಹತ್ತುಗುಣ ಅಧಮರು; ಗರುಡಾದಿ

ಗಳಿಗಿಂತಲೂ ಸೀಲಾದಿಗಳು ಐದು ಗುಣ ಕಡಿಮಿ ; ಸೀಲಾದಿಗಳಿಗಿಂತಲೂ, ಪಾರ್ವತ್ಯಾದಿಗಳು ಐದು ಗುಣ ಕಡಿಮಿ ; ಎರಡೂ ಸೇರಿದರೆ ಹತ್ತು ಗುಣ ಆಯಿತು. ಗರುಡಾದಿಗಳಿಗೆ ಪಾರ್ವತ್ಯಾದಿಗಳು ಹತ್ತು ಗುಣ ಕಡಿಮಿ ಎಂಬುದು ವಿವಕ್ಷಾ ಎಂತ ತಿಳಿಯಬೇಕು. ಮೂಲರೂಪದಿ–ಶೇಷದೇವರ ಪತ್ನಿಗೆ ಮೂಲರೂಪ ವಾರುಣಿ ಎಂತ ಹೆಸರು. ಈ ಮೂಲ ರೂಪದಲ್ಲಿ, ಸಿರಿ–ಶ್ರೀದೇವೇರ ಆವೇಶವೂ ಅವತಾರಗಳು. ರೇವತೀ–ಬಲರಾಮದೇವರ ಪತ್ನಿ ರೇವತೀದೇವಿ, ಪೇಯಳು–ಪೇಯ ಎಂತ ಸಾಂಕೇತರೂಪ, ಎನಿಪಳು–ಈ ವಾರುಣೀ ದೇವಿಯರು ಎರಡು ಅವತಾರ ರೂಪ ಉಳ್ಳವರೆಂದು ಎನಿಸೋವರಾಗತಾರೆ. ಈ ಎರಡು ರೂಪಗಳಲ್ಲಿ, ಶ್ರೀಲಕುಮಿಯುತ – ಕಾಂತಿಸಂಪನ್ನರಾದ ಲಕ್ಷ್ಮೀದೇವೇರ ಆವೇಶದಿಂದ ಯುಕ್ತರಾಗಿ ಇದ್ದಾರೆ. ಇಲ್ಲಿಗೆ ಸೌಪರ್ಣ್ಯಾದಿಗಳ ವಿಚಾರ ಮುಗಿಯಿತು. ಸೌಪರ್ಣೀ, ಪಾರ್ವತೀಗೆ ಅವತಾರಗಳು ಹೇಳಲಿಲ್ಲ.

**ನರಹರೀ ಆವೇಶಸಂಯುತ ।**
**ನರ ಪುರಂದರ ಗಾಧಿ ಕುಶ ಮಂ ।**
**ದರದ್ಯುಮ್ನ ವಿಕುಕ್ಷಿ ವಾಲೀ ಇಂದ್ರನವತಾರ ॥**
**ಭರತ ಬ್ರಹ್ಮಾವಿಷ್ಟ ಸಾಂಬ ಸು ।**
**ದರುಶನ ಪ್ರದ್ಯುಮ್ನ ಸನಕಾ ।**
**ದ್ಯರೊಳಗಿಪ್ಪ ಸನತ್ಕುಮಾರನು ಷಣ್ಮುಖಾ ಕಾಮ ॥ ೧೪ ॥**

ಸೌಪರ್ಣ್ಯಾದಿಗಳಿಗೆ ಅವರರಾದ ಇಂದ್ರಕಾಮರ ವಿಚಾರ ಹೇಳತಾರೆ.

ಇಂದ್ರನ–ಸೌಪರ್ಣ್ಯಾದಿಗಳ ತರುವಾಯ ಇಂದ್ರದೇವರು, ಕಾಮ–ಮನ್ಮಥನು, ಇವರಿಬ್ಬರೂ ಸಮಾನರು. ಅವತಾರ – ಈ ಉಭಯರಿಗೆ ಅವತಾರಗಳು, ಇದರಲ್ಲಿ ಪುರಂದರ – ಇಂದ್ರದೇವರ ಅವತಾರಗಳು. ನರ – ನರಸಾಂಕೇತನಾದ ಅರ್ಜುನನು, ಗಾಧಿ–ಗಾಧಿರಾಯನು, ಕುಶ – ರಾಮದೇವರ ಪುತ್ರ ಕುಶ, ಮಂದರದ್ಯುಮ್ನ – ಮಂದರದ್ಯುಮ್ನ, ವಿಕುಕ್ಷಿ – ವಿಕುಕ್ಷಿ, ವಾಲೀ – ವಾಲಿನಾಮಕನು, ಎಂತ ಆರು ಅವತಾರಗಳು. ಇದರಲ್ಲಿ, ನರ – ಶೇಷದೇವರು. ಹರೀ–ನಾರಾಯಣದೇವರು, ಈ ಉಭಯರ, ಆವೇಶಸಂಯುತ–ಛಂದಾಗಿ ಆವೇಶಯುಕ್ತನಾದವ, ನರಸಾಂಕೇತನಾದ ಅರ್ಜುನನು. (ಇಲ್ಲಿಗೆ ಅರ್ಜುನನ ಅವತಾರ ಮುಗಿಯಿತು.) ಇನ್ನು ಕಾಮದೇವರ ಅವತಾರಗಳು ದಾವುವೆಂದರೆ, ಭರತ–ರಾಮದೇವರ ತಮ್ಮ ಭರತ, ಸಾಂಬ–ಸಾಂಬ ಎಂಬುವನು, ಸುದರುಶನ–ಸುದರುಶನ ಎಂಬುವನು, ಪ್ರದ್ಯುಮ್ನ–ಪ್ರದ್ಯುಮ್ನ ಎಂಬುವನು, ಸನಕಾದ್ಯರೊಳಗಿಪ್ಪ ಸನತ್ಕುಮಾರನು–ಸನಕಾದಿಗಳಲ್ಲಿ ಇರತಕ್ಕ ಸನತ್ಕುಮಾರನು, ಷಣ್ಮುಖಾ – ಷಣ್ಮುಖ, ಅಂತು ಆರು ಅವತಾರಗಳು ಕಾಮದೇವರಿಗೆ. ಇವರಲ್ಲಿ ಬ್ರಹ್ಮಾವಿಷ್ಟ–ಬ್ರಹ್ಮದೇವರ ಆವೇಶದಿಂದ ಯುಕ್ತನಾದವನು, ಪೂರ್ವೋಕ್ತ ಭರತನು. (ಇಲ್ಲಿಗೆ ಕಾಮದೇವರ ವಿಚಾರ ಮುಗಿಯಿತು.) ಮುಂದೆ ತಾರತಮ್ಯ ಹೇಳತಾರೆ.

**ಈರೈದುಗುಣ ಕಡಿಮೆ ಪಾರ್ವತಿ ।**
**ವಾರುಣೀಯರಿಗಿಂದ್ರಕಾಮ ಶ ।**
**ರೀರಮಾನಿ ಪ್ರಾಣ ದಶಗುಣವವರ ಶಕ್ರನಿಗೆ ॥**
**ಮಾರಜಾರತಿ ದಕ್ಷ ಗುರು ವೃ ।**
**ತ್ರಾರಿಜಾಯಾ ಶಚಿ ಸ್ವಯಂಭುವ ।**
**ರಾರು ಜನ ಸಮ ಪ್ರಾಣಗವರರು ಹತ್ತು ಗುಣದಿಂದ ॥ ೧೫ ॥**

ಅಹಂಕಾರಿಕ ಪ್ರಾಣದೇವರ, ದಕ್ಷಪ್ರಜೇಶ್ವರರ ತಾರತಮ್ಯ ಹೇಳತಾರೆ.

ಪಾರ್ವತಿ ವಾರುಣೀಯರಿಗೆ–ಪಾರ್ವತೀ, ವಾರುಣೀ ಈ ಉಭಯರಿಗೆ, ಇಂದ್ರ ಕಾಮ–ಇಂದ್ರದೇವರು, ಮನ್ಮಥ, ಈ ಉಭಯರು, ಈರೈದುಗುಣ–ಹತ್ತುಗುಣದಿಂದ, ಕಡಿಮೆ–ಅವರರು. (ಇಲ್ಲಿಗೆ ಇಂದ್ರಕಾಮರ ವಿಚಾರ ಮುಗಿಯಿತು. ಇವರ ತರುವಾಯ ತ್ವಗಭಿಮಾನಿ ಪ್ರಾಣದೇವರ ವಿಚಾರ); ಶರೀರಮಾನಿ – ಪ್ರಾಣಿಗಳ ಸ್ಥೂಲದೇಹಕ್ಕೆ ಅಭಿಮಾನಿಯಾದ, ಪ್ರಾಣ–ಜೀವೋತ್ತಮರಾದ ವಾಯುದೇವರಿಗೆ ಅನ್ಯನಾದ ಅಹಂ ಕಾರಿಕ ಪ್ರಾಣ ಎಂತ ತಾತ್ಪರ್ಯ. ಈ ಅಹಂಕಾರಿಕ ಪ್ರಾಣದೇವರು, ಶಕ್ರನಿಗೆ–ಇಂದ್ರ (ಕಾಮ)ನಿಗೆ, ದಶಗುಣವವರ–ಹತ್ತುಗುಣದಿಂದ ಕಡಿಮೆಯಾದವರು. (ಇಲ್ಲಿಗೆ ಅಹಂಕಾರಿಕ ಪ್ರಾಣದೇವರ ವಿಚಾರ ಮುಗಿಯಿತು. ಇನ್ನು ರತೀದೇವೀ ಮೊದಲಾದವರ ವಿಚಾರ ಹೇಳತಾರೆ.) ಮಾರಜಾ–ಮನ್ಮಥನ ಪುತ್ರ ಅನಿರುದ್ಧನು, ರತಿ–ಕಾಮನ ಪತ್ನಿಯಾದ ರತೀದೇವೀರು, ದಕ್ಷ–ದಕ್ಷಪ್ರಜೇಶ್ವರನು, ಗುರು–ಬೃಹಸ್ಪತ್ಯಾಚಾರ್ಯರು, ವೃತ್ರಾರಿ–ವೃತ್ರಾಸುರಗೆ ಶತ್ರುವಾದ ಇಂದ್ರದೇವರ, ಜಾಯಾ–ಪತ್ನಿಯಾದ, ಶಚಿ–ಶಚೀದೇವೀರು, ಸ್ವಯಂಭುವರು–ಸ್ವಾಯಂಭುವಮನು, ಇತ್ಯಾದಿ, ಆರು ಜನ ಸಮ–ಈ ಆರು ಮಂದಿ ಸಮಾನರು, ಹತ್ತುಗುಣದಿಂದ–ಹತ್ತುಗುಣದಿಂದ, ಪ್ರಾಣಗವರರು–ಅಹಂಕಾರಿಕ ಪ್ರಾಣ ದೇವರಿಗೆ ಕಡಿಮೆ ಎಂತ ಅನಿಸೋವರಾಗತಾರೆ.

**ಕಾಮಪುತ್ರನಿರುದ್ಧ ಸೀತಾ ।**
**ರಾಮನಾನುಜ ಶತ್ರುಹನ ಬಲ ।**
**ರಾಮನಾನುಜಪೌತ್ರನಿರುದ್ಧನೊಳಗನಿರುದ್ಧ ॥**
**ಕಾಮಭಾರ್ಯಾ ರುಗ್ಮವತಿ ಸ ।**
**ನ್ನಾಮ ಲಕ್ಷಣಳೆನಿಸುವಳು ಪೌ ।**
**ಲೋಮಿ ಚಿತ್ರಾಂಗದೆಯು ತಾರಾ ಎರಡು ಪೆಸರುಗಳು ॥ ೧೬ ॥**

ಹದಿನೈದನೇ ಶ್ಲೋಕಗತ ಕಾಮಪುತ್ರ ಅನಿರುದ್ಧಾದಿ ಆರು ಮಂದಿಗಳ ಒಳಗೆ ಅವತಾರವುಳ್ಳವರನ್ನು ಹೇಳತಾರೆ.

ಕಾಮಪುತ್ರನಿರುದ್ಧ – ಕಾಮಪುತ್ರನಾದ ಅನಿರುದ್ಧನ ಅವತಾರಗಳು ಎರಡು. ಸೀತಾರಾಮನ–ಸೀತಾದೇವೇರ ಪತಿಯಾದ ಶ್ರೀರಾಮಚಂದ್ರದೇವರ, ಅನುಜ–ತಮ್ಮನಾದ, ಶತ್ರುಹನ–ಶತ್ರುಘ್ನ ಎಂತ ಅವತಾರ ಒಂದು, ಬಲರಾಮನ–ಬಲರಾಮದೇವರ, ಅನುಜ–ತಮ್ಮನಾದ ಶ್ರೀಕೃಷ್ಣದೇವರ ಮಗನಾದ ಪ್ರದ್ಯುಮ್ನನ ಪುತ್ರ, ಕೃಷ್ಣದೇವರಿಗೆ, ಪೌತ್ರನು–ಮೊಮ್ಮಗನಾದ, ಅನಿರುದ್ಧನೊಳಗನಿರುದ್ಧ–ಅನಿರುದ್ಧ ಎಂತ ಅವತಾರ ಒಂದು, ಅಂತು ಎರಡು ಅವತಾರಗಳು. ಶ್ರೀಕೃಷ್ಣದೇವರ ಪುತ್ರನಾದ ಈ ಅನಿರುದ್ಧನಲ್ಲಿ, ಗುಣಪೂರ್ಣನಾದ ಅನಿರುದ್ಧದೇವರ ಆವೇಶವದೆ. (ಅನಿರುದ್ಧನ ವಿಚಾರ ಮುಗಿಯಿತು.) ಕಾಮಭಾರ್ಯಾ–ಕಾಮಭಾರ್ಯರಾದ ರತೀದೇವೇರಿಗೆ ಅವತಾರಗಳು ಎರಡು. ರುಗ್ಮವತಿ–ರುಗ್ಮವತೀ ಎಂತ ಅವತಾರ ಒಂದು, ಸತ್–ಸಮೀಚೀನವಾದ ಲಕ್ಷಣೋಪೇತವಾದ ಆಕಾರವುಳ್ಳ, ಲಕ್ಷಣಳು–ಲಕ್ಷಣಾ ಎಂತ, ನಾಮ–ನಾಮಾಂಕಿತವಾದ ಲಕ್ಷಣಾರೂಪ ಒಂದು, ಅಂತು ಎರಡು, ಎನಿಸುವಳು–ಈ ಪ್ರಕಾರ ರತೀದೇವೇರು ಎರಡು ಅವತಾರಗಳುಳ್ಳವರೆಂದೆನಿಸೋವರಾಗತಾರೆ. (ರತೀದೇವೇರ ವಿಚಾರ ಮುಗಿಯಿತು.) ಪೌಲೋಮಿ–ಇಂದ್ರದೇವರ ಪತ್ನಿಯಾದ ಶಚೀದೇವೇರಿಗೆ ಅವತಾರಗಳು ಎರಡು. ದಾವುವೆಂದರೆ, ಚಿತ್ರಾಂಗದೆಯು–ಚಿತ್ರಾಂಗದೆ ಎಂಬ ಅವತಾರ ಒಂದು, ತಾರಾ–ವಾಲೀಪತ್ನಿಯಾದ ತಾರ ಎಂತ ಒಂದು, ಎರಡು ಪೆಸರುಗಳು–ಎರಡು ಅವತಾರಗಳ ಮಾಡಿ ಎರಡು ನಾಮಗಳಿಂದ ಯುಕ್ತರಾದವರು ಎಂತ ತಾತ್ಪರ್ಯ. (ಇಲ್ಲಿಗೆ ಶಚೀದೇವೇರ ವಿಚಾರ ಮುಗಿಯಿತು.) ಅವಶಿಷ್ಟ ಮುಂದೆ ಹೇಳತಾರೆ.

**ತಾರನಾಮಕ ತ್ರೇತೆಯೊಳು ಸೀ ।**
**ತಾರಮಣನಾರಾಧಿಸಿದನು ಸ ।**
**ಮೀರಯುಕ್ತೋದ್ಧವನು ಕೃಷ್ಣಗೆ ಪ್ರೀಯನೆನಿಸಿದನು ॥**
**ವಾರಿಜಾಸನಯುಕ್ತ ದ್ರೋಣನು ।**
**ಮೂರು ಇಳೆಯೊಳು ಬೃಹಸ್ಪತಿಗವ ।**
**ತಾರವೆಂಬರು ಮಹಾಭಾರತತಾತ್ಪರ್ಯದೊಳಗೆ ॥ ೧೭ ॥**

ಬೃಹಸ್ಪತ್ಯಾಚಾರ್ಯರ ಅವತಾರ, ಆವೇಶ, ಅದರನ್ನ ಹೇಳತಾರೆ.

ಇಳೆಯೊಳು–ಭೂಮಿಯಲ್ಲಿ, ಬೃಹಸ್ಪತಿಗೆ–ಬೃಹಸ್ಪತ್ಯಾಚಾರ್ಯರಿಗೆ, ಅವತಾರವು ಮೂರು–ಅವತಾರಗಳು ಮೂರು (ದಾವುವೆಂದರೆ), ತ್ರೇತೆಯೊಳು–ತ್ರೇತಾಯುಗದಲ್ಲಿ ಅವತಾರಮಾಡಿದ, ಸೀತಾರಮಣನ–ಸೀತಾಪತಿಯಾದ ಶ್ರೀರಾಮಚಂದ್ರದೇವರ, ತಾರನಾಮಕ–ತಾರಾ ಎಂಬ ಕಪಿರೂಪದಿಂದ ಅವತಾರಮಾಡಿ ತ್ರೇತಾಯುಗದಲ್ಲಿ, ಆರಾಧಿಸಿದನು – ಸೇವೆಮಾಡೋವರಾಗಿದ್ದಾರೆ. ಈ ತಾರನಾಮಕ ಕಪಿ ಅವತಾರ ಒಂದು. ಉದ್ಧವನು – ದ್ವಾಪರಯುಗದಲ್ಲಿ ಕೃಷ್ಣಾವತಾರದಲ್ಲಿ ಉದ್ಧವನಾಗಿ ಅವತಾರಮಾಡಿ, ಕೃಷ್ಣಗೆ ಪ್ರೀಯನೆನಿಸಿದನು–ಕೃಷ್ಣದೇವರಿಗೆ ಅತ್ಯಂತ ಪ್ರಿಯರಾದವರು ಎಂತ ಕರಿಸಿದರು,

ಇದು ಒಂದು. ದ್ರೋಣನು–ದ್ರೋಣಾಚಾರ್ಯರು ಎಂಬ ಅವತಾರ ಒಂದು. ಅಂತು ಈ ಮೂರು ಅವತಾರಗಳೊಳಗೆ, ಸಮೀರಯುಕ್ತ–ಜೀವೋತ್ತಮರಾದ ವಾಯುದೇವರ ಆವೇಶದಿಂದ ಯುಕ್ತನಾದವನು, ಉದ್ಧವನು. ವಾರಿಜಾಸನಯುಕ್ತ–ಕಮಲಾಸನಯುಕ್ತ ಅಂದರೆ, ಕಮಲಾಸನರಾದ ಬ್ರಹ್ಮದೇವರ ಆವೇಶದಿಂದ ಯುಕ್ತರಾದವರು, ದ್ರೋಣಾ ಚಾರ್ಯರು, ಎಂಬರು–ಈ ಪ್ರಕಾರ ಮೂರು ಅವತಾರಗಳು ಎಂತ ಹೇಳತಾರೆ, ಮಹಾ ಭಾರತ ತಾತ್ಪರ್ಯದೊಳಗೆ–ಶ್ರೀಮದಾನಂದತೀರ್ಥರಿಂದ ವಿರಚಿತವಾದ, ಶ್ರೀಮನ್ಮಹಾ ಭಾರತತಾತ್ಪರ್ಯನಿರ್ಣಯದೊಳಗೆ ಪೂರ್ವೋಕ್ತಪ್ರಕಾರ ಹೇಳತದೆ ಎಂತಲೂ, ಉತ್ತ ರೋತ್ತರ ಹೇಳತಕ್ಕ ವಿಷಯಗಳನ್ನೂ, ಹೇಳತವೆ ಎಂತಲೂ ತಾತ್ಪರ್ಯ.

**ಮನುಮುಖಾದ್ಯರಿಗಿಂತ ಪ್ರವಹ ।**
**ಗುಣದಿ ಪಂಚಕ ನೀಚನೆನಿಸುವ ।**
**ಇನ ಶಶಾಂಕರು ಧರ್ಮ ಮಾನವಿ ಎರಡು ಗುಣದಿಂದ ॥**
**ಕನಿಯರೆನಿಪರು ಪ್ರವಹಗಿಂತಲಿ ।**
**ದಿನಪ ಶಶಿ ಯಮಧರ್ಮರೂಪಗ ।**
**ಳನುದಿನದಿ ಚಿಂತಿಪುದು ಸಂತರು ಸರ್ವಕಾಲದಲಿ ॥ ೧೮ ॥**

ಪ್ರವಹ ಮಾರುತ, ಸೂರ್ಯ, ಚಂದ್ರಾದಿಗಳ ವಿಚಾರ ಹೇಳತಾರೆ.

ಪ್ರವಹ–ಪ್ರವಹ ವಾಯುದೇವರು, ಮನು–ಪೂರ್ವೋಕ್ತ ಸ್ವಾಯಂಭುವ ಮನುವೇ, ಮುಖಾದ್ಯರಿಗಿಂತ–ಮೊದಲಾದ ಆರುಮಂದಿಗಿಂತ, ಗುಣದಿ ಪಂಚಕ–ಐದುಗುಣಗಳಿಂದ, ನೀಚನೆನಿಸುವ–ಕಡಿಮಿ ಎಂತ ಕರಿಸುವನು. ಪ್ರವಹಗಿಂತಲಿ–ಈ ಪ್ರವಹ ವಾಯುದೇವರಿ ಗಿಂತ ಕಡಿಮಿಯಾದವರು, ಇನ–ವಿವಸ್ವಾನ್ ನಾಮಕ ಸೂರ್ಯದೇವರು, ಶಶಾಂಕರು–ಚಂದ್ರದೇವರು, ಇವರಿಬ್ಬರು, ಧರ್ಮ–ಯಮಧರ್ಮರಾಯನು, ಮಾನವಿ–ಸ್ವಾಯಂಭು ಮನು ಪತ್ನಿ, ಶತರೂಪಾದೇವೇರು (ಮನುಪತ್ನಿಯಾದ್ದರಿಂದ 'ಮಾನವಿ' ಎಂತ ಸಾಂಕೇತನಾಮ), ಅಂತು ನಾಲ್ಕುಮಂದಿ, ಎರಡುಗುಣದಿಂದ–ಪ್ರವಹ ವಾಯುವಿ ಗಿಂತಲೂ ಎರಡು ಗುಣದಿಂದ, ಕನಿಯರೆನಿಪರು–ಕಡಿಮಿ ಎಂತ ಎನಿಸೋವರಾಗತಾರೆ. ದಿನಪ–ಸೂರ್ಯ; ಹಗಲು ಆಯುಸ್ಸು ಸಾರ್ಥಕ್ಯಕ್ಕಾಗಿ ಸೂರ್ಯನ, ಶಶಿ–ಚಂದ್ರ; ರಾತ್ರಿ ಆಯುಸ್ಸು ಸಾರ್ಥಕ್ಯಕ್ಕಾಗಿ ಚಂದ್ರನ, ಯಮಧರ್ಮ–ಯಮದೇವರು; ಧರ್ಮಾ ಧರ್ಮ ಸೂಕ್ಷ್ಮಗಳ ತಿಳಕೊಂಬೋದಕ್ಕೆ ಯಮಧರ್ಮರಾಯನ್ನ ಈ ಪ್ರಕಾರ, ರೂಪಗಳ–ದಾವದಾವ ದೇವತಾರೂಪಗಳ ದ್ವಾರ, ದಾವದಾವ ಸನ್ಮಾರ್ಗಗಳು ಸಿದ್ಧಿಸ ಬೇಕೋ, ದಾರು, ದಾವುದಕ್ಕೆ ಅಭಿಮಾನಿಗಳೋ, ಅದರನ್ನ ತಿಳಿದು, ಆಯಾ ದೇವತಾ ರೂಪಗಳ ಅಂತರ್ಗತದಲ್ಲಿ ಪರಮಾತ್ಮನ್ನ ತಿಳಿದು, ಸಂತರು–ಜ್ಞಾನಿಗಳಾದವರು, ಅನು ದಿನದಿ–ಕ್ಷಣಲವಾದಿ, ಸರ್ವಕಾಲದಲಿ – ಸರ್ವಕಾಲಗಳಲ್ಲಿ, ಚಿಂತಿಪುದು – ಚಿಂತಿಸೋವ ರಾಗಬೇಕು.

ಯಾವ ಯಾವ ಕಾರ್ಯಕ್ಕಾಗಿ ಯಾವ ಯಾವ ದೇವತೆಗಳನ್ನು ಭಜಿಸಬೇಕು ಎಂದರೆ :

೧. ಬ್ರಹ್ಮವರ್ಚಸ್ಸು—ಬ್ರಹ್ಮದೇವರು.
೨. ಇಂದ್ರಿಯಪಟುತ್ವ—ಇಂದ್ರದೇವರು.
೩. ಪ್ರಜಾಕಾಮ—ದಕ್ಷಾದಿ ಪ್ರಜಾಪತಿಗಳು.
೪. ಭೋಜನಕಾಮ—ದಿತಿದೇವೇರು.
೫. ವರ್ಣಕಾಮ—ಆದಿತ್ಯ.
೬. ರಾಜ್ಯಕಾಮ—ವಿಶ್ವೇದೇವತೆಗಳು.
೭. ದೇಶ, ಪ್ರಜಾಸ್ವಾಧೀನ—ಸಾಧ್ಯರು.
೮. ಶ್ರೀಕಾಮ—ದುರ್ಗಾದೇವೇರು.
೯. ತೇಜಃಕಾಮ—ಅಗ್ನಿದೇವರು.
೧೦. ಧನಕಾಮ—ಅಷ್ಟವಸುಗಳು.
೧೧. ವೀರ್ಯಕಾಮ—ರುದ್ರದೇವರು.
೧೨. ಆಯುಸ್ಸು—ಅಶ್ವಿನಿದೇವತೆಗಳು.
೧೩. ಪುಷ್ಟಿಕಾಮ—ಭೂದೇವೇರು.
೧೪. ಪ್ರತಿಷ್ಠಾಕಾಮ—ಗಗನ, ಭೂದೇವತೆಗಳು.
೧೫. ಸರ್ವಾಧಿಪತ್ಯ—ಬ್ರಹ್ಮದೇವರು.
೧೬. ಕೀರ್ತಿಕಾಮ—ಶ್ರೀ ವಿಷ್ಣುರೂಪಿ ಪರಮಾತ್ಮ.
೧೭. ಆಸ್ತಿ ಸೇರಿಸೋದಕ್ಕೆ—ಪ್ರಚೇತಸರು.
೧೮. ವಿದ್ಯಾಕಾಮ—ಉಮಾವಲ್ಲಭರಾದ ರುದ್ರದೇವರು.
೧೯. ದಾಂಪತ್ಯಪ್ರೀತಿಕಾಮ—ಉಮಾದೇವೇರು.
೨೦. ಧರ್ಮಕಾಮ—ಶ್ರೀ ವಿಷ್ಣುರೂಪಿ ಪರಮಾತ್ಮ.
೨೧. ಸಂತಾನಕಾಮ—ಪಿತೃದೇವತೆಗಳು.
೨೨. ರಕ್ಷಕಾಮ—ಯಕ್ಷರು.
೨೩. ಸೌಂದರ್ಯಕಾಮ—ಗಂಧರ್ವರು.
೨೪. ಸ್ತ್ರೀ ಕಾಮ—ಊರ್ವಸೀ ಮೊದಲಾದ ಅಪ್ಸರ ಸ್ತ್ರೀಯರು.
೨೫. ಬಲಕಾಮ—ಮರುದ್ಗಣರು.
೨೬. ರಾಜ್ಯಕಾಮ—ಮನುಗಳು.
೨೭. ಶತ್ರುಮರಣ—ಗೋಪಾಲ.
೨೮. ಭೋಗಕಾಮ—ಚಂದ್ರದೇವರು.

ಈ ಪ್ರಕಾರ ಆಯಾ ಕಾರ್ಯಗಳಲ್ಲಿ ಆಯಾ ದೇವತಾಂತರ್ಗತ ಶ್ರೀಪರಮಾತ್ಮನ್ನ ಚಿಂತನಮಾಡಿ, ಪೂಜಾದಿಗಳು ಮಾಡಬೇಕೆಂತ ತಾತ್ಪರ್ಯ.

**ಮರುತನಾವೇಶಯುತ ಧರ್ಮಜ ।**
**ಕರಡಿ ವಿದುರನು ಸತ್ಯಜಿತು ಈ ।**
**ರೆರಡು ಧರ್ಮನ ರೂಪ ಬ್ರಹ್ಮಾವಿಷ್ಟ ಸುಗ್ರೀವ ॥**
**ಹರಿಯ ರೂಪಾವಿಷ್ಟ ಕರ್ಣನು ।**
**ತರಣಿಗೆರಡವತಾರ ಚಂದ್ರನು ।**
**ಸುರಪನಾವೇಶಯುತನಂಗದನೆನಿಸಿಕೊಳುತಿಪ್ಪ ॥ ೧೯ ॥**

೧೮ ನೇ ಶ್ಲೋಕಗತ ಯಮಾದಿಗಳ ಅವತಾರ ಹೇಳುತಾರೆ.

ಧರ್ಮನ ರೂಪ – ಯಮಧರ್ಮರಾಯನ ಅವತಾರಗಳು, ಈರೆರಡು – ಎರಡು ಎರಡುಗಳು, ನಾಲ್ಕು; ಹಾವ್ಯವೆಂದರೆ ವಿವರ:—ಧರ್ಮಜ–ಯಮಧರ್ಮರಾಯನಿಂದ ಉತ್ಪನ್ನನಾದ, ಯಮಧರ್ಮಾಂಶನಾದ ಯುಧಿಷ್ಠಿರ ಎಂತ ಅವತಾರ. ಕರಡಿ–ಜಾಂಬವಂತನಾಮಕ ಕಪಿ ಅವತಾರ, ವಿದುರನು–ವಿದುರನೆಂಬ ಅವತಾರ, ಸತ್ಯಜಿತು–ಸತ್ಯಜಿತು ಎಂಬ ಅವತಾರ, ಅಂತು ನಾಲ್ಕು ಯಮದೇವರ ಅವತಾರಗಳು. ಇದರೊಳಗೆ, ಮರುತನಾವೇಶಯುತ – ವಾಯುದೇವರ ಆವೇಶದಿಂದ ಯುಕ್ತನಾದವನು ಧರ್ಮರಾಯನು. ಇಲ್ಲಿಗೆ ಯಮದೇವರ ವಿಚಾರ ಮುಗಿಯಿತು. ತರಣಿಗೆ–ಸೂರ್ಯನಿಗೆ, ಎರಡವತಾರ–ಎರಡು ಅವತಾರಗಳು ಹಾವ್ಯವೆಂದರೆ, ಕರ್ಣನು–ಕುಂತೀದೇವೀ ಪುತ್ರನಾದ ಕರ್ಣ ಎಂತಲೂ, ಸುಗ್ರೀವ–ಸುಗ್ರೀವನಾಮಕ ಕಪಿ ಎಂತಲೂ, ಎರಡು ಅವತಾರಗಳು. ಇದರೊಳಗೆ, ಹರಿಯ ರೂಪಾವಿಷ್ಟ–ಶ್ರೀಪರಮಾತ್ಮನ ಆವೇಶಯುತನು ಕರ್ಣನು, ಬ್ರಹ್ಮಾವಿಷ್ಟ–ಬ್ರಹ್ಮದೇವರ ಆವೇಶಯುತನು ಸುಗ್ರೀವನು. ಇಲ್ಲಿಗೆ ಸೂರ್ಯದೇವರ ವಿಚಾರ ಮುಗಿಯಿತು. ಚಂದ್ರನು–ಚಂದ್ರನ ಅವತಾರ ಹಾವದೆಂದರೆ, ಅಂಗದನು–ಅಂಗದನಾಮಕ ಕಪಿ, ಇವನು, ಸುರಪನಾವೇಶಯುತನು–ಇಂದ್ರದೇವರ ಆವೇಶದಿಂದ ಯುಕ್ತ ಎಂತ, ಎನಿಸಿಕೊಳುತಿಪ್ಪ–ಕರಿಸಿಕೊಳ್ಳಲ್ಪಡುತ್ತಾನೆ.

**ತರಣಿಗಿಂತಲಿ ಪಾದಪಾದರೆ ।**
**ವರುಣ ನೀಚನು ಮಹಾಭಿಷಕ್ ದರ ।**
**ದುರ ಸುಷೇಣನು ಶಂತನುವು ನಾಲ್ವರು ವರುಣರೂಪ ॥**
**ಸುರಮುನೀ ನಾರದನು ಕಿಂಚಿತ್ ।**
**ಕೊರತೆ ವರುಣಗೆ ಅಗ್ನಿ ಭೃಗುವಜ ।**
**ಗೊರಳಪತ್ನಿ ಪ್ರಸೂತಿ ಮೂವರು ನಾರದನಿಗಧಮ ॥ ೨೦ ॥**

ವರುಣ, ನಾರದ, ಅಗ್ನಿ ಮೊದಲಾದವರ ತಾರತಮ್ಯವಿಚಾರ ಹೇಳುತಾರೆ.

ತರಣಿಗಿಂತಲಿ–ಸೂರ್ಯದೇವರಿಗಿಂತಲೂ, ವರುಣ–ವರುಣದೇವರು, ಪಾದ–ಕಾಲುಗುಣ, ಪಾದರೆ–ಪಾದದೊಳಗೆ ಅರ್ಧ, ಅರಿಕಾಲುಗುಣ, ಅಂತು ಕಾಲು ಅರಿಕಾಲು

ಗುಣ, ನೀಚನು–ಕಡಿಮೆ ಆದವನು. ಈ ವರುಣನ ಅವತಾರಗಳು, ಮಹಾಭಿಷಕ್–ಮಹಾಭಿಷಕ್ ಎಂತ ಅವತಾರ, ಒಂದು; ದರದುರ–ದರ್ದುರ ಅವತಾರ, ಎರಡು; ಸುಷೇಣನು–ಸುಷೇಣ ಎಂತ ಅವತಾರ, ಮೂರು; ಶಂತನುವು–ಶಂತನು ಚಕ್ರವರ್ತಿ ಅವತಾರ, ನಾಲ್ಕು; ನಾಲ್ವರು–ಈ ನಾಲ್ಕು ರೂಪಗಳೂನು, ವರುಣರೂಪ–ವರುಣ ದೇವರ ಅವತಾರಗಳು. ವರುಣದೇವರ ವಿಚಾರ ಮುಗಿಯಿತು. ಅನಂತರ, ಸುರಮುನೀ–ದೇವಋಷಿಗಳಾದ, ನಾರದನು–ನಾರದಋಷಿಗಳು, ವರುಣಗೆ–ಪೂರ್ವೋಕ್ತ ವರುಣ ದೇವರಿಗೆ, ಕಿಂಚಿತ್ ಕೊರತೆ–ಕಿಂಚಿತ್‌ಶಬ್ದದಿಂದ ನೀಸಭಾಗಗುಣದಿಂದ ಕಡಿಮೆ ಎಂತ ತಾತ್ಪರ್ಯ. ಇಲ್ಲಿಗೆ ನಾರದಋಷಿಗಳ ವಿಚಾರ ಮುಗಿಯಿತು. ಅನಂತರ, ಅಗ್ನಿ–ಅಗ್ನಿದೇವರು, ಭೃಗುವು–ಭೃಗುಋಷಿಗಳು, ಅಜಗೊರಳಪತ್ನಿ–ವ್ಯಾಕಿ ಕುತ್ತಿಗಿಯಿಂದ ಯುಕ್ತನಾದ ದಕ್ಷಪ್ರಜೇಶ್ವರನ ಪತ್ನಿಯಾದ, ಪ್ರಸೂತಿ–ಪ್ರಸೂತೀದೇವೇರು, ಮೂವರು–ಈ ಮೂರು ಮಂದಿ, ನಾರದನಿಗಧಮ–ನಾರದಋಷಿಗಳಿಗೆ ನೀಸಗುಣದಿಂದ ಅಧಮರು, ಎಂತ ತಾತ್ಪರ್ಯ. ಆದ್ದರಿಂದಲೇ ಸಂಖ್ಯಾಗಣನ ಮಾಡಲಿಲ್ಲ. ಇಲ್ಲಿಗೆ ಹದಿನೈದನೇ ಕಕ್ಷವಾಯಿತು.

**ನೀಲ ದೃಷ್ಟದ್ಯುಮ್ನ ಲವ ಈ ।**
**ಲೇಲಿಹಾನನ ರೂಪಗಳು ಭೃಗು ।**
**ಕಾಲಿಲೊದ್ದದರಿಂದ ಹರಿಯನು ವ್ಯಾಧನೆನಿಸಿದನು ॥**
**ಏಳು ಋಷಿಗಳಿಗುತ್ತಮರು ಮುನಿ ।**
**ಮೌಳಿ ನಾರದಗಧಮ ಮೂವರು ।**
**ಗಾಳಿಯುತ ಪ್ರಹ್ಲಾದ ಬಾಹ್ಲಿಕರಾಯನೆನಿಸಿದನು ॥ ೨೧ ॥**

೨೧ನೇ ಶ್ಲೋಕಗತ ಅಗ್ನ್ಯಾದಿ ದೇವತೆಗಳ ಅವತಾರ ಹೇಳತಾರೆ.

ಈ–ಈ ಪೂರ್ವೋಕ್ತನಾದ, ಲೇಲಿಹಾನನ–ಅಗ್ನಿದೇವರಿಗೆ, ರೂಪಗಳು–ಅವತಾರ ಗಳು ಮೂರು. ನೀಲ–ನೀಲನಾಮಕ ಕಪಿ ಅವತಾರ, ದೃಷ್ಟದ್ಯುಮ್ನ–ದೃಷ್ಟದ್ಯುಮ್ನ ಎಂಬ ಅವತಾರ, ಲವ–ಶ್ರೀರಾಮಚಂದ್ರದೇವರ ಪುತ್ರ ಲವನಾಮಕನು, ಅಂತು ಮೂರು ಅವತಾರಗಳು. ಇಲ್ಲಿಗೆ ಅಗ್ನಿದೇವರ ವಿಚಾರ ಮುಗಿಯಿತು. ಭೃಗು–ಅನಂತರ ಭೃಗುಋಷಿಗಳು, ಹರಿಯನು–ಶ್ರೀ ನಾರಾಯಣದೇವರನ್ನು, ಕಾಲಲೊದ್ದದರಿಂದ–ಪಾದದಿಂದ ತಾಡನಮಾಡಿದಕಡಿಯಿಂದ, ವ್ಯಾಧನೆನಿಸಿದನು–ವ್ಯಾಧ ಎಂತ ಅವತಾರ ಮಾಡಿದವನಾಗಿ, ಶ್ರೀಕೃಷ್ಣದೇವರು ಪರಂಧಾಮಕ್ಕೆ ಹೋಗೋದಕ್ಕೆ ಈ ವ್ಯಾಧನೇ ಕಾರಣನಾದ, ವ್ಯಾಧ ಎಂತ ಅವತಾರ ಒಂದು, ಏಳು ಋಷಿಗಳಿಗುತ್ತಮರು–ಅಗ್ನಿ, ಭೃಗು, ಪ್ರಸೂತಿ ಈ ಮೂರು ಮಂದಿ ೧೪ನೇ ಕಕ್ಷದವರು. ಇವರು ೨೬ನೇ ಕಕ್ಷದವ ರಾದ ಸಪ್ತಋಷಿಗಳಿಗಿಂತ ಉತ್ತಮರು. ಮೂವರು–ಸಪ್ತಋಷಿಗಳಿಗಿಂತ ಉತ್ತಮರಾದ ಅಗ್ನ್ಯಾದಿ ಈ ಮೂರು ಮಂದಿ, ಮುನಿಮೌಳಿ–ಋಷಿಶ್ರೇಷ್ಠರಾದ ಹದಿನಾಲ್ಕನೇ ಕಕ್ಷ

ದವರಾದ, ನಾರದಗೆ–ನಾರದಋಷಿಗಳಿಗೆ, ಅಧಮ–ಪೂರ್ವೋಕ್ತ ಪ್ರಕಾರ ಗುಣದಿಂದ ಅಧಮರು. ಪ್ರಹ್ಲಾದ–ಪ್ರಹ್ಲಾದನು, ಕರ್ಮಜದೇವತೆಯಾದ, ಕರ್ಮಜರ ಕಕ್ಷವಾದ ೧೯ನೇ ಕಕ್ಷದಲ್ಲಿ ಇರಬೇಕಾದವರಾದ ಅಗ್ನ್ಯಾದಿ ಮೂರು ಮಂದಿ ಸಂಗಡ ಸೇರೋವ ನಾಗಿದ್ದಾನೆ ; ಉಪಾಧಿವಶಾತ್, ನೈಜವಲ್ಲ. ಇವಗೆ ನೈಜಕಕ್ಷ ೧೯ನೇ ಕಕ್ಷ, ತದ್ಗತ ಕರ್ಮಜರಿಗೆ ಸಮಾನನಾದವನೆಂದು ತಿಳಿಯಬೇಕು. ಈ ಪ್ರಹ್ಲಾದನ ಅವತಾರಗಳು, ಗಾಳಿಯುತ–ವಾಯುದೇವರ ಆವೇಶದಿಂದ ಯುಕ್ತವಾದ, ಬಾಹ್ಲೀಕರಾಯನು–ಬಾಹ್ಲೀಕ ರಾಯ ಎಂತ, ಎನಿಸಿದನು–ಕರಿಸಿಕೊಂಡು ಅವತಾರಮಾಡೋವನಾದ.

**ಜನಪ ಕರ್ಮಜರೊಳಗೆ ನಾರದ ।**
**ಮುನಿಯನುಗ್ರಹಬಲದಿ ಪ್ರಹ್ಲಾ ।**
**ದನಲ ಭೃಗುಮುನಿ ದಕ್ಷಪತ್ನಿಗೆ ಸಮನೆನಿಸಿಕೊಂಬ ॥**
**ಮನು ವಿವಸ್ವಾನ್ ಗಾಧಿಜೀರ್ವರು ।**
**ಅನಲಗಿಂತಲಿ ಕಿಂಚಿತಾಧಮ ।**
**ಎಣೆ ಎನಿಸುವರು ಸಪ್ತಋಷಿಗಳಿಗೆಲ್ಲ ಕಾಲದಲಿ ॥ ೨೨ ॥**

ಪ್ರಹ್ಲಾದ, ವೈವಸ್ವತಮನು, ವಿಶ್ವಾಮಿತ್ರ, ಮರೀಚ್ಯಾದಿಗಳ ವಿಚಾರ, ತಾರತಮ್ಯ ಹೇಳತಾರೆ.

ಜನಪ ಕರ್ಮಜರೊಳಗೆ–ಜನರುಗಳನ್ನು ಪಾಲನಮಾಡತಕ್ಕ ಪೃಥುಚಕ್ರವರ್ತಿಯೇ ಮೊದಲಾದ ಕರ್ಮಜದೇವತೆಗಳಿಗೆ ಸಮಾನನಾದ ಕರ್ಮಜಕಕ್ಷದಲ್ಲಿ ಇರಬೇಕಾದವನಾದ ಪ್ರಹ್ಲಾದರಾಯನು, ನಾರದಮುನಿಯ–ನಾರದಋಷಿಗಳ, ಅನುಗ್ರಹಬಲದಿ–ಅನುಗ್ರಹ ಬಲದಿಂದ, ಅನಲ–ಅಗ್ನಿದೇವರು, ಭೃಗುಮುನಿ–ಭೃಗುಋಷಿಗಳು, ದಕ್ಷಪತ್ನಿಗೆ–ದಕ್ಷಪತ್ನಿ ಪ್ರಸೂತಿ ಈ ಮೂರು ಮಂದಿಗೆ ಸಮನೆನಿಸಿಕೊಂಬ–ಸಮಾನ ಎಂತ ಕರಿಸಿಕೋತಾನೆ. ಇಲ್ಲಿಗೆ ಪ್ರಹ್ಲಾದನ ವಿಚಾರ ಮುಗಿಯಿತು. ನಂತರ, ಮನುವಿವಸ್ವಾನ್–ವಿವಸ್ವಾನ್ ನಾಮಕ ಸೂರ್ಯದೇವರ ಪುತ್ರನಾದ ವೈವಸ್ವತಮನು, ಗಾಧಿಜ–ಗಾಧಿರಾಜನ ಪುತ್ರ ನಾದ ವಿಶ್ವಾಮಿತ್ರಋಷಿ, ಈರ್ವರು–ಇವರಿಬ್ಬರು, ಅನಲಗಿಂತಲಿ–ಅಗ್ನಿ ಮೊದಲಾದವರಿ ಗಿಂತ, ಕಿಂಚಿತಾಧಮ–ವೀಸಗುಣದಿಂದ ಅಧಮರು. ಇವರಿಬ್ಬರು, ಸಪ್ತಋಷಿಗಳಿಗೆ–ಮರೀಚ್ಯಾದಿ ಸಪ್ತಋಷಿಗಳಿಗೆ, ಎಣೆ ಎನಿಸುವರು–ಸಮಾನರೆಂದು ಕರಿಸುವರು. ಎಲ್ಲ ಕಾಲದಲಿ–ಸದಾ ಸರ್ವಕಾಲವೂ, ಅನಾದ್ಯನಂತಕಾಲದಲ್ಲೂ, ಮರೀಚ್ಯಾದಿ ಸಪ್ತಋಷಿ ಗಳು, ವೈವಸ್ವತಮನು ಮತ್ತು ವಿಶ್ವಾಮಿತ್ರಋಷಿ, ಅಂತು ಈ ಒಂಭತ್ತುಮಂದಿ ಸಮಾನರು. ಅಗ್ನ್ಯಾದಿಗಳಿಗಿಂತ ವೀಸಗುಣದಿಂದ ನೀಚರು ಎಂತ ತಾತ್ಪರ್ಯ. ಸಪ್ತ ಋಷಿಗಳ ನಾಮ ಮುಂದೆ ಹೇಳತಾರೆ.

**ಕಮಲಸಂಭವಭವರೆನಿಪ ಸಂ ।**
**ಯಮಿ ಮರೀಚಿಯು ಅತ್ರಿಯಂಗಿರ ।**
**ಸು ಮತಿ ಪುಲಹ ಕ್ರತು ವಸಿಷ್ಠ ಪುಲಸ್ತ್ಯಮುನಿ ಸ್ವಾಹಾ ॥**
**ರಮಣಗಧಮರು ಮಿತ್ರನಾಮಕ ।**
**ದ್ಯುಮಣಿ ರಾಹುಯುಕ್ತ ಭೀಷ್ಮಕ ।**
**ಯಮಳರೂಪನು ತಾರನಾಮಕನೆನಿಸಿ ತ್ರೈತೆಯೊಳು ॥ ೨೩ ॥**

ಸಪ್ತಋಷಿಗಳ ನಾಮ, ಮಿತ್ರನಾಮಕ ಸೂರ್ಯಾದಿಗಳ ತಾರತಮ್ಯವಿಚಾರ ಹೇಳತಾರೆ.

ಕಮಲಸಂಭವಭವರೆನಿಪ– ಕಮಲೋದ್ಭವರಾದ ಬ್ರಹ್ಮದೇವರ ಅವಯವಗಳಿಂದ ಉತ್ಪನ್ನರಾದವರೆಂತ ಕರಿಸತಕ್ಕ, ಸಂಯಮಿ–ಋಷಿಗಳಾದ, ನಿಯಮಾದಿ ಅಷ್ಟಸಿದ್ಧಿಯುಳ್ಳ, ಮತಿ–ಜ್ಞಾನಶ್ರೇಷ್ಠರಾದ, ಮರೀಚಿಯು–೧. ಮರೀಚಿಯು, ಮನಸ್ಸಿನಿಂದ ; ಅತ್ರಿ–೨. ಅತ್ರಿಋಷಿ, ನೇತ್ರದಿಂದ ; ಅಂಗಿರಸು–೩. ಅಂಗಿರಸುಋಷಿ, ಮುಖದಿಂದ ; ಪುಲಹ–೪. ಪುಲಹಋಷಿ, ನಾಭಿಯಿಂದ ; ಕ್ರತು–೫. ಕ್ರತುಋಷಿ, ಕರದಿಂದ ; ವಸಿಷ್ಠ–೬. ವಸಿಷ್ಠಋಷಿ, ಪ್ರಾಣದಿಂದ ; ಪುಲಸ್ತ್ಯ–೭. ಪುಲಸ್ತ್ಯಋಷಿ, ಕರ್ಣದಿಂದ ಹುಟ್ಟಿದವರು, ಅಂತು ಸಪ್ತಋಷಿಗಳು. ಮುನಿ–ಏತಾದೃಶ ಸಪ್ತಋಷಿಗಳು, ಪೂರ್ವೋಕ್ತರಾದ ವಿಶ್ವಾಮಿತ್ರ, ವೈವಸ್ವತಮನು, ಅಂತು ಒಂಭತ್ತುಮಂದಿ, ಸ್ವಾಹಾರಮಣಗೆ–ಸ್ವಾಹಾದೇವಿ ಪತಿ ಅಗ್ನಿದೇವರಿಗೆ, ಅಧಮರು–ಪೂರ್ವೋಕ್ತಪ್ರಕಾರ ನೀಚಗುಣದಿಂದ ಅಧಮರೆಂದು ತಾತ್ಪರ್ಯ. ಇಲ್ಲಿಗೆ ಸಪ್ತಋಷಿಗಳ ವಿಚಾರ ಮುಗಿಯಿತು. ನಂತರ, ಮಿತ್ರನಾಮಕ ದ್ಯುಮಣಿ–ಮಿತ್ರನಾಮಕ ಸೂರ್ಯ ; ಇವಗೆ ಸಮಾನರಾದ, ಈ ಕಕ್ಷದವರಾದ ಉತ್ತರೋತ್ತರ ಉಕ್ತರಾಗಿರುವ ನಿರಋತಿ, ಪ್ರಾವಹಿ, ಬೃಹಸ್ಪತಿಭಾರ್ಯಾ ತಾರಾ, ಅಂತು ನಾಲ್ಕು ಮಂದಿ ಮಿತ್ರನ ಉಪಲಕ್ಷಣಯಾ, ಉತ್ತರೋತ್ತರ ಹೇಳಿರುವ ಈ ಕಕ್ಷದವರಾದ ಪ್ರಕೃತ ಶ್ಲೋಕದಲ್ಲಿ ಹೇಳದೇ ಇರುವವರನ್ನ ಝಡಿತ್ಯಾ ಬೋಧಾರ್ಥ ಅಧ್ಯಾಹಾರ ಮಾಡಿಕೊಂಡು ಹೇಳಲ್ಪಟ್ಟಿದೆ. ಈ ನಾಲ್ಕುಮಂದಿ ಒಳಗೆ ಮಿತ್ರನಾಮಕ ಸೂರ್ಯನ ಅವತಾರ, ಭೀಷ್ಮಕ–ಭೀಷ್ಮಕರಾಯ ಎಂತಲೂ, ತ್ರೈತೆಯೊಳು–ತ್ರೇತಾಯುಗದಲ್ಲಿ, ತಾರನಾಮಕನೆನಿಸಿ–ತಾರ ಎಂತ ನಾಮದಿಂದ ಕರಿಸಿದ ತಾರನಾಮಕ ಅವತಾರ. ಬೃಹಸ್ಪತ್ಯಾಚಾರ್ಯರ ಅವತಾರದಲ್ಲಿ ತಾರ ಎಂತ ಅವತಾರ ಒಂದು ಅದೆ. ಅಂತು ಎರಡೂ ಬ್ಯಾರೆ ಬ್ಯಾರೇನೇ, ಒಂದಲ್ಲ, ನಾಮಮಾತ್ರ ಒಂದಾಗೇ ಅದೆ. ಈ ತಾರ ಎಂಬ ಅವತಾರ ಮಿತ್ರನಾಮಕ ಸೂರ್ಯನ ಅವತಾರ. ಯಮಳರೂಪನು–ಈ ಮಿತ್ರನಾಮಕ ಸೂರ್ಯನು ಎರಡು ರೂಪದಿಂದ ಎರಡು ಅವತಾರಗಳುಳ್ಳವನು. ಈ ಎರಡರ ಒಳಗೆ, ರಾಹುಯುಕ್ತ–ರಾಹುವಿನಿಂದ ಯುಕ್ತನಾದವನು, ಭೀಷ್ಮಕರಾಯನು. ಅವಶಿಷ್ಟ ಮುಂದೆ ಹೇಳತಾರೆ.

**ನಿರಋುತಿಗೆರಡವತಾರ ದುರ್ಮುಖ ।**
**ಹರಯುತ ಘಟೋತ್ಕಚನು ಪ್ರಾವಹಿ ।**
**ಗುರುಮಡದಿ ತಾರಾ ಸಮರು ಪರ್ಜನ್ಯಗುತ್ತಮರು ॥**
**ಕರಿಗೊರಳಸಂಯುಕ್ತ ಭಗದ ।**
**ತ್ತರಸು ಕತ್ಥನ ಧನಪ ರೂಪಗ ।**
**ಳೆರಡು ವಿಘ್ನಪ ಚಾರುದೇಷ್ಣನು ಅಶ್ವಿನಿಗಳು ಸಮ ॥ ೨೪ ॥**

೧೭ನೇ ಕಕ್ಷದವರಾದ, ಅವಶಿಷ್ಟ ಉಳಿದ ನಿರಋುತಿ ಮೊದಲಾದವರನ್ನೂ, ೧೮ನೇ ಕಕ್ಷದವರನ್ನೂ ಹೇಳುತಾರೆ.

ನಿರಋುತಿಗೆ–೧೭ನೇ ಕಕ್ಷದ ನಿರಋುತಿಗೆ, ಎರಡವತಾರ–ಎರಡು ಅವತಾರಗಳು ಯಾವುವೆಂದರೆ, ದುರ್ಮುಖ–ದುರ್ಮುಖ ಎಂತ ಅವತಾರ ಒಂದು, ಘಟೋತ್ಕಚನು–ಘಟೋತ್ಕಚನು ಎಂತ ಒಂದು ಅವತಾರ; ಈ ಎರಡರ ಒಳಗೆ, ಹರಯುತ–ರುದ್ರ ದೇವರ ಆವೇಶಯುಕ್ತನಾದವನು ಘಟೋತ್ಕಚನು; ಪ್ರಾವಹಿ–ಪ್ರವಹವಾಯುದೇವರ ಪತ್ನಿ ಪ್ರಾವಹಿ, ಗುರುಮಡದಿ ತಾರಾ–ಬೃಹಸ್ಪತ್ಯಾಚಾರ್ಯರ ಪತ್ನಿ ತಾರಾದೇವಿ, ವರ್ತಮಾನಶ್ಲೋಕಗತ ನಿರಋುತಿ, ಪೂರ್ವೋಕ್ತ ಮಿತ್ರನಾಮಕ ಸೂರ್ಯ, ಈ ನಾಲ್ಕು ಮಂದಿಗಳು, ಸಮರು–ಸಮಾನರು. ಈ ನಾಲ್ಕು ಮಂದಿಗಳು ಪೂರ್ವೋಕ್ತ ಸಪ್ತಋುಷಿ ಗಳಿಗಿಂತಲೂ ಕಿಂಚಿತ್ಸಾಂಕೇತವಾದ ನೀಚಗುಣದಿಂದ ನೀಚರು ಎಂತ ತಾತ್ಪರ್ಯ. ಇಲ್ಲಿಗೆ ಮಿತ್ರಾದಿ ನಾಲ್ಕು ಮಂದಿ ವಿಚಾರ ಮುಗಿಯಿತು. ಅನಂತರ, ೧೮ನೇ ಕಕ್ಷಸ್ಥರ ವಿಚಾರ ಹೇಳುತಾರೆ. ಪರ್ಜನ್ಯಗುತ್ತಮರು–ಪರ್ಜನ್ಯ, ಉಪಲಕ್ಷಣಯಾ ಪೃಥ್ವೀದೇವೀ, ಉಭಯರೂ ಗ್ರಾಹ್ಯ. ಈ ಉಭಯರ ಸಹಿತವಾಗಿ ನೂರುಮಂದಿ ಸೋಮಪಾನಾರ್ಹರು. ಈ ನೂರುಮಂದೀನ್ನ ಮುಂದೆ ೧೮ನೇ ಕಕ್ಷದಲ್ಲಿ ಹೇಳುತಾರೆ. ಈ ೧೮ನೇ ಕಕ್ಷದಲ್ಲಿ ಬರತಕ್ಕ ನೂರು ಮಂದಿ ಒಳಗೆ ೯೮ ಮಂದಿ ಪರ್ಜನ್ಯ, ಪೃಥ್ವೀ ಇಬ್ಬರಿಗಿಂತಲೂ ಉತ್ತಮರು; ಅಂತು ನೂರು ಮಂದಿ. ಪರ್ಜನ್ಯ, ಪೃಥ್ವೀ ಇವರಿಬ್ಬರೂ ಕಡಿಮೆ ಕಕ್ಷದವರು. ಇದರ ವಿವರ ೧೮ನೇ ಕಕ್ಷದಲ್ಲಿ ಬರುತ್ತದೆ. ಪರ್ಜನ್ಯಗುತ್ತಮರು ಎಂಬೋದಕ್ಕೆ ಇದು ತಾತ್ಪರ್ಯ. ಶತಸ್ಥರ ಕಕ್ಷ ಮುಂದೆ ಹೇಳುತಾರೆ. ಧನಪ–ಧನವನ್ನ ಪಾಲನಮಾಡತಕ್ಕ ಕುಬೇರ, ವಿಘ್ನಪ–ವಿಘ್ನೇಶ್ವರ, ಪ್ರಮಾಣಾಂತರದಿಂದ ವಿಷ್ವಕ್ಸೇನ, ಅಂತು ಮೂರು ಮಂದಿಗಳು, ಅಶ್ವಿನಿಗಳು–ಅಶ್ವಿನೀದೇವತೆಗಳ ಸಹ ೮೪ ಮಂದಿ, ಅಂತು ಎಂಭತ್ತೇಳು, ಸಮ–ಈ ಎಂಭತ್ತೇಳು ಮಂದಿ ಸಮಾನರು. ಹದಿನಾಲ್ಕು ಮಂದಿ ಈ ಎಂಭತ್ತೇಳು ಜನಕ್ಕೆ ಉತ್ತಮರು. ಪೃಥ್ವೀ, ಪರ್ಜನ್ಯ ಎಂಭತ್ತೇಳು ಜನಕ್ಕೆ ಅವರರು. ಅಂತು ನೂರಾಮೂರು ಮಂದಿ. ಇವರೊಳಗೆ ಧನಪ, ವಿಷ್ವಕ್ಸೇನ, ಗಣೇಶ ಈ ಮೂರು ಮಂದಿ ಹೋಗತಾ ಉಳಿದವರು ನೂರು ಮಂದಿ. ಈ ಧನಪಾದಿಗಳ ಅವತಾರಗಳ ವಿವರ :– ರೂಪಗಳೆರಡು–ಕುಬೇರನವತಾರಗಳು ಎರಡು; ಕತ್ಥನ–ಕತ್ಥನ ಎಂತ ಅವತಾರ ಒಂದು,

ಅರಸು ಭಗದತ್ತ–ರಾಜನಾದ ಭಗದತ್ತ ಎಂತ ಅವತಾರ; ಈ ಎರಡು ಕುಬೇರನ ಅವತಾರಗಳು. ಇದರೊಳಗೆ, ಕರಿಗೊರಳಸಂಯುಕ್ತ–ಗಜಮುಖನಾದ ವಿಘ್ನೇಶ್ವರನ ಆವೇಶದಿಂದ ಯುಕ್ತನಾದವ ಭಗದತ್ತರಾಜನು. ಕುಬೇರನ ವಿಚಾರ ಮುಗಿಯಿತು. ಇನ್ನು ಗಣೇಶನ ಅವತಾರ ವಿವರ. ಚಾರುದೇಷ್ಣನು–ಚಾರುದೇಷ್ಣ ಎಂತ ಗಣೇಶನ ಒಂದು ಅವತಾರ. ಇಲ್ಲಿಗೆ ೧೮ನೇ ಕಕ್ಷದವರಾದ ೧೦೩ ಮಂದಿ ಒಳಗೆ, ಧನಪಾದಿ ಮೂರು ಮಂದಿ ವಿಚಾರ ಮುಗಿಯಿತು. ಉಳಿದ ನೂರು ಮಂದಿ ವಿಚಾರ ಮುಂದಿನ ಶ್ಲೋಕದಿಂದ ಹೇಳತಾರೆ.

**ದ್ರೋಣ ಧ್ರುವ ದೋಷಾರ್ಕಾಗ್ನಿ ।**
**ಪ್ರಾಣ ದ್ಯು ವಿಭಾವಸುಗಳೆಂಟು ಕೃ ।**
**ಶಾನು ಶ್ರೇಷ್ಠ ದ್ಯುನಾಮವಸು ಭೀಷ್ಮಾರ್ಯ ಬ್ರಹ್ಮಯುತ ॥**
**ದ್ರೋಣನಾಮಕ ನಂದಗೋಪ ಪ್ರ ।**
**ಧಾನ ಅಗ್ನಿಯನುಳಿದೇಳು ಸ ।**
**ಮಾನರೆನಿಪರು ತಮ್ಮೊಳಗೆ ಜ್ಞಾನಾದಿ ಗುಣದಿಂದ ॥ ೨೫ ॥**

ಪೂರ್ವೋಕ್ತ ನೂರುಮಂದಿಯ ಹೆಸರು ಹೇಳತಾರೆ.

ದ್ರೋಣ–ದ್ರೋಣ (೧), ಧ್ರುವ–ಧ್ರುವ (೨), ದೋಷ–ದೋಷ (೩), ಅರ್ಕ–ಅರ್ಕ (೪), ಅಗ್ನಿ–ಅಗ್ನಿ (೫), ಪ್ರಾಣ–ಪ್ರಾಣ (೬), ದ್ಯು–ದ್ಯುನಾಮಕ (೭), ವಿಭಾವಸುಗಳೆಂಟು–ವಿಭಾವಸು (೮), ಇವರುಗಳು ಎಂಟುಮಂದಿ ಅಷ್ಟವಸುಗಳು; ಇವರಲ್ಲಿ ೧೫ ನೇ ಕಕ್ಷದಲ್ಲಿ ಸೇರಿದವ ೫ ನೇ ಸಂಖ್ಯಾ ಉಳ್ಳ ಅಗ್ನಿನಾಮಕನು ಒಬ್ಬ ಹೋಗತ, ಉಳಿದವರು ಏಳುಮಂದಿ, ಕೃಶಾನು–ಈ ಎಂಟುಮಂದಿಯೊಳಗೆ ಕೃಶಾನು ಸಾಂಕೇತನಾದವ ೫ ನೇ ಸಂಖ್ಯಾ ಉಳ್ಳ ಅಗ್ನಿ ಎಂಬುವನು, ಶ್ರೇಷ್ಠ–ಉತ್ತಮನಾದವನು. ಈ ಅಗ್ನಿ ಹದಿನೈದನೇ ಕಕ್ಷದಲ್ಲಿ ಬಂದಿದ್ದಾನೆ. ಇವನ ಅವತಾರಗಳನ್ನು ೧೫ ನೇ ಕಕ್ಷದಲ್ಲಿ ವಿವರಿಸಿದೆ. ಇವನು ಹೋಗತಾ ಏಳುಮಂದಿ ವಸುಗಳು ೧೮ ನೇ ಕಕ್ಷದವರೆಂದು ತಿಳೀಬೇಕು. ಈ ಉಳಿದ ಏಳು ವಸುಗಳೊಳಗೆ ಅವತಾರಗಳು ಇರೋ ವಿವರ ಹೇಳತಾರೆ. ದ್ಯುನಾಮ ವಸು–ಏಳನೇ ವಸು ಆದ ದ್ಯುನಾಮಕ ವಸು, ಭೀಷ್ಮಾರ್ಯ–ಭೀಷ್ಮಾಚಾರ್ಯರು, ಬ್ರಹ್ಮಯುತ–ಈ ಭೀಷ್ಮಾಚಾರ್ಯರು ಬ್ರಹ್ಮದೇವರ ಆವೇಶಯುತರು. ದ್ರೋಣನಾಮಕ–ದ್ರೋಣನಾಮಕ ವಸು ಅವತಾರ ದಾವದೆಂದರೆ, ನಂದಗೋಪ–ನಂದಗೋಪ ಎಂತ ಅವತಾರಮಾಡಿದ. ಪ್ರಧಾನ–ಎಂಟು ವಸುಗಳಲ್ಲಿ ಶ್ರೇಷ್ಠನಾದ, ಅಗ್ನಿಯನುಳಿದು–ಅಗ್ನಿ ಎಂಬ ವಸು ವ್ಯತಿರಿಕ್ತ, ಏಳು–ಉಳಿದ ಏಳು ವಸುಗಳು, ಜ್ಞಾನಾದಿಗುಣದಿಂದ–ಜ್ಞಾನಾದಿಗುಣಗಳಿಂದ, ತಮ್ಮೊಳಗೆ–ತಮ್ಮೊಳಗೆ ತಾವು ಎಲ್ಲರೂ, ಸಮಾನರೆನಿಪರು–ಸಮಾನರು ಎಂತ ಕರಿಸತಾರೆ. ಇಲ್ಲಿಗೆ ಅಷ್ಟವಸುಗಳ ವಿಚಾರ ಮುಗಿಯಿತು. ಇನ್ನು ಏಕಾದಶ ರುದ್ರರ ವಿಚಾರ ಹೇಳತಾರೆ.

**ಭೀಮ ರೈವತ ಓಜಜೈಕಪ ।**
**ದಾ ಮಹನ್ ಬಹುರೂಪಕನು ಭವ ।**
**ವಾಮ ಉಗ್ರ ವೃಷಾಕಪಿಯಹಿರ್ಬುಧ್ನಿ ಎನುತಿಪ್ಪ ॥**
**ಈ ಮಹಾತ್ಮರ ಮಧ್ಯದೊಳಗೆ ಉ ।**
**ಮಾಮನೋಹರನುತ್ತಮನು ದಶ ।**
**ನಾಮಕರು ಸಮರೆನಿಸಿಕೊಂಬರು ತಮ್ಮೊಳೆಂದೆಂದು ॥ ೨೬ ॥**

ಏಕಾದಶ ರುದ್ರರ ನಾಮಗಳ ಹೇಳತಾರೆ.

೧. ಭೀಮ–ಭೀಮ (೯)
೨. ರೈವತ–ರೈವತ (೧೦)
೩. ಓಜ–ಓಜ (೧೧)
೪. ಅಜೈಕಪದಾ–ಅಜೈಕಪಾತ್ (೧೨)
೫. ಮರ್ಹ–ಮಹಾ೯ (೧೩)
೬. ಬಹುರೂಪಕನು–ಬಹುರೂಪಕನು (೧೪)
೭. ಭವ–ಭವ (೧೫)
೮. ವಾಮ–ವಾಮ (೧೬)
೯. ಉಗ್ರ–ಉಗ್ರ (೧೭)
೧೦. ವೃಷಾಕಪಿಯು–ವೃಷಾಕಪಿ (೧೮)
೧೧. ಅಹಿರ್ಬುಧ್ನಿ–ಅಹಿರ್ಬುಧ್ನಿ (೧೯)

ರುದ್ರರು ೧೧ ಮಂದಿ. ಇವರಲ್ಲಿ ೫ ನೇ ಕಕ್ಷದಲ್ಲಿ ಹೇಳಿದ ಉಮಾಪತಿ ರುದ್ರ ಒಬ್ಬನು ಹೋಗತ ಉಳಿದವರು ೧೦ ಮಂದಿ, ಎನುತಿಪ್ಪ–ಈ ಪ್ರಕಾರ ನಾಮಗಳಿಂದ ಕರಿಸತಕ್ಕ, ಈ ಮಹಾತ್ಮರ–ಈ ಹನ್ನೊಂದುಮಂದಿ ಮಹಾತ್ಮರ, ಮಧ್ಯದೊಳಗೆ–ಮಧ್ಯದಲ್ಲಿ, ಉಮಾಮನೋಹರನು–೮ ನೇ ಸಂಖ್ಯಾದವನಾದ ಪಾರ್ವತೀಪತಿ ರುದ್ರ ದೇವರು, ಇವಗೆ 'ವಾಮ' ಎಂತ ನಾಮ, ಉತ್ತಮನು–ಶ್ರೇಷ್ಠನಾದವನು. ಈ ರುದ್ರ ದೇವರು ಐದನೇ ಕಕ್ಷದಲ್ಲೇ ಇದ್ದಾರೆ. ಆ ಕಕ್ಷದಲ್ಲೇ ಅವರ ಅವತಾರಗಳ ಹೇಳಿದೆ. ದಶನಾಮಕರು – ಅವಶಿಷ್ಟ ಹತ್ತುಮಂದಿ ರುದ್ರರು, ತಮ್ಮೊಳು – ತಮ್ಮೊಳಗೆ ತಾವು, ಎಂದೆಂದು–ಅನಾದ್ಯನಂತಕಾಲಕ್ಕೂ, ಸಮರೆನಿಸಿಕೊಂಬರು–ಸಮಾನರು ಎಂತ ಕರಸಿ ಕೊಳ್ಳಲ್ಪಡುತ್ತಾರೆ.

**ಭೂರ್ಯಜೈಕಪದಾಹ್ವಹಿರ್ಬು ।**
**ಧ್ನೀರಯಿದು ರುದ್ರಗಣ ಸಂಯುತ ।**
**ಭೂರಿಶ್ರವನೆಂದೆನಿಪ ಶಲ ವಿರುಪಾಕ್ಷ ನಾಮಕನು ॥**
**ಸೂರಿಕೃಪ ವಿಷ್ಕಂಭ ಸಹದೇ ।**
**ವಾ ರಣಾಗ್ರಣಿ ಸೋಮದತ್ತನು ।**
**ಶಾ ರಚಿಸಿದ ದ್ವಿರೂಪ ಧರೆಯೊಳು ಪತ್ರತಾಪಕನು ॥ ೨೭ ॥**

ದಶರುದ್ರರೊಳಗೆ ಅವತಾರ ಹೇಳತಾರೆ.

ದ್ವಿರೂಪ– ದ್ವಿ–ಎರಡು ಪ್ರಕಾರವಾಗಿ ರೂಪ–ಅವತಾರರೂಪಗಳು ಉಳ್ಳವ, ಅಹಿರ್ಬುಧ್ನಿಯು. ಇದರ ವಿವರ ಮುಂದೆ ಹೇಳುತಾರೆ. ೧–ಐದು (೫) ಒಂದು, ೧–ಮೂರು (೩) ಒಂದು, ಅಂತು ಎರಡು. (ಎರಡಾವರ್ತಿ ಅವತಾರವಾದಾಗ ಮೊದಲು ಐದು ರೂಪ, ಎರಡನೇ ಸಾರಿ ಮೂರು ರೂಪ), ಅಜೈಕಪದಾಹ್ವ–ನಾಲ್ಕನೇ ಸಂಖ್ಯಾವನಾದ ಅಜೈಕಪದ ಎಂತ ನಾಮಾಂಕಿತನಾದ ರುದ್ರದೇವರ ಅವತಾರ, ಭೂರಿ–ಭೂರಿ ಎಂತ ಒಂದವತಾರ ಮಾತ್ರವೆ. ಅಹಿರ್ಬುಧ್ನಿ–ಹನ್ನೊಂದನೇ ಸಂಖ್ಯಾದವನಾದ ಅಹಿರ್ಬುಧ್ನಿ ಅವತಾರಗಳು, ಧರೆಯೊಳೀರೈದು–ಭೂಮಿಯೊಳು ಆದದ್ದು ಎರಡಾವರ್ತಿ. ಮೊದಲು ಐದು ಅವತಾರಗಳ ವಿವರ, ಭೂರಿಶ್ರವನು–ಭೂರಿಶ್ರವನು ಎಂತಲೂ, ಶಲ–ಶಲ ಎಂತಲೂ, ವಿರುಪಾಕ್ಷನಾಮಕನು-ವಿರೂಪಾಕ್ಷ ಎಂತಲೂ, ಸೂರಿಕೃಪ–ಜ್ಞಾನಿಗಳಾದ ಕೃಪಾಚಾರ್ಯರು ಎಂತಲೂ, ವಿಷ್ಕಂಭ–ವಿಷ್ಕಂಭ ಎಂತಲೂ, ಈ ಪ್ರಕಾರ ಐದು ಅವತಾರಗಳು. ಈ ಅಹಿರ್ಬುಧ್ನಿಗೆ ಎರಡನೇ ಆವರ್ತಿ ಮತ್ತೊಂದು ಪ್ರಕಾರ ಅವತಾರಗಳು, ಸಹದೇವಾ–ಸಹದೇವ ಎಂತ ಅವತಾರ, ರಣಾಗ್ರಣಿ ಸೋಮದತ್ತನು–ಯುದ್ಧದಲ್ಲಿ ಶ್ರೇಷ್ಠನಾದ ಸೋಮದತ್ತ ಎಂತ ಅವತಾರ, ಅಂತೂ ಮೂರು, ಗಣ–ಐದು ಗಣ ಒಂದು, ಮೂರು ಗಣ ಒಂದು ಅಂತು ಈ ಎರಡು ಗಣವೂ, ರುದ್ರ–ಉಮಾಪತಿಯಾದ ರುದ್ರದೇವರ ಆವೇಶದಿಂದ, ಸಂಯುತ–ಯುಕ್ತವಾದದ್ದು. ಪತ್ರತಾಪಕನು–ಪತ್ರತಾಪಕನೆಂಬ ರುದ್ರದೇವರು, ತಾ ರಚಿಸಿದ–ಅಹಿರ್ಬುಧ್ನಿ ಎಂಬ ಹನ್ನೊಂದನೇ ರುದ್ರದೇವರು ತಾವು ಈ ಪ್ರಕಾರ ಎರಡು ವಿಧದಿಂದ ಅವತಾರಗಳ ಮಾಡಿದರೆಂತ ತಾತ್ಪರ್ಯ. ಕಾಲಭೇದದಿಂದ ಗಣಭೇದವು ಎಂದರೆ, ಯುಗಭೇದ ಎಂತ ತಾತ್ಪರ್ಯ. ಎಂದೆನಿಪ–ಅಹಿರ್ಬುಧ್ನಿ ಈ ಪ್ರಕಾರ ಅವತಾರಗಳುಳ್ಳವ ಎಂತ ತಿಳಿಯಬೇಕು.

**ದೇವಶಕ್ರನುರುಕ್ರಮಾ ಮಿ ।**
**ತ್ರಾ ವರುಣ ಪರ್ಜನ್ಯ ಭಗ ಪೂ ।**
**ಷಾ ವಿವಸ್ವನು ಸವಿತೃ ಧಾತಾ ಅರ್ಯಮ ತ್ವಷ್ಟೃ ॥**
**ದೇವಕೀಸುತನಲಿ ಸವಿತೃ ವಿ ।**
**ಭಾವಸುಸುತ ಭಾನು ಎನಿಸುವ ।**
**ಜ್ಞಾವನಪಯುತ ವೀರಸೇನನು ತ್ವಷ್ಟೃನಾಮಕನು ॥ ೨೮ ॥**

ದ್ವಾದಶಾದಿತ್ಯರ ವಿಚಾರ ಹೇಳುತಾರೆ.

ದೇವ ಶಕ್ರನು–ಇಂದ್ರದೇವನು (೨೦–೧), ಉರುಕ್ರಮಾ–ಉರುಕ್ರಮ (೨೧–೨), ಮಿತ್ರಾ–ಮಿತ್ರ (೨೨–೩), ವರುಣ–ವರುಣನು (೨೩–೪), ಪರ್ಜನ್ಯ–ಪರ್ಜನ್ಯ (೨೪–೫), ಭಗ–ಭಗ (೨೫–೬), ಪೂಷಾ–ಪೂಷಾ (೨೬–೭), ವಿವಸ್ವನು–ವಿವಸ್ವಾನ್ (೨೭–೮), ಸವಿತೃ–ಸವಿತೃ (೨೮–೯), ಧಾತಾ–ಧಾತಾ (೨೯–೧೦), ಅರ್ಯಮ–ಅರ್ಯಮ (೩೦–೧೧), ತ್ವಷ್ಟೃ–ತ್ವಷ್ಟೃ (೩೧–೧೨), ಈ ರೀತಿ ದ್ವಾದಶಾದಿತ್ಯರು.

ಇವರಲ್ಲಿ ಅನ್ಯಕಕ್ಷದವರು ಆರು ಮಂದಿ ಹೋಗತಾ ಉಳಿದವರು ಆರು ಮಂದಿ ಈ ಕಕ್ಷದವರು. ಈ ಪ್ರಕಾರ ದ್ವಾದಶಾದಿತ್ಯರಲ್ಲಿ ಅನ್ಯ ಕಕ್ಷದವರು ಆರುಮಂದಿ ಹೋಗತ, (೧-೧ ಕಕ್ಷ) ಉರುಕ್ರಮನಾಮಕ ಸೂರ್ಯ ಸಾಕ್ಷಾತ್ ಪರಮಾತ್ಮ, (೨-೮ ಕಕ್ಷ) ಶಕ್ರನಾಮಕ ಸೂರ್ಯ ಇಂದ್ರದೇವರು, (೩-೧೨ ಕಕ್ಷ) ವಿವಸ್ವಾನ್ ನಾಮಕ ಸೂರ್ಯ, (೪-೧೩ ಕಕ್ಷ) ವರುಣನಾಮಕ ಸೂರ್ಯ, (೫-೧೭ ಕಕ್ಷ) ಮಿತ್ರನಾಮಕ ಸೂರ್ಯ, (೬-೨೦ ಕಕ್ಷ) ಪರ್ಜನ್ಯನಾಮಕ ಸೂರ್ಯ, ಅಂತು ಈ ಆರು ಮಂದಿ ಅನ್ಯಕಕ್ಷದವರು. ಉಳಿದ ಆರು ಮಂದಿ ವರ್ತಮಾನಕಕ್ಷದವರು. ಅನ್ಯಕಕ್ಷದವರ ಅವತಾರಗಳ ಆಯಾ ಕಕ್ಷದಲ್ಲಿ ಹೇಳಿದೆ. ವರ್ತಮಾನ ೧೮ನೇ ಕಕ್ಷದವರಾದ ಆರು ಮಂದಿ ಒಳಗೆ ಅವತಾರಮಾಡಿದವರನ್ನ ಹೇಳತಾರೆ. ಸವಿತೃ—೯ನೇ ಸಂಖ್ಯಾದವನಾದ ಸವಿತೃನಾಮಕ, ವಿಭಾವಸು—ಸೂರ್ಯನು—ದೇವಕೀಸುತನಲಿ – ದೇವಕೀಪುತ್ರನಾದ ಶ್ರೀಕೃಷ್ಣದೇವರಲ್ಲಿ, ಸುತ—ಪುತ್ರನಾದ, ಭಾನು ಎನಿಸುವ—ಭಾನು ಎಂತ ಕರಿಸೋವನಾಗತಾನೆ. ತ್ವಷ್ಟೃನಾಮಕನು—೧೨ನೇ ಸಂಖ್ಯಾದವನಾದ ತ್ವಷ್ಟೃನಾಮಕ ಸೂರ್ಯನು, ಜ್ಯಾವನಪ—ಜವನ ಸಂಬಂಧಿ ಜ್ಯಾವನ ಎಂದರೆ, ಯಮದೂತರು ಎಂತ ತಾತ್ಪರ್ಯ. ಈ ಯಮದೂತರನ್ನು ಪಾಲಿಸತಕ್ಕವ ಯಮದೇವರು. ಈ ಯಮದೇವರ, ಯುತ—ಆವೇಶದಿಂದ ಯುಕ್ತನಾದ, ವೀರಸೇನನು—ವೀರಸೇನ ಎಂತ ಅವತಾರಮಾಡಿದನು.

**ಎರಡಧಿಕ ದಶ ಸೂರ್ಯರೊಳು ಮೂ ।**
**ರೆರಡು ಜನರುತ್ತಮ ವಿವಸ್ವಾನ್ ।**
**ವರುಣ ಶಕ್ರನುರುಕ್ರಮನು ಪರ್ಜನ್ಯ ಮಿತ್ರಾಖ್ಯ ॥**
**ಮರುತನಾವೇಶಯುತ ಪಾಂಡೂ ।**
**ವರ ಪರಾವಹನೆಂದೆನಿಪ ಕೇ ।**
**ಸರಿ ಮೃಗಪ ಸಂಪಾತಿ ಶ್ವೇತತ್ರಯರು ಮರುದಂಶ ॥ ೨೯ ॥**

ದ್ವಾದಶಾದಿತ್ಯರಲ್ಲಿ ಉತ್ತಮರಾದವರನ್ನೂ, ಹಾಗೇ ಮರುತರ ವಿಚಾರವನ್ನೂ ಹೇಳತಾರೆ.

ಎರಡಧಿಕದಶ—ಪೂರ್ವೋಕ್ತರಾದ ಹನ್ನೆರಡು ಸಂಖ್ಯಾತರಾದ, ಸೂರ್ಯರೊಳು—ಸೂರ್ಯರೊಳಗೆ, ವಿವಸ್ವಾನ್—ವಿವಸ್ವಾನ್ ಎಂಬ ಸೂರ್ಯ (೧), ವರುಣ—ವರುಣನೆಂಬೋ ಸೂರ್ಯ (೨), ಶಕ್ರನು—ಶಕ್ರಸಾಂಕೇತನಾದ ಇಂದ್ರನೆಂಬೋ ಸೂರ್ಯ (೩), ಉರುಕ್ರಮನು – ಉರುಕ್ರಮನೆಂಬೋ (ಶ್ರೀ ಪರಮಾತ್ಮನೆಂಬೋ) ಸೂರ್ಯ (೪), ಪರ್ಜನ್ಯ—ಪರ್ಜನ್ಯನೆಂಬೋ ಸೂರ್ಯ (೫), ಮಿತ್ರಾಖ್ಯ—ಮಿತ್ರನೆಂಬೋ ಸೂರ್ಯನು (೬), ಮೂರೆರಡು ಜನರು—ಅಂತೂ ಈ ಉಕ್ತ ಆರು ಜನರು ಅನ್ಯಕಕ್ಷದವರು. ಇವರೊಳಗೆ, ಉತ್ತಮ—ಉತ್ತಮರಾದವರು ಎಂದರ ೧೮ನೇ ಕಕ್ಷದವರಿಗಿಂತಲೂ ಉತ್ತಮರಾದವರು ೫ ಮಂದಿ, ೧೮ನೇ ಕಕ್ಷದವರಿಗಿಂತಲೂ ಅವರನಾದವ ಒಬ್ಬ, ಅಂತು ಆರು ಮಂದಿ.

ಪರ್ಜನ್ಯನೆಂಬುವನೇ ಅವರನಾದವನು. ಉಳಿದ ೬ ಮಂದಿ ಸಮಾನರು, ಈ ೧೮ನೇ ಕಕ್ಷದಲ್ಲಿರತಕ್ಕವರೇವೆ. ಇಲ್ಲಿಗೆ ಆದಿತ್ಯರ ವಿಚಾರ ಮುಗಿಯಿತು.

ಮರುತರ ವಿಚಾರ ಮತ್ತು ನಾಮಗಳ ವಿವರ :—

| | | |
|---|---|---|
| ೧. ೩೨–ಪ್ರಾಣ | ೧೭. ೪೮–ಶಂಕು | ೩೩. ೬೪–ಸೌಮ್ಯ |
| ೨. ೩೩–ಅಪಾನ | ೧೮. ೪೯–ಕಾಲ | ೩೪. ೬೫–ಕಪಿ |
| ೩. ೩೪–ವ್ಯಾನ | ೧೯. ೫೦–ಶ್ವಾಸ | ೩೫. ೬೬–ಜಡ |
| ೪. ೩೫–ಉದಾನ | ೨೦. ೫೧–ನಲ | ೩೬. ೬೭–ಮಂಡೂಕ |
| ೫. ೩೬–ಸಮಾನ | ೨೧. ೫೨–ಅನಿಲ | ೩೭. ೬೮–ಸಂಹೃತ |
| ೬. ೩೭–ನಾಗ | ೨೨. ೫೩–ಪ್ರತಿಭ | ೩೮. ೬೯–ಸಿದ್ಧ |
| ೭. ೩೮–ಕೂರ್ಮ | ೨೩. ೫೪–ಕುಮುದ | ೩೯. ೭೦–ರಕ್ತ |
| ೮. ೩೯–ಕೃಕಲ | ೨೪. ೫೫–ಕಾಂತ | ೪೦. ೭೧–ಕೃಷ್ಣ |
| ೯. ೪೦–ದೇವದತ್ತ | ೨೫. ೫೬–ಶುಚಿ | ೪೧. ೭೨–ಪಿಕ |
| ೧೦. ೪೧–ಧನಂಜಯ | ೨೬. ೫೭–ಶ್ವೇತ | ೪೨. ೭೩–ಶುಕ |
| ೧೧. ೪೨–ಆವಹ | ೨೭. ೫೮–ಅಜಿತ | ೪೩. ೭೪–ಯತಿ |
| ೧೨. ೪೩–ಪರಾವಹ | ೨೮. ೫೯–ಗುರು | ೪೪. ೭೫–ಭೀಮ |
| ೧೩. ೪೪–ಸಂವಹ | ೨೯. ೬೦–ಝುಂಝು | ೪೫. ೭೬–ಹನು |
| ೧೪. ೪೫–ಶಂಯು | ೩೦. ೬೧–ಸಂವರ್ತಕ | ೪೬. ೭೭–ಪಿಂಗ |
| ೧೫. ೪೬–ಉದ್ವಹ | ೩೧. ೬೨–ಕೀಲ | ೪೭. ೭೮–ಕಂಪನ |
| ೧೬. ೪೭–ವಿವಹ | ೩೨. ೬೩–ಜಿತ | |

ಅಂತು ಮರುತರು ೪೭ ಮಂದಿ. ಮರುದಂಶ–ಈ ನಾಲ್ವತ್ತೇಳು ಮರುತರ ಒಳಗೆ ಅಂಶ ಸಾಂಕೇತ ಅವತಾರಗಳು ಇರತಕ್ಕವರ ನಾಮಗಳ ವಿವರ. ಪರಾವಹನು–೧೨ನೇ ಸಂಖ್ಯಾದ ಪರಾವಹನೆಂಬ ಮರುತನ ಅವತಾರ, ವರ ಪಾಂಡೂ–ಉತ್ತಮನಾದ ಪಾಂಡುಚಕ್ರವರ್ತಿ, ಮರುತನ–ಇವನು ಶ್ರೀಪ್ರಧಾನ ವಾಯುದೇವರ, ಆವೇಶಯುತ–ಆವೇಶದಿಂದ ಯುಕ್ತನಾದವ, ಎಂದೆನಿಪ–ಎಂತ ಎನಿಸೋವನಾಗತಾನೆ. ಶ್ವೇತ–೨೬ನೇ ಸಂಖ್ಯಾ ಶ್ವೇತನಾಮಕ ಮರುತನ ಅವತಾರ, ಕೇಸರಿಮೃಗಪ–ಒಂದು ಕೇಸರಿಮೃಗ ಎಂತಲೂ, ಸಂಪಾತಿ–ಒಂದು ಸಂಪಾತಿ ಎಂತಲೂ, ಅಂತು ಎರಡು ಅವತಾರ. ತ್ರಯರು–ಪೂರ್ವೋಕ್ತ ಪರಾವಹನ ಅಂಶ ಒಂದು, ಶ್ವೇತನ ಅಂಶಗಳು ಎರಡು, ಅಂತು ಮೂರು ಅಂಶಗಳು ಎಂತ ತಾತ್ಪರ್ಯ.

**ಪ್ರತಿಭವಾತನು ಚೇಕಿತನು ವಿ ।**
**ಪೃಥು ಎನಿಸುವನು ಸೌಮ್ಯ ಮಾರುತ ।**
**ವಿತತ ಶರ್ವೋತ್ತುಂಗ ಗಜನಾಮಕರು ಪ್ರಾಣಾಂಶ ॥**

**ದ್ವಿತಿಯಪಾನ ಗವಾಕ್ಷ ಗವಯುನು ।**
**ತೃತಿಯ ವ್ಯಾನ ಉದಾನ ವೃಷಪ ।**
**ರ್ವತುಳ ಶರ್ವತ್ರಾತ ಗಂಧಸುಮಾದನರು ಸಮನ ॥ ೩೦ ॥**

ಅವಶಿಷ್ಟ ಮರುತರ ವಿಚಾರ ಹೇಳತಾರೆ.

ಪ್ರತಿಭವಾತನು—ಪ್ರತಿಭವಾತನು (೧), ಚೇಕಿತನು—ಚೇಕಿತನು (೨), ವಿಸ್ಪೃಥು ಎನಿಸುವನು—ವಿಸ್ಪೃಥು ಎನಿಸತಕ್ಕವನು (೩), ಸೌಮ್ಯ – ಸೌಮ್ಯ ಎನತಕ್ಕವನು (೪), ಮಾರುತ—ಮಾರುತ ಎನತಕ್ಕವನು (೫), ಪಿತತ—ಪಿತತ ಎನತಕ್ಕವನು (೬), ಶರ್ವೋತ್ತುಂಗ—ಶರ್ವೋತ್ತುಂಗ ಎನತಕ್ಕವನು (೭), ಗಜನಾಮಕರು—ಗಜನಾಮಕರು (೮) ಈ ಎಂಟು ಮಂದಿಗಳು, ಪ್ರಾಣನಾಮಕ ಮರುತನ ಅಂಶಗಳು ಎಂತ ತಿಳಿಯಬೇಕು. ದ್ವಿತಿಯ—ಎರಡನೇ ಸಂಖ್ಯಾದವನಾದ, ಅಪಾನ—ಅಪಾನನಾಮಕ ಮರುತನ ಅಂಶ ದಾವದೆಂದರೆ, ಗವಾಕ್ಷ—ಗವಾಕ್ಷನೆಂಬೋ ಅವತಾರ ಒಂದು, ತೃತಿಯವ್ಯಾನ—ಮೂರನೇ ಸಂಖ್ಯಾದವನಾದ ವ್ಯಾನನಾಮಕ ಮರುತನ ಅಂಶ ದಾವುದೆಂದರೆ. ಗವಯುನು—ಗವಯು ಎನತಕ್ಕ ಅವತಾರ, ಒಂದು, ಉದಾನ—ನಾಲ್ಕನೇ ಸಂಖ್ಯಾದವನಾದ ಉದಾನನಾಮಕ ಮರುತನ ಅಂಶ ದಾವುದೆಂದರೆ, ವೃಷಪರ್ವ—ವೃಷಪರ್ವ ಎನತಕ್ಕ ಅವತಾರ ಒಂದು, ಸಮನ—ಐದನೇ ಸಂಖ್ಯಾದವನಾದ ಸಮಾನನಾಮಕ ಮರುತನ ಅಂಶಗಳು ದಾವುವೆಂದರೆ, ಅತುಳ—ಅತುಳ ಎಂತ ಅವತಾರ (೧), ಶರ್ವತ್ರಾತ—ಶರ್ವತ್ರಾತ ಅವತಾರ (೨), ಗಂಧ—ಗಂಧನಾಮಕ ಅವತಾರ (೩), ಸುಮಾದನರು—ಸುಮಾದನ ಎಂತ ಅವತಾರ (೪), ಅಂತು ಈ ನಾಲ್ಕು ಅವತಾರ ಸಮಾನವಾಯುವಿನ ಅವತಾರಗಳು ಎಂತ ತಾತ್ಪರ್ಯ.

**ಐವರೊಳಗೀ ಕುಂತಿಭೋಜನು ।**
**ಆವಿನಾಮಕ ನಾಗ ಕೃಕಲನು ।**
**ದೇವದತ್ತ ಧನಂಜಯರು ಅವತಾರವರ್ಜಿತರು ॥**
**ಆವಹೋದ್ವಹ ವಿವಹ ಸಂವಹ ।**
**ಪ್ರಾವಹಿಪತಿ ಮರುತ ಪ್ರವಹನಿ ।**
**ಗಾವಕಾಲಕು ಕಿಂಚಿದಧಮರು ಮರುದ್ಗಣರೆಲ್ಲ ॥ ೩೧ ॥**

ಇನ್ನೂ ಅವಶಿಷ್ಟ ಮರುತರ ವಿಚಾರ ಹೇಳತಾರೆ.

ನಾಗ—ನಾಗನಾಮಕ ಮರುತ, ಕೃಕಲನು—ಕೃಕಲನಾಮಕ ಮರುತ, ದೇವದತ್ತ—ದೇವದತ್ತನಾಮಕ ಮರುತ, ಧನಂಜಯರು—ಧನಂಜಯನಾಮಕ ಮರುತ ಇವರು ನಾಲ್ಕು ಮಂದಿ, ಆವಿನಾಮಕ—ಆವಿ ಎಂದರೆ ಕೂರ್ಮನಾಮಕ ಮರುತ, ಈ ಐವರೊಳಗೆ—ಅಂತು ಈ ಐದು ಮಂದಿ ಮರುತರ ಒಳಗೆ ಆವಿನಾಮಕ ಕೂರ್ಮನ ಅವತಾರ, ಈ ಕುಂತಿ ಭೋಜನು—ಕುಂತೀದೇವೇರಿಗೆ ತಂದಿಯಾದ ಕುಂತೀಭೋಜರಾಯ ಎಂತ ಅವತಾರ

ಮಾಡಿದನು. ಅವತಾರವರ್ಜಿತರು–ಅವಶಿಷ್ಟ ಪೂರ್ವೋಕ್ತ ನಾಗಾದಿ ನಾಲ್ಕು ಮಂದಿ ಮರುತರು ಅವತಾರಮಾಡೋವರಾಗಲಿಲ್ಲ. ಕಿಂಚಿದಧಮರು–ಮರುದ್ಗಣದೊಳಗೆ ವಿದ್ಯಮಾನರಾದ ಪ್ರಾಣಾದಿ ಪಂಚ ದಾಸಪ್ರಾಣರಿಗಿಂತ ಉಳಿದ ನಲವತ್ತೆರಡುಮಂದಿ ಮರುತರು ಕಿಂಚಿದಧಮರು. ಈ ನಾಲ್ವತ್ತೆರಡು ಮಂದಿಗಿಂತಲೂ, ಪ್ರಾಣಾದಿ ಪಂಚಪ್ರಾಣರು ಕಿಂಚಿದಧಿಕರು ಎಂತ ತಾತ್ಪರ್ಯ. ಪ್ರಾವಹಿ–ಪ್ರವಹಮಾರುತನ ಪತ್ನಿ, ಪತಿ–ಈ ಪ್ರಾವಹೀದೇವೇರಿಗೆ ಪತಿಯಾದ, ಮರುತಪ್ರವಹನಿಗೆ–ಪ್ರವಹಮಾರುತನಿಗೆ, ಇವನು ೧೧ನೇ ಕಕ್ಷದವನು ; ದಿಕ್ಪ್ರದರ್ಶನದಿಂದ, ಈ ಪ್ರವಹಮಾರುತ ಒಂಭತ್ತನೇ ಕಕ್ಷದವರಾದ ಅಹಂಕಾರ ಪ್ರಾಣದೇವರು, ಮೂರನೇ ಕಕ್ಷದವರಾದ ಪ್ರಧಾನ ವಾಯುದೇವರು, ಅಂತು ಈ ಮೂರು ಮಂದಿ ಸೇರಿ (೫೦) ಪಂಚಾಶನ್ಮರುತರು ಎಂತಲೂ, ಪ್ರಧಾನ ವಾಯುದೇವರ ವ್ಯತಿರಿಕ್ತ ಏಕೋನಪಂಚಾಶನ್ಮರುತರು ಎಂತಲೂ ಗ್ರಂಥಾಂತರಗಳಲ್ಲಿ ಪ್ರಯೋಗವದೆ. ಅಂತು ಈ ಹದಿನೆಂಟನೇ ಕಕ್ಷದಲ್ಲಿ ಇರತಕ್ಕ ಮರುತರು ನಾಲ್ವತ್ತೇಳು ಮಂದಿಯೇವೇ, ಅಧಿಕವಿಲ್ಲ. ಆವಹ–ಮರುತರು ಪೂರ್ವದಲ್ಲಿ ಉಕ್ತರಾದವರು ನಲವತ್ತೇಳು ಮಂದಿಯ ಒಳಗೆ ಪ್ರಾಣಾದಿ ಐದು, ನಾಗಾದಿ ಐದು ಹೋಗತಾ ಉಳಿದ ಹನ್ನೊಂದನೇಯುವ ಆವಹ ಎಂಬ ಮರುತ. ಉದ್ವಹ–ಹದಿನೈದನೇಯುವ ಉದ್ವಹ ಮರುತ, ವಿವಹ–ಹದಿನಾರನೇಯುವ ವಿವಹ ಮರುತ, ಸಂವಹ–ಹದಿಮೂರನೇಯುವ ಸಂವಹ ಮರುತ ಅಂತ ನಾಲ್ಕು ಮಂದಿ. ಇವರೇ ಮೊದಲಾದ ಮೂವತ್ತೇಳು ಮಂದಿಗಳು, ಮರುದ್ಗಣರೆಲ್ಲ–ಪೂರ್ವೋಕ್ತರಾದ, ನಾಗಾದಿ ಐದು, ಪ್ರಾಣಾದಿ ಐದು, ಅಂತು ಹತ್ತು ಮಂದಿ, ಎಲ್ಲಾ ಸೇರಿ ನಲವತ್ತೇಳು ಮಂದಿ ಮರುದ್ಗಣರು ಯಾವತ್ತೂ ಮಂದಿ, ಪ್ರಾವಹೀಪತಿಯಾದ ಪ್ರವಹಮರುತನೇ ಮೊದಲಾದ ಮೂರು ಮಂದಿಗೆ ಅಧಮರು ಎಂತ ತಾತ್ಪರ್ಯ. ಅಧಮಶಬ್ದ ಆವರ್ತನವು. ಆವಕಾಲಕೂ–ಅನಾದ್ಯನಂತಕಾಲಕ್ಕೂ, ಎಂತ ತಾತ್ಪರ್ಯ.

**ಪ್ರಾಣಪಾನ ವ್ಯಾನೋದಾನ ಸ ।**
**ಮಾನರೈವರನುಳಿದು ಮರುತರು ।**
**ಊನರೆನಿಪರು ಹತ್ತು ವಿಶ್ವೇದೇವರಿವರಿಂದ ॥**
**ಸೂನುಗಳು ಎನಿಸುವರು ಐವರು ।**
**ಮಾನಿನೀ ದ್ರೌಪದಿಗೆ ಕೆಲವರು ।**
**ಕ್ಷೋಣಿಯೊಳು ಕೈಕೇಯರೆನಿಪರು ಎಲ್ಲ ಕಾಲದಲಿ ॥ ೩೨ ॥**

ಮರುತರ ವಿಚಾರವೂ, ವಿಶ್ವೇದೇವತೆಗಳ ವಿಚಾರವೂ ಹೇಳತಾರೆ.

ಪ್ರಾಣ – ಮರುತರೊಳಗೆ ಪ್ರತಿಷ್ಠಿತರಾದ ದಾಸಪ್ರಾಣರಾದ ಪ್ರಾಣನಾಮಕ ಮರುತ, ಅಪಾನ–ಅಪಾನಮರುತ, ವ್ಯಾನ–ವ್ಯಾನಮರುತ, ಉದಾನ–ಉದಾನಮರುತ, ಸಮಾನರು–ಸಮಾನಮರುತ ಇವರು, ಐವರನುಳಿದು–ಮರುದ್ಗಣ ಪ್ರತಿಷ್ಠಿತರಾದ ೪೭

ಮಂದಿ ಮರುತರ ಒಳಗೆ, ಪೂರ್ವೋಕ್ತ ಪ್ರಕಾರ ಈ ಐದು ಮಂದಿಯ ಬಿಟ್ಟು, ಮರುತರು—ನಾಲ್ವತ್ತೆರಡು ಮಂದಿ ಮರುತರು, ಊನರೆನಿಸಿಪರು—ಕಿಂಚಿತ್ ಕಡಿಮೆ ಎಂತ ಎನಿಸುತಾರೆ. ಈ ಐದು ಮಂದಿ ಕಿಂಚಿತ್ ಅಧಿಕರು. ಇಲ್ಲಿಗೆ ಮರುತರ ವಿಚಾರ ಮುಗಿಯಿತು. ಇನ್ನು ಮೇಲೆ ವಿಶ್ವೇದೇವತೆಗಳ ನಾಮ, ತಾರತಮ್ಯ, ಅವತಾರಗಳು ಹೇಳುತಾರೆ. ಹತ್ತು ವಿಶ್ವೇದೇವರು—ಹತ್ತು ಮಂದಿ ವಿಶ್ವೇದೇವತೆಗಳು. ಇವರ ನಾಮಗಳು :—

| | |
|---|---|
| ೧. ೭೯—ಪುರೂರವ | ೬. ೮೪—ಲೋಚನ |
| ೨. ೮೦—ಆರ್ದ್ರವ | ೭. ೮೫—ಸತ್ಯ |
| ೩. ೮೧—ಕಾಲ | ೮. ೮೬—ವಸು |
| ೪. ೮೨—ಕಾಮ | ೯. ೮೭—ದಕ್ಷ |
| ೫. ೮೩—ಧುರಿ | ೧೦. ೮೮—ಕ್ರತು |

ಇವರು ಹತ್ತು ಮಂದಿ ವಿಶ್ವೇದೇವತೆಗಳು. ಇವರಿಂದ—ಈ ಹತ್ತು ಮಂದಿ ಅವತಾರಗಳ ವಿವರ. ಮಾನಿನೀ—ಪಂಚಪಾಂಡವರಿಗೆ ಪತ್ನಿಯಾದ, ದ್ರೌಪದಿಗೆ—ದ್ರೌಪದೀದೇವೇರಿಗೆ, ಸೂನುಗಳು ಎನಿಸುವರು—ಐದು ಮಂದಿ ಪುತ್ರರು ಎಂತ ಕರೆಸುವರು. ಕ್ಷೋಣಿಯೊಳು—ಭೂಮಿಯೊಳು, ಕೆಲವರು—ಉಳಿದ ಐದು ಮಂದಿ ಎಂತ ತಾತ್ಪರ್ಯ, ಕೈಕೇಯರೆನಿಸಿಪರು—ಈ ಐದು ಮಂದಿಗಳು ಕೈಕಯದೇಶಾಧಿಪರಾಗಿ. ಕೈಕೇಯರು ಎಂತ ಎನಿಸೋವರಾದರು. ಐವರು—ಪೂರ್ವೋಕ್ತ ದ್ರೌಪದೀಪುತ್ರರು ಐದು ಮಂದಿಗಳು, ಅವರ ನಾಮ ಅವತಾರಗಳ ಮುಂದೆ ಹೇಳುತಾರೆ. ಎಲ್ಲ ಕಾಲದಲಿ—ಪ್ರತಿದಿನ ಕಲ್ಪಿಕರ್ಮ ಇರ್ಪನೆ ಎಂತ ತಾತ್ಪರ್ಯ.

**ಪ್ರತಿವಿಂಧ್ಯ ಶ್ರುತಸೋಮ ಶ್ರುತಕೀ ।**
**ರುತಿ ಶತಾನಿಕ ಶ್ರುತಕರ್ಮ ದ್ರೌ ।**
**ಪತಿ ಕುವರರಿವರೊಳಗೆ ಅಭಿತಾಮ್ರ ಪ್ರಮುಖ ಚಿತ್ರ ॥**
**ರಥನು ಗೋಪ ಕಿಶೋರ ಬಲರೆಂ ।**
**ಬತುಲರೈಗಂಧರ್ವರಿಂದಲಿ ।**
**ಯುತರು ಧರ್ಮ ವೃಕೋದರಾದಿಜರೆಂದು ಕರೆಸುವರು ॥ ೩೩ ॥**

ವಿಶ್ವೇದೇವತೆಗಳ ನಾಮ, ಅವತಾರ ಹೇಳುತಾರೆ.

ಪ್ರತಿವಿಂಧ್ಯ—ಒಂದನೇ ಸಂಖ್ಯಾದವನಾದ ಪುರೂರವ ಎನತಕ್ಕ ವಿಶ್ವೇದೇವತೆಯ ಅವತಾರ ಪ್ರತಿವಿಂಧ್ಯ ಅಂತ ಒಂದು. ಇವನಲ್ಲಿ. ಅಭಿತಾಮ್ರ—ಅಭಿತಾಮ್ರನೆಂಬೋ ಗಂಧರ್ವನ ಆವೇಶ; ಶ್ರುತಸೋಮ—ಎರಡನೇ ಸಂಖ್ಯಾದವನಾದ ಆರ್ದ್ರವ ಎನತಕ್ಕ ವಿಶ್ವೇದೇವತೆಯ ಅವತಾರ ಶ್ರುತಸೋಮ ಎಂತ. ಇವನಲ್ಲಿ, ಚಿತ್ರರಥನು—ಚಿತ್ರರಥ ಎಂಬ ಗಂಧರ್ವನ ಆವೇಶ. ಶ್ರುತಕೀರುತಿ—ಮೂರನೇ ಸಂಖ್ಯಾದವನಾದ ಕಾಲ ಎನತಕ್ಕ ವಿಶ್ವೇದೇವತೆಯ ಅವತಾರ ಶ್ರುತಕೀರ್ತಿ ಎಂತ. ಇವನಲ್ಲಿ, ಗೋಪ—ಗೋಪನಾಮಕ

ಗಂಧರ್ವನ ಆವೇಶ. ಶತಾನಿಕ–ನಾಲ್ಕನೇ ಸಂಖ್ಯಾದವನಾದ ಕಾಮನಾಮಕ ವಿಶ್ವೇದೇವತೆಯ ಅವತಾರ ಶತಾನೀಕ ಎಂತ. ಇವನಲ್ಲಿ, ಕಿಶೋರ – ಕಿಶೋರನಾಮಕ ಗಂಧರ್ವನ ಆವೇಶ. ಶ್ರುತಕರ್ಮ–ಐದನೇ ಸಂಖ್ಯಾದವನಾದ ಧುರೀನಾಮಕ ವಿಶ್ವೇದೇವತೆಯ ಅವತಾರ ಶ್ರುತಕರ್ಮ ಎಂತ. ಇವನಲ್ಲಿ, ಬಲ–ಬಲ ಎಂಬ ಗಂಧರ್ವನ ಆವೇಶ. ಪ್ರಮುಖ–ಅಭಿತಾಮ್ರನೇ ಮೊದಲಾದ, ಐಗಂಧರ್ವರಿಂದಲಿ ಯುತರು–ಪೂರ್ವೋಕ್ತಪ್ರಕಾರ ಐದು ಮಂದಿ ವಿಶ್ವೇದೇವತೆಗಳು, ಐದು ಮಂದಿ ಗಂಧರ್ವರ ಆವೇಶಯುಕ್ತರು. ಎಂಬ–ದ್ರೌಪದೀಪುತ್ರರೆಂಬ ಪ್ರತಿವಿಂಧ್ಯಾದಿ ಐವರು, ಅತುಲರು–ಬಲವಂತರು. ಧರ್ಮ–ಯುಧಿಷ್ಠಿರ ಎನತಕ್ಕ ಧರ್ಮರಾಯ, ವೃಕೋದರ–ಭೀಮಸೇನದೇವರು, ಆದಿಜರೆಂದು–ಆದಿಶಬ್ದದಿಂದ ಅರ್ಜುನ, ನಕುಲ, ಸಹದೇವ ಈ ಮೂರೂ ಮಂದಿ ಗ್ರಾಹ್ಯ. ಅಂತು ಐದು ಮಂದಿ. ಇವರ ದೆಸೆಯಿಂದ ಐದು ಪುತ್ರರು ಪೂರ್ವೋಕ್ತ ಪ್ರಕಾರ ಉತ್ಪನ್ನರಾಗಿದ್ದಾರೆ. ದ್ರೌಪತಿಕುವರರು–ದ್ರೌಪದೀದೇವೇರಿಗೆ ಕುಮಾರರು, ಎಂದು ಕರೆಸುವರು – ಎಂತ ಕರಿಸೋವರಾಗತಾರೆ. ಇವರೊಳಗೆ–ದ್ರೌಪದೀದೇವೇರ ಪುತ್ರರೊಳು, ಪೂರ್ವೋಕ್ತ ಪ್ರಕಾರ ಗಂಧರ್ವರ ಆವೇಶ ತಿಳಿಯಬೇಕೆಂತಲೂ, ಉಳಿದ ಐದು ವಿಶ್ವೇದೇವತೆಗಳು ಕೈಕಯಾಧಿಪರೆಂತಲೂ ತಾತ್ಪರ್ಯ. ಅಂತು ಹತ್ತು ಮಂದಿ ವಿಶ್ವೇದೇವತೆಗಳು, ಇವರ ವಿಚಾರ ಮುಗಿಯಿತು.

**ವಿವಿದ ಮೈಂದರು ನಕುಲ ಸಹದೇ ।**
**ವ ವಿಭು ತ್ರಿಶಿಖಾಶ್ವಿನಿಗಳಲ್ಲಿ ।**
**ದಿವಿಪನಾವೇಶವಿಹುದೆಂದಿಗು ದ್ಯಾವಾ ಪೃಥ್ವಿ ಋಭು ॥**
**ಪವನಸುತ ವಿಶ್ವಕ್ಸೇನನುಮಾ ।**
**ಕುವರ ವಿಘ್ನಪ ಧನಪ ಮೊದಲಾ ।**
**ದವರು ಮಿತ್ರಗೆ ಕಿಂಚಿತಾಧಮರೆನಿಸಿಕೊಳುತಿಹರು ॥ ೩೪ ॥**

ಅವಶಿಷ್ಟರಾದ ಹದಿನೆಂಟನೇ ಕಕ್ಷದವರ ಹೇಳತಾರೆ.

ಅಶ್ವಿನಿಗಳಿಬ್ಬರು { ೧. ೮೯–ನಾಸತ್ಯ ; ೨. ೯೦–ದಸ್ರ ;
೩. ೯೧–ದ್ಯಾವಾ ;
೪. ೯೨–ಪೃಥಿವಿ ;
೫. ೯೩–ಋಭು ;
೬. ೯೪–ಬೃಹಸ್ಪತಿ ;
೭. ೯೫–ಯಮಧರ್ಮರಾಯ ;
೮. ೯೬–ಚಂದ್ರ ;
೯. ೯೭–ಕವ್ಯವಾಹ ;
೧೦. ೯೮–ಪ್ರಧಾನವಾಯುದೇವರು ;
೧೧. ೯೯–ಆಹಂಕಾರಿಕಪ್ರಾಣದೇವರು;
೧೨. ೧೦೦–ಪ್ರವಹವಾಯುದೇವರು.

ಅಂತು ನೂರು ಮಂದಿ. ಈ ಹನ್ನೆರಡು ಮಂದಿ ಒಳಗೆ ಅನ್ಯಕಕ್ಷದವರು ಏಳು ಮಂದಿ ದಾರು ದಾರು ಎಂದರೆ,

| ಸಂಖ್ಯಾ | ನಾಮ | ಕಕ್ಷಸಂಖ್ಯೆ | ಸಂಖ್ಯಾ | ನಾಮ | ಕಕ್ಷಸಂಖ್ಯೆ |
|---|---|---|---|---|---|
| ೧. | ಬೃಹಸ್ಪತಿ | ೧೦ | ೫. | ಚಂದ್ರ | ೧೨ |
| ೨. | ಯಮದೇವರು | ೧೨ | ೬. | ಕವ್ಯವಾಹ | ೧೯ |
| ೩. | ಪ್ರವಹವಾಯು | ೧೧ | ೭. | ಅಹಂಕಾರಿಕಪ್ರಾಣ | ೯ |
| ೪. | ಪ್ರಧಾನವಾಯು | ೩ | | | |

ಈ ಏಳು ಮಂದಿ ಅನ್ಯಕಕ್ಷದವರು ಹೋಗತಾ ಪೂರ್ವೋಕ್ತ ಹನ್ನೆರಡು ಮಂದಿ ಒಳಗೆ ಅವತಾರಗಳ ವಿವರ :—

ಅಶ್ವಿನಿಗಳಲ್ಲಿ—ಪ್ಯಾಲಿ ಉದಹರಿಸಿದ ಅಶ್ವಿನಿದೇವತೆಗಳ ಒಳಗೆ, ಮೊದಲುಸಂಖ್ಯಾ ನಾಸತ್ಯ, ಎರಡನೇ ಸಂಖ್ಯಾ ದಸ್ರ, ಈ ಉಭಯರ ಅವತಾರಗಳು ದಾವ್ರುವೆಂದರೆ ವಿವರ :— ವಿವಿದಮೈಂದರು—ವಿವಿದನೇ ನಾಸತ್ಯ, ಮೈಂದನೇ ದಸ್ರ ; ನಕುಲ—ನಾಸತ್ಯನೇ ನಕುಲ, ಸಹದೇವ—ದಸ್ರನೇ ಸಹದೇವ ; ವಿಭು—ನಾಸತ್ಯನೇ ವಿಭು, ತ್ರಿಶಿಖ—ದಸ್ರನೇ ತ್ರಿಶಿಖ ; ಅಂತು ನಾಸತ್ಯನ ಅವತಾರಗಳು ವಿವಿಧ, ನಕುಲ, ವಿಭು ಎಂತ ಮೂರು ; ದಸ್ರನ ಅವತಾರಗಳು ಮೈಂದ, ಸಹದೇವ, ತ್ರಿಶಿಖ ಎಂತ ಮೂರು. ಈ ಆರು ಮಂದಿ ಒಳಗೆ ಆವೇಶ ದಾವ್ರುದೆಂದರೆ, ದಿವಿಪನ—ಸ್ವರ್ಗಾಧಿಪತಿ ಇಂದ್ರದೇವರ, ಆವೇಶವಿಹುದು—ಆವೇಶ ಇರೋದಾಗಿ ಅದೆ. ಎಂದಿಗೂ—ಅವತಾರ ಉಪರಮವಾಗೋವರಿಗೂ, ಮಧ್ಯೆ ವಿಚ್ಛಿತ್ತಿ ಇಲ್ಲದೆ ಇರ್ತದೆ ಎಂತ ತಾತ್ಪರ್ಯ. ಮತ್ತು ಅಶ್ವಿನೀದೇವತೆಗಳು ಇಬ್ಬರೂ ವಿಯೋಗ ರಹಿತರಾಗಿ, ಸ್ವರೂಪದಲ್ಲಿ ಅವತಾರಗಳಲ್ಲಿ ಇರುತ್ತಾರೆ ಎಂತಲೂ ತಾತ್ಪರ್ಯವೆ. ದ್ಯಾವಾ—ಮೂರನೇ ಸಂಖ್ಯಾದವನಾದ ದ್ಯಾವಾ ಎಂಬೋ, ಪೃಥ್ವಿ—ನಾಲ್ಕನೇ ಸಂಖ್ಯಾ ಪೃಥಿವಿ, ಋಭು— ಐದನೇ ಸಂಖ್ಯಾ ಋಭು, ಆರನೇ ಸಂಖ್ಯಾ ಬೃಹಸ್ಪತಿ ಆರಂಭಮಾಡಿ, ಹನ್ನೆರಡನೇ ಸಂಖ್ಯಾದವರಾದ ಪ್ರವಹವಾಯುದೇವ ಪರ್ಯಂತ, ಏಳುಮಂದಿ ಅನ್ಯಕಕ್ಷ ದಲ್ಲಿ ಉಕ್ತರಾದ್ದರಿಂದ ಹೇಳಲಿಲ್ಲ. ಆದರೂ ಶತಸ್ಥರ ಸಂಖ್ಯಾ ಪೂರ್ತಿ ಆಗಿ ಝಡತಿ ಬರೋದಕ್ಕೋಸ್ಕರ ಸೇರಿಸಿಕೋಬೇಕು. ಅಂತೂ ಇಲ್ಲಿಗೆ ಶತಸ್ಥರ ಸಂಖ್ಯಾ ನೂರು ಸರಿ ಆಯಿತು. ಇದಲ್ಲದೆ ೧೬ನೇ ಕಕ್ಷದವರು, ಪವನಸುತ ವಿಷ್ವಕ್ಸೇನನು—ವಾಯುಪುತ್ರ ನಾದ ವಿಷ್ವಕ್ಸೇನ, ಉಮಾಕುವರ ವಿಘ್ನಪ—ಉಮಾಪುತ್ರ ಗಣೇಶ, ಧನಪ—ಕುಬೇರ, ಅಂತೂ ನೂರಾಮೂರು ಮಂದಿ, ಮೊದಲಾದವರು—ಅನ್ಯಕಕ್ಷದವರು ಹೋಗತ, ವರ್ತಮಾನ ೧೬ನೇ ಕಕ್ಷದವರಾದ ದಶರುದ್ರರೇ ಮೊದಲಾದವರು, ಮಿತ್ರಗೆ—೧೭ನೇ ಕಕ್ಷದವನಾದ ಮಿತ್ರನಾಮಕ ಸೂರ್ಯಗೆ, ಕಿಂಚಿತಾಧಮರು—ವೀಸಗುಣದಿಂದ ಅಧಮರು ಎಂತ, ಎನಿಸಿಕೊಳುತಿಹರು — ಎನಿಸಿಕೊಳ್ಳಲ್ಪಡುತ್ತಾರೆ. ನೂರು ಒಂದು, ಮೂರು ಒಂದು, ಅಂತು ನೂರಾಮೂರಕ್ಕೆ ಅನ್ಯಕಕ್ಷದಲ್ಲಿ ಸೇರಿದವರು ಎಷ್ಟುಮಂದಿ, ವರ್ತಮಾನ ೧೬ನೇ ಕಕ್ಷದವರು ಎಷ್ಟು ಮಂದಿ ಎಂದರೆ ವಿವರಿಸುತ್ತೇವೆ.

| ಅನ್ಯಕಕ್ಷದವರು | ಕಕ್ಷ | ಈ ೧೮ನೇ ಕಕ್ಷದವರು | |
|---|---|---|---|
| ೧. ಉರುಕ್ರಮದೇವರು | ೧೧ | ಹತ್ತು ಜನ ರುದ್ರರು | ೧೦ |
| ೨. ಪುರಂದರ | ೮ | ಏಳು ವಸುಗಳು | ೭ |
| ೩. ಮಿತ್ರನಾಮಕ | ೧೭ | ಆರು ಆದಿತ್ಯರು | ೬ |
| ೪. ವರುಣ | ೧೩ | ಹತ್ತು ವಿಶ್ವೇದೇವತೆಗಳು | ೧೦ |
| ೫. ಪರ್ಜನ್ಯ | ೨೦ | ಎರಡು ಅಶ್ವಿನೀದೇವತೆಗಳು | ೨ |
| ೬. ವಿವಸ್ವಾನ್ (೧–೬: ಆದಿತ್ಯರು) | ೧೨ | ಒಂದು ದ್ಯಾವಾ | ೧ |
| | | ಒಂದು ಋಭು | ೧ |
| ೧. ವಾಮದೇವನೆಂಬ ರುದ್ರ | ೫ | ನಲವತ್ತೇಳು ಮರುತ್ತರು | ೪೭ |
| ೧. ಅಗ್ನಿದೇವರು | ೧೫ | ಒಂದು ಧನಪ | ೧ |
| ೧. ಬೃಹಸ್ಪತಿ | ೧೦ | ಒಂದು ವಿಷ್ವಕ್ಸೇನ | ೧ |
| ೧. ಯಮದೇವರು | ೧೨ | ಒಂದು ಗಣಪ | ೧ |
| ೨. ಚಂದ್ರದೇವರು | ೧೨ | | |
| ೩. ಕವ್ಯವಾಹ (೧–೩: ಪಿತೃತ್ರಯ) | ೧೯ | | |
| ೧. ಪ್ರವಹವಾಯು | ೧೧ | | |
| ೨. ಅಹಂಕಾರಪ್ರಾಣ | ೯ | | |
| ೩. ಪ್ರಧಾನವಾಯು (೧–೩: ಮರುತರು) | ೩ | | |
| ೧. ಪೃಥ್ವೀ | ೨೪ | | |
| ೧೬ ಒಟ್ಟು | | ಒಟ್ಟು | ೮೭ |

೮೭ ಮಂದಿ ೧೮ನೇ ಕಕ್ಷದವರು ; ೧೬ ಮಂದಿ ಬೇರೆ ಬೇರೆ ಕಕ್ಷದವರು ; ಎರಡೂ ಸೇರಿ ಅಂತು ೮೭+೧೬=೧೦೩. ಇಲ್ಲಿಗೆ ೧೮ನೇ ಕಕ್ಷ ಶತಸ್ಥರ ವಿಚಾರ ಮುಗಿಯಿತು. ಇನ್ನುಮೇಲೆ ಕರ್ಮಜರ ವಿಚಾರ ತಾರತಮ್ಯ ಹೇಳತಾರೆ.

**ಪಾವಕಾಗ್ನಿ ಕುಮಾರನೆನಿಸುವ ।**
**ಚ್ಯಾವನರುಚಥ್ಯಮುನಿ ಚಾಕ್ಷುಷ ।**
**ರೈವತ ಸ್ವಾರೋಚಿಷೋತ್ತಮ ಬ್ರಹ್ಮ ರುದ್ರೇಂದ್ರ ॥**
**ದೇವ ಧರ್ಮನು ದಕ್ಷನಾಮಕ ।**
**ಸಾವರಣಿ ಶಶಿಬಿಂದು ಪೃಥು ಪ್ರಿ ।**
**ಯವ್ರತನು ಮಾಂಧಾತ ಗಯನು ಕಕುಸ್ಥ ದೌಷ್ಯಂತಿ ॥ ೩೫ ॥**

ಕರ್ಮಜರ ವಿಚಾರ ಹೇಳುತಾರೆ.

ಅಗ್ನಿಕುಮಾರನೆನಿಸುವ–ಅಗ್ನಿದೇವರಿಗೆ ಪುತ್ರ ಎನಿಸತಕ್ಕ, ಪಾವಕ–ಪಾವಕನು (೧), ಚಾವನರು–ಚ್ಯವನಪುತ್ರರಾದ ಚಾವನರು (೨), ಉಚಥ್ಯಮುನಿ–ಉಚಥ್ಯಮುನಿಗಳು (೩), ಚಾಕ್ಷುಷ–ಚಾಕ್ಷುಷಮನು (೪), ರೈವತ–ರೈವತಮನು (೫), ಸ್ವಾರೋಚಿಷ–ಸ್ವಾರೋಚಿಷಮನು (೬), ಉತ್ತಮ–ಉತ್ತಮಮನು (೭), ಬ್ರಹ್ಮ–ಬ್ರಹ್ಮಸಾವರ್ಣಿಮನು (೮), ರುದ್ರ–ರುದ್ರಸಾವರ್ಣಿಮನು (೯), ಇಂದ್ರ–ಇಂದ್ರಸಾವರ್ಣಿಮನು (೧೦), ದೇವ–ದೇವಸಾವರ್ಣಿಮನು (೧೧), ಧರ್ಮನು–ಧರ್ಮಸಾವರ್ಣಿಮನು (೧೨), ದಕ್ಷಸಾಮಕ–ದಕ್ಷಸಾಮಕಮನು (೧೩), ಸಾವರಣಿ–ಸಾವರ್ಣಿಮನು (೧೪), (ಉಳಿದ ಮೂರು ಮನುಗಳು, ಝಡಿತ್ಯಾ ಬೋಧಾರ್ಥ ಅಧ್ಯಾಹಾರಮಾಡಿ ಹೇಳುತೇವೆ. ೧೫ ತಾಪಸಮನು, ಸ್ವಾಯಂಭುವಮನು, ವೈವಸ್ವತಮನು) ಅಂತು ಮನುಗಳು ಹದಿನಾಲ್ಕು ಮಂದಿ ಒಳಗೆ ಅನ್ಯಕಕ್ಷದವರ ವಿವರ.

| ಅನ್ಯಕಕ್ಷಕ್ಕೆ ಸೇರಿದ ಮನುಗಳು ೩ ಮಂದಿ, | | | ಕಕ್ಷ |
|---|---|---|---|
| ೧೨. ತಾಪಸ ಮನು, ಇವನು ಸಾಕ್ಷಾತ್ ಗುಣಪೂರ್ಣನಾದ ಪರಮಾತ್ಮ | | | ೧ |
| ೧೩. ಸ್ವಾಯಂಭುವ ಮನು | .... | .... | ೧೦ |
| ೧೪. ವೈವಸ್ವತ ಮನು | .... | .... | ೧೬ |

ಉಳಿದ ಹನ್ನೊಂದು ಮಂದಿ ಮನುಗಳು ೧೯ನೇ ಕಕ್ಷಕ್ಕೆ ಸೇರಿದವರು.

೧೧+೩=ಅಂತು ೧೪ ಮನುಗಳು.

ಪೃಥು–ಪೃಥುಚಕ್ರವರ್ತಿ, ಪ್ರಿಯವ್ರತನು–ಪ್ರಿಯವ್ರತರಾಜನು, ಮಾಂಧಾತ–ಮಾಂಧಾತರಾಜನು, ಗಯನು–ಗಯರಾಯನು, ಕಕುಸ್ಥ–ಕುಕುಸ್ಥರಾಯನು, ದೌಷ್ಯಂತಿ–ದೌಷ್ಯಂತಿರಾಯನು, ಶಶಿಬಿಂದು–ಶಶಿಬಿಂದುರಾಯನು.

**ಭರತ ಋಷಭಜ ಹರಿಣಿಜ ದ್ವಿಜ ।**
**ಭರತ ಮೊದಲಾದಖಿಳರಾಯರೊ ।**
**ಳಿರುತಿಹುದು ಶ್ರೀ ವಿಷ್ಣು ಪ್ರಾಣಾವೇಶ ಪ್ರತಿದಿನದಿ ॥**
**ವರ ದಿವಸ್ಪತಿ ಶಂಭುರದ್ಭುತ ।**
**ಕರೆಸುವನು ಬಲಿ ವಿಧೃತ ಧೃತಶುಚಿ ।**
**ನೆರೆ ಖಲೂ ಕೃತಧಾಮ ಮೊದಲಾದಷ್ಟ ಗಂಧರ್ವ ॥ ೩೬ ॥**

ಇನ್ನೂ ಕರ್ಮಜರ ವಿಚಾರವನ್ನೇ ಹೇಳುತಾರೆ.

ಭರತ–ಭರತರಾಜನು, ಋಷಭ–ಋಷಭ ಎಂತ, ಜ–ಉತ್ಪನ್ನನಾದವನು, ಹರಿಣಿ–ಜಿಂಕೆ ಜನ್ಮದಿಂದ, ಜ–ಉತ್ಪನ್ನನಾದವನು, ದ್ವಿಜ–ಬ್ರಾಹ್ಮಣ ಜನ್ಮದಿಂದ ಉತ್ಪನ್ನ

ನಾದವನು, ಭರತ–ಈ ಪ್ರಕಾರ ಜನ್ಮಗಳ ಧರಿಸಿದ ಭರತರಾಜನೇ, ಮೊದಲಾದ– ಆದಿಯಾದ, ಅಖಿಳರಾಯರೊಳು – ಸಮಸ್ತರಾದ ರಾಯರು ನೂರು ಮಂದಿಯಲ್ಲಿ, ಶ್ರೀ ವಿಷ್ಣು ಪ್ರಾಣಾವೇಶ–ಶ್ರೀದೇವೇರ, ಶ್ರೀಪರಮಾತ್ಮನ, ಪ್ರಾಣದೇವರ ಆವೇಶ, ಪ್ರತಿ ದಿನದಿ–ಪ್ರತಿದಿನದಲ್ಲಿ ಅವಿಚ್ಛೇದವಾಗಿ, ಇರುತಿಹುದು–ಇರ್ರೋದಾಗಿ ಇರ್ತದೆ. ತರುವಾಯ (೧೪) ಹದಿನಾಲ್ಕು ಮಂದಿ ಇಂದ್ರರ ವಿಚಾರ; ವರ ದಿವಸ್ಪತಿ–ಶ್ರೇಷ್ಠನಾದ ದಿವಸ್ಪತಿನಾಮಕ ಇಂದ್ರ (೧), ಶಂಭುಃ–ಶಂಭುನಾಮಕ ಇಂದ್ರ (೨), ಅದ್ಭುತ–ಅದ್ಭುತ ನಾಮಕ ಇಂದ್ರ (೩), ಬಲಿ–ಬಲಿಚಕ್ರವರ್ತಿ (೪), ಇವನು, ಕರೆಸುವನು–ಇಂದ್ರ ಎಂತ ಕರೆಸೋವನಾಗತಾನೆ. ವಿಧೃತ–ವಿಧೃತನಾಮಕ ಇಂದ್ರ (೫), ಧೃತಶುಚಿ–ಧೃತಶುಚಿ ನಾಮಕ ಇಂದ್ರ (೬), ಕೃತಧಾಮ–ಕೃತಧಾಮನಾಮಕ ಇಂದ್ರ (೭), ಮೊದಲಾದ–ಈ ಏಳು ಮಂದಿಗಿಂತಲೂ ಉತ್ತಮರಾದವರ ಹೆಸರುಗಳನ್ನು ಅಧ್ಯಾಹಾರದಿಂದ ಹೇಳತೇವೆ.

| | | | | |
|---|---|---|---|---|
| ೧. | ೮. | ಯಜ್ಞನಾಮಕ ಪರಮಾತ್ಮ ಇವನು ಪ್ರಥಮಕಕ್ಷದಲ್ಲಿ ಇದ್ದಾನೆ. ಇವನು ಸಾಕ್ಷಾತ್ ಗುಣಪೂರ್ಣ ಪರಮಾತ್ಮ. | | ೧ ನೇ ಕಕ್ಷ |
| ೨. | ೯. | ರೋಚನನಾಮಕ ಇಂದ್ರ ಇವರು ಜೀವೋತ್ತಮರಾದ ಪ್ರಧಾನ ವಾಯುದೇವರು. | | ೩ ನೇ ಕಕ್ಷ |
| ೩. | ೧೦. | ಸತ್ಯಜಿತುನಾಮಕ ಇಂದ್ರ ಇವನು ಯಮಧರ್ಮರಾಯ ಇವನು ೧೨ ನೇ ಕಕ್ಷದಲ್ಲಿದ್ದಾನೆ. | | ೧೨ ನೇ ಕಕ್ಷ |
| ೪. | ೧೧. | ತ್ರಿಶಿಖ ಇವನು ನಾಸತ್ಯನು | ಇವರು ಅಶ್ವಿನೀ | |
| ೫. | ೧೨. | ವಿಭು, ಇವನು ದಸ್ರನು | ದೇವತೆಗಳು. | |
| | | (ಇವರಿಗೆ ತ್ರಿಶಿಖ ಮತ್ತು ವಿಭು ಎಂತ ಪ್ರತಿನಾಮ.) | | ೧೮ ನೇ ಕಕ್ಷ |
| ೬. | ೧೩. | ಮಂದರದ್ಯುಮ್ನ | ಈ ಎರಡು ಶಚೀಪತಿ | |
| ೭. | ೧೪. | ಪುರಂದರ | ಇಂದ್ರನ ಎರಡು ರೂಪಗಳು | ೮ ನೇ ಕಕ್ಷ |

ಇದೇ ಹತ್ತೊಂಬತ್ತನೇ ಕಕ್ಷಕ್ಕೆ ಸೇರಿದವರು ಉಳಿದ ಏಳು ಮಂದಿ ಇಂದ್ರರು (೭+೭=೧೪ ಮಂದಿ ಇಂದ್ರರು).

ಎಂಟನೇ ಸಂಖ್ಯಾ ಯಜ್ಞನಾಮಕ ಪರಮಾತ್ಮನಾರಭ್ಯ ಹದಿನಾಲ್ಕನೇ ಸಂಖ್ಯಾ ಪುರಂದರನವರೆಗೂ ಏಳು ಮಂದಿ ಇಂದ್ರರು ಅನ್ಯಕಕ್ಷದವರು. ಈ ಕಕ್ಷದವರಲ್ಲಿ ಉಳಿದ ಏಳು ಮಂದಿ ಇಂದ್ರರು ಈ ಕಕ್ಷದವರೇವೇ. ನೆರೆ ಖಲು–ಒಟ್ಟಾಗಿಯೂ ನಿಶ್ಚಯ ವಾಗಿಯೂ, ಅಷ್ಟಗಂಧರ್ವ–ಗಂಧರ್ವರು ಎಂಟು ಮಂದಿ. (ಅವರ ಹೆಸರುಗಳನ್ನು ಅಧ್ಯಾಹಾರದಿಂದ ಹೇಳತೇವೆ. ೧. ಹಾಹಾನಾಮಕ ಗಂಧರ್ವ, ೨. ಹೂಹೂನಾಮಕ ಗಂಧರ್ವ, ೩. ಧೃತರಾಷ್ಟ್ರನಾಮಕ ಗಂಧರ್ವ, ೪. ತುಂಬುರ ನಾಮಕ ಗಂಧರ್ವ, ೫. ಚಿತ್ರರಥಗಂಧರ್ವ, ೬. ವಿಶ್ವಾವಸುಗಂಧರ್ವ, ೭. ಪರಾವಸುನಾಮಕ ಗಂಧರ್ವ, ೮. ವಿದ್ಯಾಧರನಾಮಕ ಗಂಧರ್ವ. ಅಂತೂ ೮ ಮಂದಿ ಗಂಧರ್ವರು.) ಇವರ ಅವತಾರ

ಗಳನ್ನು ೬೯–೪೦ನೇ ಶ್ಲೋಕಗಳಲ್ಲಿ ಹೇಳಿದ್ದಾರೆ. ಅದನ್ನು ಝುಡಿತ್ಯಾಬೋಧಾರ್ಥ ಇಲ್ಲಿ ಉದಹರಿಸುತ್ತೇವೆ.

| ಮೂಲಗಂಧರ್ವ ನಾಮ | ಅವತಾರ | ಆವೇಶ |
|---|---|---|
| ೧. ಹಾಹಾ | ವಿರಾಟರಾಯ | ವಿವಹಮರುತ್ತನ ಆವೇಶ. |
| ೨. ಹೂಹೂ | ೧. ದ್ರುಪದರಾಯ, ೨. ನಕ್ರ | ಅವಹಮರುತ್ತನ ಆವೇಶ. |
| ೩. ಧೃತರಾಷ್ಟ್ರ | ಧೃತರಾಷ್ಟ್ರರಾಯ | ವಾಯುದೇವರ ಆವೇಶ. |
| ೪. ತುಂಬುರ | ೧. ವಿರಾಧ, ೨. ಸಂಜಯ | ಉದ್ವಹಮರುತ್ತನ ಆವೇಶ. |
| ೫. ಚಿತ್ರರಥ | ಜನಮೇಜಯ | ತ್ವಷ್ಟ್ರನಾಮಕಸೂರ್ಯನ ಆವೇಶ. |
| ೬. ವಿಶ್ವಾವಸು | ಯುಧಾಮನ್ಯು | ವಿವಸ್ವಾನ್ ನಾಮಕ ಸೂರ್ಯನ ಆವೇಶ. |
| ೭. ಪರಾವಸು | ಉತ್ತಮೌಜ | ಆರ್ಯಮ ಎಂಬ ಸೂರ್ಯನ ಆವೇಶ. |
| ೮. ವಿದ್ಯಾಧರ | ಅಜಗರ | ಆರ್ಯಮ ಎಂಬ ಸೂರ್ಯನ ಆವೇಶ. |

ಅಪ್ಸರಸ್ತ್ರೀಯರ ವಿವರ :–

೧. ಊರ್ವಶೀ
೨. ಘೃತಾಚೀ
೩. ಮೇನಕಾ
೪. ರಂಭಾ
೫. ತಿಲೋತ್ತಮಾ
೬. ಸುಕೇಶೀ
೭. ಮಂಜುಘೋಷಾ
೮. ಪಿಂಗಳಾ
೯. ಪೂರ್ವಚಿತ್ತೀ
೧೦. ಸಹಜನ್ಯಾ
೧೧. ವಿಶ್ವಾಚೀ
೧೨. ತ್ರಿಜಟಾ

ಇತ್ಯಾದಿ ನಾಮಾಂಕಿತರಾದ ೧೨ ಮಂದಿ ಆಜಾನಜರ ಕಕ್ಷಗತ ಅಪ್ಸರರು ನೂರು ಮಂದಿ ಒಳಗೆ ೯೨ ಮಂದಿ ಈ ೧೯ನೇ ಕಕ್ಷದವರು ಆದ್ದರಿಂದ ಇಲ್ಲಿ ಸೇರಿಸಿ ಅದೆ. ಅನಾಖ್ಯಾತ ಆಜಾನಜರಲ್ಲಿ ೨೦ನೇ ಕಕ್ಷದವರಾದ ಚಿರಪಿತೃಗಳು ಏಳು ಮಂದಿ, ಕರ್ಮಜರಿಗೆ ಸಮಾನ ರಾದ್ದರಿಂದ ಈ ಕಕ್ಷದಲ್ಲಿ ಸೇರಿಸಿ ಅದೆ. ಚಿರಪಿತೃಗಳು ಏಳುಮಂದಿ.

**ಅರಸೆನಿಪ ಕರ್ಮಜರು ವೈಶ್ವಾ ।**
**ನರಗಧಮ ಶತಗುಣದಿ ವಿಘ್ನೇ ।**
**ಶ್ವರಗೆ ಕಿಂಚಿದ್ಗುಣ ಕಡಿಮೆ ಬಲಿಮುಖ್ಯ ಪಾವಕರು ॥**
**ಶರಭ ಪರ್ಜನ್ಯಾಖ್ಯ ಮೇಘಪ ।**
**ತರಣಿ ಭಾರ್ಯಾ ಸಂಜ್ಞೆ ಶಾರ್ವರಿ ।**
**ಕರನ ಪತ್ನಿಯು ರೋಹಿಣೀ ಶ್ಯಾಮಲೆಯು ದೇವಕಿಯು ॥ ೩೭ ॥**

ಇನ್ನೂ ಕರ್ಮಜರ ವಿಚಾರವೇ ಹೇಳತಾರೆ.

ಅರಸೆನಿಪ–ಮಾಂಧಾತಾದಿ ಪ್ರಭುಗಳು ಎಂತ ಎನಿಸತಕ್ಕವರು, ಮುಖ್ಯ–ಮುಖ್ಯವಾಗಿ ಪರಮಾತ್ಮನಿಗೆ ಪ್ರೀತಿಕರನಾದ, ಬಲಿ–ಬಲಿಚಕ್ರವರ್ತಿ, ಪಾವಕರು–ಅಗ್ನಿ ಪುತ್ರ ಪಾವಕಾದಿ, ಕರ್ಮಜರು–ಇವರೇ ಮೊದಲಾದ ಕರ್ಮಜರು ವರ್ತಮಾನಕಕ್ಷದವರು, ವೈಶ್ವಾನರಗೆ–ಹದಿನೈದನೇ ಕಕ್ಷದವರಾದ ಅಗ್ನಿದೇವರಿಗೆ, ಶತಗುಣದಿ–ನೂರು ಗುಣದಿಂದ, ಅಧಮ–ಅಧಮರು, ವಿಘ್ನೇಶ್ವರಗೆ–೧೮ ನೇ ಕಕ್ಷದವನಾದ ವಿಘ್ನೇಶ್ವರಗೆ, ಕಿಂಚಿದ್ಗುಣ ಕಡಿಮೆ – ಕಿಂಚಿತು–ಒಂದುವೀಸಗುಣ ಕಡಿಮೆ. ಇಲ್ಲಿಗೆ ಕರ್ಮಜ ದೇವತೆಗಳೊಳಗೆ ೧೯ನೇ ಕಕ್ಷದವರು ಮುಗಿದರು. ಮುಂದೆ ಅವಶಿಷ್ಟ ಇರುವ ಕರ್ಮಜರ ಕಕ್ಷ, ತಾರತಮ್ಯ, ಆವೇಶ ಹೇಳತಾರೆ. ಮೇಘಪ–ಮೇಘವನ್ನು ಪಾಲನೆಮಾಡತಕ್ಕ, ಪರ್ಜನ್ಯಾಖ್ಯ–೧ ಪರ್ಜನ್ಯ, ತನ್ನಾಮಕ ಸೂರ್ಯ, ತರಣಿ–ವಿವಸ್ವಾನ್‌ನಾಮಕ ಸೂರ್ಯನ, ಭಾರ್ಯಾ ಸಂಜ್ಞೆ–ಪತ್ನಿಯಾದ ಸಂಜ್ಞಾದೇವೇರು, ಶಾರ್ವರೀಕರನ ಪತ್ನಿಯು–ಚಂದ್ರನ ಪತ್ನಿ, ರೋಹಿಣೀ–ರೋಹಿಣೀದೇವೇರು, ಶ್ಯಾಮಲೆಯು–ಯಮಧರ್ಮರಾಯನ ಪತ್ನಿ ಶ್ಯಾಮಲಾ ದೇವೇರು (ಉಳಿದವರು ಇಬ್ಬರದು ಮುಂದಿನ ಶ್ಲೋಕದಾಗೆ ಅದೆ ಅದನ್ನು ಝುಡಿತ್ಯಾ ಬೋಧಾರ್ಥ ಈ ಶ್ಲೋಕದಲ್ಲಿ ಹೇಳತೇವೆ ವರುಣದೇವರ ಪತ್ನಿ ಗಂಗಾದೇವೇರು, ಅನಿರುದ್ಧನ ಪತ್ನಿ ವಿರಾಟ್‌ದೇವೇರು ಅಂತೂ ಆರು ಮಂದಿ), ಶರಭ–ಪರ್ಜನ್ಯಾಖ್ಯ ಸೂರ್ಯನ ಅವತಾರ ಶರಭ ಎಂತ ಒಂದು, ದೇವಕಿಯು–ಯಮದೇವರ ಪತ್ನಿ ಶ್ಯಾಮಲಾ ದೇವೇರ ಅವತಾರ ದೇವಕಿ ಎಂತ ಒಂದು, ಅನಿರುದ್ಧನ ಪತ್ನಿ ವಿರಾಟದೇವೇರ ಅವತಾರ ಉಷಾದೇವಿ ಎಂತ ಒಂದು, ಈ ಪ್ರಕಾರ ಅವತಾರಗಳು ಎಂತ ತಾತ್ಪರ್ಯ.

**ಅರಸಿಯೆನಿಪಳು ಧರ್ಮರಾಜಗೆ ।**
**ವರುಣ ಭಾರ್ಯೋಷಾದಿಷಟ್ಕರು ।**
**ಕೊರತೆ ಎನಿಪರು ಪಾವಕಾದ್ಯರಿಗೆರಡು ಗುಣದಿಂದ ॥**
**ಎರಡು ಮೂರ್ಜನರಿಂದಧಮಸ್ವಹ ।**
**ಕರೆಸುವಳುಷಾದೇವಿ ವೈಶ್ವಾ ।**
**ನರನ ಮಡದಿಗೆ ದಶಗುಣಾವರಳೆಶ್ವಿನೀಭಾರ್ಯ ॥ ೩೮ ॥**

ಇನ್ನೂ ಕರ್ಮಜರ ವಿಚಾರವೇ ಹೇಳತಾರೆ.

ಧರ್ಮರಾಜಗೆ–ಯಮಧರ್ಮರಾಜನಿಗೆ, ಮ್ಯಾಲಿನ ಶ್ಲೋಕಗತ ೨೦ನೇ ಕಕ್ಷದಲ್ಲಿ ವಿದ್ಯಮಾನರಾದ ನಾಲ್ಕನೇ ಸಂಖ್ಯಾದವರಾದ ಶ್ಯಾಮಲಾದೇವಿಯರು, ಅರಸಿಯೆನಿಪಳು–ಪತ್ನಿ ಎಂತ ಕರಿಸೋವರಾಗತಾರೆ. ವರುಣಭಾರ್ಯ–ವರುಣದೇವರ ಪತ್ನಿ ಗಂಗಾದೇವೇರು (ಪೂರ್ವೋಕ್ತ ಐದನೇ ಸಂಖ್ಯಾದವರಾದ ಗಂಗಾದೇವೇರು), ಉಷಾ–ವಿರಾಟ್ ಎಂತ ಅನಿರುದ್ಧನ ಪತ್ನಿ ಪೂರ್ವೋಕ್ತ ಆರನೇ ಸಂಖ್ಯಾದವರಾದ ವಿರಾಟ್, ಈಕಿಗೆ ಉಷಾ ಎಂತ ನಾಮ. ಆದಿಷಟ್ಕರು–ಪರ್ಜನ್ಯಾದಿ ಆರು ಮಂದಿ (ಈ ಆರು ಮಂದಿ ಮ್ಯಾಲೆ ಹೇಳಿದ್ದೇವೆ, ಮತ್ತೂ ಬೋಧಾರ್ಥ ವಿವರ, ೧. ಪರ್ಜನ್ಯಸೂರ್ಯ; ೨. ಸಂಜ್ಞಾ;

೩. ರೋಹಿಣೀದೇವಿ ; ೪. ಶ್ಯಾಮಲಾದೇವಿ ; ೫. ಗಂಗಾದೇವಿ ; ೬. ಉಷಾದೇವಿ).
ಪಾವಕಾದ್ಯರಿಗೆ—ಈ ಆರುಮಂದಿಗಳು ಹತ್ತೊಂಭತ್ತನೇ ಕಕ್ಷದವರಾದ, ಕರ್ಮಜರಾದ,
ಅಗ್ನಿಪುತ್ರರಾದ ಪಾವಕಾದಿಗಳಿಗೆ, ಎರಡು ಗುಣದಿಂದ—ಗುಣದ್ವಯದಿಂದ, ಕೊರತೆ
ಎನಿಸಿದರು—ಅಧಮರು ಎಂತ ಕರೆಸುತ್ತಾರೆ. ಎರಡುಮೂರು—ಎರಡು ಮೂರುಗಳು, ಆರು
ಎಂತ ತಾತ್ಪರ್ಯ. ಜನರಿಂದಧಮ—ಜನರಾದ ಪೂರ್ವೋಕ್ತ ಪರ್ಜನ್ಯಾದಿ ಆರು ಜನರಿಂದ
ಅಧಮರು, ದಾರು ಎಂದರೆ, ಸ್ವಹ—ಅಗ್ನಿದೇವರ ಪತ್ನಿ ಸ್ವಾಹಾದೇವೇರು, ಕರೆಸುವಳು—
ಎಷ್ಟು ಗುಣದಿಂದ ಎಂದರೆ, ಪೂರ್ವೋಕ್ತಪ್ರಕಾರ ಎರಡು ಗುಣದಿಂದ ಅಧಮರು ಎಂತ
ತಾತ್ಪರ್ಯ. ವೈಶ್ವಾನರನ ಮಡದಿಗೆ—ಅಗ್ನಿಪತ್ನಿಯಾದ ಸ್ವಾಹಾದೇವೇರಿಗೆ, ಅಶ್ವಿನೀ
ಭಾರ್ಯಾ—ಅಶ್ವಿನೀದೇವತೆಗಳ ಭಾರ್ಯ, ಉಷಾದೇವಿ—ಉಷಾದೇವಿ ಎಂತ ನಾಮವು.
ಇವರಿಬ್ಬರಿಗೆ ಹತ್ತುಗುಣದಿಂದ, ದಶಗುಣಾವರಳು—ಬುಧನಿಂದ ಹಿಡಿದು ಪುಷ್ಕರಾಂತ
ಎರಡೆರಡು ಗುಣ ಪ್ರತ್ಯಾರಿಗೆ ಹತ್ತು ಗುಣ ಅವರರೆಂದು ತಾತ್ಪರ್ಯ. ಉಷಾತ್ರಯರು
ದಾರೆಂದರೆ, ಅಶ್ವಿನೀದೇವತೆಗಳ ಭಾರ್ಯ ಉಷಾದೇವಿ (೧), ಅನಿರುದ್ಧನಾಮಕ ವಿರಾಟ್
ರೂಪಿ ಪರಮಾತ್ಮನ ಪತ್ನಿ ಉಷಾದೇವಿ (೨), ಕಾಮಪುತ್ರ ಅನಿರುದ್ಧನ ಪತ್ನಿ ಉಷಾ
(೩), ಅಂತು ಮೂವರನ್ನು ಬ್ಯಾರೆ ಬ್ಯಾರೆ ಎಂತ ತಿಳಿಯಬೇಕು.

**ಸುದರುಶನ ಶಕ್ರಾದಿಸುರಯುತ ।**
**ಬುಧನು ತಾನಭಿಮನ್ಯುವೆನಿಸುವ ।**
**ಬುಧನಿಗಿಂತಾಶ್ವಿನೀಭಾರ್ಯಾ ಶಲ್ಯ ಮಾಗಧರ ॥**
**ಉದರಜೋಷಾದೇವಿಗಿಂತಲಿ ।**
**ಅಧಮನೆನಿಪ ಶನೈಶ್ಚರನು ಶನಿ ।**
**ಗಧಮ ಪುಷ್ಕರ ಕರ್ಮಪನು ಎನಿಸುವನು ಬುಧರಿಂದ ॥ ೩೯ ॥**

ಇನ್ನೂ ಕರ್ಮಜರ ವಿಚಾರವನ್ನೇ ಹೇಳತಾರೆ.

ಬುಧನು—ಸ್ವಾಹಾದೇವಿಯ ನಂತರ ಬುಧನು ಎರಡು ಗುಣಾಧಮನು, ತಾನಭಿ
ಮನ್ಯುವೆನಿಸುವ – ಈ ಬುಧನು ಅಭಿಮನ್ಯು ಎಂತ ಅವತಾರಮಾಡೋವನಾಗಿದ್ದಾನೆ.
ಇವನಲ್ಲಿ ಆವೇಶ ದಾವದೆಂದರೆ, ಸುದರುಶನ—ಸುದರುಶನಸಾಂಕೇತವಾದ ಶ್ರೀಪರಮಾತ್ಮನ
ಚಕ್ರಾಭಿಮಾನಿಯಾದ ಮನ್ಮಥನೆ, ಶಕ್ರ ಆದಿ – ಇಂದ್ರ, ಆದಿಶಬ್ದದಿಂದ ಚಂದ್ರ,
ಅಶ್ವಿನೀಗಳು, ರಮಾದೇವೇರು, ವಾಯುದೇವರು, ಶ್ರೀಪರಮಾತ್ಮ, ಸುರಯುತ—ಏತಾ
ದೃಶ ದೇವತಾವೇಶದಿಂದ ಯುಕ್ತನಾದವನು. ಬುಧನಿಗಿಂತ—ಈ ಬುಧನಿಗಿಂತಲೂ,
ಅಶ್ವಿನೀಭಾರ್ಯಾ—ಅಶ್ವಿನೀದೇವತೆಗಳ ಹೆಂಡತಿಯಾದ, ಉಷಾ—ಉಷಾದೇವೇರು ಎರಡು
ಗುಣದಿಂದ ನೀಚರು. ಇವರ ಅವತಾರಗಳು ದಾವುವೆಂದರೆ, ಶಲ್ಯ—ಶಲ್ಯರಾಜನ,
ಮಾಗಧರ—ಮಗಧರಾಜನ, ಉದರಜ—ಉದರದಲ್ಲಿ ಜನಿಸಿ, ಶಲ್ಯಪುತ್ರಿ ಎಂತಲೂ,

ಮಗಧಪುತ್ರಿ ಎಂತಲೂ ಎರಡು ಅವತಾರದಿಂದ ಕರೆಸೋವರಾದರು. ಉಷಾದೇವಿ ಗಿಂತಲಿ–ಈ ಉಷಾದೇವಿಯರಿಗಿಂತಲೂ, ಧರಣಿ ಅಭಿಮಾನಿ, ಧರಣಿದೇವೇರು, ಈ ಧರಣಿ ದೇವೇರಿಗಿಂತಲೂ, ಅಧಮನೆನಿಸ–ಎರಡು ಗುಣದಿಂದ ಕಡಿಮಿ ಎಂತ ಕರೆಸೋವನಾಗ ತಾನೆ. ದಾರು ಎಂದರೆ, ಶನೈಶ್ಚರನು–ಶನೈಶ್ಚರ ಎನ್ನತಕ್ಕವನು. ಶನಿಗಧಮು–ಈ ಶನಿ ರಾಯನಿಗೆ ಅಧಮನು ಎರಡು ಗುಣದಿಂದ, ಪುಷ್ಕರ–ಪುಷ್ಕರನಾಮಕನು, ಬುಧರಿಂದ– ಜ್ಞಾನಿಗಳಿಂದ, ಕರ್ಮಪನು–ಕರ್ಮಾಭಿಮಾನಿಯು, ಎನಿಸುವನು–ಎಂತ ಕರೆಸೋವ ನಾಗತಾನೆ. ಇಲ್ಲಿಗೆ ಕರ್ಮಜರ ವಿಚಾರ ಮುಗಿಯಿತು. ಪ್ರಥಮಕಕ್ಷ ಆರಂಭಮಾಡಿ, ಹದಿನೆಂಟನೇ ಕಕ್ಷದವರಾದ ಶತಸ್ಥ ದೇವತೆಗಳ ಪರಿಯಂತ ನೈಜದೇವತ್ವವುಳ್ಳ ದೇವತೆ ಗಳು ; ಹತ್ತೊಂಭತ್ತನೇ ಕಕ್ಷ ಆರಂಭಮಾಡಿ, ಇಪ್ಪತ್ತಾರನೇ ಕಕ್ಷದವನಾದ ಪುಷ್ಕರಾಂತ ಕರ್ಮಜರು, ಕರ್ಮಮಾಡಿ, ಅದರಿಂದ ದೇವತ್ವ ಅಭಿವ್ಯಕ್ತರಾದವರು. ಬ್ರಹ್ಮದೇವರು ಆರಂಭಮಾಡಿ, ಪುಷ್ಕರಾಂತ ಒಂಭತ್ತುಕೋಟಿ ದೇವತೆಗಳು, ಆಜಾನಜರು ಇಪ್ಪತ್ನಾಲ್ಕು ಕೋಟಿ, ಅಂತು ಮೂವತ್ತುಮೂರು ಕೋಟಿ ದೇವತೆಗಳು. ಇನ್ನುಮ್ಯಾಲೆ ಆಜಾನಜರ ವಿಚಾರ, ತಾರತಮ್ಯ ಹೇಳತಾರೆ.

**ಉದ್ವಹಾ ಮರುತಾನ್ವಿತ ವಿರಾ ।**
**ಧ ದ್ವಿತಿಯು ಸಂಜಯನು ತುಂಬುರ ।**
**ವಿದ್ವದುತ್ತಮ ಜನಮೇಜಯ ತ್ವಷ್ಟ್ರ್ಯಯುತ ಚಿತ್ರರಥ ॥**
**ಸದ್ವಿನುತ ದನುಘೋಷಕ ಕಬಂ ।**
**ಧದ್ವಯರು ಗಂಧರ್ವ ದನು ಮನು ।**
**ಪದ್ಮಸಂಭವಯುತಾಕ್ರೂರ ಕಿಶೋರನೆನಿಸುವನು ॥ ೪೦ ॥**

ಇಲ್ಲಿಂದ ಆಜಾನಜ ದೇವತೆಗಳ ವಿಚಾರ ಹೇಳತಾರೆ. ಈ ಆಜಾನಜರಲ್ಲಿ ಸೇರಿದ ಗಂಧರ್ವರು ನೂರುಮಂದಿ. ಇವರಲ್ಲಿ ಎಂಟುಮಂದಿ ಕರ್ಮಜ ದೇವತೆಗಳಿಗೆ ಸಮಾನರು. ಆದ್ದರಿಂದ ಈ ಎಂಟುಮಂದಿಯನ್ನು ಕರ್ಮಜರ ಕಕ್ಷವಾದ ೧೯ ನೇ ಕಕ್ಷದಲ್ಲಿ ಸೇರಿಸಿದೆ. ಆ ಸೇರಿಸಿದ ಗಂಧರ್ವರ ನಾಮ, ಅವತಾರ ೧೯ನೇ ಕಕ್ಷದಲ್ಲಿ ಅಧ್ಯಾಹಾರ ಮಾಡಿ ಕೊಂಡು ವಿವರಮಾಡಲ್ಪಟ್ಟಿದೆ. ತದನ್ಯರಾದವರನ್ನ ಇಲ್ಲಿ ಸ್ಪಷ್ಟವಾಗಿ ವಿವರಮಾಡತಾರೆ.

ತುಂಬುರ–ತುಂಬುರ ನಾಮಕ ಗಂಧರ್ವ ಇವನ ಅವತಾರ, ಈ ಕರ್ಮಜರಾದ ೧೯ ನೇ ಕಕ್ಷದವ, ವಿರಾಧ–ವಿರಾಧ ಎಂತ ಒಂದು, ದ್ವಿತಿಯುಸಂಜಯನು–ಎರಡನೇ ಅವತಾರ ಸಂಜಯನು, ಅಂತು ಎರಡು ಅವತಾರಗಳು. ಉದ್ವಹಾ–ಉದ್ವಹನಾಮಕ ನಾದವನು, ಮರುತಾನ್ವಿತ–ಮರುತನ ಆವೇಶದಿಂದ ಯುಕ್ತನು. ತುಂಬುರರ ವಿಚಾರ ಮುಗಿಯಿತು. ಚಿತ್ರರಥ–ಚಿತ್ರರಥ ಗಂಧರ್ವನ ಅವತಾರ. ಇವನು ೧೯ನೇ ಕಕ್ಷದವನು. ವಿದ್ವದುತ್ತಮ–ವಿದ್ಯದಲ್ಲಿ ಶ್ರೇಷ್ಠನಾದ, ಜನಮೇಜಯ–ಜನಮೇಜಯ ಎಂತ ಅವತಾರ.

ಇವನು, ತ್ವಷ್ಟೃಯುತ–ತ್ವಷ್ಟೃನಾಮಕ ಸೂರ್ಯನ ಆವೇಶಯುಕ್ತನಾದವನು. ಇವನು ಕರ್ಮಜರಲ್ಲಿ ಸೇರಿದ್ದಾನೆ. ದನು – ಮೂರನೇಯವನಾದ ದನುನಾಮಕ ಗಂಧರ್ವನ ಅವತಾರ, ಸದ್ವಿನುತದಮುಘೋಷಕ–ಸಮೀಚೀನರಾದವರಿಂದ ನುತನಾದ ದಮಘೋಷ ರಾಯ ಎಂತ ಒಂದು ಅವತಾರ; ಕಬಂಧ–ಕಬಂಧ ಎಂತ ಅವತಾರ ಒಂದು; ಎಂಬ, ದ್ವಯರು–ಅಂತು ಎರಡು ಅವತಾರ ಉಳ್ಳವನು ಎಂತ ತಾತ್ಪರ್ಯ. ಕಿಶೋರನು– ನಾಲ್ಕನೇ ಕಿಶೋರನಾಮಕ ಗಂಧರ್ವನ ಅವತಾರ, ಅಕ್ರೂರ–ಅಕ್ರೂರ ಎಂತ ಅವತಾರ ಮಾಡಿದನು. ಇವನಲ್ಲಿ, ಮನು–ಸ್ವಾಯಂಭುವ ಮನು ಆವೇಶ ಒಂದು, ಪದ್ಮಸಂಭವ ಯುತ–ಬ್ರಹ್ಮದೇವರ ಆವೇಶ ಒಂದು, ಈ ಇಬ್ಬರ ಆವೇಶದಿಂದ ಯುಕ್ತನಾದವನು, ಅಕ್ರೂರ ಎಂತ ತಾತ್ಪರ್ಯ. ಎನಿಸುವನು–ಎನಿಸೋವನಾಗುತಾನೆ.

**ವಾಯುಯುತ ಧೃತರಾಷ್ಟ್ರ ದಿವಿಜ ।**
**ಗಾಯಕನು ಧೃತರಾಷ್ಟ್ರ ನಕ್ರನು ।**
**ರಾಯದ್ರುಪದನವಹವಿಶಿಷ್ಟ ಹೂಹು ಗಂಧರ್ವ ॥**
**ನಾಯಕ ವಿರಾಡ್ವಿವಹಯುತ ಹಹ ।**
**ಜ್ಞೇಯ ವಿದ್ಯಾಧರನೆ ಅಜಗರ ।**
**ತಾನೆನಿಸುವನು ಉಗ್ರಸೇನನೆ ಉಗ್ರಸೇನಾಖ್ಯ ॥ ೪೧ ॥**

ಆಜಾನಜರ ಒಳಗೆ ಗಂಧರ್ವರ ವಿಚಾರ ಹೇಳುತಾರೆ.

ದಿವಿಜಗಾಯಕನು–ದೇವಸಭೆಯಲ್ಲಿ ಗಾನಮಾಡತಕ್ಕ, ಧೃತರಾಷ್ಟ್ರ–ಐದನೇಯವ ನಾದ ಧೃತರಾಷ್ಟ್ರನೆಂಬೋ ಗಂಧರ್ವ, ಇವ ೧೯ ನೇ ಕಕ್ಷದವರಾದ ಕರ್ಮಜರಲ್ಲಿ ಸೇರಿ ದ್ದಾನೆ. ಇವನ ಅವತಾರ ದಾವುದೆಂದರೆ, ಧೃತರಾಷ್ಟ್ರ–ದುರ್ಯೋಧನನ ತಂದೆಯಾದ ಧೃತರಾಷ್ಟ್ರರಾಯನು. ವಾಯುಯುತ – ವಾಯುದೇವರ ಆವೇಶಯುಕ್ತನಾದವನು. ಹೂಹುಗಂಧರ್ವ–ಆರನೇಯವನಾದ ಈ ಹೂಹೂ ಗಂಧರ್ವನು ೧೯ನೇ ಕಕ್ಷದವ. ಇವನ ಅವತಾರಗಳು ಎರಡು. ನಕ್ರನು–ನಕ್ರ ಎಂತ ಒಂದು ಅವತಾರ. ರಾಯದ್ರುಪದನು– ದ್ರುಪದರಾಯನ ಅವತಾರ ಎಂತ ಒಂದು. ಆವಹವಿಶಿಷ್ಟ–ಆವಹ ಎಂಬೋ ಮರುತನ ಆವೇಶಯುಕ್ತನಾದವನು. ಹಹ–ಏಳನೇಯವನಾದ ಹಾಹಾ ಗಂಧರ್ವ. ಇವನು ೧೯ನೇ ಕಕ್ಷದವನು. ಇವನು, ನಾಯಕ – ಶ್ರೇಷ್ಠನಾದ, ವಿರಾಟ್ – ಮತ್ಸ್ಯದೇಶಾಧಿಪನಾದ ವಿರಾಟರಾಯ. ವಿವಹಯುತ–ವಿವಹಾನಾಮಕ ಮರುತನ ಆವೇಶಯುಕ್ತನಾದವನು. ವಿದ್ಯಾಧರನೆ – ಎಂಟನೇಯನವನಾದ ವಿದ್ಯಾಧರನೆಂಬ ಗಂಧರ್ವ. ಇವನು ೧೯ ನೇ ಕಕ್ಷಕ್ಕೆ ಸೇರಿದವನು. ಇವನ ಅವತಾರ ದಾವುದೆಂದರೆ, ಅಜಗರ–ಅಜಗರ ಎಂತ ಅವತಾರ, ಉಗ್ರಸೇನನೆ–ಒಂಭತ್ತನೇಯವನಾದ ಉಗ್ರಸೇನನಾಮಕ ಗಂಧರ್ವ. ಇವನೇ, ಉಗ್ರ ಸೇನಾಖ್ಯ–ಕಂಸನ ತಂದೆಯಾದ ಉಗ್ರಸೇನರಾಯ ಎಂತ, ತಾನೆನಿಸುವನು–ಕರಿಸೋವ ನಾದನೆಂದು, ಜ್ಞೇಯ–ತಿಳಿಯೋವರಾಗಬೇಕೆಂದು ತಾತ್ಪರ್ಯ.

**ಬಿಸಜಸಂಭವಯುಕ್ತ ವಿಶ್ವಾ ।**
**ವಸು ಯುಧಾಮನ್ಯುತ್ತಮೌಜಸ ।**
**ಬಿಸಜ ಮಿತ್ರಾರ್ಯಮಯುತ ಪರಾವಸು ಎನಿಸುತಿಪ್ಪ ॥**
**ಅಸಮಮಿತ್ರಾನ್ವಿತ ಸತ್ಯಜಿತು ।**
**ವಸುಧೆಯೊಳು ಚಿತ್ರಸೇನನಮೃತಾಂ ।**
**ಧಸರ ಗಾಯಕರೆಂದು ಕರೆಸುವರಾವಕಾಲದಲಿ ॥ ೪೨ ॥**

ಇನ್ನೂ ಆಜಾನಜರ ಕಕ್ಷದವರಾದ ಗಂಧರ್ವರ ವಿಚಾರವೇ ಹೇಳತಾರೆ.

ವಿಶ್ವಾವಸು–ಹತ್ತನೇಯ್ ವಿಶ್ವಾವಸುನಾಮಕ ಗಂಧರ್ವ. ಇವನೂನು ೧೯ ನೇ ಕಕ್ಷದವನೇ. ಇವನ ಅವತಾರ ದಾವುದೆಂದರೆ, ಯುಧಾಮನ್ಯು–ಯುಧಾಮನ್ಯು ಎಂತ ಅವತಾರ. ಇವನಲ್ಲಿ ಬಿಸಜಸಂಭವಯುಕ್ತ–ಬ್ರಹ್ಮದೇವರ ಆವೇಶವಿದೆ ಎಂತ ಹೇಳತದೆ. ಗ್ರಂಥಾಂತರದಲ್ಲಿ ವಿವಸ್ವಾನಾಮಕ ಸೂರ್ಯನ ಆವೇಶ ಎಂತಲೂ ಹೇಳತದೆ. ಪರಾವಸು–೧೧ ನೇಯುವ ಪರಾವಸುನಾಮಕ ಗಂಧರ್ವ, ಎನಿಸುತಿಪ್ಪ–ಎಂತ ಕರೆಸುತ್ತಾನೆ. ಇವನೂನೂ ೧೯ ನೇ ಕಕ್ಷದವನು. ಇವನ ಅವತಾರ, ಉತ್ತಮೌಜಸ–ಉತ್ತಮೌಜಸ ಎಂತ ಹೆಸರು. ಇವನಲ್ಲಿ, ಬಿಸಜಮಿತ್ರಾರ್ಯಮಯುತ–ಪದ್ಮಸಖನಾದ ಅರ್ಯಮನಾಮಕ ಸೂರ್ಯನ ಆವೇಶವದೆ. ಚಿತ್ರಸೇನ–ಹನ್ನೆರಡನೇಯುವನಾದ ಚಿತ್ರಸೇನಾ ಎಂತ, ಎನಿಸುತಿಪ್ಪ–ಎನಿಸುವ ಗಂಧರ್ವನ ಅವತಾರ, ಸತ್ಯಜಿತು–ಸತ್ಯಜಿತು ಎಂತ ಅವತಾರ ಮಾಡಿದ. (ಆದರೆ ಸತ್ಯಜಿತು ಎಂತ ಯಮದೇವರೂನೂ ಒಂದು ಅವತಾರ ಮಾಡಿದ್ದಾರೆ. ಈ ಸತ್ಯಜಿತು ಬ್ಯಾರೆ, ಆ ಸತ್ಯಜಿತು ಬ್ಯಾರೆ ಎಂತ ತಿಳಿಯಬೇಕು). ಅಸಮಮಿತ್ರಾನ್ವಿತ–ಸಮರಹಿತನಾದ ಮಿತ್ರನಾಮಕ ಸೂರ್ಯನ ಆವೇಶಯುಕ್ತನಾದವನು, ಅಮೃತಾಂಧಸರ–ದೇವತೆಗಳ ಒಳಗೆ, ಗಾಯಕರೆಂದು–ಈ ಗಂಧರ್ವರು ಗಾನ ಮಾಡತಕ್ಕವರೆಂದು, ಆವಕಾಲದಲಿ ಕರೆಸುವರು–ಸರ್ವದಾ ಕರೆಸತಕ್ಕವರು, ವಸುಧೆಯೊಳು–ಭೂಮಿಯಲ್ಲಿ (ಅವತಾರಮಾಡಿದವರು ಎಂತ ತಾತ್ಪರ್ಯ.) ಪೂರ್ವೋಕ್ತ ಗಂಧರ್ವರು ಹನ್ನೆರಡು ಮಂದಿ. ೧. ತುಂಬುರ, ೨. ಚಿತ್ರರಥ, ೩. ದನು, ೪. ಕಿಶೋರ, ೫. ಧೃತರಾಷ್ಟ್ರ, ೬. ಹೂಹೂ, ೭. ಹಾಹಾ, ೮. ವಿದ್ಯಾಧರ, ೯. ಉಗ್ರಸೇನ, ೧೦. ವಿಶ್ವಾವಸು, ೧೧. ಪರಾವಸು, ೧೨. ಚಿತ್ರಸೇನ. ಅಂತು ಹನ್ನೆರಡು ಮಂದಿ. ಕರ್ಮಜರಲ್ಲಿ ಸೇರಿದವರು ಎಂಟು ಮಂದಿ ಇವರು ಹೋಗತ ಉಳಿದ ನಾಲ್ಕು ಮಂದಿ, ಈ ಇಪ್ಪತ್ತೇಳನೇ ಕಕ್ಷ ಆಜಾನಜರಲ್ಲಿ ಸೇರಿದವರು. ಇದರಲ್ಲಿ ೧೯ನೇ ಕಕ್ಷ ಕರ್ಮಜರಲ್ಲಿ ಸೇರಿದವರು ದಾರೆಂದರೆ, ವಿವರ :– ೧. ತುಂಬುರ, ೨. ಚಿತ್ರರಥ, ೩. ಧೃತರಾಷ್ಟ್ರ, ೪. ಹೂಹೂ, ೫. ಹಾಹಾ, ೬. ವಿದ್ಯಾಧರ, ೭. ವಿಶ್ವಾವಸು, ೮. ಪರಾವಸು ; ಅಂತೂ ಎಂಟು ಮಂದಿ ೧೯ನೇ ಕಕ್ಷದವರಾದ ಕರ್ಮಜರಿಗೆ ಸಮಾನರಾದ್ದರಿಂದ ಅಲ್ಲಿ ಸೇರಿದ್ದಾರೆ. ಇವರನ್ನ ಗಂಧರ್ವರ ಝುಡಿತ್ಯಾ ಬೋಧಾರ್ಥ ಆಜಾನಜರಲ್ಲಿ ಸೇರಿಸಿದೆ.

**ಉಳಿದ ಗಂಧರ್ವರುಗಳೆಲ್ಲರು ।**
**ಬಲಿಮೊದಲು ಗೋಪಾಲರೆನಿಪರು ।**
**ಇಳೆಯೊಳಗೆ ಸೈಳೇಂದ್ರಿ ಪಿಂಗಳೆಯಪ್ಸರಸ್ತ್ರೀಯು ॥**
**ತಿಲೊತಮೆಯು ಪೂರ್ವದಲಿ ನಕುಲನ ।**
**ಲಲನೆ ಪಾರ್ವತಿ ಎನಿಸುವಳು ಗೋ ।**
**ಕುಲದ ಗೋಪಿಯರೆಲ್ಲ ಶಬರೀಮುಖ್ಯರಪ್ಸರರು ॥ ೪೩ ॥**

ಆಖ್ಯಾತರಾದ ಅಜಾನಜರ ವಿಚಾರ, ಅಪ್ಸರಸ್ತ್ರೀಯರ ವಿಚಾರ ಹೇಳತಾರೆ.

ಉಳಿದ–ನೂರು ಮಂದಿ ಗಂಧರ್ವರೊಳಗೆ ಅಜಾನಜರ ಕಕ್ಷದಲ್ಲಿ ಸೇರಿದವರು ಎಂಟು ಮಂದಿ ಹೋಗತ, ಉಳಿದವರು ತೊಂಭತ್ತೆರಡು ಮಂದಿ ; ಇದರಲ್ಲಿ ೪೨ನೇ ಶ್ಲೋಕದಲ್ಲಿ ಉಕ್ತರಾದವರು ನಾಲ್ಕು ಮಂದಿ ಹೋಗತ, ಎಂಭತ್ತೆಂಟು ಮಂದಿ ಅವಶಿಷ್ಟ ಉಳಿದವರು, ಒಲಿಮೊದಲು–ಬಲಿನಾಮಕ ಗಂಧರ್ವನೇ ಆದಿಯಾಗಿ, ಗಂಧರ್ವರುಗಳೆಲ್ಲರು – ಸಮಸ್ತರಾದ ೮೮ ಮಂದಿಗಳು, ಇಳೆಯೊಳಗೆ – ಭೂಮಿಯೊಳಗೆ, ಗೋಪಾಲರೆನಿಪರು–ಶ್ರೀಕೃಷ್ಣನ ಕೂಡ ಆಕಳು ಮೇಯಿಸಿಕೊಂಡು, ಆಟಗಳ ಆಡಿ, ಅವತಾರಮಾಡಿದವರೆಂದು ಕರಸತಾರೆ. ಗಂಧರ್ವರ ವಿಚಾರ ಮುಗಿಯಿತು. ಇನ್ನು ಮೇಲೆ ಅಪ್ಸರಸ್ತ್ರೀಯರ ವಿಚಾರ ಹೇಳತಾರೆ. ಈಗ ಹೇಳುವ ಕಕ್ಷ ಅಜಾನಜರ ಕಕ್ಷ. ಈ ಅಜಾನಜರಲ್ಲಿ ಆಖ್ಯಾತರು, ಅನಾಖ್ಯಾತರು ಎಂತ ಎರಡು ಪ್ರಕಾರದೊಳಗೆ ವರ್ತಮಾನ ೨೭ನೇ ಕಕ್ಷ ಆಖ್ಯಾತರು. ಈ ಆಖ್ಯಾತರಲ್ಲಿ ಪಠಿತರಾದ ಅಪ್ಸರಸ್ತ್ರೀಯರು ನೂರು ಜನ. ಇದರಾಗೆ ಕರ್ಮಜರಾದ ೧೯ನೇ ಕಕ್ಷದವರಿಗೆ ಸಮಾನರು ೯೨ ಮಂದಿ ೧೯ನೇ ಕಕ್ಷದಲ್ಲಿ ಸೇರಿದ್ದಾರೆ. ಉಳಿದ ಎಂಟು ಮಂದಿ ಈ ಕಕ್ಷದವರು.

| | |
|---|---|
| ೧. ಊರ್ವಶೀ | ೭. ಮಂಜುಘೋಷಾ |
| ೨. ಘೃತಾಚೀ | ೮. ಪಿಂಗಳಾ |
| ೩. ಮೇನಕಾ | ೯. ಪೂರ್ವಚಿತ್ತೀ |
| ೪. ರಂಭಾ | ೧೦. ಸಹಜನ್ಯಾ |
| ೫. ತಿಲೋತ್ತಮಾ | ೧೧. ವಿಶ್ವಾಚೀ |
| ೬. ಸುಕೇಶೀ | ೧೨. ತ್ರಿಜಟಾ |

ಇತ್ಯಾದಿ ಹನ್ನೆರಡು ಮಂದಿ ಅಜಾನಜ ಕಕ್ಷದವರು ಕರ್ಮಜರಿಗೆ ಸಮಾನರಾದ್ದರಿಂದ ಹತ್ತೊಂಭತ್ತನೇ ಕಕ್ಷದ ಕರ್ಮಜರಲ್ಲಿ ಸೇರಿಸಿದ್ದಾರೆ. ಇವರು ಹೋಗತಾ ನಿಂತ ಎಂಟು ಮಂದಿ ಈ ಕಕ್ಷದವರು. ಇದರ ವಿವರ ೪೫ನೇ ಶ್ಲೋಕದಲ್ಲಿ ಅದೆ. ಪಿಂಗಳೆಯು–ಎಂಟನೇ ಸಂಖ್ಯಾ ಪಿಂಗಳಾ ಎನತಕ್ಕ, ಅಪ್ಸರಸ್ತ್ರೀಯು–ಅಪ್ಸರಸ್ತ್ರೀ ಅವತಾರ ದಾವ್ರ ವೆಂದರೆ, ಸೈಳೇಂದ್ರಿ–ಸೈಳೇಂದ್ರಿ ಎಂತ ಒಂದು ಅವತಾರ ; ತಿಲೊತಮೆಯು–ಐದನೇ ಸಂಖ್ಯಾ ತಿಲೋತ್ತಮೆ, ಅವತಾರ ದಾವ್ರದೆಂದರೆ, ಪೂರ್ವದಲಿ–ಪೂರ್ವದಲ್ಲಿ, ನಕುಲನ

ಲಲನೆ–ನಕುಲನ ಪತ್ನಿಯಾದ, ಪಾರ್ವತಿ ಎನಿಸುವಳು–ಪಾರ್ವತಿ ಎಂತ ಒಂದು ಅವತಾರ; ಎಲ್ಲ–ಉಳಿದ ಅಪ್ಸರಸ್ತ್ರೀಯರು ಯಾವತ್ತೂ ಮಂದಿಗಳು, ಗೋಕುಲದ ಗೋಪಿಯರು–ಗೋಕುಲದಲ್ಲಿ ಗೋಪಿಕಾಸ್ತ್ರೀಯರಾಗಿ, ಅವತಾರಮಾಡೋವರಾಗಿದ್ದಾರೆ. ಶಬರೀ ಮುಖ್ಯ ಅಪ್ಸರರು–ಅಪ್ಸರಸ್ತ್ರೀಯಾದ ಶಬರೀ ಎನ್ನತಕ್ಕವಳು, ಶ್ರೀರಾಮಚಂದ್ರದೇವರಿಗೆ ಅರಣ್ಯದಲ್ಲಿ ಎಂಜಲುಫಲಗಳನ್ನು ಕೊಟ್ಟು, ಪ್ರೀತಿಪಡಿಸಿದಳು. ಶಬರಿಯೇ ಆದಿಯಾದ ಈ ಅಪ್ಸರಸ್ತ್ರೀಯರೊಳಗೆ ಶಬರೀ ಶ್ರೇಷ್ಠಳೆಂದು ತಾತ್ಪರ್ಯ.

**ಕೃಷ್ಣವರ್ತ್ಮನ ಸುತರೊಳಗೆ ಶತ ।**
**ದ್ವ್ಯಷ್ಟಸಾವಿರ ಸ್ತ್ರೀಯರಲಿ ಪ್ರ ।**
**ವಿಷ್ಟಳಾಗಿ ರಮಾಂಬ ತತ್ತನ್ನಾಮ ರೂಪದಲಿ ॥**
**ಕೃಷ್ಣಮಹಿಷಿಯರೊಳಗೆ ಇಪ್ಪಳು ।**
**ತ್ವಷ್ಟೃಪುತ್ರಿ ಕಶೇರು ಇವರೊಳು ।**
**ಶ್ರೇಷ್ಠಳೆನಿಪಳು ಉಳಿದ ಋಷಿಗಣ ಗೋಪಿಕಾ ಸಮರು ॥ ೪೪ ॥**

ಆಜಾನಜರಲ್ಲಿ ಸೇರಿದ ಹದಿನಾರು ಸಾವಿರ ಗೋಪಿಕಾಸ್ತ್ರೀಯರ ವಿಚಾರವೂ, ಅವರ ಆವೇಶವೂ ಹೇಳತಾರೆ.

ಕೃಷ್ಣವರ್ತ್ಮನ–ಅಗ್ನಿದೇವರ, ಸುತರೊಳಗೆ–ಪುತ್ರರಾದ ಅನೇಕಮಂದಿಯೊಳಗೆ, ಋಷಿಗಣ–ಜ್ಞಾನಿಗಳಾದ ಋಷಿಗಳ ಸಮೂಹ, ದ್ವ್ಯಷ್ಟಸಾವಿರ–(ದ್ವ್ಯಷ್ಟ–ಎರಡೆಂಟು) ಹದಿನಾರುಸಾವಿರ, ಶತ–ನೂರು, ಅಂತೂ ಹದಿನಾರುಸಾವಿರದ ನೂರು, ಕೃಷ್ಣಮಹಿಷಿಯರು–ಶ್ರೀರಾಮಚಂದ್ರದೇವರ ವರದಿಂದ, ಶ್ರೀಕೃಷ್ಣಾವತಾರದಲ್ಲಿ, ಗೋಪಿಕಾಸ್ತ್ರೀಯರಾಗಿ ಜನಿಸಿ, ಶ್ರೀಕೃಷ್ಣದೇವರಿಗೆ ಪತ್ನೀರಾದವರು, ಸ್ತ್ರೀಯರಲಿ–ಹದಿನಾರು ಸಾವಿರದ ನೂರುಮಂದಿ ಸ್ತ್ರೀಯರಲ್ಲಿ, ರಮಾಂಬ–ಜಗತ್ತಿಗೇ ತಾಯಿಯಾದ ಶ್ರೀಲಕ್ಷ್ಮೀದೇವೇರು, ಒಳಗೆ–ಆ ಸ್ತ್ರೀಯರಲ್ಲಿ, ತತ್ತನ್ನಾಮ–ಆಯಾ ಸ್ತ್ರೀಯರ ನಾಮಗಳಿಂದ, ರೂಪದಲಿ–ಅವರವರ ರೂಪದೋಪಾದಿಯಲ್ಲಿ, ಪ್ರವಿಷ್ಟಳಾಗಿ–ಪ್ರವೇಶಮಾಡಿದವರಾಗಿ ಆವೇಶದಿಂದ, ಇಪ್ಪಳು – ಇರೋವರಾಗಿದ್ದಾರೆ. ತ್ವಷ್ಟೃಪುತ್ರಿ – ತ್ವಷ್ಟೃನಾಮಕ ಸೂರ್ಯನ ಪುತ್ರಿ, ಕಶೇರು–ಕಶೇರು ಎಂಬುವಳು, ಇವರೊಳು–ಈ ೧೬,೧೦೦ ಮಂದಿಯೊಳಗೆ, ಶ್ರೇಷ್ಠಳೆನಿಪಳು–ಉತ್ತಮಳೆಂತ ಕರೆಸತಾಳೆ; ಉಳಿದ–ಕಶೇರು ವ್ಯತಿರಿಕ್ತ ಉಳಿದಿರುವ ಹದಿನಾರು ಸಾವಿರದ ನೂರು ಮಂದಿಯೊಳಗೆ, ಈ ಕಶೇರು ಎಂಬುವಳು ಹೋಗತ ಉಳಿದ ೧೬೦೯೯ ಮಂದಿಯಾದ, ಗೋಪಿಕಾ ಸಮರು–ಇವರು ಯಾವತ್ತೂ ಮಂದಿ ಗೋಪಿಕಾಸ್ತ್ರೀಯರು ಸಮರಾದವರೆಂದು ತಾತ್ಪರ್ಯ.

**ಸೂನುಗಳು ಎನಿಸುವರು ದೇವಕ್ಯ ।**
**ಶಾನುವಿಗೆ ಕ್ರತು ಸಿಂಧು ಶುಚಿ ಪವ ।**
**ಮಾನ ಕೌಶಿಕರೈದು ತುಂಬುರ ಊರ್ವಶೀಶತರು ॥**

**ಮೇನಕಾ ಋಷಿ ರಾಯರುಗಳಾ ।**
**ಜಾನಸುರರಿಗೆ ಸಮರೆನಿಪರು ಸು ।**
**ರಾಣಕರನಾಖ್ಯಾತ ದಿವಿಜರ ಜನಕರೆನಿಸುವರು ॥ ೪೫ ॥**

ಇನ್ನೂ ಆಜಾನಜರ ವಿಚಾರವನ್ನೇ ಹೇಳತಾರೆ.

ದೇವಕೃಶಾನುವಿಗೆ_ದೇವತೆಗಳಿಗೆ ಮುಖಸ್ಥಾನಾಪನ್ನನಾದ ಅಗ್ನಿದೇವರಿಗೆ, ಕ್ರತು_ಕ್ರತು, ಸಿಂಧು_ಸಿಂಧು, ಶುಚಿ_ಶುಚಿ, ಪವಮಾನ_ಪವಮಾನ, ಕೌಶಿಕರೈದು_ಕೌಶಿಕ, ಈ ಐದು ಮಂದಿ, ತುಂಬುರ_ತುಂಬುರ ಮೊದಲಾದ ಗಂಧರ್ವರು ನೂರು ಮಂದಿ, ಊರ್ವಶೀಶತರು_ಊರ್ವಶೀ ಮೊದಲಾದ ನೂರುಮಂದಿ, ಇವರಲ್ಲಿ ೯೨ ಮಂದಿ ಕರ್ಮಜ ರಲ್ಲಿ ೮ ಮಂದಿ ಈ ಕಕ್ಷದಲ್ಲಿ, ಮೇನಕಾ_ಮೇನಕೆಯು, ಋಷಿ_ಋಷಿಗಣ, ನೂರು ಕೋಟಿ, ರಾಯರುಗಳು_ಅರಸರುಗಳು, ಸೂನುಗಳು_ಅಗ್ನಿದೇವರಿಗೆ ಪುತ್ರರಾದವರು ಎಂತ, ಎನಿಸುವರು_ಕರಿಸೋವರಾಗತಾರೆ. ಆಜಾನಸುರರಿಗೆ_ಇವರು ಪೂರ್ವೋಕ್ತರಾದ ಆಜಾನಜದೇವತೆಗಳಿಗೆ, ಸಮರೆನಿಪರು_ಸಮಾನರೆನಿಸುವರು. ಸುರಾಣಕರು_ಆಖ್ಯಾತ ಆಜಾನಜ ದೇವತಾಸಮೂಹ, ಅನಾಖ್ಯಾತ_ಅನಾಖ್ಯಾತರಾದ, ಮುಂದೆ ಹೇಳತಕ್ಕ, ದಿವಿಜರ_ದೇವತೆಗಳಿಗೆ, ಜನಕರೆನಿಸುವರು_ಆಖ್ಯಾತರಾದ ಆಜಾನಜರು, ಅನಾಖ್ಯಾತ ರಾದ ಆಜಾನಜರಿಗೆ ಜನಕರೆನಿಸುವರು ಎಂದರೆ, ಆಖ್ಯಾತರಾದ ಆಜಾನಜರಿಂದ ಅನಾ ಖ್ಯಾತರಾದ ಆಜಾನಜರ ಜನನ ಎಂತ ತಾತ್ಪರ್ಯ.

**ಪಾವಕರಿಗಿಂತಧಮರೆನಿಸುವ ।**
**ದೇವಕುಲಜಾನಾಖ್ಯ ಸುರಗಣ ।**
**ಕೋವಿದರು ನಾನಾಸುವಿದ್ಯದಿ ಸೋತ್ತಮರ ನಿತ್ಯ ॥**
**ಸೇವಿಪರು ಸದ್ಭಕ್ತಿಪೂರ್ವಕ ।**
**ಸ್ವಾವರರಿಗುಪದೇಶಿಸುವರು ನಿ ।**
**ರಾವಲಂಬನ ವಿಮಲಗುಣಗಳ ಪ್ರತಿದಿವಸದಲ್ಲಿ ॥ ೪೬ ॥**

ಅನಾಖ್ಯಾತ ಆಜಾನಜರ ವಿಚಾರ ಹೇಳತಾರೆ.

ಪಾವಕರಿಗಿಂತ_ಪಾವಕ, ಈ ಅಗ್ನಿಪುತ್ರರಾದ ೪೫ನೇ ಶ್ಲೋಕಗತರಾದ ಕ್ರತು, ಸಿಂಧು, ಶುಚಿ, ಪವಮಾನಾದಿಗಳು ೨೭ನೇ ಕಕ್ಷದವರು. ಇವರಿಗಿಂತ, ಅಧಮರೆನಿಸುವ_ಕ್ರತು, ಸಿಂಧು ಮೊದಲಾದವರಿಗಿಂತ ಅಧಮರೆನಿಸುವ, ದೇವಕುಲಜ_ಆಖ್ಯಾತರಾದ ಆಜಾನಜ ದೇವತೆಗಳ ಕುಲದಲ್ಲಿ ಉತ್ಪನ್ನರಾದ, ಅನಾಖ್ಯಸುರಗಣ_ಅನಾಖ್ಯಾತ ಆಜಾ ನಜ ದೇವತೆಗಳ ಸಮೂಹ ದಾವುದೆಂದರೆ, ಅದರ ವಿವರ :–

| ಸಂಖ್ಯಾಕ್ರಮ | ಸಮೂಹಸಂಖ್ಯಾ | ದೇವತೆಗಳು |
|---|---|---|
| ೧. | ೧೦೦ | ವಿಬುಧರು. |
| ೨. | ೧೦೦ | ದೇವಭೃತ್ಯರಾದ ಪಿತೃಗಳು. |
| ೩. | ೧೦೦ | ದೇವಭೃತ್ಯರಾದ ಅಸುರನಾಮಧೇಯರು. (ಭಗವದ್ಭಕ್ತರು–ಅಸುರನಾಮಧೇಯರು) |
| ೪. | ೧೦೦ | ಗಾಯನ ಮಾಡುವ ಗಂಧರ್ವರು. |
| ೫. | ೧೦೦ | ನೃತ್ಯಮಾಡುವ ಅಪ್ಸರಸ್ತ್ರೀಯರು. |
| ೬. | ೭೦ | ದೇವತಾಕಾರ್ಯದಲ್ಲಿ ಸಿದ್ಧರು, ಸಿದ್ಧನಾಮಧೇಯರು. |
| ೭. | ೩೦ | ಶಿಬಿಕಾ, ಪಲ್ಲಕ್ಕಿ ಹೊರುವ ರಕ್ಷಕರು. |
| ೮. | ೩೦ | ಪರಿಚರ್ಯ ಮಾಡುವ ಚಾರಣರು. |
| ೯. | ೭೦ | ಸೇವಾಮಾಡುವಂಥಾ ಭೂತರು. |
| ೧೦. | ೭೦ | ಪ್ರೇತರು. |
| ೧೧. | ೭೦ | ವಿದ್ಯಾಧರರು. |
| ೧೨. | ೭೦ | ಕಿನ್ನರರು. |
| ೧೩. | ೭೦ | ಪಿಶಾಚಾದಿಗಳು. |
| ೧೪. | ೭ | ಕುಬೇರಭೃತ್ಯರಾದ ಗುಹ್ಯಕರು. |
| ೧೫. | ೫ | ವರುಣಭೃತ್ಯರಾದ ನಾಗರು. |

ಇವರು ಯಾವತ್ತೂ ಮಂದಿ ಅನಾಖ್ಯಾತರಾದ ಅಜಾನಜರ ಸುರಗಣ. ಕೋವಿದರು– ಇವರ ಹೆಸರು ಅಸುರ, ಪ್ರೇತ, ಪಿಶಾಚಾದಿಗಳು ಎಂತ ಇದ್ದ ಕಾಲಕ್ಕೂ, ಭಗವದ್ಭಕ್ತರಾದ ಜ್ಞಾನಿಗಳೇ ಹೊರ್ತು ಅನ್ಯರಲ್ಲ ; ನಾನಾ ಸುವಿದ್ಯದಿ–ನಾನಾವಿಧವಾದ, ಸಮೀಚೀನವಾದ ಜ್ಞಾನದಿಂದ ಯುಕ್ತರಾಗಿ, ಶಿಬಿಕಾ ಹೊರುವ್ರದು, ಪರಿಚರ್ಯ ಮಾಡೋದು, ಗಾನ ವಿದ್ಯಾ ಇತ್ಯಾದಿ ತಮ್ಮ ತಮ್ಮ ವಿದ್ಯಾದಿಗಳಿಂದ, ನಿತ್ಯ–ಪ್ರತಿದಿನದಲ್ಲೂ, ಸೋತ್ತಮರ– ತಮಗಿಂತ ಉತ್ತಮರಾದವರಿಗೆ, ಸದ್ಭಕ್ತಿಪೂರ್ವಕ–ಸಮೀಚೀನವಾದ ತಮ್ಮ ತಮ್ಮ ಯೋಗ್ಯತಾನುಸಾರ ಭಕ್ತಿಪೂರ್ವಕವಾಗಿ, ಸೇವಿಪರು–ಸೇವಾ ಮಾಡುವರು ; ಸ್ವಾವರರಿಗೆ– ತಮಗಿಂತಲೂ ಕಡಿಮೆಯಾದ ಭಕ್ತರಿಗೆ, ಪ್ರತಿದಿವಸದಲ್ಲಿ–ನಿರಂತರ, ನಿರಾವಲಂಬನ– ಅನ್ಯಾಧೀನನಲ್ಲದ ಸರ್ವೋತ್ತಮನಾದ ಶ್ರೀಪರಮಾತ್ಮನ, ವಿಮಲಗುಣಗಳ–ನಿರ್ದೋಷ ಗಳಾದ, ಮಂಗಳಕರಗಳಾದ ಕಲ್ಯಾಣಗುಣಗಳ, ಉಪದೇಶಿಸುವರು–ಉಪದೇಶಮಾಡತಾ ಇರ್ತಾರೆ ಎಂತ ತಾತ್ಪರ್ಯ.

**ಸುರರೊಳಗೆ ವರ್ಣಾಶ್ರಮಗಳೆಂ ।**
**ಬೆರಡು ಧರ್ಮಗಳಿಲ್ಲ ತಮ್ಮೊಳು ।**
**ನಿರುಪಮರು ಎಂದೆನಿಸಿಕೊಂಬರು ತಾರತಮ್ಯದಲಿ ॥**

**ಗುರುಶಿಷ್ಯತ್ವವು ಋಷಿಗಳೊ ।**
**ಳಿರುತಿಹುದು ಆಜಾನ ಸುರರಿಗೆ ।**
**ಚಿರಪಿತೃ ಶತಾಧಮರೆನಿಸುವರು ಏಳು ಜನರುಳಿದು ॥ ೪೭ ॥**

ಚಿರಪಿತೃಗಳ ವಿಚಾರ ಹೇಳತಾರೆ.

ಸುರರೊಳಗೆ–ದೇವತೆಗಳ ಒಳಗೆ, ವರ್ಣ–ಬ್ರಾಹ್ಮಣಾದಿ ವರ್ಣಸಾಂಕೇತಗಳು ಇದ್ದ ಕಾಲಕ್ಕೂ, ಮಾನುಷರೋಪಾದಿಯಲ್ಲಿ, ಆಶ್ರಮಗಳು–ಬ್ರಹ್ಮಚಾರಿ, ಗೃಹಸ್ಥ, ವಾನ ಪ್ರಸ್ಥ, ಯತಿ ಎಂಬ ಆಶ್ರಮಭೇದಗಳು, ಧರ್ಮಗಳು–ಮನುಷ್ಯರೊಳಗೆ ಬ್ರಾಹ್ಮಣಧರ್ಮ, ಕ್ಷತ್ರಿಯಧರ್ಮ, ವೈಶ್ಯಧರ್ಮ, ಶೂದ್ರಧರ್ಮ ಎಂತ ಇದ್ದೋಪಾದಿಯಲ್ಲಿ, ಧರ್ಮಗಳು, ಎಂಬೆರಡು–ಎನ್ನತಕ್ಕ ಪೂರ್ವೋಕ್ತಗಳಾದ ಎರಡು ವಿಧ, ಇಲ್ಲ–ದೇವತೆಗಳಲ್ಲಿಲ್ಲ. ತಮ್ಮೊಳು– ದೇವತೆಗಳಾದ ತಮ್ಮೊಳಗೆ, ತಾವು ನಾಲ್ಕು ವರ್ಣಾಶ್ರಮಧರ್ಮಗಳ ನಡಿಸಬಹುದು ಎಂತ ತಾತ್ಪರ್ಯ. ನಿರುಪಮರು–ಜ್ಞಾನಮಾತ್ರ ಉಪಮಾರಹಿತದಿಂದ ಇರುತ್ತದೆ. ಜ್ಞಾನದಲ್ಲಿ ನಿರುಪಮರು, ಎಂದೆನಿಸಿಕೊಂಬರು–ಎಂತ ಕರೆಸುವರು. ತಾರತಮ್ಯದಲಿ– ತಾರತಮ್ಯದಲ್ಲಿ ಸ್ವೋತ್ತಮರು, ಸ್ವಾವರರು ಎಂತ ಕರಿಸೋವರಾಗತಾರೆ. ಗುರುಶಿಷ್ಯತ್ವವು– ಗುರು ಎಂತಲೂ, ಸ್ವಾವರರು ಎಂತಲೂ ಈ ನಿಯಮ, ಋಷಿಗಳೊಳು–ಜ್ಞಾನಿಗಳಾದ, ಭಗವದ್ಭಕ್ತರಾದ, ತಾರತಮ್ಯ, ಪಂಚಭೇದಜ್ಞಾನ ಸ್ವರೂಪದಲ್ಲಿ ಉಳ್ಳ ದೇವಮಾನುಷ ರಲ್ಲಿ, ಇರುತಿಹುದು–ಇರೋದಾಗಿ ಅದೆ; ತದನ್ಯರಾದ ಭಗವದ್ದ್ವೇಷಿಗಳಾದ ಅಸುರರಲ್ಲಿ ಇಲ್ಲ ಎಂತ ತಾತ್ಪರ್ಯ. ಆಜಾನಸುರರಿಗೆ–ಅನಾಖ್ಯಾತ ಆಜಾನಸುರರಿಂದ, ಚಿರಪಿತೃ– ಚಿರಾಖ್ಯ ಪಿತೃದೇವತೆಗಳು, ಶತಾಧಮರು–ನೂರು ಗುಣದಿಂದ ಕಡಿಮಿ ಎಂತ, ಎನಿಸು ವರು–ಕರಿಸೋವರಾಗತಾರೆ. ಏಳುಜನರುಳಿದು–ಏಳು ಜನರು ಹೊರ್ತು ಉಳಿದವರು ೧೯ನೇ ಕಕ್ಷದ ಕರ್ಮಜರಲ್ಲಿ ಸೇರಿದ್ದಾರೆ.

**ವಿಶೇಷಾರ್ಥ :–** ೪೭ನೇ ಶ್ಲೋಕದಲ್ಲಿ "ಸರ್ವವರ್ಣಾಶ್ರಮಾಚಾರಾಃ ಪ್ರತ್ಯ ವಾಯಸಮುಜ್ಝಿತಾಃ । ಅಪರೋಕ್ಷವಿದೋ ವಿಷ್ಣೋರ್ಭಕ್ತಾ ಏಕಾಂತಿನೋ ಮಮ ॥" ಎಂತ ವಿಷ್ಣುರಹಸ್ಯವಚನ. ಆಶ್ರಮ ಎಂಬ ಯತಿಗೃಹಸ್ಥಾದಿಭೇದ ಸಹ ಎರಡೂ ಇಲ್ಲ; ಎಲ್ಲಾ ಆಶ್ರಮಧರ್ಮಗಳೂ ಎಲ್ಲರಿಗೂ ಉಂಟೆಂತ ತಾತ್ಪರ್ಯ.

**ಚಿರಪಿತೃಗಳಿಂದಧಮ ಗಂಧ ।**
**ರ್ವರುಗಳೆನಿಪರು ದೇವನಾಮಕ ।**
**ಕೊರತೆ ಎನಿಸುವ ಚಕ್ರವರ್ತಿಗಳಿಂದ ಗಂಧರ್ವ ॥**
**ನರರೊಳುತ್ತಮರೆನಿಸುವರು ಹ ।**
**ನ್ನೆರಡು ಎಂಭತ್ತೆಂಟು ಗುಣದಲಿ ।**
**ಹಿರಿಯರೆನಿಪರು ಕ್ರಮದಿ ದೇವಾವೇಶಬಲದಿಂದ ॥ ೪೮ ॥**

ದೇವಗಂಧರ್ವಾದಿಗಳ ತಾರತಮ್ಯ ಹೇಳತಾರೆ.

ಚಿರಪಿತೃಗಳಿಂದಧಮ–ಚಿರಾಖ್ಯ ಪಿತೃಗಳಿಗಿಂತಲೂ ಅಧಮರು, ದೇವನಾಮಕ–ದೇವಶಬ್ದದಿಂದ ಸಾಂಕೇತರಾದ, ಗಂಧರ್ವರುಗಳೆನಿಪರು–ದೇವಗಂಧರ್ವರು ಎಂತ ಎನಿಸ ತಕ್ಕವರು, ಕೊರತೆ ಎನಿಸುವ–ಕಡಿಮಿ ಎಂತ ಎನಿಸತಾರೆ. ನರ–ಅನಂತರ ನರಸಾಂಕೇತ ರಾದ, ಗಂಧರ್ವ–ಮಾನುಷಗಂಧರ್ವರು, ದೇವಗಂಧರ್ವರಿಗಿಂತಲೂ ಕಡಿಮಿ ಎಂತ ತಾತ್ಪರ್ಯ. ಚಕ್ರವರ್ತಿಗಳಿಂದ–ಮಾನುಷಗಂಧರ್ವರಿಗಿಂತಲೂ ಮಾನುಷಚಕ್ರವರ್ತಿ ಗಳು ಕಡಿಮಿ ಎಂತ ತಾತ್ಪರ್ಯ. ಈ ಚಕ್ರವರ್ತಿಗಳ ನಂತರ, ನರರೊಳುತ್ತಮರು–ಮಾನುಷರೊಳು ಉತ್ತಮರು ಎಂದರೆ ಮಾನುಷೋತ್ತಮರು ಎಂತ ತಾತ್ಪರ್ಯ. ಇವರು ನ್ಯೂನರು ಎಂತ, ಎನಿಸುವರು–ಪ್ರಾಣಿಗಳು ಈ ಪ್ರಕಾರ ತಾರತಮ್ಯ ಉಳ್ಳವರು ಎಂತ ಎನಿಸೋವರಾಗತಾರೆ. ಎಷ್ಟು ಗುಣದಿಂದ ಅಂದರೆ, ಹನ್ನೆರಡು-ಎಂಭತ್ತೆಂಟು-(೧೨+೮೮) ನೂರು; ಗುಣದಲಿ–ಗುಣಗಳಿಂದ, ಕ್ರಮದಿ–ಇದೇ ಕ್ರಮವಾಗಿ, ದೇವಾವೇಶಬಲ ದಿಂದ–ದೇವತೆಗಳ ಆವೇಶಾನುಸಾರ, ಹಿರಿಯರೆನಿಪರು–ಅಧಿಕರು ಎಂತ ಎನಿಸತಾರೆ. ಎಂದರೆ, ಸ್ವೋತ್ತಮರು ನೂರು ಗುಣದಿಂದ ಅಧಿಕರು, ಸ್ವಾವರರು ನೂರು ಗುಣದಿಂದ ಅವರರು ಎಂತ ತಾತ್ಪರ್ಯ.

**ದೇವತೆಗಳಿಂ ಪ್ರೇಷ್ಯರೆನಿಪರು ।**
**ದೇವಗಂಧರ್ವರುಗಳಿವರಿಂ ।**
**ದಾವಕಾಲಕು ಶಿಕ್ಷಿತರು ನರನಾಮಗಂಧರ್ವ ॥**
**ಕೇವಲತಿಸದ್ಭಕ್ತಿಪೂರ್ವಕ ।**
**ಯಾವದಿಂದ್ರಿಯಗಳ ನಿಯಾಮಕ ।**
**ಶ್ರೀವರನೆ ಎಂದರಿತು ಭಜಿಪರು ಮಾನುಷೋತ್ತಮರು ॥ ೪೯ ॥**

ಮಾನುಷೋತ್ತಮರು, ಶ್ರೀ ಪರಮಾತ್ಮನ್ನ ಭಜಿಸತಕ್ಕ ಕ್ರಮವನ್ನ ಹೇಳತಾರೆ.

ದೇವತೆಗಳಿಂ–ಚಿರಾಖ್ಯಪಿತೃದೇವತೆಗಳಿಂದ, ದೇವಗಂಧರ್ವರುಗಳು–ದೇವಗಂಧರ್ವ ರಾದವರು, ಪ್ರೇಷ್ಯರೆನಿಪರು–ನಿಯಾಮಕರೆನಿಸುವರು, ಆಜ್ಞಾಧಾರಕರೆನಿಪರು; ಇವರಿಂದ–ಈ ದೇವಗಂಧರ್ವರಿಂದ, ಶಿಕ್ಷಿತರು–ಉಪದೇಶಿತರು, ನರನಾಮಗಂಧರ್ವ–ಮಾನುಷ ಗಂಧರ್ವರು, ಮಾನುಷೋತ್ತಮರು–ನರಗಂಧರ್ವರ ಆರಂಭಮಾಡಿ, ಮಾನುಷೋತ್ತಮರ ಪರಿಯಂತ, ಆವಕಾಲಕು–ಸದಾಸರ್ವಕಾಲದಲ್ಲೂ, ಇವರ ಭಜನಾ ಎಂಬುದು, ಕೇವಲತಿ ಸದ್ಭಕ್ತಿಪೂರ್ವಕ–ಅತ್ಯಂತವಾಗಿ ಸಮೀಚೀನವಾದ ಭಕ್ತಿಪುರಸ್ಸರವಾಗಿ, ಯಾವದಿಂದ್ರಿಯ ಗಳ–ಏಕಾದಶೇಂದ್ರಿಯಗಳ, ನಿಯಾಮಕ–ನಿಯಾಮಕನಾದ, ಶ್ರೀವರನೆ–ಲಕ್ಷ್ಮೀಪತಿ ಯಾದ ಶ್ರೀ ಪರಮಾತ್ಮನೆ, ಎಂದರಿತು–ಎಂತ ತಿಳಿದವರಾಗಿ, ಭಜಿಸುವರು–ಪಕ್ವಕಾಲ ದಲ್ಲಿ ಬಿಂಬರೂಪೀ ಪರಮಾತ್ಮನ್ನ ಭಜಿಸೋವರಾಗುತ್ತಾರೆ.

**ಬಾದರಾಯಣ ಭಾಗವತ ಮೊದ ।**
**ಲಾದ ಶಾಸ್ತ್ರಗಳಲ್ಲಿ ಬಹುವಿಧ ।**
**ದ್ವಾದಶ ದಶಸುಪಂಚವಿಂಶತಿಶತಸಹಸ್ರಯುತ ॥**
**ಭೇದಗಳ ಪೇಳಿದನು ಸ್ವೋತ್ತಮು ।**
**ಆದಿತೇಯಾವೇಶಬಲದಿ ವಿ ।**
**ರೋಧ ಚಿಂತಿಸಬಾರದಿದು ಸಾಧುಜನ ಸಮ್ಮತವು ॥ ೫೦ ॥**

ಗುಣತಾರತಮ್ಯದಲ್ಲಿ ಪರಸ್ಪರ ಬರತಕ್ಕ ವಿರೋಧ ಪರಿಹಾರ ಮಾಡತಾರೆ.

ಬಾದರಾಯಣ – ಪುರಾಣಕರ್ತೃಗಳಾದ ಶ್ರೀ ವೇದವ್ಯಾಸದೇವರು, ಭಾಗವತ ಮೊದಲಾದ ಶಾಸ್ತ್ರಗಳಲ್ಲಿ–ಶ್ರೀ ಭಾಗವತ, ಇನ್ನೂ ಅನೇಕವಾದ ಪುರಾಣಗಳು, ಸಂಹಿತಾ ಗಳು ಮೊದಲಾದ ಶಾಸ್ತ್ರಗಳಲ್ಲಿ ಗುಣತಾರತಮ್ಯ ಹೇಳಿದ್ದು, ಸ್ವೋತ್ತಮು–ಆಯಾ ದೇವತೆ ಗಳಿಗೆ ಸ್ವೋತ್ತಮರಾದ, ಆದಿತೇಯಾವೇಶಬಲದಿ–ದೇವತೆಗಳ ಆವೇಶಬಲದಿಂದಲೂ, ಜೀವರ ನೈಜತಾರತಮ್ಯದಿಂದಲೂ, ದ್ವಾದಶ–ಹನ್ನೆರಡು, ದಶ–ಹತ್ತು, ಸುಪಂಚವಿಂಶತಿ– ಸಮೀಚೀನವಾದ ಇಪ್ಪತ್ತೈದು, ಶತ–ನೂರು, ಸಹಸ್ರ–ಸಾವಿರ, ಅಯುತ–ಹತ್ತುಸಾವಿರ, ಭೇದಗಳ–ಈ ಪ್ರಕಾರ ಒಂದು ಕಡಿ ಹತ್ತು ಎಂತ ಹೇಳಿ, ಆ ಹತ್ತರನ್ನೇ ಶತ ಎಂತಲೂ, ಸಾವಿರ ಎಂತಲೂ, ಈ ಪ್ರಕಾರ ಬಹುವಿಧ, ಭೇದಗಳ–ಅನೇಕ ವಿಧವಾದ ಭೇದಗಳನ್ನು, ಪೇಳಿದನು–ಹೇಳೋವರಾದರು ; ವಿರೋಧ ಚಿಂತಿಸಬಾರದು–ವೇದವ್ಯಾಸದೇವರು ವಿರುದ್ಧ ವಾಗಿ ಹೇಳಿದ್ದಾರೆ ಎಂತ ದೋಷತ್ವೇನ ಚಿಂತಿಸಕೂಡದು ; ಎಲ್ಲಾ ಸತ್ಯವೇ, ವಿವಕ್ಷಾ ಭೇದ ಎಂತ ತಾತ್ಪರ್ಯವೇ ಹೊರ್ತು, ಬ್ಯಾರೆ ಅಲ್ಲ. ಇದು–ಈ ಪ್ರಕಾರ ಹೇಳಿದ್ದು, ಸಾಧುಜನಸಮ್ಮತವು–ಇದರ ಮರ್ಮ ಎಂಬೋದು ಜ್ಞಾನಿಗಳಾದವರು ತಿಳಿದಿದ್ದಾರೇ ಹೊರ್ತು ಅನ್ಯರು ತಿಳಿಯೋದಿಲ್ಲ ಎಂತ ತಾತ್ಪರ್ಯ.

**ಇವರು ಮುಕ್ತಿಯೋಗ್ಯರೆಂಬರು ।**
**ಶ್ರವಣ ಮನನಾದಿಗಳ ಪರಮೋ ।**
**ತ್ಸವದಿ ಮಾಡುತ ಕೇಳಿ ನಲಿಯುತ ಧರ್ಮಕಾಮಾರ್ಥ ॥**
**ತ್ರಿವಿಧ ಫಲಗಳಪೇಕ್ಷಿಸದೆ ಶ್ರೀ ।**
**ಪವನಮುಖ ದೇವಾಂತರಾತ್ಮಕ ।**
**ಪ್ರವರತನು ಶಿಷ್ಟೇಷ್ಟದಾಯಕನೆಂದು ಸ್ಮರಿಸುವರು ॥ ೫೧ ॥**

ಶ್ರೀ ಪರಮಾತ್ಮನ್ನ ಸ್ಮರಣೆ ಮಾಡುತ್ತಿರೆಂದು ಹೇಳತಾರೆ.

ಇವರು-ಪೂರ್ವೋಕ್ತರಾದ ಬ್ರಹ್ಮಾದಿ ಮನುಷ್ಯೋತ್ತಮ, ಹಾಂಗೆ ತೃಣಾಂತರಾದ ಮಾನುಷೋತ್ತಮರಲ್ಲಿ ಅಂತರ್ಭೂತರಾದ ತದವರರು ಎಂತ ತಾತ್ಪರ್ಯ. ಈ ಯಾವತ್ತೂ

ಮಂದಿ, ಮುಕ್ತಿಯೋಗ್ಯರೆಂಬರು–ಮುಕ್ತಿಯೋಗ್ಯರೆಂತ ಕರಿಸತಕ್ಕವರು. ಇವರು ಪಕ್ವ ಸಾಧನಕಾಲ ಪ್ರಾಪ್ತವಾದಾಗ್ಗೆ, ಪರಮೋತ್ಸವದಿ–ಅತ್ಯಂತ ಉತ್ಸಾಹದಲ್ಲಿ, ಶ್ರವಣ ಮನನಾದಿಗಳ–ಶ್ರೀಮದಾನಂದತೀರ್ಥರಿಂದ ರಚಿತವಾದ ಸಚ್ಛಾಸ್ತ್ರವನ್ನು ಗುರುಮುಖ ದಿಂದ ಶ್ರವಣಮಾಡೋಣವೇನು, ಆ ಮಾಡಿದ್ದರನ್ನ ಮರಿಯದೆ ಮನನಮಾಡೋಣ ವೇನು, ಇತ್ಯಾದಿಗಳ, ಮಾಡುತ–ಸರ್ವದಾ ಆಚರಣೆ ಮಾಡತ, ಕೇಳಿ ನಲಿಯುತ– ಭಗವನ್ಮಹಾತ್ಮೆ ಕೇಳಿ ಕುಣಿದಾಡುತ್ತಾ, ಧರ್ಮಕಾಮಾರ್ಥ–ಧರ್ಮವೇನು, ಅರ್ಥ ವೇನು, ಕಾಮವೇನು, ಈ ಪ್ರಕಾರ ಐಹಿಕಪ್ರಯೋಜನಗಳಾದ, ತ್ರಿವಿಧಫಲಗಳ–ಈ ಮೂರು ಫಲಗಳ. ಅಪೇಕ್ಷಿಸದೆ–ಅಪೇಕ್ಷಾ ಮಾಡದೆ, ನಿಷ್ಕಾಮರಾಗಿ, ಶ್ರೀ ಪವನಮುಖ ದೇವಾಂತರಾತ್ಮಕ– ಶ್ರೀ–ಲಕ್ಷ್ಮೀದೇವೇರು, ಪವನ–ವಾಯುದೇವರು, ಮುಖ–ವೊದ ಲಾದ, ದೇವ–ಚತುರ್ವಿಂಶತಿ ತತ್ವಾಭಿಮಾನಿ ದೇವತಾಂತರ್ಗತನಾದ ಶ್ರೀ ಭಾರತೀ ರಮಣಮುಖ್ಯಪ್ರಾಣ, ಮಹತ್ತತ್ತ್ವ, ರಮಾಭಿಮನ್ಯಮಾನವಾದ ಅವ್ಯಕ್ತತತ್ತ್ವಗೋಳ ಕಾಂತರ್ಗತ, ಅಂತರಾತ್ಮಕನಾಮವಾಚ್ಯನಾದ ಪರಮಾತ್ಮನ್ನ, ಪ್ರವರತಮ–ಶ್ರೇಷ್ಠ ರೊಳಗೆ ಅಸದೃಶನಾದ ಅತಿಶ್ರೇಷ್ಠ ಎಂತಲೂ, ಶಿಷ್ಟೇಷ್ಟದಾಯಕನು–ಶಿಷ್ಟರಾದ, ನಿಷ್ಕಾಮ ರಾದ ಭಗವದ್ಭಕ್ತರಿಗೆ ಇಷ್ಟರೂಪವಾದ ತನ್ನ ಅಪರೋಕ್ಷವನ್ನು ಕೊಡತಕ್ಕವನೆಂತಲೂ, ಎಂದು ಸ್ಮರಿಸುವರು–ಎಂತ ತಿಳಿದು ಧ್ಯಾನೋಪಾಸನಾದಿಗಳಿಂದ ಸ್ಮರಿಸುತ್ತಿರುವರು. ಭಗವದನುಗ್ರಹ ಸಂಪಾದಿಸಬೇಕೆಂಬುವ ಐಹಿಕವಿಷಯಾದಿಗಳಲ್ಲಿ ಪದ್ಮಪತ್ರಗತ ಉದಕ ದೋಪಾದಿಯಲ್ಲಿದ್ದು ಭಗವಂತನಲ್ಲಿ ಲಿಪ್ತವಾದ ಮನಸ್ಸುಳ್ಳವನಾಗಬೇಕೆಂತ ಭಾವವು.

**ನಿತ್ಯಸಂಸಾರಿಗಳು ಗುಣದೋ ।**
**ಷಾತ್ಮಕರು ಬ್ರಹ್ಮಾದಿಜೀವರ ।**
**ಭೃತ್ಯರೆಂಬರು ರಾಜನೋಪಾದಿಯಲಿ ಹರಿಯೆಂಬ ॥**
**ಕೃತ್ತಿವಾಸನು ಬ್ರಹ್ಮ ಶ್ರೀವಿ ।**
**ಷ್ಣು ತ್ರಯರು ಸಮ ದುಃಖ ಸುಖ ಉ ।**
**ತ್ಪತ್ತಿ ಮೃತಿ ಭಯ ಪೇಳುವರು ಅವತಾರಗಳಿಗೆ ಸದಾ ॥ ೫೨ ॥**

ಇದುವರೆವಿಗೂ ಮುಕ್ತಿಯೋಗ್ಯರ ವಿಚಾರ ಮುಗಿಯಿತು. ಇನ್ನುಮ್ಯಾಲೆ ನಿತ್ಯ ಸಂಸಾರಿಗಳ ವಿಚಾರ ಹೇಳತಾರೆ.

ಪ್ರಮಾಣ :– "ತತ್ರ ಸಂಸೃತಿಬದ್ಧಾಸ್ತು ಗುಣದೋಷೋಭಯಾತ್ಮಕಾಃ । ತತ್ರೋಚ್ಚಾ ರಾಜವದ್ವಿಷ್ಣೋಃ ಸರ್ವಾಧಿಕ್ಯೇ ಸಸಂಶಯಾಃ । ಜಾನಂತ್ಯಥಾಪಿ ಬ್ರಹ್ಮಾದಿ ದೇವಾನಾಂ ಪರಿವಾರತಾಂ ॥" ಇತಿ ಸತ್ತತ್ತ್ವರತ್ನಮಾಲಾಯಾಂ.

ಗುಣ–ಪಂಚಭೇದಾತ್ಮಕಗುಣ, ದೋಷ–ತಾರತಮ್ಯಶೂನ್ಯವಾದ ದೋಷ, ಈ ಎರಡರಿಂದ, ನಿತ್ಯ–ನಿತ್ಯವಾದ ಸ್ವರೂಪಸ್ವಭಾವದಲ್ಲಿ, ಅನಾದ್ಯನಂತಕಾಲದಲ್ಲಿ ನಿತ್ಯವಾಗಿ,

ಆತ್ಮಕರು–ಪ್ರಚುರರಾದವರು, ಸಂಸಾರಿಗಳು–ಸುಖದುಃಖಮಿಶ್ರಭೋಗಾವಸ್ಥಾ, ಸಂಸಾರಾವಸ್ಥಾ ; ಸ್ವರೂಪದಲ್ಲಿ ವಿದ್ಯಮಾನವಾದ, ಪೂರ್ವೋಕ್ತಗುಣಕ್ಕೆ ಸುಖ, ದೋಷಕ್ಕೆ ದುಃಖ, ಎರಡೂ ಮಿಶ್ರವಾಗಿ ಗುಣದೋಷಗಳ ಆಶ್ರಯಿಸಿ, ಸ್ವರೂಪದಲ್ಲಿ ನಿತ್ಯವಾಗಿ ಅವೆ. ಇತ್ಯಾದಿ ಲಕ್ಷಣಗಳು ಸ್ವರೂಪ ಸ್ವಭಾವದಲ್ಲಿ ದಾರಿಗೆ ಅವೋ, ಅವರೇ ನಿತ್ಯಸಂಸಾರಿ ಜೀವರೆಂದು ತಾತ್ಪರ್ಯ. ಇವರ ಜ್ಞಾನ ಎಂಥಾದ್ದೆಂದರೆ, ಹರಿ–ಸರ್ವೋತ್ತಮನಾದ ಶ್ರೀ ಪರಮಾತ್ಮ, ರಾಜನೋಪಾದಿಯಲಿ–ಲೋಕದಲ್ಲಿ ಅನೇಕಮಂದಿ ರಾಜರು ಇದ್ದೋಪಾದಿಯಲ್ಲಿ, ಅನೇಕ ಮಂದಿ ದೇವತೆಗಳ ಒಳಗೆ ಇವನೂ ಒಬ್ಬ ಎಂತಲೂ, ಬ್ರಹ್ಮಾದಿ ಜೀವರ–ಬ್ರಹ್ಮಾದಿ ಜೀವರು, ಭೃತ್ಯರು–ಇಂಥಾ ರಾಜನಾದ ಹರಿಗೆ ಭೃತ್ಯರು ಎಂತಲೂ, ಎಂಬರು–ಹೇಳೋವರಾಗತಾರೆ. ಮತ್ತು, ಕೃತ್ತಿವಾಸನು ಬ್ರಹ್ಮ ಶ್ರೀವಿಷ್ಣು–ರುದ್ರದೇವರು, ಬ್ರಹ್ಮದೇವರು, ಕಾಂತಿಸಂಪನ್ನನಾದ ಶ್ರೀವಿಷ್ಣು, ತ್ರಯರು ಸಮ–ಈ ಮೂರು ಮಂದಿ ಸಮಾನರು ; ಲೋಕದಲ್ಲಿ ಸಮಾನರಾಜರು ಅನೇಕ ಮಂದಿ ಇದ್ದೋಪಾದಿಯಲ್ಲಿ ಈ ಮೂರು ಮಂದಿಗಳು ಎಂತ ತಾತ್ಪರ್ಯ. ಈ ಮೂರು ಮಂದಿಗೆ, ದುಃಖ ಸುಖ ಉತ್ಪತ್ತಿ ಮೃತಿ–ದುಃಖ, ಸುಖ, ಜನನ, ಮರಣ, ಭಯ–ಪರರಿಂದ ಪ್ರಾಪ್ತವಾಗುವ ಭಯವೇನು, ಇತ್ಯಾದಿಗಳು, ಸದಾ–ಅನಾದ್ಯನಂತಕಾಲಕ್ಕೂ, ಅವತಾರಗಳಿಗೆ–ದೇವತೆಗಳ ಅವತಾರಗಳಿಗೆ ಇದ್ದೋಪಾದಿಯಲ್ಲಿ ಶ್ರೀ ಪರಮಾತ್ಮನ ಅವತಾರಗಳಿಗೆ, ಪೇಳುವರು–ಉಂಟು ಎಂತ ಹೇಳೋವರಾಗತಾರೆ, ಎಂಬ–ಈ ಪ್ರಕಾರ ಅನ್ನತಕ್ಕವರು ಯಾವತ್ತೂ ಮಂದಿಗಳು ನಿತ್ಯಸಂಸಾರಿಗಳೆಂದು ತಾತ್ಪರ್ಯ. ಇವರು ಪಂಚಭೇದ ಅಂಗೀಕಾರಮಾಡಿ, ತಾರತಮ್ಯ ಒಡಂಬಡದೆ, ಪರಮಾತ್ಮನ ಸರ್ವೋತ್ತಮತ್ವದಲ್ಲಿ ಸಂದೇಹಯುಕ್ತರಾಗಿ, ಶ್ರೀ ದೇವರು, ಅನೇಕ ಮಂದಿ ದೇವತೆಗಳಲ್ಲಿ ಇವ ಒಬ್ಬ ದೇವರು ಎಂತ ತಿಳಿದಿರುತ್ತಾರಾದ ಕಡಿಯಿಂದ ಇವರು ನಿತ್ಯಸಂಸಾರಿಗಳು ಎಂತ ತಾತ್ಪರ್ಯ.

**ತಾರತಮ್ಯಜ್ಞಾನವಿಲ್ಲದೆ ।**
**ಸೂರಿಗಳ ನಿಂದಿಸುತ ನಿತ್ಯದಿ ।**
**ತೋರುತಿಪ್ಪರು ಸುಜನರೋಪಾದಿಯಲಿ ನರರೊಳಗೆ ॥**
**ಕ್ರೂರಕರ್ಮಾಸಕ್ತರಾಗಿ ಶ ।**
**ರೀರಪೋಷಣೆಗೋಸುಗದಿ ಸಂ ।**
**ಚಾರ ಮಾಳ್ಪರು ಅನ್ಯದೇವತೆ ನೀಚರಾಲಯದಿ ॥ ೫೩ ॥**

ಇನ್ನೂ ನಿತ್ಯಸಂಸಾರಿಗಳ ವಿಚಾರವನ್ನೇ ಹೇಳತಾರೆ.

ತಾರತಮ್ಯಜ್ಞಾನವಿಲ್ಲದೆ – ಶ್ರೀಹರಿಸರ್ವೋತ್ತಮತ್ವ ವ್ಯತಿರಿಕ್ತ ರಮಾಬ್ರಹ್ಮಾದಿ ಸರ್ವಜೀವರೂ ಸಮರು ಎಂತಲೂ, ಶ್ರೀ ಪರಮಾತ್ಮ ಸರ್ವೋತ್ತಮನೆಂಬೊ ಜ್ಞಾನವಿಲ್ಲದೆ, ಪಂಚಭೇದ ಮಾತ್ರ ಒಡಂಬಟ್ಟವರಾಗಿ, ನಿತ್ಯದಿ–ಸರ್ವಕಾಲದಲ್ಲೂ, ಸೂರಿಗಳ–ಸಜ್ಜನ

ರಾದ ಭಗವದ್ಭಕ್ತರನ್ನು, ನಿಂದಿಸುತ–ನೋಡಿ ಅವರುಗಳನ್ನ ನಿಂದಾಮಾಡತಾ ಮತ್ತು ಶ್ರೀಹರಿಸರ್ವೋತ್ತಮನೆಂಬುದು ಅಸಂಭಾವಿತ, ತಾರತಮ್ಯಶೂನ್ಯ ಎಂತ ನಿಂದಿಸುತ್ತ, ಕ್ರೂರಕರ್ಮಾಸಕ್ತರಾಗಿ–ಭಗವದ್ವೇಷಿಗಳಾದ ಇವರು, ಶ್ರೀಪರಮಾತ್ಮನ ಪಾದಾವಲಂಬಿಗಳಾದ ಭಕ್ತರಿಗೆ ದುಃಖ ಕೊಡತಕ್ಕವರಾಗಿಯೂ, ಪುಣ್ಯಕಾರ್ಯಗಳಿಗೆ ವಿರುದ್ಧಗಳಾದ ಕರ್ಮಗಳ ಮಾಡುತ್ತ, ಮತ್ತು, ಶರೀರಪೋಷಣೆಗೋಸುಗದಿ–ತಮ್ಮ ಶರೀರಸಂರಕ್ಷಣಾರ್ಥ, ಅನ್ಯದೇವತೆ–ತಮೋಯೋಗ್ಯದೇವತೆಗಳಾದ ಎಲ್ಲಮ್ಮಾದಿ ದೇವತೆಗಳ, ನೀಚರಾಲಯದಿ–ಭಗವದ್ವೇಷಿಗಳಾದ ನೀಚರ ಮನೆಗಳಲ್ಲಿ, ಸಂಚಾರ ಮಾಳ್ಪರು–ಸಂಚಾರಮಾಡುವರು. ನರರೊಳಗೆ–ಮಾನುಷರೊಳಗೆ ಡಾಂಭಿಕ ಆಚಾರಗಳ ಪ್ರದರ್ಶನಮಾಡುತ್ತ, ಸುಜನರೋಪಾದಿಯಲಿ–ಸಮೀಚೀನರಾದ ಸಜ್ಜನರೋಪಾದಿಯಲ್ಲಿ, ತೋರುತಿಪ್ಪರು–ದೃಶ್ಯಮಾನರಾಗಿ ಇರ್ತಾರೇ ಹೊರ್ತು, ಮುಕ್ತಿಯೋಗ್ಯರೋಪಾದಿಯಲ್ಲಿ ಲಕ್ಷಣಗಳುಳ್ಳವರಲ್ಲ. ಈ ಗುಣಗಳುಳ್ಳವರು ನಿತ್ಯಸಂಸಾರಿಗಳೆಂತ ತಾತ್ಪರ್ಯ.

**ದಶಪ್ರಮತಿ ಮತಾಬ್ಧಿಯೊಳು ಸುಮ ।**
**ನಸರೆನಿಪ ರತ್ನಗಳ ಅವಲೋ ।**
**ಕಿಸಿ ತೆಗೆದು ಪ್ರಾಕೃತ ಸುಭಾಷಾತಂತುಗಳ ರಚಿಸಿ ॥**
**ಅಸುಪತಿ ಶ್ರೀರಮಣಗೆ ಸಮ ।**
**ರ್ಪಿಸಿದೆ ಸಜ್ಜನರಿದನು ಸಂತೋ ।**
**ಷಿಸಲಿ ದೋಷಗಳೆಣಿಸದಲೆ ಕಾರುಣ್ಯದಲಿ ನಿತ್ಯ ॥ ೩೪ ॥**

ಈ ಗ್ರಂಥ ಮಾಡಿದ ಕ್ರಮುವನ್ನು ಹೇಳಿ, ಸಜ್ಜನರಾದ ಭಗವದ್ಭಕ್ತರನ್ನ ಪ್ರಾರ್ಥನ ಮಾಡತಾರೆ.

ದಶಪ್ರಮತಿಮತ–ಜೀವೋತ್ತಮರಾದ ವಾಯುದೇವರ ಅವತಾರರಾದ, ಶ್ರೀಮಧ್ವಾಚಾರ್ಯರಿಂದ ರಚಿತವಾದ ಸಚ್ಛಾಸ್ತ್ರವೆಂಬೋ, ಅಬ್ಧಿಯೊಳು–ಸಮುದ್ರದೊಳು ವಿದ್ಯಮಾನಗಳಾದ, ಸುಮನಸರೆನಿಪ–ಬ್ರಹ್ಮಾದಿ ದೇವತೆಗಳು ಎನತಕ್ಕ, ರತ್ನಗಳ–ರತ್ನಗಳ, ಅವಲೋಕಿಸಿ–ಸಮುದ್ರದಲ್ಲಿ ಮುಣುಗಿ ಹುಡುಕಿನೋಡಿ, ತೆಗೆದು–ಅದರನ್ನ ತೆಗೆದು, ಸು–ಸಮೀಚೀನಗಳಾದ ಈ ರತ್ನಗಳ, ಪ್ರಾಕೃತಭಾಷಾ–ಪ್ರಾಕೃತಭಾಷಾವಾದ ಕನ್ನಡ ಭಾಷಾವೆಂಬ ಹತ್ತಿಯಿಂದ, ತಂತುಗಳ ರಚಿಸಿ–ಕವನರೂಪವಾದ ದಾರಗಳ ರಚನಾಮಾಡಿ, ಪೋಣಿಸಿ, ಇದರನ್ನ, ಅಸುಪತಿ–ಶ್ರೀ ಮುಖ್ಯಪ್ರಾಣದೇವರಿಗೆ ವಲ್ಲಭನಾದ, ಶ್ರೀರಮಣಗೆ–ಲಕ್ಷ್ಮೀಪತಿಯಾದ ಶ್ರೀಕೃಷ್ಣದೇವರಿಗೆ, ಸಮರ್ಪಿಸಿದೆ – ಸಮರ್ಪಣಮಾಡೋವನಾದೆ. ಸಜ್ಜನರು–ಜ್ಞಾನಿಗಳಾದ ಭಗವದ್ಭಕ್ತರು, ಇದನು–ಈ ಕಾವ್ಯವನ್ನು, ನಿತ್ಯ–ಪ್ರತಿದಿನದಲ್ಲೂ, ಕಾರುಣ್ಯದಲಿ–ಕರುಣದಿಂದ ನೋಡಿದವರಾಗಿ, ದೋಷಗಳ–ಪ್ರಾಕೃತಭಾಷಾವೆಂಬ ದೋಷವೇನು, ಪೂರ್ವಾಪರೀಕಾರದಿಂದ ಹೇಳಿದ ದೋಷಗಳೇನು, ಎಣಿಸದಲೆ–

ಗಣನಾಮಾಡದೆ, ಸಂತೋಷಿಸಲಿ–ಭಗವನ್ಮಹಿಮೆಯಲ್ಲೇ ಲಕ್ಷ್ಯ ಇಟ್ಟು ಸಂತೋಷಪಡಬೇಕೆಂತ ಪ್ರಾರ್ಥನಾಮಾಡಿದ್ದಾರೆ, ಎಂತ ತಾತ್ಪರ್ಯ. ಕ್ಷೀರ ಪ್ರಧಾನವೇ ಹೊರ್ತು, ಪಾತ್ರ ಪ್ರಧಾನವಲ್ಲವೆಂತ ತಿಳಿದು ಸಜ್ಜನರಾದವರು ಸಂತೋಷಪಡಬೇಕು ಎಂತ ತಾತ್ಪರ್ಯ.

**ನಿರುಪಮ ಶ್ರೀವಿಷ್ಣು ಲಕುಮಿ ।**
**ಸರಸಿಜೋದ್ಭವ ವಾಯು ವಾಣೀ ।**
**ಗರುಡ ಷಣ್ಮಹಿಷಿಯರು ಪಾರ್ವತಿ ಶಕ್ರ ಸ್ಮರ ಪ್ರಾಣ ॥**
**ಗುರುಬೃಹಸ್ಪತಿ ಪ್ರವಹ ಸೂರ್ಯನು ।**
**ವರುಣ ನಾರದ ವಹ್ನಿ ಸಪ್ತಾಂ ।**
**ಗಿರರು ಮಿತ್ರ ಗಣೇಶ ಪೃಥು ಗಂಗಾ ಸ್ವಾಹ ಬುಧನು ॥ ೫೫ ॥**

ಸಂಕೋಚವಾಗಿ ಕಕ್ಷಕ್ಕೆ ಒಬ್ಬೊಬ್ಬ ದೇವತೆಗಳ ಸಾಂಕೇತದಿಂದ ತಾರತಮ್ಯವನ್ನ ಹೇಳತಾರೆ.

ನಿರುಪಮ ಶ್ರೀವಿಷ್ಣು–ಸರ್ವೋತ್ತಮನಾದ ಕಾಂತಿಸಂಪನ್ನನಾದ ಶ್ರೀಪರಮಾತ್ಮ, ಲಕುಮಿ–ರಮಾದೇವರು, ಸರಸಿಜೋದ್ಭವ ವಾಯು–ಬ್ರಹ್ಮದೇವರು, ವಾಯುದೇವರು, ವಾಣೀ–ಸರಸ್ವತೀದೇವೇರು, ಗರುಡ–ಗರುಡದೇವರು, ಷಣ್ಮಹಿಷಿಯರು–ಜಾಂಬವತ್ಯಾದಿ ಆರುಮಂದಿ ಮಹಿಷಿಯರು, ಪಾರ್ವತಿ–ಪಾರ್ವತೀ, ಶಕ್ರ–ಇಂದ್ರದೇವರು, ಸ್ಮರ–ಮನ್ಮಥನು, ಪ್ರಾಣ–ಅಹಂಕಾರಿಕ ಪ್ರಾಣದೇವರು, ಗುರು ಬೃಹಸ್ಪತಿ–ದೇವಗುರುಗಳಾದ ಬೃಹಸ್ಪತ್ಯಾಚಾರ್ಯರು, ಪ್ರವಹ–ಪ್ರವಹ ವಾಯುದೇವರು, ಸೂರ್ಯನು–ವಿವಸ್ವಾನ್ ನಾಮಕ ಸೂರ್ಯದೇವರು, ವರುಣ–ವರುಣದೇವರು, ನಾರದ–ದೇವಋಷಿಗಳಾದ ನಾರದರು, ವಹ್ನಿ–ಅಗ್ನಿದೇವರು, ಸಪ್ತಾಂಗಿರರು–ಸಪ್ತಋಷಿಗಳು, ಮಿತ್ರ–ಮಿತ್ರನಾಮಕ ಸೂರ್ಯ, ಗಣೇಶ–ವಿಘ್ನೇಶ್ವರ, ಶತಸ್ಥರ ಕಕ್ಷ, ಪೃಥು–ಪೃಥುಚಕ್ರವರ್ತಿ, ಕರ್ಮಜಕಕ್ಷ, ಗಂಗಾ–ಗಂಗಾದೇವೇರು, ಸ್ವಾಹ–ಸ್ವಾಹಾದೇವೇರು, ಬುಧನು–ಬುಧನು, (ಉಷಾ ದೇವೇರು, ಅಧ್ಯಾಹಾರದಿಂದ). ಅವಶಿಷ್ಟ ಕಕ್ಷದವರನ್ನು ಮುಂದಿನ ಶ್ಲೋಕದಲ್ಲಿ ಹೇಳತಾರೆ.

**ತರಣಿತನಯ ಶನೈಶ್ಚರನು ಪು ।**
**ಷ್ಕರನಜಾನಜ ಚಿರಪಿತರು ಗಂ ।**
**ಧರ್ವರೀರ್ವರು ದೇವ ಮಾನುಷ ಚಕ್ರವರ್ತಿಗಳು ॥**
**ನರರೊಳುತ್ತಮ ಮಧ್ಯಮಾಧಮ ।**
**ಕರೆಸುವರು ಮಧ್ಯೋತ್ತಮರು ಈ ।**
**ರೆರಡು ಜನ ಕೈವಲ್ಯ ಮಾರ್ಗಸ್ಥರೆಂದಾನಮಿಪೆ ॥ ೫೬ ॥**

ಅವಶಿಷ್ಟ ತಾರತಮ್ಯ ಹೇಳತಾರೆ.

ತರಣಿತನಯ ಶನೈಶ್ಚರನು–ಸೂರ್ಯಪುತ್ರನಾದ ಶನೈಶ್ಚರನು, ಪುಷ್ಕರನು–ಕರ್ಮಾಭಿಮಾನಿ ಪುಷ್ಕರನು, ಅಜಾನಜ–ಆಜಾನಜ ದೇವತೆಗಳು, ಚಿರಪಿತರು–ಚಿರಾಖ್ಯ ಪಿತೃದೇವತೆಗಳು, ಗಂಧರ್ವರೀರ್ವರು–ಇಬ್ಬರು ಗಂಧರ್ವರು ದಾರೆಂದರೆ, ದೇವ–ದೇವ ಗಂಧರ್ವರು, ಮನುಷ್ಯಗಂಧರ್ವರು, ಮಾನುಷ ಚಕ್ರವರ್ತಿಗಳು–ಮಾನುಷ ಚಕ್ರವರ್ತಿಗಳು, ನರರೊಳು–ಮುಕ್ತಿಯೋಗ್ಯರಾದ ಮಾನುಷರೊಳು, ಉತ್ತಮ–ಉತ್ತಮರು, ಮಧ್ಯಮ–ಮಧ್ಯಮರು, ಅಧಮ–ಅಧಮರು ಎಂತ, ಕರೆಸುವರು–ಕರಿಸೋವರಾಗುತ್ತಾರೆ. ಮತ್ತು ಉತ್ತಮರು ಮಾನುಷೋತ್ತಮರು, ಮಧ್ಯಮರು ನಿತ್ಯಸಂಸಾರಿಗಳು, ಅಧಮರು ತಮೋಯೋಗ್ಯರು ಎಂತಲೂ ತಾತ್ಪರ್ಯವೇ, ಎರಡು ಪ್ರಕಾರ. ಈರೆರಡುಜನ–ಈರೆರಡು ಎಂದರೆ ನಾಲ್ಕುಜನ; ಶತಸ್ಥರ ಪರ್ಯಂತ ದೇವತೆಗಳು, ಪುಷ್ಕರನ ಪರ್ಯಂತ ಕರ್ಮಜರು, ಮಾನುಷಗಂಧರ್ವರಾರಭ್ಯ ತೃಣಾಂತ ನಿರಂಶರು, ಅಂತು ನಾಲ್ಕುಜನ. ಮಧ್ಯೋತ್ತಮರು–ಈ ನಾಲ್ಕುಜನರ ಮಧ್ಯದಲ್ಲಿ ದೇವತೆಗಳು ಉತ್ತಮರು. ಈ ನಾಲ್ಕು ವಿಧರು, ಕೈವಲ್ಯಮಾರ್ಗಸ್ಥರೆಂದು–ಮುಕ್ತಿಯೋಗ್ಯರು ಎಂದು ಇವರಿಗೆ, ಅನಮಿಷೇಛಂದಾಗಿ ವಂದನೆಯ ಮಾಡುವೆ ಎಂತ ತಾತ್ಪರ್ಯ.

**ಸಾರಭಕ್ತಿ ಜ್ಞಾನದಿ ಬೃಹ ।**
**ತ್ತಾರತಮ್ಯವನರಿತು ಪಠಿಸುವ ।**
**ಸೂರಿಗಳಿಗನುದಿನದಿ ಪುರುಷಾರ್ಥಗಳ ಪೂರೈಸಿ ॥**
**ಕಾರುಣಿಕ ಮರುತಾಂತರಾತ್ಮಕ ।**
**ಮಾರರಮಣ ಜಗನ್ನಾಥವಿಠಲ ।**
**ತೋರಿಕೊಂಬನು ಹೃತ್ಕಮಲದೊಳು ಯೋಗ್ಯತೆಗಳರಿತು ॥ ೫೭ ॥**

ಈ ಸಂಧಿಯನ್ನು ಪಠನಾದಿಗಳ ಮಾಡುವವರಿಗೆ, ಫಲವನ್ನು ಹೇಳುತ್ತಾರೆ.

ಸಾರ–ಸಾರಭೂತನಾದ ಶ್ರೀಪರಮಾತ್ಮನಲ್ಲಿ, ಜ್ಞಾನದಿ–ತಾರತಮ್ಯ ಪಂಚಭೇದ ಜ್ಞಾನದಿಂದ, ಭಕ್ತಿ–ಸ್ನೇಹೋಪೇತ ಭಕ್ತಿಪೂರ್ವಕವಾಗಿ, ಅರಿತು–ದೇವರ ಮಹಾತ್ಮೆ, ದೇವತೆಗಳ ಮಹಾತ್ಮೆ ತಿಳಿದು, ಬೃಹತ್ತಾರತಮ್ಯವನು–ಈ ಬೃಹತ್ತಾರತಮ್ಯವನ್ನ, ಪಠಿಸುವ–ಪಠನಮಾಡತಕ್ಕ, ಸೂರಿಗಳಿಗನುದಿನದಿ–ಪ್ರತಿದಿನದಲ್ಲೂ ಜ್ಞಾನಿಗಳಿಗೆ, ಪುರುಷಾರ್ಥಗಳ ಪೂರೈಸಿ – ಪ್ರಯೋಜನಗಳಾದ ಇಷ್ಟಾರ್ಥಗಳ ಕೊಟ್ಟು, ಕಾರುಣಿಕ – ಸರ್ವಕ್ಕೂ ಮೂಲಕಾರಣನಾದ, ಮರುತಾಂತರಾತ್ಮಕ – ಶ್ರೀ ಭಾರತೀಪತಿಮುಖ್ಯ ಪ್ರಾಣಾಂತರ್ಗತ, ಮಾರರಮಣ – ಲಕ್ಷ್ಮೀಪತಿಯಾದ ಶ್ರೀ ನಾರಾಯಣದೇವರಾದ, ಜಗನ್ನಾಥವಿಠಲ–ಜಗತ್ತಿಗೇ ಸ್ವಾಮಿಯಾದ, ವಿಠ್ಠಲಸಾಂಕೇತನಾದ ಶ್ರೀ ಬಿಂಬರೂಪಿ

ಪರಮಾತ್ಮನು, ಯೋಗ್ಯತೆಗಳರಿತು–ಅವರವರ ಯೋಗ್ಯತಾ ತಿಳಿದವನಾಗಿ, ಹೃತ್ಕಮಲದೊಳು – ಹೃದಯಾಂತರ್ಗತ ಅಷ್ಟದಳಕಮಲದೊಳು, ತೋರಿಕೊಂಬನು – ಪ್ರತ್ಯಕ್ಷನಾಗುವನು.

## ನಿರಂಶರಾದ ಪ್ರಾಣಿಗಳಿಗೆ ಆಯುರ್ಮಾನ ವಿವರ :–

| ಸಂಖ್ಯಾ | ಪ್ರಾಣಿಗಳು | ಆಯುಸ್ಸು ವರ್ಷಗಳು | ಸಂಖ್ಯಾ | ಪ್ರಾಣಿಗಳು | ಆಯುಸ್ಸು ವರ್ಷಗಳು |
|---|---|---|---|---|---|
| ೧. | ಮನುಷ್ಯರಿಗೆ | ೧೦೦ | ೧೪. | ಇರುವೆಗಳಿಗೆ | ೧ |
| ೨. | ವೃಕ್ಷಗಳಿಗೆ | ೧೦೦೦ | ೧೫. | ಕತ್ತೆಗಳಿಗೆ | ೨೪ |
| ೩. | ಕುದರಿಗಳಿಗೆ | ೩೨ | ೧೬. | ಮ್ಯಾಕಿಗಳಿಗೆ | ೧೨ |
| ೪. | ಗಜಗಳಿಗೆ | ೧೨೦ | ೧೭. | ಗಿಣಿಗಳಿಗೆ | ೧೨ |
| ೫. | ಹುಲಿಗಳಿಗೆ | ೬೪ | ೧೮. | ಬೆಕ್ಕುಗಳಿಗೆ | ೧೩ |
| ೬. | ಕಾಗಿಗಳಿಗೆ | ೧೦೦೦ | ೧೯. | ಹಂಸಗಳಿಗೆ | ೫೦ |
| ೭. | ಸರ್ಪಗಳಿಗೆ | ೧೦೦೦ | ೨೦. | ಕುಕ್ಕುಟಗಳಿಗೆ | ೮ |
| ೮. | ಭಲ್ಲೂಕ ಅಂದರೆ, ನರಿಗಳಿಗೆ | ೩೦೦ | ೨೧. | ಪಾವುರಾಯಿಗೆ (ಹಾವುರಾಣಿ) | ೫ |
| ೯. | ಕೋತಿಗಳಿಗೆ | ೩೦೦ | ೨೨. | ದೇವಾಲಯಕ್ಕೆ | ೧೦೦೦ |
| ೧೦. | ಕಪ್ಪೆಗಳಿಗೆ | ೩೦೦ | ೨೩. | ತಟಾಕಕ್ಕೆ | ೧೦೦೦ |
| ೧೧. | ನವಿಲುಗಳಿಗೆ | ೨೦ | ೨೪. | ಸರೋವರಕ್ಕೆ | ೧೦೦೦ |
| ೧೨. | ಶುಕಕ್ಕೆ | ೧೩ | ೨೫. | ಭಾವಿಗಳಿಗೆ | ೧೦೦೦ |
| ೧೩. | ಪಕ್ಷಿಗಳಿಗೆ | ೨೦ | | | |

## ಆಹಾರಮರ್ಯಾದಾ ವಿವರ

| | ಯೋನಿಜಗಳು | ಯೋನಿಸಂಖ್ಯಾ |
|---|---|---|
| ೧. | ಚಂದ್ರಿಕಾಭಕ್ಷಣ .... .... | ೨,೦೦,೦೦೦ |
| ೨. | ಮಾಂಸಭಕ್ಷಣ .... .... | ೧೨,೦೦,೦೦೦ |
| ೩. | ಪರ್ಣಭಕ್ಷಣ .... .... | ೭,೦೦,೦೦೦ |
| ೪. | ಕಾಷ್ಠಭಕ್ಷಣ .... .... | ೨,೦೦,೦೦೦ |

| | ಯೋನಿಜಗಳು | | | ಯೋನಿಸಂಖ್ಯಾ |
|---|---|---|---|---|
| ೫. | ಮಧುಭಕ್ಷಣ | .... | .... | ೧,೦೦,೦೦೦ |
| ೬. | ಅಗ್ನಿಭಕ್ಷಣ | .... | .... | ೧,೦೦,೦೦೦ |
| ೭. | ಜಲಭಕ್ಷಣ | .... | .... | ೧೨,೦೦,೦೦೦ |
| ೮. | ವಾಯುಭಕ್ಷಣ | .... | .... | ೪,೦೦,೦೦೦ |
| ೯. | ಕುಣಪಭಕ್ಷಣ | .... | .... | ೭,೦೦,೦೦೦ |
| ೧೦. | ಅಂಧಕಾರಭಕ್ಷಣ | .... | .... | ೨೦,೦೦,೦೦೦ |
| ೧೧. | ವ್ರೀಹ್ಯಾದಿಭಕ್ಷಣ | .... | .... | ೧೬,೦೦,೦೦೦ |
| | | | | ೮೪,೦೦,೦೦೦ |

ಅಂತು ಎಂಭತ್ತುನಾಲ್ಕು ಲಕ್ಷ ಯೋನಿಗಳು.

**ಶ್ರೀಮತ್ಸತ್ಯಪರಾಯಣತೀರ್ಥಕರಕಮಲಸಂಜಾತಶ್ರೀಮತ್ಸಂಕರ್ಷಣ-ತೀರ್ಥವಿರಚಿತಾಯಾಂ ಶ್ರೀಮದ್ಧರಿಕಥಾಮೃತಸಾರಕನ್ನಡಭಾಷಾ-ಟೀಕಾಯಾಂ ಆವೇಶಾವತಾರಸಂಧಿವ್ಯಾಖ್ಯಾನಂ ಸಂಪೂರ್ಣಂ**

|| ಶ್ರೀ ಕೃಷ್ಣಾರ್ಪಣಮಸ್ತು ||

|| ಓಂ ಶ್ರೀ ಗುರುಭ್ಯೋ ನಮಃ ಹರಿಃ ಓಂ ||

# ಇಪ್ಪತ್ತೆರಡನೆಯ ಸಂಧಿ

## ಸಕಲದುರಿತನಿವಾರಣ ಸಂಧಿ

## (ಭಕ್ತಾಪರಾಧಸಹಿಷ್ಣು ಸಂಧಿ)

**ಹರಿಕಥಾಮೃತಸಾರ ಗುರುಗಳ ।**
**ಕರುಣದಿಂದಾಪನಿತು ಪೇಳುವೆ ।**
**ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥ ಪ ॥**

**ಮೂಲ :**

**ಶ್ರೀಲಕುಮಿವಲ್ಲಭಗೆ ಸಮ ಕರು ।**
**ಣಾಳುಗಳ ನಾ ಕಾಣೆನೆಲ್ಲಿ ಕು ।**
**ಚೇಲನವಲಿಗೆ ಮೆಚ್ಚಿ ಕೊಟ್ಟನು ಸಕಲ ಸಂಪದವ ॥**
**ಕೇಳಿದಾಕ್ಷಣ ವಸ್ತ್ರಗಳ ಪಾಂ ।**
**ಚಾಲಿಗಿತ್ತನು ದೈತ್ಯನುದರವ ।**
**ಸೀಳಿ ಸಂತೈಸಿದನು ಪ್ರಹ್ಲಾದನ ಕೃಪಾಸಾಂದ್ರ ॥ ೧ ॥**

ಶ್ರೀಪರಮಾತ್ಮ ಪರಮದಯಾಳು ಎಂತ ಹೇಳತಾರೆ.

**ಟೀಕಾ :**

ಶ್ರೀಲಕುಮಿವಲ್ಲಭಗೆ–ಕಾಂತಿಸಂಪನ್ನರಾದ ಲಕ್ಷ್ಮೀದೇವೇರಿಗೆ ಪತಿಯಾದ ಗುಣ ಪೂರ್ಣನಾದ ಶ್ರೀ ನಾರಾಯಣದೇವರಿಗೆ, ಸಮ ಕರುಣಾಳುಗಳ–ಅಸ್ವತಂತ್ರಪ್ರಾಣಿ ಗಳಾದ, ತನ್ನ ಪಾದಾವಲಂಬನ ಸ್ವರೂಪಸ್ವಭಾವದಲ್ಲುಳ್ಳ ಜೀವರಲ್ಲಿ, ಕರುಣಮಾಡೋ ವಿಷಯದಲ್ಲಿ ಸಮರಾದ ಕರುಣಾಳುಗಳು, ಎಲ್ಲಿ–ರಮಾಬ್ರಹ್ಮಾದಿ ದೇವತೆಗಳ ಒಳಗೆ ಎಲ್ಲಿ ನೋಡಿದ ಕಾಲಕ್ಕೂ, ನಾಕಾಣೆನು–ನಾನು ಕಾಣೆ ಎಂದರೆ ರಮಾಬ್ರಹ್ಮಾದಿಗಳು ತಮ್ಮ ತಮ್ಮ ಸ್ವಾವರರಲ್ಲಿ ಅಂತಃಕರಣ ಮಾಡತಕ್ಕವರಾದಕಾಲಕ್ಕೂ ಶ್ರೀಪರಮಾತ್ಮನ ವ್ಯತಿರಿಕ್ತ ಪಾರ್ಥಿಕ್ಯೇನ ಅಂತಃಕರಣಮಾಡತಕ್ಕವರನ್ನು ನಾನು ನೋಡಲಿಲ್ಲ ಎಂತ ತಾತ್ಪರ್ಯ. ಕುಚೇಲನವಲಿಗೆ–ಸುಧಾಮನಾಮಕ ಭಕ್ತ ತನ್ನ ಛಿದ್ರವಸ್ತ್ರದಲ್ಲಿ ಕಟ್ಟಿ ತಂದುಕೊಟ್ಟ ಅವಲಕ್ಕಿಗಾಗಿ, ಮೆಚ್ಚಿ–ತಾನು ಅತಿ ಸಂತೋಷದಿಂದ ಆ ಅವಲಕ್ಕಿ ಕಾರಣಮಾಡಿ ಕೊಂಡು, ಸಕಲ ಸಂಪದವ–ಐಹಿಕ, ಪಾರತ್ರಿಕದಲ್ಲಿ ಆಗಬೇಕಾದ ಸಮಸ್ತವಾದ ಸಂಪತ್ತನ್ನ, ಕೊಟ್ಟನು–ಕೊಡೋವನಾದನು. ಅವಲಕ್ಕಿ ಸರ್ವಸಾಧಾರಣ, ಸರ್ವರೂ

ತದ್ದ್ವಾರಾ ಮಹದೈಶ್ವರ್ಯ ಹೊಂದಬಹುದಲ್ಲಾ ಎಂದರೆ ಶ್ರೀಪರಮಾತ್ಮಗೆ ಅಪರೂಪವಾದ ಭಕ್ತಿರಸ ಆ ಅವಲಕ್ಕಿ ಒಳಗೆ ಮೇಳನಮಾಡಿಕೊಡೋಣದರಿಂದ ಅಂಥಾ ರಸಯುಕ್ತವಾದ ಅವಲಕ್ಕಿಗೆ ಮಹಾಫಲ ಕೊಡೋವನಾದನೇ ಹೊರ್ತು ಬರೀ ಅವಲಕ್ಕಿ ಕೊಟ್ಟಮಾತ್ರಕ್ಕೇ ಮಹದೈಶ್ವರ್ಯ ಕೊಟ್ಟವನಲ್ಲ ಎಂತ ತಾತ್ಪರ್ಯ ; ಕೇಳಿದಾಕ್ಷಣ – ದ್ರೌಪದೀದೇವೇರ ವಸ್ತ್ರವನ್ನು ಸಭಾದಲ್ಲಿ ದುರ್ಯೋಧನಾದಿಗಳು 'ಸೆಳಿ' ಎಂತ ಹೇಳಿದ ಮಾತು ಸರ್ವತ್ರ ವ್ಯಾಪ್ತನಾದ ಪರಮಾತ್ಮ ಕೇಳಿದಾಕ್ಷಣ ಮತ್ತು ದ್ರೌಪದೀದೇವೇರ ಮೊರೆ ಕೇಳಿದಾಕ್ಷಣವೇ ಪರಮಾತ್ಮನು ಮಾನುಷತ್ವೇನ ಅವತಾರಮಾಡಿದ ಕಾರಣದ ದೆಶೆಯಿಂದ ಅಜ್ಞಾನ ಶೂನ್ಯನಾದಕಾಲಕ್ಕೂ ಮಾನುಷಲೀಲಾ ತೋರಿಸಬೇಕಾಗಿ, ತನಗೆ ಪ್ರಾಪ್ತವಾದ ಆಪತ್ತು ಪರಿಹಾರಮಾಡೆಂದು ಮಾಡಿದ ಪ್ರಾರ್ಥನಾ ಕೇಳಿದಾಕ್ಷಣ, ವಸ್ತ್ರಗಳ–ಉಟ್ಟ ಒಂದು ವಸ್ತ್ರವೇ ನಾನಾ ವಿಚಿತ್ರವಾದ ಅನೇಕ ವಸ್ತ್ರಗಳು ಆಗುವಂತೆ, ಪಾಂಚಾಲಿಗಿತ್ತನು– ದ್ರೌಪದೀದೇವೇರಿಗೆ ಅನುಗ್ರಹಮಾಡಿಕೊಡೋವನಾದನು. ಪ್ರಹ್ಲಾದನ – ಭಕ್ತಿಭರಿತ ನಾದ ಪ್ರಹ್ಲಾದನ ನುಡಿ ಕೇಳಿ ಕಂಭದಿಂದ ಜನಿಸಿ ಬಂದ ಶ್ರೀ ನೃಸಿಂಹದೇವರು, ದೈತ್ಯನುದರವ ಸೀಳಿ–ದೈತ್ಯನಾದ ಭಗವದ್ದ್ವೇಷಿಯಾದ ಹಿರಣ್ಯಕಶಿಪುವಿನ ಉದರ ಸೀಳಿದವ ನಾಗಿ, ಸಂತೈಸಿದನು–ಪ್ರಹ್ಲಾದಗೆ ಅವನ ತಂದೆಯ ಬಾಧಾ ಪರಿಹಾರಮಾಡೋವನಾದನು. ಕೃಪಾಸಾಂದ್ರ–ದಯಾಸಮುದ್ರನಾದ ಶ್ರೀಪರಮಾತ್ಮ ತನ್ನ ಭಕ್ತರನ್ನ ಈ ಪ್ರಕಾರ ಸಂರಕ್ಷಿಸಿದನೆಂದು ತಾತ್ಪರ್ಯ. ಶ್ರೀಪರಮಾತ್ಮ ರಕ್ಷಿಸಬೇಕಾದರೆ ಭಕ್ತಿ ಪ್ರಾಧಾನ್ಯ ಎಂತ ತಾತ್ಪರ್ಯ.

**ದೇವಶರ್ಮಾಹ್ವಯ ಕುಟುಂಬಕೆ ।**
**ಜೀವನೋಪಾಯವನು ಕಾಣದೆ ।**
**ದೇವದೇವ ಶರಣ್ಯ ರಕ್ಷಿಸು ರಕ್ಷಿಸೆನೆ ಕೇಳಿ ॥**
**ತಾನೊಲಿದು ಪಾಲಿಸಿದ ಸೌಖ್ಯ ಕೃ ।**
**ಪಾವಲೋಕನದಿಂದ ಈತನ ।**
**ಸೇವಿಸದೆ ಸೌಖ್ಯಗಳ ಬಯಸುವರಲ್ಪಮಾನವರು ॥ ೨ ॥**

ಮತ್ತೂ ಶ್ರೀಪರಮಾತ್ಮನ ದಯಾಳುತ್ವವನ್ನೇ ಹೇಳತಾರೆ.

ದೇವಶರ್ಮಾಹ್ವಯ–ದೇವಶರ್ಮನೆಂಬ ಬ್ರಾಹ್ಮಣನು, ಕುಟುಂಬಕೆ ಜೀವನೋ ಪಾಯವನು ಕಾಣದೆ–ಅತ್ಯಂತ ದರಿದ್ರನಾಗಿ ಜೀವನಮಾಡುವುದಕ್ಕೆ ದಾವ ಉಪಾಯವೂ ಕಾಣದೇನೆ, ದೇವ ದೇವ–ಬ್ರಹ್ಮಾದಿಗಳಿಗೆ ಸ್ವಾಮಿಯಾದವನೇ, ಗುಣಪೂರ್ಣನಾದ ಶ್ರೀ ಶ್ರೀನಿವಾಸನೇ, ಶರಣ್ಯ–ತನ್ನ ಭಕ್ತರಿಂದ ವಂದನಮಾಡಿಸಿಕೊಳ್ಳಲ್ಪಟ್ಟವನೇ, ರಕ್ಷಿಸು ರಕ್ಷಿಸೆನೆ–ತನ್ನ ಕಾಪಾಡಬೇಕು ಎಂತ ಕೇವಲ ಪ್ರಾರ್ಥನ ಮಾಡಿದನು, ಅಂಬೋಣದರಿಂದ ಆದ ಆ ದ್ವಿರುಕ್ತಿ, ಕೇಳಿ ತಾನೊಲಿದು–ಆ ಮಾತನ್ನ ಕೇಳಿ ಶ್ರೀಪರಮಾತ್ಮ ತಾನು ಒಲಿದು, ಕೃಪಾವಲೋಕನದಿಂದ–ಕರುಣಾ ಎನತಕ್ಕ ಕಟಾಕ್ಷವೀಕ್ಷಣದಿಂದ, ಸೌಖ್ಯ–ಇಹದಲ್ಲಿ

ದಾರಿದ್ರ್ಯನಾಶ, ಪಾರತ್ರಿಕದಲ್ಲಿ ಮೋಕ್ಷವನ್ನು, ಪಾಲಿಸಿದ–ಕೊಡೋವನಾಗಿದ್ದಾನೆ. ಆದಕಡಿಯಿಂದ, ಅಲ್ಪಮಾನವರು–ಅಜ್ಞಾನಿಗಳಾದವರು, ಭಗವದ್ಭಕ್ತಿರಹಿತರಾದವರು, ಈತನ ಸೇವಿಸದೆ–ಈ ದೇವರನ್ನ ಸೇವೆ ಮಾಡದೆ, ಸೌಖ್ಯಗಳ ಬಯಸುವರು–ಅನ್ಯದೇವತೆಗಳ ಪೂಜೆಮಾಡಿ, ನಶ್ವರವಾದ ಅಲ್ಪಸುಖ ಹೊಂದತಾರೇ ಹೊರ್ತು, ಇಹಪರಕ್ಕೆ ಸಾರ್ಥಕವಾದ ಸೇವೆ ಮಾಡದೆ ಅಲ್ಪಫಲ ಹೊಂದಿ ಇಹಸುಖ ಬೇಡುತ್ತಾರೆ. ಮಹಾಸುಖ ಹೊಂದಬೇಕಾದರೆ ಶ್ರೀಪರಮಾತ್ಮನ ಅನುಗ್ರಹದ ಹೊರ್ತು ಅನ್ಯ ದೇವತೆಗಳಿಂದ ಆಗೋದಿಲ್ಲ ಎಂತ ತಾತ್ಪರ್ಯ.

**ಶ್ರೀನಿವಾಸನ ಪೋಲ್ವ ಕರುಣಿಗ ।**
**ಳೀನಳಿನಜಾಂಡದೊಳು ಕಾಣೆ ಪ್ರ ।**
**ವೀಣರಾದವರರಸಿ ನೋಳ್ಪುದು ಶ್ರುತಿ ಪುರಾಣದೊಳು ॥**
**ದ್ರೋಣ ಭೀಷ್ಮ ಕೃಪಾದಿಗಳು ಕುರು ।**
**ಸೇನೆಯೊಳಗಿರಲವರವಗುಣಗ ।**
**ಳೇನು ನೋಡದೆ ಪಾಲಿಸಿದ ಪರಮಾತ್ಮ ಪರಗತಿಯ ॥ ೩ ॥**

ಮತ್ತು ಶ್ರೀಪರಮಾತ್ಮನ ಕರುಣ ವಿಚಾರವೇ ಹೇಳತಾರೆ.

ಶ್ರೀನಿವಾಸನ ಪೋಲ್ವ–ಲಕ್ಷ್ಮೀನಿಲಯನಾದ ಸರ್ವೋತ್ತಮನಾದ ಗುಣಪೂರ್ಣನಾದ ಶ್ರೀನಿವಾಸದೇವರಿಗೆ ಸದೃಶರಾದ, ಕರುಣಿಗಳ–ಅಸದೃಶವಾದ ಕರುಣಾಮಾಡತಕ್ಕವರ, ಈ ನಳಿನಜಾಂಡದೊಳು – ವರ್ತಮಾನ ಬ್ರಹ್ಮಾಂಡದೊಳು, ಕಾಣೆ – ನಾನು ಕಾಣಲಿಲ್ಲ. ಇದೇ ನ್ಯಾಯ ಅಂತ ಬ್ರಹ್ಮಾಂಡದಲ್ಲೂ, ಪ್ರವೀಣರಾದವರು–ಕುಶಲರಾದ ಅಪರೋಕ್ಷಜ್ಞಾನಿಗಳಾದವರು, ಶ್ರುತಿಪುರಾಣದೊಳು–ವೇದಗಳಲ್ಲಿ, ಪುರಾಣಗಳಲ್ಲಿ, ಅರಸಿ ನೋಳ್ಪುದು–ಹುಡುಕಿ ನೋಡೋವರಾಗಬೇಕು. ವೇದಪುರಾಣಗಳಲ್ಲಿ ಹುಡುಕಿನೋಡಲು ಅನ್ಯರು ದಾರೂ ಇಲ್ಲ ಅಂದರೆ, ಕಂಡಂತಲೂ ಇಲ್ಲ, ಎಂತ ತಾತ್ಪರ್ಯ. ದ್ರೋಣ ಭೀಷ್ಮ ಕೃಪಾದಿಗಳು–ದ್ರೋಣಾಚಾರ್ಯರು, ಭೀಷ್ಮಾಚಾರ್ಯರು, ಕೃಪಾಚಾರ್ಯರು ಇವರೇ ಮೊದಲಾದ ಇನ್ನೂ ಕೆಲವರು, ಕುರುಸೇನೆಯೊಳಗಿರಲು–ಭಗವದ್ದ್ವೇಷ, ಭಕ್ತರ ದ್ವೇಷಯುಕ್ತನಾದ ದುರ್ಯೋಧನನ ಸೈನ್ಯದೊಳಗಿದ್ದು ಅವನಿಗೆ ಸಹಾಯಭೂತರಾಗಿರಲು, ಅವರ, ಅವಗುಣಗಳೇನು ನೋಡದೆ–ಕುರುಸೇನೆಯಲ್ಲಿ ಇದ್ದಕಾಲಕ್ಕೂ ಶ್ರೀಪರಮಾತ್ಮನಲ್ಲಿ ಭಕ್ತಿ ಕೆಡಲಿಲ್ಲ. ಆದ್ದರಿಂದ ಅವರ ಬಾಹ್ಯದ ಕೆಟ್ಟಗುಣಗಳೇನಿದ್ದರೂನೂ ನೋಡದೇನೇ ಭಕ್ತತ್ವೇನ ಸ್ವೀಕಾರಮಾಡಿ, ಪರಮಾತ್ಮ–ಶ್ರೀ ನಾರಾಯಣದೇವರು, ಪರಗತಿಯ–ಅವರಿಗೆ ಉತ್ತಮವಾದ ಸ್ವಯೋಗ್ಯಸ್ಥಾನಗಳನ್ನ, ಪಾಲಿಸಿದ–ಕೊಡೋವನಾದ. ಆದಕಡಿಯಿಂದ ಕರ್ಮವಶಾತ್ತಾಗಿ ದುಷ್ಕರ್ಮಮಾಡಿದರೂ ಶ್ರೀದೇವರಲ್ಲಿ ಭಕ್ತಿವಿಶ್ವಾಸ ಅವಿಚ್ಛಿನ್ನವಾಗಿರಬೇಕೆಂದು ತಾತ್ಪರ್ಯ.

**ಚಂಡವಿಕ್ರಮ ಚಕ್ರಶಂಖವ ।**
**ತೊಂಡಮಾನ ನೃಪಾಲಗಿತ್ತನು ।**
**ಭಾಂಡಕಾರಕ ಭೀಮನ ಮೃದಾಭರಣಗಳಿಗೊಲಿದ ॥**
**ಮಂಡೆ ಒಡೆದಾಕಾಶರಾಜನ ।**
**ಹೆಂಡತಿಯ ನುಡಿ ಕೇಳಿ ಮಗಳಿಗೆ ।**
**ಗಂಡನೆನಿಸಿದ ಗಹನಮಹಿಮ ಗದಾಬ್ಜಧರಪಾಣಿ ॥ ೪ ॥**

ಇನ್ನೂ ಶ್ರೀ ಪರಮಾತ್ಮನ ಮಹಾಮಾಹಾತ್ಮ್ಯವನ್ನೇ ಹೇಳತಾರೆ.

ಚಂಡವಿಕ್ರಮ – ಮಹಾಬಲಿಷ್ಠನಾದ ಶ್ರೀನಿವಾಸದೇವರು, ಕೇವಲ ಭಕ್ತರಲ್ಲಿ ಪರಮಾಂತಃಕರಣಯುಕ್ತನಾಗಿ ತನ್ನ ಹಸ್ತದಲ್ಲಿ ಇದ್ದಂಥಾ, ಚಕ್ರಶಂಖವ–ಚಕ್ರಾಯುಧ, ಶಂಖ ಈ ಎರಡೂನೂ, ತೊಂಡಮಾನನೃಪಾಲಗಿತ್ತನು–ತೋಂಡಮಾನರಾಜಗೆ ಯುದ್ಧ ಕಾಲದಲ್ಲಿ ಕೊಡೋವನಾಗಿದ್ದಾನೆ; ಭಾಂಡಕಾರಕ ಭೀಮನ–ಕುಂಬಾರನಾದ ಭೀಮ ಎಂಬುವನ, ಮೃದಾಭರಣಗಳಿಗೊಲಿದ–ಮಣ್ಣಿನಿಂದ ಮಾಡಿದ ತುಲಸೀ ಮೊದಲಾದ ಆಭರಣಗಳಿಗೆ ದೇವರು ಸಂತೋಷಪಡುವನಾದ ಮತ್ತು, ಒಡೆದ–ಗೋಪಾಲಕನ ಕುಠಾರ ದಿಂದ ಒಡೆಯಲ್ಪಟ್ಟ, ಮಂಡೆ–ಶಿರಸ್ಸುಳ್ಳ ಶ್ರೀನಿವಾಸದೇವರು, ಆಕಾಶರಾಜನ–ಆಕಾಶ ರಾಯನ, ಮಗಳಿಗೆ–ಪುತ್ರಿಯಾದ ಪದ್ಮಾವತೀದೇವೇರಿಗೆ, ಹೆಂಡತಿಯ ನುಡಿ ಕೇಳಿ– ರಾಮಾವತಾರದಲ್ಲಿ ತನ್ನ ಪತ್ನಿಯಾದ ಸೀತಾದೇವೇರ ವಾಕ್ಯ ಕೇಳಿ, ಶ್ರೀ ಶ್ರೀನಿವಾಸಾವ ತಾರದಲ್ಲಿ, ಗಂಡನೆನಿಸಿದ–ಪತಿ ಎಂತ ಎನಿಸೋವನಾದ, (ಮತ್ತು ಆಕಾಶರಾಯನ ಹೆಂಡತಿ ಧರಣೀದೇವಿಯ ನುಡಿಯನ್ನ ಬಕುಳಮಾಲಾ ದ್ವಾರಾ ಕೇಳಿದವನಾಗಿ, ಆಕಾಶ ರಾಯನ ಮಗಳಿಗೆ ಪತಿ ಎನಿಸಿದ ಎಂತಲೂ ತಾತ್ಪರ್ಯವೇ.) ಗಹನಮಹಿಮ– ಈ ಶ್ರೀನಿವಾಸದೇವರು ಎಂಥಾವನೆಂದರೆ ಅಪ್ರಮೇಯನಾದವನು, ಗದಾಬ್ಜಧರಪಾಣಿ– ಗದಾಯುಧ, ಪದ್ಮಾಯುಧ, ಎರಡೂ ಧರಿಸಿ ಇರತಕ್ಕವನೆಂದು ತಾತ್ಪರ್ಯ. ಶಂಖ ಚಕ್ರಗಳು ತೋಂಡಮಾನ ನೃಪಾಲಗೆ ಕೊಡೋವನಾಗಿದ್ದಾನೆಂತ ಪೂರ್ವದಲ್ಲಿ ಹೇಳ ಲ್ಪಟ್ಟಿದೆ. ಭಕ್ತರಲ್ಲಿ ಇಂಥಾ ದಯವುಳ್ಳವನು ಎಂತ ತಾತ್ಪರ್ಯ. ಇಂಥಾ ಅನುಗ್ರಹ ಮಾಡೋದಕ್ಕೆ ಭಕ್ತರ ಆ ಭಕ್ತಿಯೇ ಕಾರಣವೆಂದು ಅರ್ಥ.

**ಗೌತಮನ ನಿಜಪತ್ನಿಯನು ಪುರು ।**
**ಹೂತನೈದಿರೆ ಕಾಯ್ದು ವೃತ್ರನ ।**
**ಘಾತಿಸಿದ ಪಾಪವನು ನಾಲ್ಕುವಿಭಾಗ ಮಾಡಿದನು ॥**
**ಶಾತಕುಂಭಾತ್ಮಕ ಕಿರೀಟವ ।**
**ಕೈತವದಿ ಕದ್ದೊಯಿದ ಇಂದ್ರಾ ।**
**ರಾತಿ ಬಾಗಿಲ ಕಾಯ್ದ ಭಕ್ತತ್ವೇನ ಸ್ವೀಕರಿಸಿ ॥ ೫ ॥**

ಇನ್ನೂ ಶ್ರೀ ಪರಮಾತ್ಮನ ಮಾಹಾತ್ಮ್ಯವನ್ನೇ ಹೇಳತಾರೆ.

ಗೌತಮನ–ಗೌತಮಋಷಿಗಳ, ನಿಜಪತ್ನಿಯನು–ಸ್ವಕೀಯಳಾದ ಹೆಂಡತಿಯಾದ ಅಹಲ್ಯಾದೇವಿಯನ್ನು, ಪುರುಹೂತನೈದಿರೆ–ಇಂದ್ರದೇವರು (ಕ್ರೀಡಾಮಾಡೋವರಾದರು) ಹೊಂದಿರಲಾಗಿ, ಆಕಿ ಪತಿಶಾಪದಿಂದ ಶೈಲತ್ವವನ್ನು ಐದಿರಲಾಗಿ, ಕಾಯ್ದು–ರಾಮಾವತಾರದಲ್ಲಿ ತನ್ನ ಪಾದಸ್ಪರ್ಶದಿಂದ ಆಕಿಯನ್ನು ಪುನಃ ದಿವ್ಯಸ್ತ್ರೀಯನ್ನಾಗಿ ಮಾಡಿ, ಗೌತಮರಿಗೆ ಕೊಡೋವನಾದ ; ವೃತ್ರನ ಘಾತಿಸಿದ–ಇಂದ್ರನು ಬ್ರಾಹ್ಮಣನಾದ ವೃತ್ರಾಸುರನ್ನ ಸಂಹಾರಮಾಡಿದ, ಪಾಪವನು ನಾಲ್ಕುವಿಭಾಗ ಮಾಡಿದನು–ಪಾಪವನ್ನ ನಾಲ್ಕು ಭಾಗವನ್ನಾಗಿ ಮಾಡಿದವನಾಗಿ, ಒಂದು ಭಾಗ ಸ್ತ್ರೀಯರಲ್ಲಿ ಋತುರೂಪದಿಂದಲೂ, ಎರಡನೇಯ ಭಾಗ ಉದಕದಲ್ಲಿ ಫೇನರೂಪದಿಂದಲೂ, ಮೂರನೆಯ ಭಾಗ ವೃಕ್ಷಗಳಲ್ಲಿ ಗೋಂದುರೂಪದಿಂದಲೂ, ನಾಲ್ಕನೇಯ ಭಾಗ ಊಸರಕ್ಷೇತ್ರದಲ್ಲಿ (ಬಂಜರುಭೂಮಿ) ಸವಳುರೂಪದಿಂದಲೂ, ಈ ಪ್ರಕಾರ ನಾಲ್ಕುಭಾಗ ಮಾಡಿ ಅಲ್ಲಲ್ಲಿ ಇಡೋವನಾಗಿದ್ದಾನೆ. ಈ ಪ್ರಕಾರ ಇಟ್ಟು ಇಂದ್ರದೇವರನ್ನ ಕಾಪಾಡೋವನಾದನು. ಶಾತಕುಂಭಾತ್ಮಕ–ಭಂಗಾರದಿಂದಲೂ, ನವರತ್ನಗಳಿಂದಲೂ ಚಕ್ಕಿತವಾದ, ಕಿರೀಟವ–ಶ್ರೀ ಪರಮಾತ್ಮನ ಕಿರೀಟವನ್ನು, ಕೈತವದಿ–ಕಳ್ಳತನದಿಂದ, ಕದ್ದೊಯಿದ–ತೆಗೆದುಕೊಂಡುಹೋದಂಥಾ, ಇಂದ್ರಾರಾತಿ–ಇಂದ್ರದೇವರಿಗೆ ಶತ್ರುವಾದ ಬಲಿಚಕ್ರವರ್ತಿಯನ್ನು, ಭಕ್ತತ್ವೇನ ಸ್ವೀಕರಿಸಿ–ಈ ಬಲಿಚಕ್ರವರ್ತಿ ಅಸುರಯೋನಿಜನಾದಾಗ್ಯೂನೂ ಸ್ವರೂಪ ಸ್ವಭಾವದಲ್ಲಿ ದೇವರಲ್ಲಿ ಭಕ್ತಿಯಿರುವದ್ದರಿಂದಲೂ, ಮತ್ತು ಶುಕ್ರಾಚಾರ್ಯರಿಂದ ತಾನು, ಶ್ರೀ ವಾಮನರೂಪಿ ಪರಮಾತ್ಮ ಸರ್ವೋತ್ತಮನೆಂದು ತಿಳಿದು, ಈ ದೇವರು ಬೇಡಿದ ದಾನವನ್ನು ತಕ್ಷಣವೇ ಭಕ್ತಿಯಿಂದ ಕೊಟ್ಟದ್ದರಿಂದಲೂ, ಈ ಬಲಿಚಕ್ರವರ್ತಿಯನ್ನ ಭಕ್ತತ್ವೇನ ಎಣಿಸಿದವನಾಗಿ, ಬಾಗಿಲ ಕಾಯ್ದು–ಇವನ ದ್ವಾರಪಾಲಕನಾಗಿ ಇದ್ದಾನೆ. ಆದಕಡಿಯಿಂದ ಶ್ರೀಪರಮಾತ್ಮ, ಭಕ್ತರಲ್ಲಿ ಪರಮಾಂತಃಕರಣವುಳ್ಳವನೆಂದು ತಾತ್ಪರ್ಯ.

**ನಾರ ನಂದವ್ರಜದ ಸ್ತ್ರೀಯರ ।**
**ಜಾರಕರ್ಮಕೆ ಒಲಿದು ಅಜ ಸುಕು ।**
**ಮಾರನೆನಿಸಿದ ನಂದಗೋಪಗೆ ನಳಿನಭವಜನಕ ॥**
**ವೈರವರ್ಜಿತ ದೈತ್ಯರನು ಸಂ ।**
**ಹಾರಮಾಡಿದ ವಿಪಗಮನ ಪೆಗ ।**
**ಲೇರಿದನು ಗೋಪಾಲಕರ ವೃಂದಾವನದೊಳಿದ್ದು ॥ ೬ ॥**

ಶ್ರೀ ಪರಮಾತ್ಮನ ಮಾಹಾತ್ಮ್ಯ ಹೇಳತಾರೆ.

ನಾರ–ದೋಷದೂರನಾದವನ (ಅರ ಎಂತ ಪದ), ನಳಿನಭವ–ಪದ್ಮನಾಭದೇವರ ನಾಭೀಕಮಲದಿಂದ ಜನಿಸಿದ ಬ್ರಹ್ಮದೇವರಿಗೆ, ಜನಕ–ತಂದೆಯಾದ, ಅಜ–ಉತ್ಪತ್ತಿ

ಶೂನ್ಯನಾದ ಶ್ರೀ ಪರಮಾತ್ಮ, ನಂದಗೋಪಗೆ_ನಂದಗೋಪಗೆ, ಸುಕುಮಾರನೆನಿಸಿದ_ ಸತ್ಪುತ್ರನಾಗಿ ಕೃಷ್ಣ ಎಂತ ನಾಮಪಡದ ಶ್ರೀಕೃಷ್ಣದೇವರು, ನಂದವ್ರಜದ_ನಂದವ್ರಜ ನಾಮಕ ಗ್ರಾಮಗತರಾದ, ಸ್ತ್ರೀಯರ_ಸ್ತ್ರೀಯರುಗಳ, ಜಾರಕರ್ಮಕೆ ಒಲಿದು_ತಮ್ಮ ತಮ್ಮ ಪತಿಗಳು ಇರಲಾಗಿ, ಸರ್ವೋತ್ತಮನಾದ ಶ್ರೀ ಪರಮಾತ್ಮನ ಅನುಗ್ರಹಕ್ಕಾಗಿ ಶ್ರೀಕೃಷ್ಣನ ಕೂಡ ಜಾರತ್ವರೂಪವಾದ ಕರ್ಮವನ್ನು ಅವಲಂಬನಮಾಡೋವರಾದರು. ಅಂಥಾ ಕರ್ಮಕ್ಕೆ ಒಲಿದು ಅವರನ್ನ ಉದ್ಧಾರಮಾಡೋವನಾದನು. ಜಾರತ್ವವನ್ನು ದೋಷತ್ವೇನ ಎಣಿಸಲಿಲ್ಲ. ವೈರವರ್ಜಿತ_ಇಂಥಾ ಪರಮಾತ್ಮ, ದ್ವೇಷವರ್ಜಿತರಾಗಿ, ಭಕ್ತಿಯುಕ್ತರಾದವರನ್ನ ಸಂರಕ್ಷಣೆ ಮಾಡೋವನಾದನು. ದೈತ್ಯರನ_ತನ್ನಲ್ಲಿ ದ್ವೇಷ ಮಾಡಿದ ದೈತ್ಯರನ್ನ, ಸಂಹಾರಮಾಡಿದ_ನಾಶ ಐದಿಸಿದನು. ವಿಪಗಮನ_ಗರುಡವಾಹನ ನಾದ ಶ್ರೀಕೃಷ್ಣದೇವರು, ವೃಂದಾವನದೊಳಿದ್ದು_ವೃಂದಾವನನಾಮಕ ಗ್ರಾಮದೊಳು ಇದ್ದಕಾಲದಲ್ಲಿ, ಗೋಪಾಲಕರ – ಗೋಪಾಲಕರ, ಪೆಗಲೇರಿದನು – ಹೆಗಲೇರುವುದೇ ಮೊದಲಾದ ನಾನಾಕ್ರೀಡೆಗಳ ಅವರೊಡನೆ ತೋರಿದನು. ಕೆಲವರಿಗೆ ಗುಣಪೂರ್ಣನಾದ ಪರಮಾತ್ಮನೆಂತಲೂ, ಕೆಲವರಿಗೆ ಸಾಧಾರಣ ಮನುಷ್ಯನೆಂತಲೂ, ಕೆಲವರಿಗೆ ಶತ್ರು ವೆಂತಲೂ, ಕೆಲವರಿಗೆ ಮಹಾಶೂರನೆಂತಲೂ, ಕೆಲವರಿಗೆ ಮನ್ಮಥನೋಪಾದಿಯಲ್ಲಿ ಆಕಾರವುಳ್ಳವನೆಂತಲೂ, ಅವರವರ ಯೋಗ್ಯತಾನುಸಾರ ಮನಸ್ಸಿಗೂ, ದೃಷ್ಟಿಗೂ ತೋರೋವನಾಗಿದ್ದಾನೆ. ಈ ಪರಮಾತ್ಮ ಅಸದೃಶಮಹಿಮಾ ಉಳ್ಳವನೆಂದು ತಾತ್ಪರ್ಯ.

**ಶ್ರೀಕರಾರ್ಚಿತ ಪಾದಪಲ್ಲವ ।**
**ಗೋಕುಲದ ಗೊಲ್ಲತಿಯರೊಲಿಸಿದ ।**
**ಪಾಕಶಾಸನಪೂಜ್ಯ ಗೋ ಗೋವತ್ಸಗಳ ಕಾಯ್ದು ॥**
**ಓಕರಿಸಿ ಕುರುಪತಿಯ ಭೋಜನ ।**
**ಸ್ವೀಕರಿಸಿದನು ವಿದುರನೌತಣ ।**
**ಬಾಕುಲಿಕನಂದದಲಿ ತೋರಿದ ಭಕ್ತವತ್ಸಲನು ॥ ೭ ॥**

ಶ್ರೀ ಪರಮಾತ್ಮ ಎಂಥಾವನೆಂದರೆ, ಇನ್ನೂ ಶ್ರೀದೇವರನ್ನ ವರ್ಣಿಸುತ್ತಾರೆ.

ಭಕ್ತವತ್ಸಲನು – ಮಾನುಷತ್ವೇನ ಅವತಾರಮಾಡಿದ ಈ ಶ್ರೀಕೃಷ್ಣದೇವರು, ಶ್ರೀಕರಾರ್ಚಿತ_ಲಕ್ಷ್ಮೀದೇವೇರ ಕರದಿಂದ ಪೂಜಿತವಾದಂಥಾ, ಪಾದಪಲ್ಲವ_ಪಾದಗಳು ಳ್ಳವ, ಈ ಪಾದದ್ವಯಗಳು ಕೇವಲ ಚಿಗುರುಗಳು ಹ್ಯಾಂಗವೊ ತದ್ವತ್ ಅವೆ, ಗೋಕುಲದ_ಗೋಕುಲಗತ, ಗೊಲ್ಲತಿಯರ_ಗೊಲ್ಲ ಸ್ತ್ರೀಯರ, ಒಲಿಸಿದ_ಒಲಿಸೋವ ನಾದನು. ಅವರಿಗೆ ತನ್ನಲ್ಲಿ ಭಕ್ತಿಯುಂಟುಮಾಡೋವನಾಗಿ, ಅವರಗಳನ್ನ ಉದ್ಧಾರ ಮಾಡಿದನು. ಗೋಗೋವತ್ಸಗಳ ಕಾಯ್ದು_ಇಂದ್ರನ ಆಜ್ಞಾದಿಂದ, ಗೋವುಗಳು ಕರುಗಳು, ಗೋಪಾಲಕರು, ಶ್ರೀಕೃಷ್ಣದೇವರು, ಇವರುಗಳ ನಾಶಕ್ಕಾಗಿ ಮೇಘಗಳು

ಮಳೆ ಸುರಿಸಿದ ಕಾಲದಲ್ಲಿ ಗೋವರ್ಧನಪರ್ವತವನ್ನು ತನ್ನ ಎಡಗೈ ಕಿರುಬೆರಳಿನಿಂದ ಕೊಡೆಯಾಗಿ ಹಿಡಿದು, ಆಕಳು, ಕರು, ಗೋಪಾಲಕರು ಇವರುಗಳನ್ನ ಸಂರಕ್ಷಣೆಮಾಡಿ, ಇಂದ್ರನ ಅಹಂಕಾರ ಪರಿಹಾರಮಾಡಿ, ಪಾಕಶಾಸನಪೂಜ್ಯ–ಇಂದ್ರದೇವರಿಂದ ಪೂಜಿತ ನಾದವ, ಕುರುಪತಿಯ ಭೋಜನ–ದುರ್ಯೋಧನ, ಕೃಷ್ಣದೇವರಿಗೆ ಔತಣಮಾಡೋ ಉದ್ದಿಶ್ಯ ಸರ್ವಪದಾರ್ಥಗಳನ್ನೂ ಸಿದ್ಧಮಾಡಿರಲಾಗಿ, ಓಕರಿಸಿ–ಅದರನ್ನ ನಿರಾಕರಣ ಮಾಡಿದವನಾಗಿ, ವಿದುರನೌತಣ–ವಿದುರ ಕೊಟ್ಟ ಕ್ಷೀರವನ್ನ, ಸ್ವೀಕರಿಸಿದನು–ಅಂಗೀ ಕಾರಮಾಡಿದನು, ಬಾಕುಲಿಕನಂದದಲಿ ತೋರಿದ–ಭಕ್ತರಿಗೆ ಮಹಾಫಲ ಕೊಡೋ ಉದ್ದೇಶದಿಂದಲೂ, ದುರ್ಜನರಿಗೆ ಮಹಾದುಃಖ ಕೊಡೋ ಉದ್ದೇಶದಿಂದಲೂ ಈ ಪ್ರಕಾರ, ಶ್ರೀಪರಮಾತ್ಮ ಮಾಡೋವನಾದನೆಂತ ತಾತ್ಪರ್ಯ.

**ಪುತ್ರನೆನಿಸಿದ ಗೋಪಿದೇವಿಗೆ ।**
**ಭರ್ತೃವೆನಿಸಿದ ವ್ರಜದ ನಾರಿಯು ।**
**ರುತ್ರ ಲಾಲಿಸಿ ಪರ್ವತವ ನೆಗಹಿದ ಕೃಪಾಸಾಂದ್ರ ॥**
**ಶತ್ರುತಾಪನ ಯಜ್ಞಪುರುಷನ ।**
**ಪುತ್ರಿಯರ ತಂದಾಳ್ದ ತ್ರಿಜಗ ।**
**ದ್ಧಾತ್ರ ಮಂಗಳಗಾತ್ರ ಪರಮಪವಿತ್ರ ಸುರಮಿತ್ರ ॥ ೮ ॥**

ಶ್ರೀಪರಮಾತ್ಮನ ಮಹಿಮಾ ಇನ್ನೂ ಹೇಳತಾರೆ.

ತ್ರಿಜಗದ್ಧಾತ್ರ – ಹದಿನಾಲ್ಕು ಲೋಕವನ್ನ ವಿರಾಡ್ರೂಪದಿಂದ ಧರಿಸಿದಂಥಾ, ಅದಕ್ಕೆ ಆಧಾರಭೂತನಾದಂಥಾ, ಮಂಗಳಗಾತ್ರ–ಶುಭಕರವಾದ ಪೂರ್ಣಲಕ್ಷಣೋಪೇತ ವಾದ ಶರೀರವುಳ್ಳಂಥಾ, ಪರಮಪವಿತ್ರ–ಅತ್ಯಂತ ಪವಿತ್ರಕರನಾದಂಥಾ ಮತ್ತು ಪರಿಶುದ್ಧ ರಾದ, ಸುರಮಿತ್ರ–ದೇವತೆಗಳಿಗೆ ಸ್ನೇಹಿತನಾದ ಶ್ರೀಪರಮಾತ್ಮ, ಗೋಪಿದೇವಿಗೆ– ಗೋಪೀದೇವೇರಿಗೆ, ಪುತ್ರನೆನಿಸಿದ–ಪುತ್ರತ್ವೇನ ಅವತಾರಮಾಡಿ ಮಗನೆನಿಸಿದ, ಮತ್ತು ಗೋಪೀದೇವೇರಲ್ಲಿ ಇರೋವರಿಗ್ಯೂ, ಪುತ್ರನಾಗಿ ಬಾಲಕರೂಪದಿಂದ ಬಾಲಕರೋಪಾದಿ ಯಲ್ಲಿ ಇದ್ದು, ಪುತ್ರನೆನಿಸೋವನಾದ. ಶತ್ರುತಾಪನ–ಶತ್ರುಗಳ ಸಮೀಪದಲ್ಲಿ ಇದ್ದಾಗ್ಯೆ ಅವರನ್ನ ದಹಿಸೋಪಾದಿಯಲ್ಲಿ ಇರತಕ್ಕವ, ವ್ರಜದ ನಾರಿಯರ–ಗೋಕುಲದಲ್ಲಿರತಕ್ಕ ಸ್ತ್ರೀಯರ, ಉತ್ರಲಾಲಿಸಿ–ಪರಮಾತ್ಮನೇ ಪತಿ ಆಗಬೇಕೆಂದು ವ್ರತಾದಿಗಳು ಮಾಡಿ ಪರಮಾತ್ಮನ ಪ್ರಾರ್ಥಿಸೋವರಾದರು ಅಂಥಾ ವಿಜ್ಞಾಪನೆಯನ್ನು ಕೇಳಿ, ಭರ್ತೃವೆನಿಸಿದ– ಅವರಿಗೆ ಪತಿ ಎಂತ ಕರಿಸಿಕೊಂಡ, ಪರ್ವತವ ನೆಗಹಿದ–ದೇವೇಂದ್ರನ ಆಜ್ಞಾದಿಂದ ಸುರಿಯಲ್ಪಟ್ಟ ವರ್ಷಬಾಧಾದಿಂದ, ಗೋವುಗಳು, ಗೋಪಾಲಕರು, ಮೊದಲಾದವರಿಗೆ ಬಂದ ಭಯ ಪರಿಹಾರಮಾಡೋ ಉದ್ದೇಶದಿಂದ ಗೋವರ್ಧನಪರ್ವತವನ್ನ ಕೊಡೆಯೋ ಪಾದಿಯಲ್ಲಿ ಹಿಡಿಯೋವನಾದ. ಯಜ್ಞಪುರುಷನ–ಅಗ್ನಿದೇವರ, ಪುತ್ರಿಯರ–ಪುತ್ರಿಯ ರಾದ ಋಷಿಗಳು ರಾಮಾವತಾರದಲ್ಲಿ ವರಪಡೆದು ಕೃಷ್ಣಾವತಾರದಲ್ಲಿ ಸ್ತ್ರೀಯರಾಗಿ

ಜನಿಸಿದ ಇಂಥಾ ಅಗ್ನಿದೇವರ ಪುತ್ರಿಯರ, ತಂದು–ನರಕಾಸುರನ ಪಟ್ಟಣದಲ್ಲಿ ನಿರ್ಬಂಧ ದಲ್ಲಿ ಸಿಲುಕಿ ದುಃಖಪಡತಾ ಇದ್ದ ಸ್ತ್ರೀಯರ ತಂದು, ಆಳ್ದ–ಅವರನ್ನ ವಿವಾಹ ಮಾಡಿ ಕೊಂಡು, ಅವರ ಸಂಗಡ ಕ್ರೀಡಾಮಾಡೋವನಾದ. ಈ ಪ್ರಕಾರ ಕೃಷ್ಣಾವತಾರ ಮಾಡಿ ಅನೇಕ ಮಹಾಮಹಿಮಾ ತೋರಿಸಿ, ತನ್ನ ಭಕ್ತರನ್ನ ಉದ್ಧಾರಮಾಡಿದಕಡಿಯಿಂದ ತನ್ನ ಭಕ್ತರಲ್ಲಿ, ಕೃಪಾಸಾಂದ್ರ–ಪರಮಾಂತಃಕರಣವುಳ್ಳವನೆಂದು ಭಕ್ತರು ಉಪಾಸನೆ ಮಾಡಿ ಉದ್ಧಾರವಾಗಬೇಕೆಂದು, ತನ್ನ ಲೀಲಾ ಪ್ರದರ್ಶನಮಾಡಿದ ಶ್ರೀಪರಮಾತ್ಮನ ಮಹಿಮಾ ಹೇಳೋವರಾಗಿದ್ದಾರೆಂತ ತಾತ್ಪರ್ಯ.

**ರೂಪನಾಮವಿಹೀನ ಗರ್ಗಾ ।**
**ರೋಪಿತ ಸುನಾಮದಲಿ ಕರೆಸಿದ ।**
**ವ್ಯಾಪಕ ಪರಿಚ್ಛಿನ್ನರೂಪದಿ ತೋರ್ದ ಲೋಗರಿಗೆ ॥**
**ದ್ವಾಪರಾಂತ್ಯದಿ ದೈತ್ಯರನು ಸಂ ।**
**ತಾಪಗೊಳಿಸುವೆನೆಂದು ಶ್ವೇತ ।**
**ದ್ವೀಪಮಂದಿರನವತರಿಸಿ ಸಲಹಿದನು ತನ್ನವರ ॥ ೯ ॥**

ಶ್ರೀಪರಮಾತ್ಮ ಅವತಾರಮಾಡಿದ್ದಕ್ಕೆ ಕಾರಣ ಹೇಳತಾರೆ.

ರೂಪನಾಮವಿಹೀನ – ಶ್ರೀಪರಮಾತ್ಮನು ರೂಪದಿಂದಲೂ, ನಾಮದಿಂದಲೂ, ವಿಶೇಷಾಕಾರವಾಗಿ ಹೀನನಾದವ ಎಂದರೆ ಸರ್ವಾಧಿಷ್ಠಾನದಲ್ಲಿ ಸರ್ವನಾಮ, ಸರ್ವ ರೂಪದಿಂದ ಇರತಕ್ಕವ ಮತ್ತು ಅಧಿಷ್ಠಾನ ವ್ಯತಿರಿಕ್ತ ಸರ್ವನಾಮ ಸರ್ವರೂಪವುಳ್ಳ ಅನಂತಾವತಾರವುಳ್ಳವ; ಇನ್ನೂ ಒಂದೊಂದೇ ರೂಪದಲ್ಲಿ ಗಜತುರಗಾದಿ ವಿಲಕ್ಷಣಗಳಾದ ಅನೇಕ ರೂಪಗಳು ನವನಾರೀಕುಂಜರವತ್ ಇರತಕ್ಕವನಾದ್ದರಿಂದ, ಇಂಥಾ ರೂಪವೇ, ಇಂಥಾ ನಾಮವೇ ಎಂತ ನಿರ್ಧಾರವಾಗಿ ಹೇಳಲಿಕ್ಕೆ ಬಾರದವನೆಂದರೆ, ಅಪ್ರಾಕೃತ ಶರೀರನು, ಸರ್ವನಾಮವಾಚ್ಯನು, ಗರ್ಗಾರೋಪಿತ–ಗರ್ಗರಾದಿ ಸರ್ವಶಬ್ದಗಳು ರೂಢಿ ಯಿಂದ ಈಶ್ವರನ ನಾಮಗಳೆಂದು ತೋರೋದಿಲ್ಲ. ಯೋಗದಿಂದ ಸರ್ವಶಬ್ದಗಳು ಈಶ್ವರ ನಲ್ಲಿ ಆರೋಪಿತವಾಗತವೆ. ಆದಕಡಿಯಿಂದ "ನಾಮಾನಿ ಸರ್ವಾಣಿ ಯಮಾವಿಶಂತಿ" ಎಂಬ ಶ್ರುತಿಪ್ರತಿಪಾದ್ಯನಾದವ. ಇನ್ನೂ ಗರ್ಗಾಚಾರ್ಯರಿಂದ ಇಡಲ್ಪಟ್ಟ, ಸುನಾಮ ದಲಿ ಕರೆಸಿದ–ಸಮಾಚೀನ ನಾಮವಾದ 'ಕೃಷ್ಣ' ಎಂತ ನಾಮಾಂಕಿತನಾದವನು. ವ್ಯಾಪಕ–ಅಪರಿಚ್ಛಿನ್ನ ಅಖಂಡರೂಪದಿಂದ ವ್ಯಾಪ್ತನು. ಶ್ವೇತದ್ವೀಪಮಂದಿರನು–ಶ್ವೇತ ದ್ವೀಪವೇ ಮನಿಯಾಗುಳ್ಳ ಶ್ರೀ ನಾರಾಯಣದೇವರು ದೈತ್ಯರನು ಸಂತಾಪಗೊಳಿಸುವೆ ನೆಂದು–ತನ್ನ ಭಕ್ತರಾದ ದೇವತೆಗಳನ್ನ ಹಿಂಸಾಮಾಡತಕ್ಕ ದೈತ್ಯರನ್ನ ದುಃಖಪಡಿಸಬೇ ಕೆಂತ, ದ್ವಾಪರಾಂತ್ಯದಿ–ದ್ವಾಪರಯುಗದ ಕೊನೀಗಾಲದಲ್ಲಿ, ಅವತರಿಸಿ–ಕೃಷ್ಣಾವತಾರ ಮಾಡಿ, ಲೋಗರಿಗೆ–ಪ್ರಾಕೃತರಾದ ಜನರಿಗೆ, ಪರಿಚ್ಛಿನ್ನರೂಪದಿ ತೋರ್ದ–ಖಂಡರೂಪ ದಿಂದ ತೋರೋವನಾದ, ಇನ್ನೂ ತನ್ನ ಭಕ್ತರಿಗೆ ಅಪರಿಚ್ಛಿನ್ನವಾದ ತನ್ನ ರೂಪವನ್ನೂ,

ಮಹಾಮಹಿಮಾವನ್ನೂ ತೋರಿದನು. ಸಲಹಿದನು ತನ್ನವರ–ತನ್ನ ಜನರಾದ ದೇವತೆಗಳನ್ನೂ, ಇನ್ನೂ ತನ್ನ ನಂಬಿದ ಭಕ್ತರನ್ನೂ, ಸಂರಕ್ಷಣಮಾಡೋವನಾಗಿದ್ದಾನಾದಕಡಿಯಿಂದ ಶ್ರೀಪರಮಾತ್ಮನ ಮಹಾಮಹಿಮೆ ಇಂಥಾದ್ದು ಎಂತ ತಾತ್ಪರ್ಯ.

**ಶ್ರೀ ವಿರಿಂಚಾದ್ಯಮರನುತ ನಾ ।**
**ನಾವತಾರವ ಮಾಡಿ ಸಲಹಿದ ।**
**ದೇವತಿಗಳನು ಋಷಿಗಳನು ಕ್ಷಿತಿಪರನು ಮಾನವರ ॥**
**ಸೇವೆಗಳ ಕೈಗೊಂಡು ಫಲಗಳ ।**
**ನೀವ ನಿತ್ಯಾನಂದಮಯ ಸು ।**
**ಗ್ರೀವ ಧ್ರುವ ಮೊದಲಾದ ಭಕ್ತರಿಗಿತ್ತ ಪುರುಷಾರ್ಥ ॥ ೧೦ ॥**

ಶ್ರೀ ಪರಮಾತ್ಮನ ಮಹಿಮೆ ಹೇಳತಾರೆ.

ಶ್ರೀವಿರಿಂಚಾದ್ಯಮರನುತ – ರಮಾ ಬ್ರಹ್ಮಾದಿ ದೇವತೆಗಳಿಂದ ಸ್ತೋತ್ರಮಾಡಿಸಿಕೊಳ್ಳಲ್ಪಟ್ಟವನಾಗಿ, ನಾನಾವತಾರವ ಮಾಡಿ– ಮತ್ಸ್ಯಾದಿ ಅವತಾರಗಳ ಮಾಡಿ, ದೇವತಿಗಳನು–ಬ್ರಹ್ಮಾದಿ ದೇವತೆಗಳನ್ನು, ಋಷಿಗಳನು–ವಾಲಖಿಲ್ಯಾದಿ ಋಷಿಗಳನ್ನೂ, ಕ್ಷಿತಿಪರನು–ಜನಮೇಜಯಾದಿ ಅರಸರುಗಳನ್ನೂ, ಮಾನವರ–ಸಾಧಾರಣರಾದ ಭಕ್ತರಾದ ಜನರುಗಳನ್ನೂ, ಸಲಹಿದ–ಸಂರಕ್ಷಣೆಮಾಡೋವನಾಗಿದ್ದಾನೆ. ಸೇವೆಗಳ ಕೈಗೊಂಡು–ತನಗೆ ಸೇವಾ ಮಾಡತಕ್ಕ ಜನಗಳ ಪೂಜಾದಿ ಸೇವಾದಿಂದ ಸಂತುಷ್ಟನಾಗಿ ಅವರುಗಳಿಗೆ ಫಲಗಳನೀವ–ಯೋಗ್ಯ ಫಲಗಳ ತೊಡತಾನೆ. ನಿತ್ಯಾನಂದಮಯ–ಸದಾ ಪೂರ್ಣವಾದ ಸುಖವುಳ್ಳ ಪರಮಾತ್ಮ, ಸುಗ್ರೀವ–ಸೂರ್ಯಪುತ್ರನಾದ ಸುಗ್ರೀವನೇನು, ಧ್ರುವ–ಉತ್ತಾನಪಾದರಾಯನ ಪುತ್ರ ಧ್ರುವರಾಯನೇನು, ಮೊದಲಾದ–ಇನ್ನೂ ಅನೇಕರಾದ ತನ್ನ ನಂಬಿದ, ಭಕ್ತರಿಗೆ–ದೃಢಭಕ್ತರಿಗೆ, ಪುರುಷಾರ್ಥ–ಮನುಷ್ಯಗೆ ಇಹದಲ್ಲಿ ಬೇಕಾದ ಮಹಾಸುಖವನ್ನು, ಪಾರತ್ರಿಕದಲ್ಲಿ ಮೋಕ್ಷಾಖ್ಯ ಮಹಾಸುಖವನ್ನೂ, ಇತ್ತ–ಕೊಡೋವನಾದ. ಭಕ್ತರಿಗೆ ಇಹದಲ್ಲಿ ಮಹಾಸುಖ ಎಂದರೆ, ಸದಾ ತನ್ನಲ್ಲಿ ಸ್ಮೃತಿಯುಕ್ತವಾದ ಜ್ಞಾನದಿಂದಲೂ ರಾಜ್ಯೈಶ್ವರ್ಯದಿಂದಲೂ ಸಾಧನಮಾಡಿಸೋವನಾಗಿದ್ದಾನೆ, ಎಂತ ತಾತ್ಪರ್ಯ.

**ದುಷ್ಟದಾನವಹರಣ ಸರ್ವೋ ।**
**ತ್ಕೃಷ್ಟ ಸದ್ಗುಣಭರಿತ ಭಕ್ತಾ ।**
**ಭೀಷ್ಟದಾಯಕ ಭವವಿನಾಶಕ ವಿಗತಭಯಶೋಕ ॥**
**ನಷ್ಟತುಷ್ಟಿಗಳಿಲ್ಲ ಸೃಷ್ಟ್ಯಾ ।**
**ದ್ಯಷ್ಟಕರ್ತ ನಿಗಾವಕಾಲದಿ ।**
**ಹೃಷ್ಟನಾಗುವ ಸ್ಮರಣೆಮಾತ್ರದಿ ಹೃದ್ಗುಹಾವಾಸಿ ॥ ೧೧ ॥**

ಇನ್ನೂ ಪರಮಾತ್ಮನ ಮಹಿಮೆ ಹೇಳತಾರೆ.

ದುಷ್ಟದಾನವಹರಣ–ಭಗವದ್ದ್ವೇಷಿಗಳಾದ ಮಹಾದುಷ್ಟರಾದ ದೈತ್ಯರನ್ನ ಸಂಹಾರ ಮಾಡಿದವ ; ಸರ್ವೋತ್ಕೃಷ್ಟ–ಸರ್ವಚರಾಚರ ಪ್ರಾಣಿಗಳಿಗಿಂತಲೂ ಸದೃಶರಹಿತವಾದ ಶ್ರೇಷ್ಠನಾದವ ; ಸದ್ಗುಣಭರಿತ–ಮಂಗಳಕರಗಳಾದ ಗುಣಗಳಿಂದ ಪೂರ್ಣನಾದವ ; ಭಕ್ತಾಭೀಷ್ಟದಾಯಕ–ಯೋಗ್ಯತಾನುಸಾರ ಭಕ್ತರ ಅಭೀಷ್ಟಗಳ ಕೊಡತಕ್ಕವ ; ಭವ ವಿನಾಶಕ–ಭಕ್ತರ ಸಂಸಾರಾಖ್ಯ ದುಃಖವನ್ನ ನಾಶಮಾಡತಕ್ಕವ ; ವಿಗತಭಯಶೋಕ–ಹೋಗಲ್ಪಟ್ಟ ಭಯವೇನು, ದುಃಖವೇನು ಉಳ್ಳವ ; ಸೃಷ್ಟ್ಯಾದ್ಯಷ್ಟಕರ್ತನಿಗೆ–ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷ ಪ್ರದಾತೃವಾದ ಪರಮಾತ್ಮಗೆ, ನಷ್ಟತುಷ್ಟಿಗಳಿಲ್ಲ–ದಾವುದರಿಂದಲೂ, ದಾರಿಂದಲೂ ನಾಶಹೊಂದತಕ್ಕವ ನಲ್ಲ, ದಾವ ಪದಾರ್ಥದಿಂದಲೂ ತೃಪ್ತಿಹೊಂದತಕ್ಕವನಲ್ಲ, ಶಾಶ್ವತವಾದ ಸ್ವಾನಂದದಿಂದ ಪೂರ್ಣನಾಗಿದ್ದಾನೆ. ಹೃದ್ಗುಹಾವಾಸಿ–ಹೃದಯಾಖ್ಯ ಗುಹೆಯಲ್ಲಿ ಆವಾಸನಾಗಿರತಕ್ಕ, ಪೂರ್ವೋಕ್ತ ಗುಣೋಪೇತನಾದ ಶ್ರೀ ಪರಮಾತ್ಮ, ಅನಕಾಲದಿ–ಸದಾಸರ್ವಕಾಲ ದಲ್ಲೂ, ಸ್ಮರಣೆಮಾತ್ರದಿ–ಧ್ಯಾನಪೂರ್ವಕ ಸ್ಮರಣೆಮಾಡೋ ಮಾತ್ರದಿಂದ, ಹೃಷ್ಟ ನಾಗುವ–ಸಂತುಷ್ಟನಾಗಿ ಪ್ರತ್ಯಕ್ಷನಾಗುವನು.

**ಹಿಂದೆ ಪ್ರಳಯೋದಕದಿ ತಾವರೆ ।**
**ಕಂದನಂಜಿಸಿ ಕಾಯ್ದ ತಲೆಯೊಳು ।**
**ಬಾಂದೊರೆಯ ಪೊತ್ತವಗೊಲಿದು ಪರಿಯಂಕ ಪದವಿತ್ತ ॥**
**ವಂದಿಸಿದ ವೃಂದಾರಕರ ಸ ।**
**ದ್ವೃಂದ ಕುಣಿಸಿದ ಸುಧೆಯ ಕರುಣಾ ।**
**ಸಿಂಧು ಕಮಲಾಕಾಂತ ಬಹುನಿಶ್ಚಿಂತ ಜಯವಂತ ॥ ೧೨ ॥**

ಶ್ರೀಪರಮಾತ್ಮ ಎಂಥಾವನೆಂದರೆ, ಹೇಳತಾರೆ.

ಹಿಂದೆ ಪ್ರಳಯೋದಕದಿ–ಇದಕ್ಕೆ ಪೂರ್ವದಲ್ಲಿ ಎಂದರೆ, ಪದ್ಮ ಸೃಷ್ಟಿಗೆ ಪೂರ್ವದಲ್ಲಿ ಪ್ರಳಯೋದಕದಲ್ಲಿ, ತಾವರೆ ಕಂದನಂಜಿಸಿ–ಕಮಲದಲ್ಲಿ ಉತ್ಪನ್ನನಾದ ಪರಮಾತ್ಮಗೆ ಪುತ್ರನಾದ, ಬಾಲಕನಾದ ಬ್ರಹ್ಮದೇವರನ್ನ ಅಂಜಿಸಿ, ಕಾಯ್ದ–ಸಂರಕ್ಷಣೆಮಾಡಿದವ.

ಪ್ರಮಾಣ :–ಪುರಂದರದಾಸರಾಯರ ಉಕ್ತಿ :

“ ಪ್ರಳಯೋದಕದಲ್ಲಿ ವಟಪತ್ರಶಯನನಾಗಿದ್ದ ಕಾಲದಲ್ಲಿ । ಶ್ರೀದೇವಿಯರು ಶ್ರೀ, ಭೂ, ದುರ್ಗಾರೂಪದಿಂದ ನಿಂದು । ದಕ್ಷಿಣಾಯಜ್ಞನಾಮದಿಂದ ವೇದಂಗಳಿಂದ । ಕೊಂಡಾಡುವ ಮುಖ್ಯಾಭಿಮಾನಿಯಾಗಿ । ವರ್ಣಾತ್ಮಕದಿಂದ ನಿತ್ಯ ನಿಗಮಾರ್ಥಗಳಿಂದ । ನುತಿಸೂವಾಳು ಅ ಆ ಆ ತ್ರಿಪ್ರಕಾರ । ಮಿತಿಯೆಂದು ಬೊಮ್ಮನ ನೂರಾರೊಳೆಂಟು ಭಾಗ । ದೊಳೊಂದು ಭಾಗವೀ ಲಕುಮಿದೇವಿಗೆ । ತಾ ಪ್ರೇರಿಸಲಾಗಿ । ತುತಿಸುವಂದಾದಿ

ಪ್ರೇರಕನಾಗಿ ಪ್ರಾರ್ಥನೆ ಕೈಗೊಂಡು | ತಮ ತಮ್ಮ ಸಾಧನಾಗಳು ಮಾಡಿಕೊಂಬಲ್ಲಿ | ನಿರೂಪಿಸಿದನು, ಪುರಂದರ ವಿಠ್ಠಲ" || ೧ ||

ನೂರುವರಷವು ಇಂದಾಯಿತೆನಲು | ಉದಯಕಾಲದಿ ಚತುರ್ದಶ ಭುವನಾತ್ಮಕವಾದ ಚತುರ್ಮುಖ ಬೊಮ್ಮನ ಪಡದೆ ನೀನು | ಒಮ್ಮೆ ಬಂದು ನಿನ್ನ ಪ್ರಳಯೋದಕವಾನು | ತೆರೆಗಳ ನೋಡಿ ಏನು ಕಾಣದೆ ಪೊಕ್ಕು ನಾಳಾದಲ್ಲಿ | ಮತ್ತೊಮ್ಮೆ ಬರಲು ಘೋರವಾದ | ನಿನ್ನ ರೂಪವ ಕಂಡು ಅಂಜಿ ಮತ್ತೆ | ನಿನ್ನ ನಾಮವೇನೆಂದು ಬಂದಾದು ಕಂಡು | ಉದರಪ್ರವೇಶಾವ ಮಾಡಿದ | ಒಂದು ಭಯ ಎರಡು ಅಜ್ಞಾನವು | ನಿನ್ನ ವಿಷಯಾದಲ್ಲಿ ಉಂಟಾದಡಾಗಲಿ | ಕಂತುಜನಕ ನೀನೇ 'ತಪ ತಪ' ವೆನಲಾಗ | ತಪವಾನು ಮಾಡಿದ ಪುರಂದರವಿಠಲಾನ್ನ | ಒಲಿ ಸೃಷ್ಟಿಯ ಮಾಡಿದ ಸರಸೀಜ ಸಂಭವನು || ೨ ||

ಸೂಕ್ಷ್ಮರೂಪವಾದ ಇಪ್ಪತ್ತುನಾಲ್ಕು ತತ್ತ್ವಗಳ ಹೊರಗೆ | ಪಂಚಭೂತಂಗಳಿಗೆ ಅಭಿಮಾನಿಯಾದ | ಗಣೇಶ ಮೊದಲಾದ ಪಂಚಭೂತಂಗಳ ಸೃಜಿಸಿದನಾಗ | ಒಂದೊಂದಾವರ್ಣಾದ ಅಭಿಮಾನಿಗಳಿಂದ | ಮಹತತ್ತ್ವಕೇಶ ಅಹಂಕಾರಧೀಶನೆಂದು | ಬೊಮ್ಮಾಂಡವ ನಿರ್ಮಾಣವ ಮಾಡಿ ಪೂರ್ವದಂತೆ ಆ ದೇವತೆಗಳ ಸೃಜಿಸಿ | ಬೊಮ್ಮಾಂಡವಾಧಾರವಾಗಿ ತನ್ನಾ ದೇಹಾವ | ಬೆಳೆಸಿದ ಚತುರ್ಮುಖನಾಗ | ಮೂಲರೂಪದಿಂದ ಪುರಂದರವಿಠಲ | ವಿರಾಟಾದಲ್ಲಿ ವಾಸವಾಗಿನಿಂದ ಜಗದಾಧಾರ || ೩ ||

ಈ ವಚನಾನುಸಾರ ಬ್ರಹ್ಮದೇವರಿಗೆ ಅಜ್ಞಾನ ನಾಲ್ಕುಬಾರಿ, ಎರಡಾವರ್ತಿ ಭಯ ಎಂಬುದು, ಅಂಡದ ಹೊರಗೆ ಎರಡಾವರ್ತಿ ಅಜ್ಞಾನ, ಒಂದಾವರ್ತಿ ಭಯ ಎಂತ (ಅಂತು ನಾಲ್ಕುಬಾರಿ ಅಜ್ಞಾನ, ಎರಡಾವರ್ತಿ ಭಯ ಎಂತ ನಿರ್ಧಾರವಾಗುತ್ತದೆ), ಪ್ರಕಾರಾಂತರ ಪದ್ಮಸೃಷ್ಟಿಯಲ್ಲಿ ಸಮನ್ವಯ.

೧. ಅಜ್ಞಾನ—ನಾಭಿಕಮಲದಿಂದ ಹೊರಗೆ ಬಂದು ದಾರನ್ನೂ ಕಾಣದ್ದು ಒಂದು. ಕಮಲನಾಳದಲ್ಲಿ ಪ್ರವೇಶಮಾಡಿ ಅಲ್ಲಿ ದಾರನ್ನೂ ಕಾಣದ್ದು ಎರಡು. ಏನೂ ಕಾಣದೇ ಪುನಶ್ಚ ಹೊರಗೆ ಬಂದದ್ದು ಮೂರು. ತಾನು ಮಾಡತಕ್ಕ ಕಾರ್ಯ ತಿಳಿಯದೇ ಇದ್ದದ್ದು ನಾಲ್ಕು, ಅಂತು ನಾಲ್ಕು ಸಾರಿ ಅಜ್ಞಾನ.

೨. ಭಯ—ಉದಕ ವಾಯುಗಳ ಕಂಡು ಅಂಜಿದ್ದು ಒಂದು. ಘೋರರೂಪ ನೋಡಿ ಅಂಜಿದ್ದು ಎರಡು. ಇವುಗಳು ದೈತ್ಯಮೋಹನಾರ್ಥ ಪ್ರದರ್ಶನ—ಬ್ರಹ್ಮದೇವರಿಗೆ ಅಜ್ಞಾನಾದಿ ದೋಷಗಳು ಇಲ್ಲ ಎಂತ ತಾತ್ಪರ್ಯ. ತಲೆಯೊಳು—ಶಿರಸ್ಸಿನಲ್ಲಿ, ಬಾಂದೊರೆಯ—ಭಾಗೀರಥೀಯನ್ನು, ಪೊತ್ತವಗೊಲಿದು—ಹೊತ್ತಂಥಾ ರುದ್ರದೇವರಿಗೆ ಒಲಿದು, ಪರಿಯಂಕ ಪದವಿತ್ತ—ಅವಗೆ ಶೇಷಪದವಿಯ ಕೊಟ್ಟ, ವಂದಿಸಿದ—ತನಗೆ ಶರಣಾಗತರಾದ, ವೃಂದಾರಕರ – ದೇವತೆಗಳ, ಸತ್‌ವೃಂದಕೆ – ನಿರ್ದುಷ್ಟವಾದ ಸಮೂಹಕ್ಕೆ,

ಸುಧೆಯ–ಅಮೃತವನ್ನ, ಉಣಿಸಿದ–ಪಾನಮಾಡಿಸೋವನಾದ, ಕರುಣಾಸಿಂಧು–ಕರುಣಾ ಸಮುದ್ರನಾದ, ಕಮಲಾಕಾಂತ–ಲಕ್ಷ್ಮೀಪತಿಯಾದ ಶ್ರೀಪರಮಾತ್ಮ, ಬಹು ನಿಶ್ಚಿಂತ–ಅತ್ಯಂತವಾಗಿ ಚಿಂತಾಶೂನ್ಯನಾದವ, ಜಯವಂತ–ಸರ್ವವಿಷಯದಿಂದಲೂ ಜಯಶೀಲ ನಾದವ ಪರಮಾತ್ಮ ಎಂತ ತಾತ್ಪರ್ಯ.

**ಸತ್ಯಸಂಕಲ್ಪಾನುಸಾರ ಪ್ರ ।**
**ವರ್ತಿಸುವ ಪ್ರಭು ತನಗೆ ತಾನೇ ।**
**ಭೃತ್ಯನೆನಿಸುವ ಭೋಕ್ತೃಭೋಗ್ಯಪದಾರ್ಥದೊಳಗಿದ್ದು ।**
**ತತ್ತದಾಹ್ವಯನಾಗಿ ತರ್ಪಕ ।**
**ತೃಪ್ತಿಪಡಿಸುವ ತತ್ತ್ವಪತಿಗಳ ।**
**ಮತ್ತರಾದಸುರರ್ಗೆ ಅಸಮೀಚೀನ ಫಲವೀವ ॥ ೧೩ ॥**

ಸರ್ವಾಧಿಷ್ಠಾನದಲ್ಲಿ ಸ್ವರಮಣನಾಗಿ ಇರುತ್ತಾನೆಂತಲೂ, ಇಷ್ಟಾನಿಷ್ಟ ಫಲಗಳ ಕೊಡತಾನೆಂತಲೂ ಹೇಳತಾರೆ.

ಸತ್ಯಸಂಕಲ್ಪಾನುಸಾರ-ಶ್ರೀ ಪರಮಾತ್ಮ ಸತ್ಯವಾದ ತನ್ನ ಅನಾದಿಸಂಕಲ್ಪಾನು ಸಾರ, ಪ್ರವರ್ತಿಸುವ–ಸೃಷ್ಟ್ಯಾದಿ ವ್ಯಾಪಾರಗಳಲ್ಲಿ ಪ್ರವರ್ತಿಸಿ ಕಾರ್ಯಗಳ ಮಾಡುವ, ಪ್ರಭು–ಪರಾಧೀನನಲ್ಲದ ಸ್ವತಂತ್ರನಾದ ರಾಜನಾದ ಶ್ರೀ ಪರಮಾತ್ಮ, ತನಗೆ ತಾನೇ ಭೃತ್ಯನೆನಿಸುವ – ರಮಾಬ್ರಹ್ಮಾದಿ ಭೃತ್ಯರಿಂದ ತನಗೆ ಆಗಬೇಕಾದ ಪ್ರಯೋಜನ ವೇನೂ ಇಲ್ಲದವನಾದ್ದರಿಂದ ತನಗೆ ತಾನೇ ಭೃತ್ಯನೆನಿಸುತ್ತಾನೆ ಎಂದರೆ, ಲೋಕದಲ್ಲಿ ಪ್ರಭುತ್ವ ಎನ್ನತಕ್ಕ ಅಧಿಷ್ಠಾನದಲ್ಲಿದ್ದು ಪ್ರಭು ಎಂತಲೂ, ಭೃತ್ಯ ಎನ್ನತಕ್ಕ ಅಧಿಷ್ಠಾನದಲ್ಲಿದ್ದು ಭೃತ್ಯ ಎಂತಲೂ, ಈ ರೀತ್ಯಾ ತನಗೆ ತಾನೇ ಸ್ವಾಮಿ ಭೃತ್ಯ ಎಂತಲೂ ಎನಿಸೋವನಾಗತಾನೆ. ಮತ್ತು, ಭೋಕ್ತೃ–ಭೋಕ್ತೃಗಳೊಳು ಭೋಕ್ತೃ ಶಬ್ದವಾಚ್ಯನಾಗಿ ತದಾಕಾರದಿಂದಲೂ, ಭೋಗ್ಯಪದಾರ್ಥದೊಳಗೆ – ಭೋಕ್ತೃಗಳು ಭೋಜನಮಾಡತಕ್ಕ ಪದಾರ್ಥಗಳೊಳು ತದಾಕಾರನಾಗಿ, ತದ್ವಾಚ್ಯನಾಗಿ, ಇದ್ದು–ಇದ್ದವನಾಗಿ, ತತ್ತದಾಹ್ವಯನಾಗಿ–ಪೂರ್ವೋಕ್ತ ಪ್ರಕಾರ ಚರಾಚರ ತ್ರಿವಿಧರಾದ ಸರ್ವ ಪ್ರಾಣಿಗಳಲ್ಲಿ ಅವರವರ ಭೋಜ್ಯವಸ್ತುಗಳಲ್ಲಿ ಆಯಾ ನಾಮಗಳಿಂದ ಕರಿಸಿದವನಾಗಿ, ತತ್ತ್ವಪತಿಗಳ–ದೇಹಗತ ತತ್ತ್ವಾಭಿಮಾನಿ ದೇವತೆಗಳ, ಮತ್ತರಾದಸುರರ್ಗೆ–ಹಾಗೇ ದೇಹಗತ ತತ್ತ್ವಾಭಿಮಾನಿ ದೈತ್ಯರಿಗೆ ಆಯಾ ಪ್ರಾಣಿಗಳ ಸ್ಥೂಲದೇಹಗಳಿಗೆ, ತರ್ಪಕ–ತೃಪ್ತಿಪಡಿಸತಕ್ಕ ಪದಾರ್ಥಕ್ಕೆ ತರ್ಪಕ ಎಂತ ಸಾಂಕೇತ. ಈ ತರ್ಪಕಪದಾರ್ಥಗಳ, ಜೀವನ ದ್ವಾರಾ ದೇಹದಿಂದ ಭೋಜನಮಾಡಿಸಿ, ತೃಪ್ತಿಪಡಿಸುವ–ಜೀವನ ಸ್ಥೂಲ ದೇಹಕ್ಕೆ ಉಪಚಯವಾಗತಕ್ಕ ರಸದಿಂದ ಸ್ಥೂಲದೇಹಕ್ಕೆ ಉಪಚಯಮಾಡಿ, ತದ್ದ್ವಾರಾ ಸ್ಥೂಲದೇಹಗತ ತತ್ತ್ವಾಭಿಮಾನಿಗಳಾದ ದೇವದೈತ್ಯರಿಗೆ ಸೇರತಕ್ಕ ಜೀವಭುಕ್ತ ಪದಾರ್ಥ ಗತ ರಸಗಳ, ದೇವದೈತ್ಯರಿಗೂ ಅವರವರ ರಸ ಅವರವರಿಗೆ ಸೇರಿಸಿ ತೃಪ್ತಿಪಡಿಸುವ.

ಅದೇ ಪ್ರಕಾರ ತನ್ನ ಸ್ವಾಖ್ಯರಸಗಳ ತಾನು ಸ್ವೀಕರಿಸುವ. ಸ್ವೀಕಾರಮಾಡಿ, ಅಸಮೀಚೀನ ಫಲವೀವ – ಈ ಪ್ರಕಾರ ಅನುಸಂಧಾನ ಮಾಡಿ ಭೋಜನ ಮಾಡತಕ್ಕವರಿಗೆ, ಅಶ್ವಮೇಧಾದಿ ಯಜ್ಞಗಳು ಮಾಡಿದ ಪುಣ್ಯಸದೃಶಫಲಗಳ ಕೊಡತಾನೆ. ತದನ್ಯರಾದ ಅನುಸಂಧಾನರಹಿತರಾಗಿ ಭೋಜನಮಾಡಿದವರಿಗೆ ಅಸಮೀಚೀನವಾದ ಮಹಾದುಃಖಫಲವನ್ನ ಕೊಡತಾನೆಂತ ತಾತ್ಪರ್ಯ.

*** ಬಿಟ್ಟಗಳ ನೆವದಿಂದಲಾಗಲಿ ।**
**ಹೊಟ್ಟೆಗೋಸುಗವಾದಡಾಗಲಿ ।**
**ಕೆಟ್ಟರೋಗಪ್ರಯುಕ್ತವಾಗಲಿ ಅಣಕದಿಂದೊಮ್ಮೆ ॥**
**ನಿಟ್ಟುಸುರಿನಿಂ ಬಾಯ್ದೆರೆದು ಹರಿ ।**
**ವಿಠ್ಠಲಾ ಸಲಹೆಂದೆನಲು ಕೈ ।**
**ಗೊಟ್ಟು ಕಾವ ಕೃಪಾಳು ಸಂತತ ತನ್ನ ಭಕುತರನು ॥ ೧೪ ॥**

ಶ್ರೀ ಪರಮಾತ್ಮನ್ನ ಸದಾ ಸ್ಮರಿಸಬೇಕೆಂತ ಹೇಳತಾರೆ.

ನೇಮದಿಂದಲಾಗಲಿ–ಶ್ರೀಪರಮಾತ್ಮನ ಮಾಹಾತ್ಮ್ಯ ತಿಳಿದು, ಅನುಸಂಧಾನ ಯುಕ್ತವಾದ ನೇಮದಿಂದಲಾಗಲಿ, ಹೊಟ್ಟೆಗೋಸುಗವಾದಡಾಗಲಿ – ಅನ್ನದರಿದ್ರನಾಗಿ ಮಹಾಕ್ಷುತ್ತಿನಿಂದ ಯುಕ್ತನಾಗಿ, ಅದರನ್ನ ಸಹಿಸೋದಕ್ಕೆ ಶಕ್ತಿಸಾಲದೆ, ಅಂಥ ಕಾಲದಲ್ಲಿ ತನ್ನ ಉದರಪೋಷಣೆಗೇ ಆಗಲಿ, ಕೆಟ್ಟರೋಗ ಪ್ರಯುಕ್ತವಾಗಲಿ–ದಾವ ವೈದ್ಯನಿಂದಲೂ ನಿವಾರಣವಾಗದೆ, ಅನುಭವಿಸತಕ್ಕ ಶಕ್ತಿ ಇಲ್ಲದೆ ಇದ್ದ ರೋಗ ಬಂದಾಗಲಾಗಲಿ, ಅಣಕದಿಂದೊಮ್ಮೆ– ಮಹಾದೀನನಾಗಿ ಮನಮುಟ್ಟಿ, ಅನ್ಯರಕ್ಷಕರು ದಾರೂ ಇಲ್ಲ, ಪರಮಾತ್ಮನೇ ರಕ್ಷಕನಾಗಬೇಕೆಂಬ ಅನುಭವ ಬರತಕ್ಕ ಕಾಲವಾದ್ದರಿಂದ, ಅಂಥಾ ಕಾಲದಲ್ಲಿ ಮನಸಾ ಆಲೋಚನೆಮಾಡಿ, ಒಂದುಸಾರಿ ಭಕ್ತಿಪೂರ್ವಕವಾಗಿ, ನಿಟ್ಟುಸಿರಿನಿಂ– ನಿಟ್ಟುಸಿರುಬಿಡುತ್ತಾ, ಬಾಯ್ದೆರೆದು–ಬಾಯಿ ತೆರದವನಾಗಿ, ಅನ್ಯರಾದ ಮನುಷ್ಯರಿಗೆ ಮೊರೆ ಇಡದೆ, ಹರಿವಿಠಲಾ–ದುರಿತ ಪರಿಹಾರಕನಾಗಿರತಕ್ಕ ಶ್ರೀ ನಾರಾಯಣಾ ಎಂತ, ಸಲಹೆಂದೆನಲು – ಉಚ್ಚಾರಮಾಡಿ, ನನ್ನ ಕಾಪಾಡಬೇಕೆಂತ ತ್ರಿಕರಣಶುದ್ಧಿಪೂರ್ವಕ ಅಂದರೆ, ಶ್ರೀಪರಮಾತ್ಮ, ತನ್ನ ಭಕುತರನು–ತನ್ನ ಭಕ್ತರಾದವರನ್ನ, ಕೃಪಾಳು– ದಯಾಳುವಾದ ದೇವರು, ಕೇವಲ ಆದರದಿಂದ, ಸಂತತ–ಪ್ರತಿದಿನದಲ್ಲೂ, ಕೈಗೊಟ್ಟು ಕಾವ–ಜ್ಞಾನ, ಭಕುತಿ, ವೈರಾಗ್ಯಗಳೆಂಬೊ ಕೈಗಳ ಕೊಟ್ಟು ತದ್ದ್ವಾರಾ, ಸಂಸಾರ ಸಮುದ್ರ ದಾಟಿಸತಾನೆ, ಬಿಟ್ಟಿಗಲ–ಇಂಥಾ ಭಕ್ತರನ್ನ ಬಿಟ್ಟು ಹೋಗದೆ ಸದಾ ಅಪರೋಕ್ಷಿತನಾಗಿ ಇರತಾನೆ ಎಂತ ತಾತ್ಪರ್ಯ.

---

* ಮೂಲಶ್ಲೋಕದಲ್ಲಿ "ಬಿಟ್ಟಗಳ ನೆವದಿಂದಲಾಗಲಿ" ಎಂದಿದ್ದೂ ಸಹ, "ಬಿಟ್ಟಿಗಲ ನೇಮದಿಂದಲಾಗಲಿ" ಎಂಬುದರ ವ್ಯಾಖ್ಯಾನವಿದೆ.

**ಈ ವಸುಂಧರೆಯೊಳಗೆ ಶ್ರೀ ಭೂ ।**
**ದೇವಿಯರಸನ ಸುಗುಣ ಕರ್ಮಗ ।**
**ಆವ ಬಗೆಯಿಂದಾದಡಾಗಲಿ ಕೀರ್ತಿಸುವ ನರರ ॥**
**ಕಾವ ಕಮಲದಳಾಯತಾಕ್ಷ ಕೃ ।**
**ಪಾವಲೋಕನದಿಂದ ಕಪಿಸು ।**
**ಗ್ರೀವಗೊಲಿದಂದದಲಿ ಒಲಿದಭಿಲಾಷೆ ಪೂರೈಪ ॥ ೧೫ ॥**

ದಾವ ಬಗೆಯಿಂದಲಾಗಲಿ ಶ್ರೀ ಪರಮಾತ್ಮನ ಭಜನೆ ಮಾಡಬೇಕೆಂತ ಹೇಳತಾರೆ.

ಈ ವಸುಂಧರೆಯೊಳಗೆ–ಈ ಭರತಖಂಡ ಭೂಮಿಯೊಳಗೆ, ಶ್ರೀ ಭೂ ದೇವಿಯರಸನ–ಶ್ರೀ, ಭೂ ದೇವಿಯರಿಗೆ ಪತಿಯಾದ ಶ್ರೀಪರಮಾತ್ಮನ್ನ, ಸು–ಸಮೀಚೀನವಾದ ನಿರ್ಮಲ ಚಿತ್ತದಿಂದ, ಗುಣಕರ್ಮಗಳ–ನಿರ್ದೋಷ ಗುಣಪೂರ್ಣ ಸರ್ವೋತ್ತಮನೆಂಬೋ ಗುಣಗಳ ಸೃಷ್ಟ್ಯಾದಿ ವ್ಯಾಪಾರವಾದ ಕರ್ಮಗಳ, ಆವ ಬಗೆಯಿಂದಾದಡಾಗಲಿ–ದಾವ ಕಾರಣ ವನ್ನು ಅನುಸರಿಸ್ಯಾಗಲಿ, ಕೀರ್ತಿಸುವ ನರರ – ಸ್ತೋತ್ರಮಾಡತಕ್ಕ ಮನುಷ್ಯರನ್ನ, ಕಮಲದಳಾಯತಾಕ್ಷ–ಕಮಲದಳಗಳೋಪಾದಿಯಲ್ಲಿ ವಿಸ್ತಾರವಾದ ನೇತ್ರಗಳುಳ್ಳ ಶ್ರೀ ಪರಮಾತ್ಮ, ಕೃಪಾವಲೋಕನದಿಂದ–ಕರುಣಾಕಟಾಕ್ಷವೀಕ್ಷಣದಿಂದ, ಒಲಿದು–ಒಲಿದವ ನಾಗಿ, ಕಪಿಸುಗ್ರೀವಗೊಲಿದಂದದಲಿ–ಕೋತಿರೂಪನಾದ ಸುಗ್ರೀವಗೆ ಶ್ರೀರಾಮಚಂದ್ರ ದೇವರು ಒಲಿದು, ಅವನ ಅಭಿಲಾಷೆ ಪೂರೈಸಿದೋಪಾದಿಯಲ್ಲಿ, ಅಭಿಲಾಷೆ–ತನ್ನ ನಂಬಿದ ಭಕ್ತರ ಇಷ್ಟಾರ್ಥವನ್ನ, ಪೂರೈಪ–ಪೂರ್ಣಮಾಡುವ, ಕಾವ–ದುರ್ಜನರ ಬಾಧಾ ಇಲ್ಲ ದಂತೆ ಸಂರಕ್ಷಣ ಮಾಡುವನೆಂತ ತಾತ್ಪರ್ಯ.

**ಚೇತನಾಂತರ್ಯಾಮಿ ಲಕುಮೀ ।**
**ನಾಥ ಕರ್ಮಗಳನುಸರಿಸಿ ಜನಿ ।**
**ತೋಥವಿಷ್ಣೋ ಎಂಬ ಶ್ರುತಿಪ್ರತಿಪಾದ್ಯನೆನ್ನೊಡನೆ ॥**
**ಜಾತನಾಗುವ ಜನ್ಮರಹಿತಾ ।**
**ಕೂತಿನಂದನ ಭಕ್ತರಿಂದಾ ।**
**ಹೂತನಾಗಿ ಮನೋರಥವ ಬೇಡಿಸಿಕೊಳದಲೀವ ॥ ೧೬ ॥**

ಶ್ರೀ ಪರಮಾತ್ಮನ ಮಾಹಾತ್ಮ್ಯವನ್ನೇ ಹೇಳತಾರೆ.

ಜನಿತೋಥವಿಷ್ಣೋ ಎಂಬ–"ಜನಿತೋಥ ವಿಷ್ಣುಃ" ಎನತಕ್ಕ, ಶ್ರುತಿಪ್ರತಿಪಾದ್ಯನು–ವೇದಶ್ರುತಿಯಿಂದ ಪ್ರತಿಪಾದ್ಯನಾದವ, ಜನ್ಮರಹಿತ–ಜನನರಹಿತನಾದ, ಲಕುಮೀನಾಥ–ಲಕ್ಷ್ಮೀಪತಿಯಾದ, ಆಕೂತಿನಂದನ–ಆಕೂತಿದೇವಿಯ ಪುತ್ರನಾದ ಯಜ್ಞನಾಮಕ ಶ್ರೀ ಪರಮಾತ್ಮ, ಚೇತನಾಂತರ್ಯಾಮಿ–ಸಂಚಾರಮಾಡತಕ್ಕ ಜೀವರಲ್ಲೇನು, ಅಚೇತನ

ರಾದ ಜಡಗಳಲ್ಲೇನು, ಸ್ವರೂಪದಲ್ಲಿ, ಬಾಹ್ಯಸ್ಥೂಲದೇಹದಲ್ಲಿ ಅಂತರ್ಯಾಮಿಯಾಗಿದ್ದು, ಕರ್ಮಗಳನುಸರಿಸಿ–ಆಯಾ ಜೀವರ ಅನಾದಿಕರ್ಮಗಳನುಸರಿಸಿ ಬಂದ, ಆಗಾಮಿಸಂಚಿತ ಕರ್ಮಗಳನ್ನನುಸರಿಸಿ ಜೀವರನ್ನ ಸ್ಥೂಲದೇಹದಿಂದ ಸಹಿತರನ್ನಾಗಿ ಮಾಡಿ ಸೃಷ್ಟಿಸೋ ಕಾಲದಲ್ಲಿ, ಎಮ್ಮೊಡನೆ–ಆಯಾ ಸ್ಥೂಲದೇಹ ಧರಿಸಿದ ನಮ್ಮಂಥ ಜೀವರುಗಳ ಸಂಗಾತ, ಜಾತನಾಗುವ–ತಾನೂನೂ ಹುಟ್ಟತಾನೆ, ಭಕ್ತರಿಂದಾಹೂತನಾಗಿ–ತನ್ನ ಭಕ್ತರಿಂದ ಕರಿಸಿಕೊಂಡು ಹೃದಯಾಕಾಶದಲ್ಲಿ ಪ್ರತ್ಯಕ್ಷನಾಗಿ, ಮನೋರಥವ–ಮನೋರಥವನ್ನ, ಬೇಡಿಸಿಕೊಳದಲೆ–ಅವರು ಕೇಳದೆ ಇದ್ದ ಕಾಲಕ್ಕೂ, ಈವ–ಕೊಡೋವನಾಗತಾನೆ.

**ನೃಷತು ಎನಿಸುವ ಮನುಜರೊಳು ಸುರ ।**
**ವೃಷಭನಿಂದ್ರಿಯಗಳೊಳು ತತ್ತ ।**
**ದ್ವಿಷಯಗಳ ಭುಂಜಿಸುವ ಹೋತಾಹ್ವಯನು ತಾನಾಗಿ ॥**
**ನ್ಯೃಷರಹಿತ ವೇದದೊಳು ಋತು ಸತು ।**
**ಪೆಸರಿನಿಂದಲಿ ಕರೆಸುತ ಜಗ ।**
**ತ್ಪ್ರಸವಿತ ನಿರಂತರದಿ ಸಂತೈಸುವನು ಭಕುತರನು ॥ ೧೭ ॥**

ಶ್ರೀಪರಮಾತ್ಮ ಹಂಸಾದಿ ಹದಿನೆಂಟು ರೂಪಗಳೊಳಗೆ ದಾವ ದಾವ ರೂಪದಿಂದ ಎಲ್ಲೆಲ್ಲಿದ್ದು ಸಂರಕ್ಷಿಸುತ್ತಾನೆಂದರೆ, ಹೇಳತಾರೆ.

ಮನುಜರೊಳು–ಮನುಷ್ಯರೊಳು, ನೃಷತು ಎನಿಸುವ–ಪರಮಾತ್ಮ ಇದ್ದು ನೃಷತು ಎಂತ ಕರಿಸೋವನಾಗತಾನೆ. ಇಂದ್ರಿಯಗಳೊಳು–ಏಕಾದಶೇಂದ್ರಿಯಗಳೊಳು, ಸುರ ವೃಷಭನು–ದೇವತಾಶ್ರೇಷ್ಠನಾದ ಪರಮಾತ್ಮ ಸುರವೃಷಭನಾಮದಿಂದ ಇರೋವನಾಗಿ ದ್ದಾನೆ. ತತ್ತದ್ವಿಷಯಗಳ – ಆಯಾ ಇಂದ್ರಿಯವಿಷಯಗಳ, ಹೋತಾಹ್ವಯನು – ಹೋತಾ ಎಂತ ನಾಮ ಪಡದವನಾಗಿ, ಭುಂಜಿಸುವ–ಭೋಜನಮಾಡುವನು. ಜೀವ ಭುಕ್ತ ವಿಷಯಗಳ, ಅವನ ಇಂದ್ರಿಯಗಳ ದ್ವಾರಾ ಸ್ವೀಕರಿಸಿ, ತದ್ಗತ ತನ್ನ ಸ್ವಾಖ್ಯ ತಾನು ಭುಂಜಿಸಿ, ತದನ್ಯ, ಜೀವರಿಗೆ ಭೋಜನಮಾಡಿಸುವ, ನ್ಯೃಷರಹಿತ–ಅಪದ್ಧದಿಂದ ರಹಿತವಾದ, ವೇದದೊಳು–ವೇದಗಳಲ್ಲಿ, ಋತು ಸತು ಪೆಸರಿನಿಂದಲಿ–ಋತು, ಸತು ಎಂಬ ನಾಮದಿಂದ, ಕರೆಸುತ–ಕರಿಸಿದವನಾಗಿ ಇದ್ದಾನೆ. ಜಗತ್ಪ್ರಸವಿತ–ಜಗತ್ಸೃಷ್ಟಿಕರ್ತ ನಾದ ಶ್ರೀ ಪರಮಾತ್ಮ, ತಾನಾಗಿ–ತನಗೆ ತಾನೇ ಪೂರ್ವೋಕ್ತಪ್ರಕಾರ ನಾಮಗಳಿಂದ, ತತ್ತತ್ಸ್ಥಳಗಳಲ್ಲಿ ಇದ್ದವನಾಗಿ, ನಿರಂತರದಿ–ಸರ್ವಕಾಲದಲ್ಲೂ, ಭಕುತರನು–ತನ್ನ ಭಕ್ತ ರನ್ನು, ಸಂತೈಸುವನು–ಈ ಪ್ರಕಾರ ಅನುಸಂಧಾನ ಮಾಡತಕ್ಕವರನ್ನ ಕಾಪಾಡುವನು ಎಂತ ತಾತ್ಪರ್ಯ.

**ಅಬ್ಜಭವಪಿತ ಜಲಧರಾದ್ರಿಯೊ ।**
**ಳಬ್ಜ ಗೋಜಾದ್ರಿಜನೆನಿಸಿ ಜಲ ।**
**ದುಬ್ಬಳಿ ಪೀಯೂಷದಾವರೆ ಶ್ರೀ ಶಶಾಂಕರೊಳು ॥**

**ಕಬ್ಬು ಕದಳಿ ಲತಾ ತೃಣ ದ್ರುಮ ।**
**ಹೆಬ್ಬುಗೆಯ ಮಾಡುತಿಹ ಗೋಜನು ।**
**ಇಬ್ಬಗೆ ಪ್ರತೀಕ ಮಣಿ ಮೃಗ ಸೃಜಿಪನದ್ರಿಜನು ॥ ೧೮ ॥**

ಇನ್ನೂ ಪೂರ್ವೋಕ್ತ ಶ್ರುತ್ಯರ್ಥವಿಚಾರವೇ ವಿಶೇಷಾಕಾರವಾಗಿ ತಿಳಿಸುತ್ತಾರೆ.

ಅಬ್ಜಭವಪಿತ–ಕಮಲದಲ್ಲಿ ಉತ್ಪನ್ನನಾದ ಬ್ರಹ್ಮಗೆ ತಂದೆಯಾದ ಗುಣಪೂರ್ಣನಾದ ಶ್ರೀ ಪರಮಾತ್ಮ, ಜಲ–ಶುದ್ಧಜಲದಲ್ಲಿ, ಅಬ್ಜ–ಅಬ್ಜನಾಮಕ ಪರಮಾತ್ಮ ಇದ್ದು, ಜಲದುಬ್ಬಳಿ–ಸಮುದ್ರೋದಕದಲ್ಲಿ ಉತ್ಪನ್ನವಾದ, ಸಾಧಾರಣ ಜಲಗಳಲ್ಲಿ ಉತ್ಪನ್ನವಾದ, ಪೀಯೂಷದಾವರೆ–ಅಮೃತ, ಕಮಲಪುಷ್ಪಗಳು, ಶ್ರೀ–ಲಕ್ಷ್ಮೀದೇವೇರು, ಶಶಾಂಕರೊಳು–ಚಂದ್ರ ಇನ್ನೂ ಅನೇಕ ಜಲಚರಗಳು, ಅನೇಕ ಜಲ ಸಂಬಂಧಗಳು, ಈ ಯಾವತ್ತರೊಳು, ಅಬ್ಜನಾಮಕ ಪರಮಾತ್ಮ ಇದ್ದಾನೆ. ಧರಾ–ಭೂಮಿಯಲ್ಲಿ, ಗೋಜ–ಗೋಜನಾಮಕ ಪರಮಾತ್ಮ ಇದ್ದು, ಕಬ್ಬು–ಇಕ್ಷುದಂಡ, ಕದಳಿ–ಬಾಳೇಗಿಡ, ಲತಾ–ಬಳ್ಳಿಗಳು, ತೃಣ–ಹುಲ್ಲು ಮೊದಲಾದ ತೃಣಗಳು, ದ್ರುಮ–ವೃಕ್ಷಗಳು ಇವೇ ಮೊದಲಾದ ಭೂಮಿಯೇ ಯೋನಿಯಾಗುಳ್ಳ ಯಾವತ್ತೂ ವೃಕ್ಷಜಾತಿಗಳು, ಇವುಗಳಲ್ಲಿ, ಗೋಜನು–ಗೋಜನಾಮಕ ಪರಮಾತ್ಮ ಇದ್ದಾನೆ. ಇಬ್ಬಗೆ ಪ್ರತೀಕ–ಜಲವೊಂದು ಅಧಿಷ್ಠಾನ, ಭೂಮಿಯೊಂದು ಅಧಿಷ್ಠಾನ, ಈ ಉಭಯ ವಿಧ ಅಧಿಷ್ಠಾನಗಳಲ್ಲಿ ಇದ್ದವನಾಗಿ, ಅದ್ರಿಯೊಳು–ಪರ್ವತಗಳಲ್ಲಿ, ಅದ್ರಿಜನೆನಿಸಿ–ಅದ್ರಿಜ ನಾಮದಿಂದ ಇದ್ದವನಾಗಿ, ಮಣಿ–ರತ್ನಗಳ, ಮೃಗ–ಮೃಗಗಳ, ಇನ್ನೂ ಪರ್ವತೋತ್ಪನ್ನ ಅನೇಕಗಳ, ಸೃಜಿಪನು–ಸೃಷ್ಟಿಮಾಡುವನು, ಅದ್ರಿಜನು–ಅದ್ರಿಜನಾಮಕ ಪರಮಾತ್ಮನು ಅವುಗಳಲ್ಲಿ ಇದ್ದಾನೆ. ಇದೊಂದು ಪ್ರತಿಮಾ. ಹೆಬ್ಬುಗೆಯ ಮಾಡುತಿಹ–ಪೂರ್ವೋಕ್ತ ರೂಪಗಳಿಂದ ಅಲ್ಲಲ್ಲಿ, ಆಯಾ ಪದಾರ್ಥಗಳ ಅಭಿವೃದ್ಧಿ ಮಾಡತಾನೆಂದು ತಾತ್ಪರ್ಯ.

**ಶ್ರುತಿವಿನುತ ಸರ್ವತ್ರದಲಿ ಭಾ ।**
**ರತಿರಮಣನೊಳಗಿದ್ದು ತಾ ಶುಚಿ ।**
**ಷತುವೆನಿಸಿ ಜಡ ಚೇತನರನ ಪವಿತ್ರಮಾಡುತಿಹ ॥**
**ಅತುಳಮಹಿಮಾನಂತರೂಪಾ ।**
**ಚ್ಯುತನೆನಿಸಿ ಚಿದ್ದೇಹದೊಳು ಪ್ರಾ ।**
**ಕೃತಪುರುಷನಂದದಲಿ ನಾನಾಚೇಷ್ಟೆಗಳ ಮಾಳ್ಪ ॥ ೧೮ ॥**

ಪೂರ್ವೋಕ್ತ ಶುತ್ಯರ್ಥವನ್ನೇ ಹೇಳತಾರೆ.

ತಾ ಶುಚಿಷತುವೆನಿಸಿ–ಪೂರ್ವೋಕ್ತ ಗುಣಪೂರ್ಣನಾದ ಪರಮಾತ್ಮ ಶುಚಿಷತ್ ಎನಿಸಿದವನಾಗಿ, ಭಾರತಿರಮಣನೊಳಗಿದ್ದು–ಭಾರತೀದೇವೇರ ಪತಿಯಾದ ಶ್ರೀ ಮುಖ್ಯ

ಪ್ರಾಣದೇವರಂತರ್ಗತನಾಗಿದ್ದು, ಜಡಚೇತನರನ–ಜಡಜೀವರ, ಚೇತನಜೀವರನ್ನ, ಶುದ್ಧ ಜಡಗಳ, ಪವಿತ್ರಮಾಡುತಿಹ–ಶುದ್ಧರನ್ನಾಗಿ ಮಾಡತಾನೆ. ಎಂದರೆ, ಅಧಿಕಾರಿಯಾದವರಿಗೆ ಸರ್ವತ್ರದಲ್ಲೂ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಬಿಂಬನ ಉಪಾಸನವೇ ಹೊರ್ತು, ಬ್ಯಾರೆ ಮಾರ್ಗದಲ್ಲಿ ಉಪಾಸನ ಕೂಡದು. ಅಂಥಾ ಉಪಾಸನಮಾಡಿದವರನ್ನ ಪುನೀತರನ್ನಾಗಿ ಮಾಡಿ, ಜ್ಞಾನ, ಭಕ್ತಿ, ವೈರಾಗ್ಯ, ಐಶ್ವರ್ಯ ಕೊಟ್ಟು ಸಂರಕ್ಷಣ ಮಾಡತಾನೆ. ಇದೇ ಪ್ರಕಾರ ಗಂಗಾದಿ ತೀರ್ಥಕ್ಷೇತ್ರಗಳಲ್ಲಿ ಸ್ನಾನಾದ್ಯನುಷ್ಠಾನಗಳನ್ನು ಪೂರ್ವೋಕ್ತ ಅನುಸಂಧಾನದಿಂದ ಮಾಡಬೇಕು. ಶುದ್ಧಜಡಗಳಲ್ಲೂ ಶ್ರೀ ಪರಮಾತ್ಮನ ಪೂಜಾನೂ ಇದೇ ಪ್ರಕಾರ ಮಾಡಬೇಕೆಂತ ತಾತ್ಪರ್ಯ. ಶ್ರುತಿವಿನುತ–ವೇದದಿಂದ ವೇದ್ಯನಾದ ಶ್ರೀಹರಿ, ಸರ್ವತ್ರದಲಿ–ಸರ್ವಸ್ಥಳಗಳಲ್ಲಿ ಭಾರತೀರಮಣಮುಖ್ಯಪ್ರಾಣಾಂತರ್ಗತನಾಗಿ ಇದ್ದಾನೆಂತ ಅನುಸಂಧಾನವಿರಬೇಕು. ಅನಂತ–ಅನಂತಾನಂತ ಜೀವರಲ್ಲಿ, ಅತುಳಮಹಿಮ–ಅಸದೃಶಮಹಿಮನಾದ ಶ್ರೀ ದೇವರು, ರೂಪ–ಆಯಾ ಜೀವಾಕಾರ ರೂಪಗಳಿಂದ ಬಿಂಬನಾಗಿ, ಅಚ್ಯುತನೆನಿಸಿ–ನಾಶರಹಿತನೆಂತ ಕರಿಸಿ, ಚಿದ್ದೇಹದೊಳು–ಜೀವರ ಸ್ವರೂಪಗಳಲ್ಲಿ ಅವಿಯೋಗನಾಗಿ, ಪ್ರಾಕೃತಪುರುಷನಂದದಲಿ–ಸ್ಥೂಲದೇಹಯುಕ್ತ ಮನುಷ್ಯ ಹ್ಯಾಂಗೆ ದುರ್ಬಲನಾಗಿ ಇರುತ್ತಾನೋ ತದ್ವತ್, ಜೀವನ ಯೋಗ್ಯತಿ ಅನುಸರಿಸಿದ್ದು, ನಾನಾ ಚೇಷ್ಟೆಗಳ ಮಾಳ್ಪ–ನಾನಾ ವ್ಯಾಪಾರಗಳ ಮಾಡೋವನಾಗತಾನೆ ಎಂತ ತಾತ್ಪರ್ಯ.

**ಅತಿಥಿಯೆನಿಸುವನನ್ನಮಯ ಭಾ ।**
**ರತಿರಮಣನೊಳು ಪ್ರಾಣಮಯ ಪ್ರಾ ।**
**ಕೃತ ವಿಷಯ ಚಿಂತನೆಯ ಮಾಡಿಸುವನು ಮನೋಮಯನು ॥**
**ಯತನ ವಿಜ್ಞಾನಮಯ ಬರಲದ ।**
**ಜತನಮಾಡಿಸಿ ಆತ್ಮಜಾಯಾ ।**
**ಸುತರ ಸಂಗದಿ ಸುಖವನೀವಾನಂದಮಯನೆನಿಸಿ ॥ ೨೦ ॥**

ಅನ್ನಮಯಾದಿ ಕೋಶಗತ ಭಗವದ್ರೂಪದ ಕಾರ್ಯ ಹೇಳತಾರೆ.

ಅತಿಥಿಯು–ಹಂಸಾದಿ ಹದಿನೆಂಟು ರೂಪಗಳಲ್ಲಿ ಅತಿಥಿರೂಪ, ಅತಿಥಿಗಳಾದ ಭಗವದ್ಭಕ್ತರ ಅಂತರ್ಗತದಲ್ಲಿ ಇರೋದಾಗಿ ಅದೆ. ಮತ್ತು, ಅನ್ನಮಯ–ದೇಹಗತ ಅನ್ನಮಯ ಕೋಶದಲ್ಲಿ, ಭಾರತಿರಮಣನೊಳು–ಭಾರತೀರಮಣಮುಖ್ಯಪ್ರಾಣಾಂತರ್ಗತ ಅನ್ನಮಯ ನಾಮಕ ಪರಮಾತ್ಮ ಕರ್ಮಫಲಭೋಗೇಚ್ಛಾಮಾಡಿ, ಎನಿಸುವನು–ಅತಿಥಿಯೆಂದು ಕರಿಸಿ ಕೊಂಡು ಕ್ಷುತ್ತು ಉಂಟುಮಾಡುವನು. ಪ್ರಾಣಮಯ–ಪ್ರಾಣಮಯಕೋಶದಲ್ಲಿ ಅಪಾನ ವಾಯ್ವಂತರ್ಗತ ಪರಮಾತ್ಮ ಕರ್ಮಫಲಭೋಗಕ್ಕೆ ಸಾನುಕೂಲನಾಗಿ ಪ್ರಾಣಮಯ ನಾಮಕನಾಗಿದ್ದು, ಪ್ರಾಕೃತವಿಷಯ–ಪದಾರ್ಥಗಳ, ಚಿಂತನೆಯ ಮಾಡಿಸುವನು–ಛಂದಾಗಿ

ಆಲೋಚನಿಯ ಮಾಡಿಸುವನು. ಮನೋಮಯನು ಯತನ–ಮನೋಮಯಕೋಶಾಂತರ್ಗತ ವ್ಯಾನಾಂತರ್ಗತ ಮನೋಮಯಶಬ್ದವಾಚ್ಯನಾದ ಪರಮಾತ್ಮ ಆಯಾ ಭೋಜನ ದ್ರವ್ಯಗಳ ಸಂಪಾದನಿಗಾಗಿ ಯತ್ನಮಾಡಿಸುತ್ತಾನೆ. ವಿಜ್ಞಾನಮಯ–ವಿಜ್ಞಾನಮಯ ಕೋಶಗತ ಉದಾನಾಂತರ್ಗತ ವಿಜ್ಞಾನನಾಮಕ ಪರಮಾತ್ಮ, ಬರಲದ–ಯತ್ನದಿಂದ ಲಭ್ಯವಾಗಿ ಬಂದ ಆ ಭೋಜನದ್ರವ್ಯಗಳ, ಜತನಮಾಡಿಸಿ–ಸಿದ್ಧಮಾಡಿಸಿ, ನಂತರ, ಆನಂದಮಯನೆನಿಸಿ–ಆನಂದಮಯಕೋಶಗತ ಸಮಾನಪ್ರಾಣಾಂತರ್ಗತನಾಗಿ, ಆನಂದ ಮಯನೆನಿಸಿದ, ಆನಂದಮಯನಾದ ಪರಮಾತ್ಮ ಆಯಾ ಪದಾರ್ಥಗಳ, ಆತ್ಮಜಾಯಾ ಸುತರ ಸಂಗದಿ–ತಾನು, ತನ್ನ ಹೆಂಡತಿ, ತನ್ನ ಮಕ್ಕಳು ಇವರುಗಳ ಸಹಿತವಾಗಿ ಭೋಜನ ಮಾಡಿಸಿ, ಸುಖವನೀವ–ಸುಖವನ್ನ ಕೊಡೋವನಾಗತಾನೆ. ಅಂತು, ಪಂಚಕೋಶ ಗಳಲ್ಲಿ ಪಂಚವಾಯ್ವಂತರ್ಗತ ಶ್ರೀ ಪರಮಾತ್ಮನ್ನ ಅನುಸಂಧಾನದಿಂದ ಸ್ಮರಣೆಪೂರ್ವಕ ಭೋಜನಮಾಡಬೇಕೆಂತ ತಾತ್ಪರ್ಯ. ಈ ಹಂಸ ಮೊದಲು ಹದಿನೆಂಟು ಕಳಾ ಶ್ರುತ್ಯರ್ಥ, ಈ ಸಂಧಿ ಅಂತ್ಯದಲ್ಲಿ ವಿವರವಾಗಿ ತಿಳಿಸಲ್ಪಟ್ಟಿದೆ.

**ಇನಿತು ರೂಪಾತ್ಮನಿಗೆ ದೋಷಗ ।**
**ಳೆನಿತು ಬಪ್ಪವು ಪೇಳಿರೈ ಬ್ರಾ ।**
**ಹ್ಮಣಕುಲೋತ್ತಮರಾದವರು ನಿಷ್ಕಪಟ ಬುದ್ಧಿಯಲಿ ॥**
**ಗುಣನಿಯಾಮಕ ತತ್ತದಾಹ್ವಯ ।**
**ನೆನಿಸಿ ಕಾರ್ಯವ ಮಾಳ್ಪ ದೇವನ ।**
**ನೆನೆದ ಮಾತ್ರದಿ ದೋಷರಾಶಿಗಳೆಲ್ಲ ಕೆಡುತಿಹವು ॥ ೨೦ ॥**

ಶ್ರೀ ಪರಮಾತ್ಮನ ಸ್ಮರಣೆಮಾತ್ರದಿಂದ ಸರ್ವದೋಷವೂ ಪರಿಹಾರವಾಗುತ್ತದೆ ಎಂತ ಹೇಳತಾರೆ.

ಇನಿತು–ಈ ಪೂರ್ವೋಕ್ತಪ್ರಕಾರ ಅನ್ನಮಯಾದಿ ಕೋಶಗಳಲ್ಲಿ, ಏಕಾದಶೇಂದ್ರಿಯ ಗಳಲ್ಲಿ, ಗುಣ–ಸ್ಥೂಲದೇಹಗತ, ಲಿಂಗದೇಹಗತ ಗುಣತ್ರಯಗಳಲ್ಲಿ, ತತ್ತದಾಹ್ವಯ ನೆನಿಸಿ–ಅದರದರಲ್ಲಿ ವಿದ್ಯಮಾನನಾಗಿ ಅದರದರ ನಾಮವುಳ್ಳವನೆನಿಸಿ, ರೂಪ–ರೂಪ ವುಳ್ಳವನಾಗಿಯೂ, ನಿಯಾಮಕ–ಆಯಾ ಇಂದ್ರಿಯಾದಿಗಳಿಗೆ ನಿಯಾಮಕನಾಗಿಯೂ, ಕಾರ್ಯವ ಮಾಳ್ಪ–ಆಯಾ ಇಂದ್ರಿಯಗಳ ಕಾರ್ಯಗಳ ಮಾಡತಾನೆ ಎಂದರೆ, ಬಿಂಬ ಕ್ರಿಯಾ ದ್ವಾರಾ ಮಾಡಿ, ಜೀವನಿಂದ ಮಾಡಿಸತಕ್ಕ, ದೇವನ–ಕ್ರೀಡಾದಿ ಗುಣವಿಶಿಷ್ಟ ನಾದ ಶ್ರೀ ಪರಮಾತ್ಮನ, ನಿಷ್ಕಪಟಬುದ್ಧಿಯಲಿ–ಕಪಟರಹಿತನಾಗಿ ಕೇವಲ ಭಕ್ತಿಯುಕ್ತ ವಾದ ಬುದ್ಧಿಯಿಂದ, ನೆನೆದ ಮಾತ್ರದಿ–ಹೃದಯಾಕಾಶದಲ್ಲಿ, ಧ್ಯಾನಪೂರ್ವಕ ಸ್ಮರಣೆ ಮಾಡಿದ ಮಾತ್ರದಿಂದ, ಆತ್ಮನಿಗೆ–ಜೀವನಿಗೆ, ದೋಷಗಳೆನಿತು ಬಪ್ಪವು–ಪಾಪಗಳು ಹ್ಯಾಂಗೆ ಬರೋವು ಎಂದರೆ, ಬರಲಾರವು ಎಂತ ಅರ್ಥ. ಜ್ಞಾನವೆಂಬೋ ಸೂರ್ಯ ಉದಯವಾದ ಮ್ಯಾಲೆ ಅಜ್ಞಾನವೆಂಬ ಅಂಧಕಾರ ಆ ಸ್ಥಳಕ್ಕೆ ಬರೋದೆ ಎಂದರೆ,

ಬರಲಾರದು ಎಂತ ತಾತ್ಪರ್ಯ. ಬ್ರಾಹ್ಮಣಕುಲೋತ್ತಮರಾದವರು–ಬ್ರಹ್ಮಜ್ಞಾನಿಗಳ ಸಮೂಹದಲ್ಲಿ ಉತ್ತಮರಾದ ಜ್ಞಾನಿಗಳಾದವರು, ಪೇಳಿರೈ – ದೋಷಗಳು ಬರೋ ಹಾಂಗಿದ್ದರೆ ಹೇಳೋವರಾಗಿರಿ. ದೋಷರಾಶಿಗಳೆಲ್ಲ–ಪೂರ್ವೋಕ್ತಪ್ರಕಾರ ನಿಷ್ಕಪಟ ಬುದ್ಧಿಯಲ್ಲಿ ಅನುಸಂಧಾನವುಳ್ಳ ಭಕ್ತರಿಗೆ ದೋಷಗಳೆಲ್ಲ, ಕೆಡುತಿಹುವು–ನಾಶವಾಗಿ ದಿವ್ಯ ಜ್ಞಾನೋದಯವಾಗಿ ಸುಖಿಸೋವರಾಗತಾರೆ. ಮುಖ್ಯ, ಶ್ರೀ ಪರಮಾತ್ಮನ್ನ ಭಕ್ತಿ ಪುರಸ್ಸರವಾಗಿ ನೆನೆದವರಿಗೆ ಪಾಪಗಳು ಲೇಪವಾಗೋದಿಲ್ಲ ಎಂತ ತಾತ್ಪರ್ಯ.

**ಕುಸ್ಥನೆನಿಸುವ ಭೂಮಿಯೊಳು ಆ ।**
**ಶಸ್ಥನೆನಿಸುವ ದಿಗ್ವಲಯದೊಳು ।**
**ಸ್ವಸ್ಥನೆನಿಪಾಕಾಶದೊಳು ಒಬ್ಬೊಬ್ಬರೊಳಗಿದ್ದು ॥**
**ವ್ಯಸ್ತನೆನಿಸುವ ಸರ್ವರೊಳಗೆ ಸ ।**
**ಮಸ್ತನೆನಿಸುವ ಬಳಿಯಲಿದ್ದು ಉ ।**
**ಪಸ್ಥನೆನಿಪ ವಿಶೋಧನ ವಿಶುದ್ಧಾತ್ಮ ಲೋಕದೊಳು ॥ ೨೨ ॥**

ಶ್ರೀ ಪರಮಾತ್ಮನ ತದಾಕಾರ ತನ್ನಾಮಗಳ ಹೇಳತಾರೆ.

ಕುಸ್ಥನೆನಿಸುವ–'ಕು' ಎಂದರೆ ಭೂಮಿ, 'ಸ್ಥ' ಎಂದರೆ ತದಂತರ್ಯಾಮಿಯಾಗಿ, ಭೂಮಿಯೊಳು–ಭೂಮಿಯಲ್ಲಿ ತದಾಕಾರ ತನ್ನಾಮದಿಂದ ಇರತಾನೆ. ದಿಗ್ವಲಯದೊಳು–ಪೂರ್ವಾದಿ ಅಷ್ಟದಿಕ್ಕುಗಳಲ್ಲಿದ್ದು, ಆಶಸ್ಥನೆನಿಸುವ–ಆಶ ಎಂದರೆ ದಿಕ್ಕು, ಆಶಸ್ಥ ಎಂತ ಎನಿಸೋವನಾಗತಾನೆ. ಆಕಾಶದೊಳು – ಆಕಾಶಸಾಂಕೇತವಾದ ಅವಕಾಶದೊಳಿದ್ದು, ಸ್ವಸ್ಥನೆನಿಪ–ಸ್ವಸ್ಥ ಎಂದರೆ ಆಕಾಶಕ್ಕೆ ಸಾಂಕೇತವು, ಚಲನರಹಿತನಾಗಿ ಸ್ವಸ್ಥಾನದಲ್ಲಿ ಇರೋ ಪ್ರಯುಕ್ತ ಸ್ವಸ್ಥ ಎಂತ ಎನಿಸತಾನೆ. ಒಬ್ಬೊಬ್ಬರೊಳಗಿದ್ದು–ಪ್ರತ್ಯೇಕ ಪ್ರತ್ಯೇಕ ಜೀವರಲ್ಲಿ ಪ್ರತ್ಯೇಕ ಪ್ರತ್ಯೇಕ ಬಿಂಬರೂಪಗಳಿಂದ ಇದ್ದವನಾಗಿ, ವ್ಯಸ್ತನೆನಿಸುವ–ವ್ಯಸ್ತ ಎಂದರೆ, ಬ್ಯಾರೆ ಬ್ಯಾರೆ ತತ್ತನ್ನಾಮದಿಂದ ಕರಿಸತಾನೆ. ಸರ್ವರೊಳಗೆ–ಸರ್ವ ಚರಾಚರ ಪ್ರಾಣಿಗಳ ಸಮೂಹ ವಿವಕ್ಷಯಾ, ಸರ್ವತ್ರ ವ್ಯಾಪ್ತನಾಗಿ ಇದ್ದಾನಾದಕಡಿಯಿಂದ, ಸಮಸ್ತನೆನಿಸುವ–ಸಮಸ್ತ ಎಂತ ಕರಿಸೋವನಾಗತಾನೆ. ಬಳಿಯಲಿದ್ದು–ಜೀವಾಂತರ್ಗತ ನಾಗಿ ಅವಿಯೋಗನಾಗಿ ಜೀವನ ಸಮೀಪದಲ್ಲಿ ಇದ್ದವನಾಗಿ, ಉಪಸ್ಥನು–ಉಪ ಎಂದರೆ ಸಮೀಪ, ಸ್ಥ ಎಂದರೆ ಇರತಕ್ಕವ, ಎನಿಪ–ಎಂತ ಕರಿಸಿಕೊಳ್ಳುವ, ಲೋಕದೊಳು–ಚರಾಚರಾತ್ಮಕ ಪ್ರಪಂಚದೊಳು, ತದಾಕಾರ ತನ್ನಾಮದಿಂದ ಪೂರ್ವೋಕ್ತ ಪ್ರಕಾರ ಇರತಕ್ಕ ಪರಮಾತ್ಮ, ವಿಶೋಧನ–ದಾರಿಂದಲೂ ಅಂತಃಶೋಧನ ಮಾಡೋದಕ್ಕೆ ಶಕ್ಯನಲ್ಲದವ, ವಿಶುದ್ಧಾತ್ಮ–ನಿರ್ದೋಷವಾದ ಸ್ವರೂಪವುಳ್ಳ ಪರಮಾತ್ಮಗೆ ಇನ್ನೊಬ್ಬರು ನಿಯಾಮಕರು ಆಗಲಿ, ಸಮರಾಗಲಿ ಇದ್ದಾರೆಂಬೋ ದೋಷದಿಂದ ರಹಿತನಾದ ಸ್ವಾಮಿ ಯಾದವ ಎಂತ ತಾತ್ಪರ್ಯ.

**ಜ್ಞಾನದನು ಎಂದೆನಿಪ ಶಾಸ್ತ್ರದಿ ।**
**ಮಾನದನು ಎಂದೆನಿಪ ವಸನದಿ ।**
**ದಾನಶೀಲ ಸುಬುದ್ಧಿಯೊಳಗವದಾನ್ಯನೆನಿಸುವನು ॥**
**ವೈನತೇಯುವರೂಥ ತತ್ತ ।**
**ತ್ಸ್ಥಾನದಲಿ ತತ್ತತ್ಸ್ವಭಾವಗ ।**
**ಳಾನುಸಾರ ಚರಿತ್ರೆ ಮಾಡುತ ನಿತ್ಯ ನೆಲೆಸಿಪ್ಪ ॥ ೨೩ ॥**

ತತ್ತದಾಕಾರ, ತನ್ನಾಮಗಳ ಹೇಳತಾರೆ.

ಶಾಸ್ತ್ರದಿ–ಸಮೀಚೀನ ಜ್ಞಾನಕ್ಕೆ ಕಾರಣವಾದ ಜ್ಞಾನವನ್ನು ತಿಳಿಸಿಕೊಡತಕ್ಕ ಶಾಸ್ತ್ರದಲ್ಲಿ ಶ್ರೀಪರಮಾತ್ಮ, ಜ್ಞಾನದನು ಎಂದೆನಿಪ–ಜ್ಞಾನ ಕೊಡತಕ್ಕವ ಎಂತ ಕರಿಸ ತಾನೆ; ವಸನದಿ–ಮಾನವನ್ನು ಕಾಪಾಡಿ, ಮಾನವನ್ನು ಕೊಡತಕ್ಕ ವಸ್ತ್ರದಲ್ಲಿ ಇದ್ದು, ಮಾನದನು ಎಂದೆನಿಪ–ಮರ್ಯಾದಾವನ್ನ ಕೊಡೋವನಾಗತಾನೆ. ದಾನಸುಶೀಲ–ಸತ್ಪಾತ್ರದಲ್ಲಿ ದಾನಮಾಡತಕ್ಕ ಸಮೀಚೀನವಾದ ನೈಜವಾದ ಶೀಲಸ್ವಭಾವವುಳ್ಳವರ, ಬುದ್ಧಿಯೊಳಗೆ–ಬುದ್ಧಿಯೊಳಗಿದ್ದು, ಅವದಾನ್ಯನೆನಿಸುವನು – ಕೊಡತಕ್ಕವನು ಎಂತ ಎನಿಸತಾನೆ. ವೈನತೇಯವರೂಥ–ಗರುಡವಾಹನನಾದ ಶ್ರೀ ಪರಮಾತ್ಮ, ತತ್ತತ್ಸ್ಥಾನ ದಲಿ–ಆಯಾ ಜೀವರ ಹೃದಯಸ್ಥಾನದಲ್ಲಿ, ತದ್ವ್ಯತಿರಿಕ್ತ ಜಡಗಳಲ್ಲಿ, ತದಾಕಾರ ತನ್ನಾಮ ದಿಂದ, ನೆಲೆಸಿಪ್ಪ–ಆವಾಸನಾಗಿ ಇರತಕ್ಕ ಶ್ರೀ ಪರಮಾತ್ಮ, ನಿತ್ಯ–ಪ್ರತಿನಿತ್ಯದಲ್ಲೂ, ತತ್ತತ್ಸ್ವಭಾವಗಳಾನುಸಾರ–ಅದರದರ ನೈಜ ಸ್ವಭಾವಗಳನುಸಾರ, ಚರಿತ್ರೆ–ವ್ಯಾಪಾರ ಗಳ, ಮಾಡುತ–ಅಭಿವ್ಯಕ್ತಿಮಾಡುತ್ತಾ ಆವಾಸನಾಗಿ ಇದ್ದಾನೆ.

**ಗ್ರಾಮುಪನೊಳಗ್ರಣಿಯೆನಿಸುವನು ।**
**ಗ್ರಾಮಣಿಯೆನಿಸುವನು ಜನರೊಳ್ ।**
**ಗ್ರಾಮುಪಗ್ರಾಮುಗಳೊಳಗೆ ಶ್ರೀಮಾನ್ಯನೆನಿಸುತಿಪ್ಪ ॥**
**ಶ್ರೀ ಮನೋರಮ ತಾನೇ ಯೋಗ ।**
**ಕ್ಷೇಮನಾಮಕನಾಗಿ ಸಲಹುವ ।**
**ಈ ಮಹಿಮೆ ಮಿಕ್ಕಾದ ದೇವರಿಗುಂಟೆ ಲೋಕದೊಳು ॥ ೨೪ ॥**

ಇನ್ನೂ ತದಾಕಾರ ತದ್ರೂಪ ವಿಚಾರ ಹೇಳತಾರೆ.

ಗ್ರಾಮುಪನೊಳು–ಗ್ರಾಮಾಧಿಕಾರಿಯಾದ, ಗ್ರಾಮಜನರಿಂದ ಶ್ರೇಷ್ಠ ಎಂತ ಕರೆಸಿ ಕೊಳ್ಳುವನೊಳಗಿದ್ದು, ಅಗ್ರಣಿಯೆನಿಸುವನು–ಶ್ರೇಷ್ಠ ಎಂತ ಕರೆಸೋವನಾಗತಾನೆ; ಜನರೊಳ್–ಗ್ರಾಮಪತಿವ್ಯತಿರಿಕ್ತ ಸಾಧಾರಣ ಮನುಷ್ಯರೊಳು, ಗ್ರಾಮಣಿಯೆನಿಸು ವನು–ಇದ್ದು ಗ್ರಾಮಸ್ಥ ಜನರು ಎಂತ ಕರೆಸುವನು; ಗ್ರಾಮುಪಗ್ರಾಮುಗಳೊಳಗೆ–ದೊಡ್ಡ

ಗ್ರಾಮಕ್ಕೆ ಸೇರಿದ ಅಪ್ರಸಿದ್ಧವಾದ ಚಿಕ್ಕ ಹಳ್ಳಿ ಗ್ರಾಮುಗಳೊಳಗಿದ್ದು, ತಥಾ ದೊಡ್ಡದಾದ ಗ್ರಾಮದಲ್ಲಿದ್ದು, ಶ್ರೀಮಾನ್ಯನು–ಐಶ್ವರ್ಯವಂತನು ಎಂತ, ಎನಿಸುತಿಪ್ಪ–ಎನಿಸುತ್ತಾ ಇರೋವನಾಗತಾನೆ. ಶ್ರೀಮನೋರಮ–ಲಕ್ಷ್ಮೀದೇವೇರಿಗೆ ಹರುಷಪ್ರದನಾದ ಶ್ರೀ ಪರಮಾತ್ಮ, ತಾನೇ–ತನಗೆ ತಾನೇ ಪೂರ್ವೋಕ್ತಪ್ರಕಾರ ರೂಪಗಳಿಂದ ಇದ್ದು, ಲೋಕ ದೊಳು–ಹದಿನಾಲ್ಕು ಲೋಕದೊಳು, ಯೋಗಕ್ಷೇಮನಾಮಕನಾಗಿ–ಪರಸ್ಪರ ಜನರು ಯೋಗಕ್ಷೇಮ ವಿಚಾರಮಾಡತಕ್ಕ ವ್ಯಾಪಾರದಲ್ಲಿ ಯೋಗಕ್ಷೇಮನಾಮದಿಂದ ಇದ್ದು, ಸಲಹುವ–ಈ ಪ್ರಕಾರ ಸಂರಕ್ಷಣೆ ಮಾಡತಾನೆ. ಈ ಮಹಿಮೆ–ಈ ಪೂರ್ವೋಕ್ತ ಮಹಾ ಮಹಿಮಾಗಳು, ಮಿಕ್ಕಾದ ದೇವರಿಗುಂಟೆ–ಇತರಾದಿ ದೇವತೆಗಳಿಗೆ ಉಂಟೆ ಎಂದರೆ, ಇಲ್ಲ ಎಂತ ತಾತ್ಪರ್ಯ.

**ವಿಜಯಸಾರಥಿ ಎಂದು ಗರುಡ ।**
**ಧ್ವಜನ ಮೂರ್ತಿಯ ಭಕ್ತಿಪೂರ್ವಕ ।**
**ಭಜಿಸುತಿಪ್ಪ ಮಹಾತ್ಮರಿಗೆ ಸರ್ವತ್ರದಲಿ ಒಲಿದು ॥**
**ವಿಜಯದನು ತಾನಾಗಿ ಸಲಹುವ ।**
**ಭುಜಗಭೂಷಣಪೂಜ್ಯ ಚರಣಾಂ ।**
**ಬುಜ ವಿಭೂತಿದ ಭುವನಮೋಹನರೂಪ ನಿರ್ಲೇಪ ॥ ೨೫ ॥**

ಶ್ರೀ ಪರಮಾತ್ಮನ್ನ ಭಜಿಸಿದವರಿಗೆ ಅಪಜಯವಿಲ್ಲೆಂದು ಹೇಳತಾರೆ.

ಭುಜಗಭೂಷಣ–ಸರ್ಪಭೂಷಣನಾದ ರುದ್ರದೇವರಿಂದ, ಪೂಜ್ಯ–ಪೂಜಿತವಾದ, ಚರಣಾಂಬುಜ – ಪಾದಕಮಲಗಳುಳ್ಳವನೇ, ಭುವನಮೋಹನರೂಪ – ರಮಾಬ್ರಹ್ಮಾದಿ ಸರ್ವಜೀವರು ಮೋಹಪಡತಕ್ಕ ದಿವ್ಯಸುಂದರವಾದ ರೂಪವುಳ್ಳವನೇ, ವಿಜಯಸಾರಥಿ– ಅರ್ಜುನಗೆ ಸಾರಥಿಯಾಗಿ ಕಾರ್ಯ ಮಾಡಿದವನೇ ಎಂತ, ಎಂದು–ಈ ಪ್ರಕಾರ ಶ್ರೀ ಪರಮಾತ್ಮನ್ನ ಸ್ಮರಣಮಾಡುತ್ತಾ, ಗರುಡಧ್ವಜನ ಮೂರ್ತಿಯ–ಗರುಡದೇವರು ಧ್ವಜವಾಗಿ ಉಳ್ಳ ಶ್ರೀ ನಾರಾಯಣದೇವರನ್ನೇ, ಭಕ್ತಿಪೂರ್ವಕ–ಹೃದಯಾಕಾಶದಲ್ಲಿ ನಿಲ್ಲಿಸಿ ಏಕಾಗ್ರ ಚಿತ್ತದಿಂದ ಪರಮಸ್ನೇಹಪೂರ್ವಕ ಭಕ್ತಿಯಿಂದ, ಭಜಿಸುತಿಪ್ಪ–ಭಜನಿ ಮಾಡುವಂಥ, ಮಹಾತ್ಮರಿಗೆ–ದಿವ್ಯಜ್ಞಾನಿಗಳಿಗೆ, ಸರ್ವತ್ರದಲಿ–ಸಮಸ್ತವಾದ ಏಕಾದಶೇಂದ್ರಿಯಗಳಲ್ಲಿ ವ್ಯಾಪ್ತನಾಗಿದ್ದು, ತಥಾ ಬಹಿಃ, ಸರ್ವತ್ರದಲ್ಲಿ ಇದ್ದು, ವಿಜಯದನು–ಇಂದ್ರಿಯಜಯ ವನ್ನು, ತಾನಾಗಿ–ತನಗೆ ತಾನೇ ಆಗಿ ಕೊಟ್ಟು, ಒಲಿದು–ಅಪರೋಕ್ಷದಿಂದ ಒಲಿದು, ನಿರ್ಲೇಪ–ಆಗಾಮಿ ಸಂಚಿತಗಳಿಂದ ಲೇಪರಹಿತನ್ನಾಗಿ ಮಾಡಿ, ವಿಭೂತಿದ–ಪ್ರಾಂತ್ಯಕ್ಕೆ ಲಿಂಗಭಂಗವನ್ನ ಐದಿಸಿ, ಸ್ವಸ್ವರೂಪಾನಂದ ಅಭಿವ್ಯಕ್ತಿರೂಪವಾದ ಐಶ್ವರ್ಯವನ್ನು ಕೊಡೋವನಾಗತಾನೆ. ಇಹದಲ್ಲಿ ದಿವ್ಯಜ್ಞಾನವೇನು, ಐಶ್ವರ್ಯವೇನು, ಕೊಟ್ಟು ಸಂರಕ್ಷಣ ಮಾಡತಾನೆ. ಆದ್ದರಿಂದ ಸರ್ವಾರಿಷ್ಟನಿವೃತ್ತಿ, ಇಷ್ಟಪ್ರಾಪ್ತಿ ಆಗಬೇಕಾದರೆ ಶ್ರೀಪರಮಾತ್ಮನ ಸ್ಮರಣ, ಆರಾಧನ ಹೊರ್ತು ಬ್ಯಾರೆ ಇಲ್ಲ ಎಂತ ತಾತ್ಪರ್ಯ. ಆದ್ದರಿಂದ

ಸರ್ವಪ್ರಕಾರದಿಂದಲೂ ಶ್ರೀ ದೇವರನ್ನ ಭಜಿಸಿದರೆ, ಸಲಹುವ–ಸಂರಕ್ಷಣ ಮಾಡತಾನೆ ಎಂತ ಭಾವವು.

**ಅನಭಿಮತ ಕರ್ಮಪ್ರವಹದೊಳ ।**
**ಗನಿಮಿಷಾದಿ ಸಮಸ್ತ ಚೇತನ ।**
**ಗಣವಿಹುದು ತತ್ಫಲಗಳುಣ್ಣದೆ ಸೃಷ್ಟಿಸದ ಮುನ್ನ ॥**
**ವನಿತೆಯಿಂದೊಡಗೂಡಿ ಕರುಣಾ ।**
**ವನಧಿ ನಿರ್ಮಿಸೆ ತಮ್ಮ ತಮ್ಮಯ ।**
**ಅನುಚಿತೋಚಿತ ಕರ್ಮಫಲಗಳನುಣುತ ಚರಿಸುವರು ॥ ೨೬ ॥**

ಜೀವರು ಭೋಗಿಸತಕ್ಕ ಕರ್ಮ ಎಂಬುದು, ಅನಾದಿ ಎಂತಲೂ, ಅಕ್ಕಿ ಮ್ಯಾಲೆ ಹೊಟ್ಟು ಇದ್ದಂತೆ ಜೀವರಿಗೆ ಲಿಂಗಶರೀರ ಅನಾದಿಯಾದರೂ, ಸಂಸೃತಿ ಎಂಬ ಬಾಹ್ಯ ಸುಖದುಃಖಭೋಗ, ಸೃಷ್ಟ್ಯನಂತರವೇ ಹೊರತು ತತ್ಪೂರ್ವದಲ್ಲಿ ಇಲ್ಲವೆಂದು ಹೇಳತಾರೆ.

ಸೃಷ್ಟಿಸದ ಮುನ್ನ–ಜೀವರನ್ನ ಸೃಷ್ಟಿಗೆ ತಾರದೇ ಇರೋದಕ್ಕೆ ಪೂರ್ವ ಅಸೃಜ್ಯ ರಾಶಿಯಲ್ಲಿ ಜೀವರು ಅನಾದಿಲಿಂಗದಿಂದ ಸಹಿತರಾಗಿಯೂ ಆ ಲಿಂಗಗತ, ಅನಭಿಮತ–ಸ್ವರೂಪವಿವಕ್ಷಯಾ ಅಭಿಮತವಲ್ಲದ್ದಾಗಿಯೂ ಇರತಕ್ಕ, ಕರ್ಮಪ್ರವಾಹದೊಳಗೆ–ಪ್ರವಾಹತ್ವ ಯೋಗ್ಯತಾದಿಂದ ಇರತಕ್ಕ ಕರ್ಮಬಂಧನದೊಳಗೆ ಅಸೃಜ್ಯರಾಶಿಗತರಾದ, ಅನಿಮಿಷಾದಿ–ದೇವತೆಗಳೇ ಮೊದಲಾದ, ಸಮಸ್ತ ಚೇತನಗಣವು–ಸಮಸ್ತರಾದ ಚೇತನಾ ಚೇತನಗಣ ತ್ರಿವಿಧವಾದ ಜೀವಸಮೂಹ, ತತ್ಫಲಗಳುಣ್ಣದೆ–ಆ ಅನಾದಿಕರ್ಮಫಲಗಳ ಭೋಜನಮಾಡದೆ, ಇಹುದು–ಇರೋದಾಗಿ ಅದೆ. ಉದಕದ ಸ್ವಭಾವ ಪ್ರವಾಹರೂಪ ವಾದದ್ದು, ಆದರೂ ಘಟವಿಶೇಷದಲ್ಲಿ ವಿದ್ಯಮಾನವಾದ ಉದಕ ಪ್ರವಹಿಸದೇ ನಿಂತು ಇದ್ದಂತೆ, ಅನಾದಿ ಲಿಂಗಾಖ್ಯ ಘಟದಲ್ಲಿ ಕರ್ಮಾಖ್ಯ ಉದಕ ಪ್ರವಹಿಸದೇ ತದ್ಯೋಗ್ಯತಾ ದಿಂದ ಇರೋದಾಗಿ ಅದೆ. ಕರುಣಾವನಧಿ–ಕರುಣಾಸಮುದ್ರನಾದ ಶ್ರೀ ನಾರಾಯಣ ದೇವರು, ವನಿತೆಯಿಂದೊಡಗೂಡಿ–ತನ್ನ ಪತ್ನಿ ಲಕ್ಷ್ಮೀದೇವೇರಿಂದ ಕೂಡಿಕೊಂಡು, ನಿರ್ಮಿಸೆ–ಅವರವರ ನಿಜವಾದ ಗತಿ ಕೊಡೋದಕ್ಕೋಸ್ಕರ, ಅವರವರು ಸಾಧನ ಮಾಡಿ ಕೊಂಬೋದಕ್ಕೋಸ್ಕರ, ಸ್ಥೂಲದೇಹಗಳಿಂದ ಅಸೃಜ್ಯರ ಸೃಷ್ಟಿಮಾಡೋಣವೇ, ತಮ್ಮ ತಮ್ಮಯ–ಆ ಅಸೃಜ್ಯರಾದ ಜೀವರು ತಮ್ಮ ತಮ್ಮ ಲಿಂಗಗತ ಅನಾದಿಕರ್ಮಗಳ ಅನು ಸರಿಸಿ ಶಾಖೋಪಶಾಖೆಗಳಾಗಿ ಬೆಳೆದ, ಆಗಾಮಿಸಂಚಿತಾಖ್ಯ, ಅನುಚಿತ–ಪಾಪಕರ್ಮ ಗಳ, ಉಚಿತ–ಪುಣ್ಯಕರ್ಮಗಳ, ಕರ್ಮಫಲಗಳನು–ಈ ಉಭಯವಿಧ ಕರ್ಮಫಲಗಳನ್ನು, ಉಣುತ–ಭೋಜನಮಾಡುತ್ತ, ಚರಿಸುವರು–ಬ್ರಹ್ಮಾಂಡದೊಳಗೆ ಸಂಚಾರಮಾಡುವರು. ಸೃಷ್ಟಿಗೆ ಪೂರ್ವದಲ್ಲಿ ಕರ್ಮಫಲಗಳ ಉಂಬೋದಿಲ್ಲ ಎಂತಲೂ, ಸೃಷ್ಟಿಸಲ್ಪಟ್ಟ ನಂತರ ಕರ್ಮಫಲಗಳ ಉಣತಾರೆಂತಲೂ ಹೇಳಿರೋಣದರಿಂದ, ಸೃಷ್ಟಿಗೆ ಪೂರ್ವದಲ್ಲಿ ಕರ್ಮ, ಶಕ್ತ್ಯಾತ್ಮನಾ ಜೀವರಿಗೆ ಅದೆ. ಪ್ರವಾಹರೂಪದಿಂದ ವ್ಯಕ್ತ ಇಲ್ಲದ ಕಾರಣವೇ ಫಲವಿಲ್ಲ,

ಗಾಢನಿದ್ರಾಕಾಲವತ್ ಎಂತ ತಾತ್ಪರ್ಯ. ಕರ್ಮಫಲಭೋಗ ದಾವಾಗ ಹೇಳಿದರೋ ಆಗ್ಗೆ ಪ್ರವಾಹತ್ವ ಪ್ರಾಪ್ತಿ. ಮ್ಯಾಲೆ ಪ್ರವಾಹಶಬ್ದಕ್ಕೆ ಕೃತ್ಯವೇನೆಂದರೆ, ಪ್ರವಾಹತ್ವ ಯೋಗ್ಯತಾವಿಶಿಷ್ಟವೆಂದು ಭಾವವು.

**ಝುಲ್ಲಡಿಯ ನೆಳಲಂತೆ ತೋರ್ಪುದು ।**
**ಎಲ್ಲಕಾಲದಿ ಭವದ ಸೌಖ್ಯವು ।**
**ಎಲ್ಲಿ ಪೊಕ್ಕರು ಬಿಡದೆ ಬೆಂಬತ್ತಿಹುದು ಜೀವರಿಗೆ ॥**
**ಒಲ್ಲೆನೆಂದರೆ ಬಿಡದು ಹರಿನಿ ।**
**ರ್ಮಾಲ್ಯ ನೈವೇದ್ಯವನು ಭುಂಜಿಸಿ ।**
**ಬಲ್ಲವರ ಕೂಡಾಡು ಭವದುಃಖಗಳನೀಡಾಡು ॥ ೨೭ ॥**

ಸಂಸಾರಸುಖ ಎಂಥಾದ್ದೆಂದರೆ, ಅದರನ್ನ ಹೇಳತಾರೆ.

ಭವದ ಸೌಖ್ಯವು–ಜೀವರಿಗೆ ಸಂಸಾರಸುಖವೆಂಬದು, ಝುಲ್ಲಡಿಯ ನೆಳಲಂತೆ– ಝುಲ್ಲಡಿಯ ನೆಳಲಿನೋಪಾದಿಯಲ್ಲಿ ಎಂದರೆ, ಝುಲ್ಲಡಿಯ ನೆಳಲು ಎಂಬುದು ಬಿಸಿಲು, ನೆಳಲು ಎರಡರಿಂದ ಸಹಿತವಾಗಿ ಇರ್ತದೆ. ಇದರೋಪಾದಿಯಲ್ಲಿ ಸುಖದುಃಖಗಳಿಂದ ಮಿಶ್ರವಾಗಿರುವ, ತೋರ್ಪುದು–ಈ ಸಂಸಾರ ವಿಷಯಾಸಕ್ತರಾದ ಅಜ್ಞಾನಿಗಳಿಗೂ, ಜ್ಞಾನಿಗಳಿಗೂ ಸುಖದೋಪಾದಿಯಲ್ಲಿ ತೋರುತ್ತಾ ಇರುತ್ತದೆ. ಈ ಸಂಸಾರವೆಂಬುದು, ಎಲ್ಲ ಕಾಲದಿ–ಸುಖದುಃಖದಿಂದ ಮಿಶ್ರವಾಗಿ ಸರ್ವದಾ, ಎಲ್ಲಿ ಪೊಕ್ಕರು ಬಿಡದೆ–ಶ್ರೀಪರಮಾತ್ಮನ ವ್ಯತಿರಿಕ್ತ ಎಲ್ಲಿ ಹೋದಕಾಲಕ್ಕೂ, ದಾವ ದೇವತೆಗಳನ್ನು ಮೊರೆಹೋದ ಕಾಲಕ್ಕೂ ಬಿಡಥಾಂಗೆ, ಜೀವರಿಗೆ–ಸೃಜ್ಯರಾದ ಪ್ರಾಣಿಗಳಿಗೆ, ಬೆಂಬತ್ತಿಹುದು–ನೆರಳಿನೋಪಾದಿಯಲ್ಲಿ ಬೆನ್ನುಹತ್ತಿಕೊಂಡು ಇರ್ತದೆ. ಒಲ್ಲೆನೆಂದರೆ ಬಿಡದು–ಈ ಸಂಸಾರವೆಂಬುದು ಬ್ಯಾಡಾ ಎಂದರೂ ಬಿಡೋದಿಲ್ಲ. ಸಂಸಾರ ದಾವುದೆಂದರೆ, ದಾರಾಪುತ್ರಾದಿಗಳಿಂದ ಸಹಿತವಾದ ಸಂಸಾರವಲ್ಲ, ಅಹಂಮಮತಾವೆಂಬ ಸಂಸಾರ. ಈ ಸಂಸಾರ, ಜೀವರನ್ನ ಜನನ ಮರಣಕ್ಕೆ ಕಾರಣ ಮಾಡತಕ್ಕಂಥಾದ್ದು. ಆದಕಡಿಯಿಂದ, ಇಂಥಾ ಸಂಸಾರವನ್ನ ಬಿಟ್ಟು ನಿಸ್ಪೃಹನಾಗಿ ನಪುನರಾವರ್ತಿಜನ್ಮ ಐದಬೇಕಾದರೆ, ಬಲ್ಲವರ ಕೂಡಾಡು–ಅಪರೋಕ್ಷಜ್ಞಾನಿಗಳಾಗಿ ಪ್ರಾಕೃತವಾದ ಸಂಸಾರ ಹೇಯ ಎಂತ ಭಗವನ್ಮಹಿಮಾ ಛಂದಾಗಿ ತಿಳಿದ ಜ್ಞಾನಿಗಳ ಸಹವಾಸ ಮಾಡಬೇಕು. ಇನ್ನು ಶ್ರೀವಿಷ್ಣು ಸರ್ವೋತ್ತಮನೆಂಬ ಉಪಾಸನದಿಂದಲೂ, ಹರಿನಿರ್ಮಾಲ್ಯ–ದೇವರಿಗೆ ಸಮರ್ಪಣಮಾಡಿದ ಶ್ರೀತುಲಸಿ, ಪುಷ್ಪ, ನೈವೇದ್ಯವನು–ದೇವರಿಗೆ ಸಮರ್ಪಿಸಿದ ಪದಾರ್ಥಗಳ, ಭುಂಜಿಸಿ–ಭೋಜನಮಾಡಿ, ಶಿರಸಾ ಧಾರಣಮಾಡಿ, ಭವದುಃಖಗಳನೀಡಾಡು–ಶ್ರೀಶ ಸರ್ವೋತ್ತಮನೆಂದು ಸದಾ ಉಪಾಸನ ಮಾಡಿದರೆ, ಸಂಸಾರದುಃಖದಿಂದ ಮುಕ್ತನಾಗಿ, ಅತ್ಯರ್ಥ ಪ್ರಸಾದವನ್ನು ಹೊಂದೋವನಾಗು ಎಂತ ಹೇಳಿದ್ದಾರೆ ಎಂತ ತಾತ್ಪರ್ಯ.

**ಕುಟ್ಟಿ ಕೊಯಿದುದನಟ್ಟು ಇಟ್ಟುದ ।**
**ಸುಟ್ಟು ಕೊಟ್ಟುದ ಮುಟ್ಟಲಘ ಹಿ ।**
**ಟ್ಟಿಟ್ಟು ಮಾಳ್ಪುದು ವಿಠ್ಠಲುಂಡುಚ್ಛಿಷ್ಠ ಸಜ್ಜನರ ॥**
**ಬಿಟ್ಟು ತನ್ನಯ ಹೊಟ್ಟೆಗೋಸುಗ ।**
**ಥಟ್ಟನುಣುತಿಹ ಕೆಟ್ಟ ಮನುಜರ ।**
**ಕಟ್ಟಿ ಒಯ್ದು ಮಪಟ್ಟಣದೊಳೊತ್ತಟ್ಟಲಿಡುತಿಹನು ॥ ೨೮ ॥**

ಪಾಪ ಪರಿಹಾರಮಾರ್ಗ ಹೇಳತಾರೆ.

ಕೊಯಿದುದನ–ಕೊಯ್ಯಲ್ಪಟ್ಟ ಧಾನ್ಯಗಳ, ಅಟ್ಟು–ಯಾವತ್ತೂ ನೂ, ಅಷ್ಟೂನೂ, ಕುಟ್ಟಿ–ಒರಳಿನಲ್ಲಿ ಹಾಕಿ ವನಕಿಗಳಿಂದ ಕುಟ್ಟಿ ತಂಡುಲಮಾಡಿ, ಅದ–ಆ ತಂಡುಲವನ್ನ, ಇಟ್ಟು–ಒಲಿಮ್ಯಾಲೆ ಇಟ್ಟು, ಸುಟ್ಟು–ಅಗ್ನಿದ್ವಾರಾ ಪಚನಮಾಡಿ, ಅದ–ಅದರನ್ನ, ವಿಠ್ಠಲ – ಪಾಪಪರಿಹಾರಕನಾದ ಶ್ರೀಪರಮಾತ್ಮಗೆ, ಕೊಟ್ಟು – ಅನುಸಂಧಾನದಿಂದ ಸಮರ್ಪಣಪೂರ್ವಕ ಕೊಟ್ಟು, ಉಂಡು–ಪರಮಾತ್ಮ ತದ್ಗತ ತನ್ನ ಸ್ವಾಖ್ಯರಸವನ್ನುಂಡು, ಉಚ್ಚಿಷ್ಠ – ತನಗೆ (ಪರಮಾತ್ಮಗೆ) ಯೋಗ್ಯವಲ್ಲದ ಉಚ್ಛಿಷ್ಠಸಾಂಕೇತವಾದ ಜಡ ಪದಾರ್ಥ, ಜಡರಸ, ಮುಟ್ಟಲು–ಅಧಿಕಾರಿಯಾದವ ತನ್ನ ಜಿಹ್ವೇಂದ್ರಿಯದ್ವಾರಾ ಭೋಜನಮಾಡಲು, ಸಜ್ಜನರ–ಇಂಥಾ ಸಜ್ಜನರಾದವರ, ಅಘ–ಪಾಪಗಳ, ಹಿಟ್ಟಿಟ್ಟು ಮಾಳ್ಪುದು–ಚೂರ್ಣೀಕೃತವಾಗಿ ನಾಶಮಾಳ್ಪುದು. ಬಿಟ್ಟು–ಪೂರ್ವೋಕ್ತಪ್ರಕಾರ ಅನುಸಂಧಾನದಿಂದ ನಿವೇದನಮಾಡಿ ಭೋಜನಮಾಡೋಣ ಬಿಟ್ಟು, ತನ್ನಯ ಹೊಟ್ಟೆಗೋಸುಗ–ನಿವೇದನ ಇಲ್ಲದೇನೆ, ತನ್ನ ಉದರಪೂರ್ತಿಗೋಸುಗ, ಥಟ್ಟನುಣುತಿಹ–ಬ್ಯಾಗನೆ ಉಣತಾ ಇರತಕ್ಕ, ಕೆಟ್ಟ ಮನುಜರ–ಪಾಪಿಷ್ಠರಾದ ಮನುಷ್ಯರ, ಕಟ್ಟಿ–ದೇಹತ್ಯಾಗ ನಂತರ ಯಮದೂತರು ಪಾಶಗಳಿಂದ ಕಟ್ಟಿ, ಒಯ್ದು–ಕೊಂಡುಹೋಗಿ ಯಮದೇವರ ವಶ ಮಾಡತಾರೆ. ಯಮ–ಯಮದೇವರು, ಪಟ್ಟಣದೊಳ್–ನರಕಪಟ್ಟಣಗತವಾದ, ಒತ್ತಟ್ಟಲಿ – ಒಂದು ಪ್ರದೇಶವಿಶೇಷದಲ್ಲಿ ಇರತಕ್ಕ ನರಕದೊಳು, ಇಡುತಿಹನು – ದೂತರಿಗೆ ಆಜ್ಞಾಮಾಡಿ ಇಡೋವನಾಗತಾನೆ. ನಿವೇದನಕ್ರಮ, ನೈವೇದ್ಯ ಸಂಧಿಯಲ್ಲಿ ಹೇಳಿದ ಪ್ರಕಾರ ಅನುಸಂಧಾನಮಾಡಿ ಭೋಜನಮಾಡಿದರೆ, ಪಾಪಗಳು ನಾಶವಾಗತವೆ, ಎಂತ ತಾತ್ಪರ್ಯ.

ಪ್ರಮಾಣ :–ಯಜ್ಞಶಿಷ್ಟಾಶಿನಃ ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ॥ ಭುಂಜತೇ ತೇ ತ್ವಘಂ ಪಾಪಾಃ ಯೇ ಪಚಂತ್ಯಾತ್ಮಕಾರಣಾತ್ ॥

**ಝುಲ್ಲಡಿಯ ನೆಳಲಂತೆ ಭವಸುಖ ।**
**ತಲ್ಲಣವಗೊಳಿಸುವುದು ನಿಶ್ಚಯ ।**
**ವಲ್ಲ ಸಾಲವ ಮಾಡಿ ಸಕ್ಕರೆ ಮೆದ್ದ ತೆರನಂತೆ ॥**

**ಕ್ಷುಲ್ಲಕರ ಕೂಡಾಡದಲೆ ಶ್ರೀ ।**
**ವಲ್ಲಭನ ಸದ್ಗುಣಗಣಂಗಳ ।**
**ಬಲ್ಲವರ ಕೂಡಾಡಿ ಸಂಪಾದಿಸು ಪರಂಪದವ ॥ ೨೯ ॥**

ಸಂಸಾರವೆಂಬುದು ಹೇಯ. ಭಗವದ್ಭಕ್ತರ ಕೂಡಿ ಸದ್ಗತಿ ಸಂಪಾದಿಸಬೇಕೆಂತ ಹೇಳತಾರೆ.

ಝುಲ್ಲಡಿಯ ನೆಳಲಂತೆ—ಬಿಸಿಲು ನೆರಳು ಈ ಎರಡರಿಂದ ಯುಕ್ತವಾಗಿ ಝುಲ್ಲಡಿಯ ನೆಳಲು ಇರತಕ್ಕದ್ದು. ಭವಸುಖ—ಸಂಸಾರದ ಸುಖ ಎಂದರೆ, ಇದು ಸುಖದುಃಖದಿಂದ ಮಿಶ್ರವಾದದ್ದರಿಂದ, ತಲ್ಲಣವಗೊಳಿಸುವುದು—ಮನಸ್ಸನ್ನು ನಾನಾಪ್ರಕಾರ ವಿಕಾರ ಐದಿಸಿ ಕಷ್ಟಪಡಿಸುವುದು, ನಿಶ್ಚಯವಲ್ಲ—ಈ ಸಂಸಾರಸುಖ ಆಮರಣಾಂತ ನಿಶ್ಚಯವಾಗಿ ಇರೋದಿಲ್ಲ. ಮತ್ತು ಇದಕ್ಕೆ ದೃಷ್ಟಾಂತ, ಸಾಲವ ಮಾಡಿ—ಅಂಗಡಿಯಲ್ಲಿ ಸಾಲವ ಮಾಡಿ, ಸಕ್ಕರೆ ಮೆದ್ದ ತೆರನಂತೆ—ಸಕ್ಕರಿ ತಂದು ಅದರನ್ನ ಭೋಜನಮಾಡಿದರೆ ಜಿಹ್ವೆಗೆ ರುಚಿಕೊಟ್ಟು ಮನಸ್ಸಿಗೆ ಹರುಷವಾಗತದೆ. ಸಾಲಗಾರ ಬಂದು ಹಣ ಕೇಳಿದಾಗ ಗತಿ ಇಲ್ಲದೆ ಸಾಲಗಾರನಿಂದ ಹಿಂಸಿತನಾಗಿ ಮನಸ್ಸಿಗೆ ದುಃಖವಾಗೋದಾಗತದೆ. ಇವನೋಪಾದಿಯಲ್ಲಿ ದಾರಾ, ಪುತ್ರ, ಧನ, ಧಾನ್ಯ, ಆಗರಾದಿಗಳ ನೋಡಿ ' ನಾನು ಸಂಪಾದನೆ ಮಾಡಿದೆ, ನನ್ನದು ' ಅಂಬೋಣ ದಾವುದದೆ ಅದೇ ಸಂಸಾರಕ್ಕೆ ಕಾರಣ. ಇದರಿಂದ ಭೋಗಪದಾರ್ಥಗಳು ಇರೋವರಿಗ್ಯೂ ಸಂತೋಷವಾಗಿರತದೆ. ಅವುಗಳು ನಷ್ಟವಾಗೋಣದರಿಂದ ದುಃಖವಾಗತದೆ. ಆದ್ದರಿಂದ, ಕ್ಷುಲ್ಲಕರ ಕೂಡಾಡದಲೆ—ಅಹಂಮಮತಾದಿಗಳಿಂದ ಮದಿಸಿದ ದುಷ್ಟಜನರ ಸಂಗಾತ ಕೂಡಿದರೆ ಅಹಂಮಮತಾಜ್ಞಾನ ಅತಿಶಯವಾಗಿ, ದುಃಖಕ್ಕೆ ಕಾರಣವಾಗಿ ಕೆಟ್ಟು ಹೋಗತಾರಾದಕಡಿಯಿಂದ, ಇಂಥಾ ದುಷ್ಟರ ಸಹವಾಸ ಮಾಡದಲೆ ಇರಬೇಕು. ಇನ್ನೂ ಹ್ಯಾಂಗಿರಬೇಕು, ಎಂಥಾವರ ಸಹವಾಸ ಮಾಡಬೇಕೆಂದರೆ, ಶ್ರೀವಲ್ಲಭನ—ಲಕ್ಷ್ಮೀಪತಿಯಾದ ಶ್ರೀಪರಮಾತ್ಮನ, ಸದ್ಗುಣಗಣಂಗಳ—ನಿರ್ದುಷ್ಟಗಳಾದ ಕಲ್ಯಾಣಗುಣಸಮೂಹಂಗಳ, ಬಲ್ಲವರ—ತಿಳಿದು ಮಮತಾಜ್ಞಾನರಹಿತರಾಗಿ ಸರ್ವವೂ ಈಶಾಧೀನವೆಂದು ತ್ರಿಕರಣಶುದ್ಧಿಯಿಂದ ಇರುವ ಭಗವದ್ಭಕ್ತರ, ಕೂಡಾಡಿ—ಸಂಗಡ ಇದ್ದು, ಸಂಚಾರಮಾಡಿ ಅವರಿಂದ ದಿವ್ಯಜ್ಞಾನೋಪದಿಷ್ಟನಾಗಿ, ಪರಂಪದವ—ಸಾಧನಿ ಮಾಡಿ ಉತ್ತಮವಾದ ಮೋಕ್ಷಪದವನ್ನು, ಸಂಪಾದಿಸು—ಸಂಪಾದನಮಾಡು ಎಂತ ತಾತ್ಪರ್ಯ.

**ಜಾಗುಮಾಡದೆ ಭೋಗದಾಸೆಯ ।**
**ನೀಗಿ ಪರಮಾನುರಾಗದಲಿ ವರ ।**
**ಭೋಗಿಶಯನನ ಆಗರದ ಹೆಬ್ಬಾಗಿಲಲಿ ನಿಂದು ॥**
**ಕೂಗುತಲೆ ಶಿರಬಾಗಿ ಕರುಣಾ ।**
**ಸಾಗರನೆ ಭವರೋಗಭೇಷಜ ।**
**ಕೈಗೊಡೆಂದೆನೆ ಬೇಗ ಒದಗುವ ಭಾಗವತರರಸ ॥ ೩೦ ॥**

ವಿಷಯತ್ಯಾಗ ಮಾಡಿ ಶ್ರೀಪರಮಾತ್ಮನ ಭಜಿಸಬೇಕು ಎಂತ ಹೇಳತಾರೆ.

ಭೋಗದಾಸೆಯ ನೀಗಿ–ಅಹಂಮಮತಾಯುಕ್ತನಾಗಿ, ವಿಷಯಭೋಗಾದಿಗಳೇನು, ಆಶಾವೇನು, ಇವುಗಳು ಲಿಂಗಭಂಗವಾಗೋವರಿಗ್ಯೂ ಬಿಡೋದಿಲ್ಲ, ಭೋಗಿಸೇ ತೀರ ಬೇಕು. ಅಹಂಮಮತಾಯುಕ್ತನಾಗಿ ಭೋಗಮಾಡಿದರೆ, ದುಃಖಾಭಿವೃದ್ಧಿಯೂ, ಪಾಪಾಭಿವೃದ್ಧಿಯೂ ಆಗತದೆ, ತದ್ವತ್ ಆಶಾವು. ಆದ್ದರಿಂದ ಆಶಾತ್ಯಾಗದಿಂದ, ಸರ್ವವೂ ಈಶಾಧೀನ ಎಂತ ತಿಳಿದು ಯದೃಚ್ಛಾಲಾಭದಿಂದ ತುಷ್ಟನಾಗಿ, ಪರಮನುರಾಗ ದಲಿ–ಅತ್ಯಂತವಾದ ಆಸಕ್ತಿಯಿಂದ, ಶ್ರದ್ಧಾದಿಂದ, ಪರಭೋಗಿಶಯನನ–ಶ್ರೇಷ್ಠರಾದ ಶೇಷದೇವರೇ ಹಾಸಿಗಿಯಾಗುಳ್ಳ ಶ್ರೀನಾರಾಯಣಗೆ, ಆಗರದ–ಮನಿಸಾಂಕೇತವಾದ ಸ್ಥೂಲದೇಹದ, ಹೆಬ್ಬಾಗಿಲಲಿ–ಮುಖ್ಯದ್ವಾರವಾದ ಬಾಯಿಯಲ್ಲಿ, ನಿಂದು–ನಿಶ್ಚಂಚಲ ವಾದ ಭಕ್ತಿಯಿಂದ ಮನಸ್ಸು ನಿಂತು, ಕೂಗುತಲೆ–ಹೃದಯಾಕಾಶಗತ ಶ್ರೀಪರಮಾತ್ಮನ ನಾಮೋಚ್ಚಾರಣ ಘಟ್ಯಾಗಿ ಮಾಡುತ್ತಾ, ಶಿರಬಾಗಿ–ಕೇವಲ ದೀನನಾಗಿ ಮನಸ್ಸನ್ನ ಶ್ರೀದೇವರ ಪಾದದಲ್ಲಿ ಇಟ್ಟು ನಮಸ್ಕಾರಮಾಡಿ, ಕರುಣಾಸಾಗರನೆ–ಕರುಣಾಸಮುದ್ರನೆ, ಭವರೋಗಭೇಷಜ–ಸಂಸಾರಾಖ್ಯ ರೋಗಕ್ಕೆ ಔಷಧರೂಪನಾದವನೇ, ಕೈಗೊಡೆಂದೆನೆ–ಜ್ಞಾನ, ಭಕ್ತಿ, ವೈರಾಗ್ಯಾಖ್ಯ ಕರವನ್ನ ಕೊಡು ಎಂತೆಂದರೆ, ಅದರನ್ನ ಕೊಟ್ಟು ತದ್ದ್ವಾರಾ ಸಾಧನಿ ಪೂರ್ತಿಮಾಡಿಸಿ, ಭಾಗವತರರಸ–ಭಗವದ್ಭಕ್ತರಿಗೆ ಸ್ವಾಮಿಯಾದ ಶ್ರೀಪರಮಾತ್ಮ, ಬೇಗ ಒದಗುವ–ಶೀಘ್ರವಾಗಿ ಪ್ರತ್ಯಕ್ಷದಿಂದ ಗೋಚರನಾಗತಾನೆ ಎಂತ ತಾತ್ಪರ್ಯ.

**ಏನು ಕರುಣವೊ ತನ್ನವರಲಿ ದ ।**
**ಯಾನಿಧಿಗೆ ಸದ್ಭಕ್ತಜನರತಿ ।**
**ಹೀನಕರ್ಮವ ಮಾಡಿದರು ಸರಿ ಸ್ವೀಕರಿಸಿ ಪೊರೆವ ॥**
**ಪ್ರಾಣಹಿಂಸಕ ಲುಬ್ಧಕಗೆ ಸು ।**
**ಜ್ಞಾನ ಭಕ್ತಿಗಳಿತ್ತು ದಶರಥ ।**
**ಸೂನು ವಾಲ್ಮೀಕಿಋಷಿಯ ಮಾಡಿದ ಪರಮಕರುಣಾಳು ॥ ೩೧ ॥**

ಭಕ್ತರಲ್ಲಿ ಅತಿಶಯವಾದ ಕರುಣಾ ಉಳ್ಳವನು ಶ್ರೀಪರಮಾತ್ಮನೆಂದು ಹೇಳತಾರೆ.

ಸದ್ಭಕ್ತ ಜನರು–ಅಹಂಮಮತಾ ತ್ಯಾಗ ಮಾಹಾತ್ಮ್ಯಪೂರ್ವಕ ಸುದೃಢ ಸ್ನೇಹ ದಾವುದದೆ ಅದೇ ಸದ್ಭಕ್ತಿ. ಇಂಥಾ ಸದ್ಭಕ್ತಿಯುಳ್ಳ ಜನರು, ಅತಿ ಹೀನಕರ್ಮವ ಮಾಡಿ ದರು ಸರಿ–ಬಹು ದುಷ್ಟ ಕೃತ್ಯಮಾಡಿದರೂ ಸರಿ, ಅವರನ್ನ ದೂರಮಾಡದೆ, ಸ್ವೀಕರಿಸಿ ಪೊರೆವ–ಸ್ವೀಕಾರಮಾಡಿ ರಕ್ಷಿಸತಾನೆ, ಆದ್ದರಿಂದ, ದಯಾನಿಧಿಗೆ–ದಯಾಸಮುದ್ರನಾದ ಶ್ರೀಪರಮಾತ್ಮಗೆ, ತನ್ನವರಲಿ–ಪೂರ್ವೋಕ್ತ ಗುಣೋಪೇತರಾದ ಭಕ್ತರಲ್ಲಿ, ಏನು ಕರುಣವೊ–ಅತಿಶಯವಾದ ಕಾರುಣ್ಯವುಳ್ಳವನೆಂದು ತಾತ್ಪರ್ಯ. ದೃಷ್ಟಾಂತ, ಪ್ರಾಣ

ಹಿಂಸಕ–ಅರಣ್ಯದಲ್ಲಿ ಇದ್ದು ಮಾರ್ಗಸಂಚಾರಿಗಳಾದ ಜನಗಳಿಗೆ ಹಿಂಸೆಯನ್ನು ಮಾಡತಕ್ಕ, ಲುಬ್ಧಕಗೆ–ಬ್ಯಾಡರವನಿಗೆ (ಬೇಡರವನಿಗೆ), ಇವ ಮಹಾಪಾಪಕೃತ್ಯ ಮಾಡಿದ ಕಾಲಕ್ಕೂ ಈ ಮನುಷ್ಯಗೆ, * ಸುಜ್ಞಾನ ಪಾಲಿಸಿ–ನಾರದಋಷಿಗಳ ದ್ವಾರಾ ಸಮೀಚೀನ ಜ್ಞಾನ ಪಾಲಿಸಿ, ದಶರಥಸೂನು–ದಶರಥರಾಯನ ಪುತ್ರನಾದ ತನ್ನ, ಚರಿತ್ರ–ಶ್ರೀರಾಮಚಂದ್ರ ನಾದ ತಾನು ರಾಮಾವತಾರದಲ್ಲಿ ಮಾಡಿದ ಚರಿತ್ರೆಗಳ, ಮಹಿಮೆ–ತನ್ನ ಅಸದೃಶವಾದ ಮಹಾ ಮಹಾತ್ಮ್ಯಗಳ, ಪುರಾಣರೂಪದಿ–ರಾಮಾಯಣರೂಪದಿಂದ, ಪೇಳಿಸಿದ–ಅವನ ಅಂತರ್ಗತನಾಗಿ ಇದ್ದು ರಾಮಾಯಣ ಕಾವ್ಯವನ್ನು ಮಾಡಿಸೋವನಾದ. ಈ ಬ್ಯಾಡನ್ನ ವಾಲ್ಮೀಕಿಋಷಿಗಳು ಎಂತ ಎನಿಸೋವನಾದ. ಅತ ಏವ, ಭಕ್ತರ ದೋಷಗಳ ಎಣಿಸದೆ ಪಾಲಿಸತಾನೆ ಎಂತ ತಾತ್ಪರ್ಯ.

**ಮೂಢಮಾನವ ಎಲ್ಲಕಾಲದಿ ।**
**ಬೇಡಿಕೊಂಬನಿತೆಂದು ದೈನ್ಯದಿ ।**
**ಬೇಡದಂದದಿ ಮಾಡು ಪುರುಷಾರ್ಥಗಳ ಸ್ವಪ್ನದಲಿ ॥**
**ನೀಡುವಡೆ ನಿನ್ನಮಲಗುಣ ಕೊಂ ।**
**ಡಾಡಿ ಹಿಗ್ಗುವ ಭಾಗವತರೊಡ ।**
**ನಾಡಿಸೆನ್ನನು ಜನುಮಜನುಮಗಳಲ್ಲಿ ಮರೆಯದಲೆ ॥ ೩೨ ॥**

ದೇವರನ್ನ ಪ್ರಾರ್ಥನೆ ಮಾಡತಕ್ಕ ಕ್ರಮವನ್ನ ಹೇಳತಾರೆ.

ಮೂಢಮಾನವ–ಅಜ್ಞಾನದಿಂದ ಯುಕ್ತನಾದ ಮನುಷ್ಯ, ದೈನ್ಯದಿ–ಕೇವಲ ದೀನ ನಾಗಿ, ಎಲ್ಲ ಕಾಲದಿ–ಸದಾ ಸರ್ವಕಾಲದಲ್ಲಿ, ಇನಿತೆಂದು–ಈ ಪ್ರಕಾರ ಎಂದರೆ, ಐಹಿಕ ವಾದ ಅನಿತ್ಯವಾದ ಸುಖಗಳ ಕೊಡಬೇಕು ಎಂತ, ಬೇಡಿಕೊಂಬ–ಶ್ರೀ ದೇವರನ್ನ ಬೇಡಿ ಕೊಂಬೋವನಾಗತಾನೆ. ನೀಡುವಡೆ– ಭಗವದ್ಭಕ್ತನು ಪೂರ್ವೋಕ್ತ ಅಜ್ಞಾನಜನ ರೋಪಾದಿಯಲ್ಲಿ ಐಹಿಕ ಸುಖಗಳ ಕೊಡು ಎಂತ ದೇವರನ್ನ ಬೇಡೋನೇ ಎಂದರೆ, ಬೇಡ ಲಾರನು. ಆದರೆ ಅವನು ಬೇಡತಕ್ಕದ್ದು ದಾವುದೆಂದರೆ, ಸ್ವಪ್ನದಲಿ–ಸ್ವಪ್ನದಲ್ಲಾದರೂ, ಪುರುಷಾರ್ಥಗಳ–ಧರ್ಮಾದಿ ಚತುರ್ವಿಧ ಪುರುಷಾರ್ಥಗಳ, ಬೇಡದಂದದಿ ಮಾಡು– ಅಪೇಕ್ಷಿಸದಂತೆ ಮಾಡು ಎಂತಲೂ, ಜ್ಞಾನಭಕ್ತ್ಯಾದಿಗಳ ಅಭಿವೃದ್ಧಿ ಮಾಡು ಎಂತಲೂ, ಇನ್ನೂ, ನಿನ್ನಮಲಗುಣ–ಶ್ರೀ ಪರಮಾತ್ಮನಾದ ನಿನ್ನ ನಿರ್ದೋಷಗಳಾದ ಕಲ್ಯಾಣ ಗುಣಗಳನ್ನ, ಮಹಾಮಾಹಾತ್ಮ್ಯವನ್ನು, ಕೊಂಡಾಡಿ ಹಿಗ್ಗುವ–ಉಚ್ಚಾರಮಾಡತಾ ಸಂತೋಷಪಡತಕ್ಕ, ಭಾಗವತರೊಡನೆ–ಭಗವದ್ಭಕ್ತರೊಡನೆ, ಜನುಮಜನುಮಗಳಲ್ಲಿ–

---

* ಮೂಲ ಶ್ಲೋಕದ ಐದು ಮತ್ತು ಆರನೇ ಪಾದಗಳಲ್ಲಿ ಇರುವ ಪದಗಳಿಗೆ ವ್ಯತಿರಿಕ್ತ "ಸುಜ್ಞಾನ ಪಾಲಿಸಿ ದಶರಥಸೂನು ತನ್ನ ಚರಿತ್ರ ಮಹಿಮ ಪುರಾಣರೂಪದಿ ಪೇಳಿಸಿದ" ಎಂಬ ಪದಗಳಿಗೆ ವ್ಯಾಖ್ಯಾನವಾಗಿದೆ.

ಪ್ರತಿಪ್ರತೀ ಜನ್ಮಗಳಲ್ಲಿ, ಮರೆಯದಲೆ–ಮರೆಯದೇನೆ, ಎನ್ನನು–ನನ್ನ, ಆಡಿಸು–ಸಂಚಾರ ಮಾಡಿಸೋವನಾಗು ಎಂತಲೂ, ಮಿಥ್ಯಾಜ್ಞಾನಿಗಳ ಸಹವಾಸ ಮಾಡಿಸಬ್ಯಾಡ ಎಂತಲೂ ಪ್ರಾರ್ಥನಾ ಮಾಡತಾನೆಂತ ತಾತ್ಪರ್ಯ.

**ಚತುರವಿಧ ಪುರುಷಾರ್ಥರೂಪನು ।**
**ಚತುರಮೂರ್ತ್ಯಾತ್ಮಕನಿರಲು ಮು ।**
**ತ್ತಿತರ ಪುರುಷಾರ್ಥಗಳ ಬಯಸುವರೇನು ಬಲ್ಲವರು ॥**
**ಮತಿವಿಹೀನರು ಅಹಿಕಸುಖ ಶಾ ।**
**ಶ್ವತವಿದೆಂದರಿದನುದಿನದಿ ಗಣ ।**
**ಪತಿ ಮೊದಲಾದನ್ಯ ದೇವತೆಗಳನೆ ಭಜಿಸುವರು ॥ ೩೩ ॥**

ಜ್ಞಾನಿಗಳ ಮಾರ್ಗ, ಅಜ್ಞಾನಿಗಳ ಮಾರ್ಗ ಹೇಳತಾರೆ.

ಚತುರಮೂರ್ತ್ಯಾತ್ಮಕನು–ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ಈ ನಾಲ್ಕು ವ್ಯೂಹರೂಪಗಳಿಂದ ಪ್ರಕಾಶಮಾನನಾದ ಶ್ರೀಲಕ್ಷ್ಮೀಪತಿಯಾದ ಶ್ರೀ ನಾರಾಯಣದೇವರು, ಚತುರವಿಧ–ಸಾಯುಜ್ಯ, ಸಾಮೀಪ್ಯ, ಸಾರೂಪ್ಯ, ಸಾಲೋಕ್ಯ, ಈ ನಾಲ್ಕು ವಿಧಗಳಾದ, ಪುರುಷಾರ್ಥರೂಪನು–ಸುಖಗಳು ಎಂದರೆ, ಭಕ್ತರಾದ ಮನುಷ್ಯರಿಗೆ ಪ್ರಯೋಜನಕರಗಳಾದ ಸುಖಗಳು, ಕೊಡತಕ್ಕ ಭಗವದ್ರೂಪಗಳು ಇವು. ಈ ವ್ಯೂಹರೂಪನಾದ ಶ್ರೀಪರಮಾತ್ಮ, ಇರಲು–ಇರಲಿಕ್ಕಾಗಿ, ಮತ್ತು–ಬಾರಿಬಾರಿಗೂ, ಇತರ–ಅನ್ಯಗಳಾದ, ಐಹಿಕಗಳಾದ, ಅನಿತ್ಯಗಳಾದ, ಅರ್ಥಗಳ–ಪ್ರಯೋಜನಗಳ, ಬಲ್ಲವರು–ಅಂತರಂಗಜ್ಞಾನಿಗಳಾದ, ಭಕ್ತರಾದ, ಪುರುಷ–ಪುರುಷರುಗಳು, ಬಯಸುವ ರೇನು–ಪರಮಾತ್ಮನ್ನ ಕುರಿತು ಬೇಡುವರೆ ಎಂದರೆ, ಬೇಡಲಾರರು ಎಂತ ತಾತ್ಪರ್ಯ. ಮತಿವಿಹೀನರು–ಜ್ಞಾನಶೂನ್ಯರಾದ ಪುರುಷರು, ಅಹಿಕಸುಖ–ಅನಿತ್ಯವಾದ ಐಹಿಕಸುಖ, ಶಾಶ್ವತವೆಂದರಿದು–ಅಜ್ಞಾನದಿಂದ ಶಾಶ್ವತವೆಂತ ತಿಳಿಕೊಂಡವರಾಗಿ, ಅನುದಿನದಿ–ಪ್ರತಿ ದಿನದಲ್ಲೂ ಶ್ರೀ ಪರಮಾತ್ಮನ್ನ ಬಿಟ್ಟು, ಗಣಪತಿ ಮೊದಲಾದ–ಗಣೇಶ, ರುದ್ರ, ಸೂರ್ಯ, ಇನ್ನೂ ಅನೇಕರಾದ, ಅನ್ಯದೇವತೆಗಳನೆ–ಇನ್ನೂ ಕ್ಷುದ್ರದೇವತೆಗಳಾದ ಗಂಗಮ್ಮ, ಯಲ್ಲಮ್ಮ ಈ ದೇವತೆಗಳು ಸರ್ವಾರ್ಥಪ್ರದರು ಎಂತಲೂ, ಇನ್ನು ಈ ದೇವತೆಗಳೇ ಗತಿಪ್ರದರು ಎಂತಲೂ, ದಾರಢ್ಯದಿಂದ, ಭಜಿಸುವರು–ಸರ್ವೋತ್ತಮತ್ವೇನ ಭಜನಮಾಡ ತಾರೆ. ಅಂದರೆ, ಇವರಿಗೆ ಐಹಿಕದಲ್ಲಿ ಸ್ವಲ್ಪ ಸುಖ ತೋರಿಧಾಂಗೆ ಇರುತ್ತದೇ ಹೊರ್ತು, ಆಮರಣಾಂತವೂ ಇರೋದಿಲ್ಲ. ಶ್ರೀಪರಮಾತ್ಮನ್ನ ಭಜಿಸಿದವರು ಐಹಿಕ ಪಾರತ್ರಿಕದಲ್ಲೂ ಮಹಾಫಲ ಹೊಂದಿ ಸುಖಪಡತಾರೆಂದು ತಾತ್ಪರ್ಯ.

**ದ್ರುಹಿಣ ಮೊದಲಾದಮರಗಣ ಸ ।**
**ನ್ಮಹಿತ ಸರ್ವಪ್ರಾಣಿಗಳ ಹೃ ।**
**ದ್ಗುಹನಿವಾಸಿ ಗಭೀರ ಸರ್ವಾರ್ಥಪ್ರದಾಯಕನು ॥**

**ಅಹಿಕ ಪಾರತ್ರದಲಿ ವಿಹಿತಾ ।**
**ವಿಹಿತ ಕರ್ಮಗಳರಿತು ಫಲ ಸ ।**
**ನ್ನಿಹಿತನಾಗಿದ್ದೆಲ್ಲರಿಗೆ ಕೊಡುತಿಪ್ಪ ಸರ್ವಜ್ಞ ॥ ೩೪ ॥**

ಗಣಪತ್ಯಾದಿ ದೇವತೆಗಳ ಭಜಿಸಿದರೂನೂ, ಸರ್ವಾಂತರ್ಯಾಮಿಯಾಗಿ, ಶ್ರೀ ಪರಮಾತ್ಮ ಫಲಪ್ರದನೆಂದು ತಿಳಿಯಬೇಕೆಂದು ಹೇಳತಾರೆ.

ಗಭೀರ–ಗಂಭೀರನಾದ, ಸರ್ವತ್ರ ಪೂರ್ಣವ್ಯಾಪ್ತನಾದ ಶ್ರೀ ಪರಮಾತ್ಮ, ದ್ರುಹಿಣ ಮೊದಲಾದ–ಬ್ರಹ್ಮದೇವರೇ ಮೊದಲಾದ, ಅಮರಗಣ–ದೇವತಾಗಣದಿಂದ, ಸನ್ಮಹಿತ–ಛಂದಾಗಿ ಪೂಜ್ಯನಾದವ, ಸರ್ವಪ್ರಾಣಿಗಳ–ಬ್ರಹ್ಮಾದಿ ತೃಣಾಂತ ತ್ರಿವಿಧ ಜೀವರುಗಳ, ಹೃದ್ಗುಹನಿವಾಸಿ–ಹೃದಯಾಖ್ಯ ಗುಹಾದಲ್ಲಿ ಬಿಂಬನಾಗಿ ಆವಾಸನಾದವ, ಸರ್ವಾರ್ಥಪ್ರದಾಯಕನು – ದೇವತೆಗಳನ್ನು ಭಜಿಸಿದವರಿಗೆ ಆಯಾ ದೇವತಾಂತರ್ಗತ ನಾಗಿಯೂ, ತನ್ನ ಭಜಿಸಿದವರಿಗೆ ದೇವತಾದ್ವಾರದಿಂದಲೂ, ಈ ಪ್ರಕಾರ ಸರ್ವಜೀವರಿಗೆ, ಸಕಾಮ, ನಿಷ್ಕಾಮರೂಪವಾದ ಕರ್ಮಗಳಿಗೆ ಪ್ರಯೋಜನವಾದ ಫಲಪ್ರದಾಯಕನು, ಸನ್ನಿಹಿತನಾಗಿದ್ದು–ಅವರವರ ಸ್ಥೂಲದೇಹಗಳಲ್ಲಿದ್ದು, ವಿಹಿತ–ಅವರವರು ಬಿಂಬಕ್ರಿಯಾ ದ್ವಾರಾ ಮಾಡತಕ್ಕ ಪುಣ್ಯಕರ್ಮಗಳು, ಅವಿಹಿತ–ಪಾಪಕರ್ಮಗಳು, ಇವುಗಳನ್ನ ತಿಳಿದು, ಅಹಿಕ ಪಾರತ್ರದಲಿ–ಇಹಲೋಕ, ಪರಲೋಕ ಈ ಎರಡೂ ಸ್ಥಳಗಳಲ್ಲಿ, ಸರ್ವಜ್ಞ–ಸರ್ವಜ್ಞ ನಾದ ಶ್ರೀ ಪರಮಾತ್ಮ, ಎಲ್ಲರಿಗೆ–ಸರ್ವಜೀವರಿಗೆ, ಫಲ – ಸುಖದುಃಖ ಫಲಗಳ, ಕೊಡುತಿಪ್ಪ – ಕೊಡೋವನಾಗತಾನೆ. ಆದಕಡಿಯಿಂದ ಅನ್ಯದೇವತೆಗಳ ಭಜಿಸಿದ ಕಾಲಕ್ಕೂ ಶ್ರೀ ಪರಮಾತ್ಮ ಸರ್ವತ್ರ ವ್ಯಾಪ್ತನಾಗಿ, ಸರ್ವಾಧಿಷ್ಠಾನದಲ್ಲಿ ಇದ್ದು, ಫಲ ಕೊಡುತ್ತಾನೆಂತ ತಾತ್ಪರ್ಯ.

**ಒಮ್ಮೆಗಾದರು ಜೀವರೊಳು ವೈ ।**
**ಷಮ್ಯ ದ್ವೇಷಾಸೂಯೆ ಸ್ನೇಹ ಮ ।**
**ಹಾಮಹಿಮಗಿಲ್ಲ ನಿರುಪಾಧಿಕ ಪೂರ್ವಕಲೋಕಗಳ ॥**
**ಬ್ರಹ್ಮಕಲ್ಪಾಂತದಲಿ ವೇದಾ ।**
**ಗಮ್ಯ ಶ್ರೀಜಗನ್ನಾಥವಿಠಲ ।**
**ಸುಮ್ಮನೀವನು ತ್ರಿವಿಧರಿಗೆ ಅವರವರ ನಿಜಗತಿಯ ॥ ೩೫ ॥**

ಶ್ರೀಪರಮಾತ್ಮಗೆ ಜೀವರಲ್ಲಿ ವೈಷಮ್ಯಾದಿಗಳು ಇಲ್ಲ ಎಂತ ಹೇಳತಾರೆ.

ಮಹಾಮಹಿಮಗೆ – ಅಸದೃಶವಾದ ಮಹಾಮಹಿಮೆಯುಳ್ಳ ಶ್ರೀ ಪರಮಾತ್ಮಗೆ, ಜೀವರೊಳು–ತ್ರಿವಿಧರಾದ ಜೀವರೊಳು, ಒಮ್ಮೆಗಾದರು–ದಾವಕಾಲದಲ್ಲಾಗಲಿ, ದ್ವೇಷ–ತಮೋಯೋಗ್ಯರಲ್ಲಿ ದ್ವೇಷವೇನು, ಅಸೂಯೆ–ನಿತ್ಯಸಂಸಾರಿಗಳಲ್ಲಿ ಉದಾಸೀನವೇನು,

ಸ್ನೇಹ–ಮುಕ್ತಿಯೋಗ್ಯರಲ್ಲಿ ಅಂತಃಕರಣವೇನು, ಏತಾದೃಶವಾದ, ವೈಷಮ್ಯ–ಪಕ್ಷಪಾತವೆಂಬುದು, ಇಲ್ಲ–ಶ್ರೀಪರಮಾತ್ಮಗೆ ಇಲ್ಲ. ಆದ್ದರಿಂದ ನಿರ್ದೋಷನು. ವೇದಾಗಮ್ಯ–ವೇದದಿಂದ ಸಾಕಲ್ಯೇನ ಗೋಚರನಲ್ಲದ, ಶ್ರೀಜಗನ್ನಾಥವಿಠಲ–ಕಾಂತಿಸಂಪನ್ನನಾದ ಜಗತ್ತಿಗೇ ಸ್ವಾಮಿಯಾದ, ಪಾಪಪರಿಹಾರಕನಾದ ಶ್ರೀಪರಮಾತ್ಮನು, ಲೋಕಗಳ–ತ್ರಿವಿಧಜೀವರೊಳಗೆ ಸಾಧನ ಪರಿಪಕ್ವರಾದ ತ್ರಿವಿಧಜೀವರುಗಳನ್ನ, ಬ್ರಹ್ಮಕಲ್ಪಾಂತದಲಿ–ಬ್ರಹ್ಮಕಲ್ಪದ ಅಂತ್ಯಭಾಗದಲ್ಲಿ, ನಿರುಪಾಧಿಕಪೂರ್ವಕ–ಉಪಾಧಿ ಎಂದರೆ ಅನಾದಿ ಲಿಂಗ ದೇಹ, ಇದರನ್ನ ಬಿಡಿಸಿ ಉಪಾಧಿಯಿಲ್ಲದೆ, ತ್ರಿವಿಧರಿಗೆ–ತ್ರಿವಿಧ ಜೀವರಿಗೆ, ಅವರವರ ನಿಜಗತಿಯ–ಅವರವರ ಅನಾದಿಸ್ವರೂಪಕ್ಕೆ ಅನುಸರಿಸಿದ ನಿಜವಾದ ಮೂರಾದಂಥಾ ಗತಿಯನ್ನು ಆಯಾ ಸ್ವರೂಪಾನುಸಾರ, ಸುಮ್ಮನೀವನು–ವೈಷಮ್ಯಾದಿಗಳ ಮಾಡದೇನೇ ತಾನು ವೈಷಮ್ಯರಹಿತನಾಗಿ ಸುಮ್ಮನೆ ಕೊಡೋವನಾಗತಾನೆ ಹೊರ್ತು, ವೈಷಮ್ಯದಿಂದ ಗತಿ ವ್ಯತ್ಯಾಸಮಾಡೋದಿಲ್ಲವಾದ್ದರಿಂದ, ಶ್ರೀಪರಮಾತ್ಮಗೆ ಜೀವರಲ್ಲಿ ವೈಷಮ್ಯಾದಿಗಳು ಇಲ್ಲ ಎಂದು ತಾತ್ಪರ್ಯ.

ಶ್ರೀಪರಮಾತ್ಮನ ಮಾಹಾತ್ಮ್ಯಗಳ ತಿಳಿದು ಭಗವದುಪಾಸನ ಮಾಡುವವರು, ಸಕಲದುರಿತದಿಂದ ನಿವಾರಿತರಾಗಿ, ಇಹದಲ್ಲಿ ಮಹದೈಶ್ವರ್ಯಾದಿಗಳಿಂದ ಸುಖಪಟ್ಟು, ಪಾರತ್ರಿಕದಲ್ಲಿ ಮಹಾಮೋಕ್ಷಾದಿ ಪುರುಷಾರ್ಥಗಳ ಹೊಂದತಾರೆಂತ ನಿರೂಪಣವಿರುವ ಪ್ರಯುಕ್ತ, ಈ ಸಂಧಿಗೆ '**ಸಕಲದುರಿತನಿವಾರಣ ಸಂಧಿ**' ಎಂತ ನಾಮ.

ಹಂಸ ಮೊದಲು ಹದಿನೆಂಟು ರೂಪಗಳ ಋಗರ್ಥ ವಿವರ ಮಾಡತಾರೆ.

**೧. ಹಂಸಃ**–ಹಂತಿ ತಮ ಇತಿ ಹಂಸಃ। ಹನ ಹಿಂಸಾಗತ್ಯೋಃ। ಯೇ ಗತ್ಯರ್ಥಕಾಸ್ತೇ ಜ್ಞಾನಾರ್ಥಕಾಃ। ತಮಃಪರಿಹಾರಕಃ ಶ್ವಾಸನಿಯಾಮಕಃ। ಜ್ಞಾನಸ್ವರೂಪ ಇತಿ ಚ ಹಂಸಶಬ್ದೇನ ಶ್ವಾಸಜ್ಞಾನಾದಯೋ ಲಕ್ಷ್ಯಂತೇ, ಅರ್ಶಾದಿಭ್ಯೋ ಅಚ್ ಪ್ರತ್ಯಯಃ। ತನ್ನಿಯಾಮಕತ್ವಂ, ಅಥವಾ ಸಂಸಾರಬಂಧಂ ಹಂತೀತಿ ಹಂಸಃ। ಪೃಷೋದರಾದಿತ್ವಾತ್ಸಾಧುತ್ವಂ। ಸರ್ವಶರೀರೇಷು ಹಂತಿ ಗಚ್ಛತೀತಿ ಹಂಸಃ ॥

**ಹಂಸರೂಪ ಇರೋ ಸ್ಥಾನಗಳು.** (ಅ) ತಮಃ ಪರಿಹಾರಕನಾಗಿಯೂ, (ಆ) ಅಶೇಷದೋಷದೂರನಾಗಿಯೂ, (ಇ) ಶ್ವಾಸಾಂತರ್ಗತನಾಗಿಯೂ ಶ್ವಾಸನಿಯಾಮಕನಾಗಿಯೂ, (ಈ) ಜ್ಞಾನಾನಂದಮಯನಾಗಿಯೂ, (ಉ) ಸಂಸಾರ ಬಂಧ ಮೋಚಕನಾಗಿಯೂ, (ಊ) ಸರ್ವಶರೀರಾಂತರ್ವರ್ತಿಯಾಗಿಯೂ, ಇತ್ಯಾದಿ ಅಧಿಷ್ಠಾನಗಳಲ್ಲಿ '**ಹಂಸರೂಪಿ**' ಪರಮಾತ್ಮ ಇರತಾನೆ.

**೨. ಶುಚಿಸತ್** – ಶುಚಿತ್ವಾತ್ ಶುಚಿಃ ; ಶೋಚತಿ ಶುಧ್ಯತೀತಿ ಶುಚಿಃ ; ಶುಚೌ ತಿಷ್ಠತೀತಿ ಶುಚಿಃ ; ಕಲಿಂ ಶೋಚಯತೀತಿ ಶುಚಿಃ ; ನಿರಂಜನತಯಾ ಶುಚಿಃ ; ಶುಚಿರ್ನಾಮಾ ವಾಯುಃ, ತಸ್ಮಿನ್ ತಿಷ್ಠತೀತಿ ಶುಚಿಃ ; ಸತ್ ಶುದ್ಧಸತ್ವಾಶ್ರಯ ಇತಿ ಶುಚಿಸತ್.

(ಅ) ಶುಚಿಶುದ್ಧನಾಗಿಯೂ, (ಆ) ಶುಚಿಮಾಡತಕ್ಕವನಾಗಿಯೂ, (ಇ) ಶುಚ್ಯಾಶ್ರಯನಾಗಿಯೂ, (ಈ) ಕಲಿಯನ್ನು ಕಳವಳಪಡಿಸುವವನಾಗಿಯೂ, (ಉ) ನಿರ್ದೋಷನಾಗಿಯೂ, '**ಶುಚಿಸತ್ ರೂಪ**' ಶುಚಿನಾಮಕ ವಾಯುದೇವರಲ್ಲಿ ಇರೋದಾಗಿ ಅದೆ.

**೩. ವಸುಃ** – ವಸಂತಿ ಸರ್ವಭೂತಾನ್ಯತ್ರ, ತೇಷ್ವಯಮಪಿ ವಸತೀತಿ ವಸುಃ | ವಸೂನಾಮಸ್ಮಿ ಪಾವಕ ಇತ್ಯುಕ್ತ್ಯೋ ವಾ ವಸುಃ ; ವಸ ನಿವಾಸೇ –

**ವಸುರೂಪ ಪರಮಾತ್ಮ ಇರೋ ಸ್ಥಾನ.** (ಅ) ಸರ್ವಭೂತಗಳಿಗೂ ತಾನು ಆಶ್ರಯನಾಗಿಯೂ, (ಆ) ಸರ್ವರಲ್ಲಿಯೂ ತಾನು ವಾಸಮಾಡತಕ್ಕವನಾಗಿಯೂ, (ಇ) ವಸೂನಾಮಸ್ಮಿ ಪಾವಕಃ ಎಂತ ಶ್ರೀ ಗೀತಾ ನಿರೂಪಿತ ವಸುನಾಮಕನಾಗಿಯೂ, ಇತ್ಯಾದಿ ಕಾರಣದಿಂದ ಪರಮಾತ್ಮ ವಸು ಎಂತ ಕರಿಸಿದ. ಇನ್ನೂ ರತ್ನಗಳಲ್ಲಿ, ಧನಗಳಲ್ಲಿ, ಕಿರಣಗಳಲ್ಲಿ ಇದ್ದಾನೆ. ಈ ಮೂರು ಸ್ಥಳಗಳಲ್ಲಿ ಇರತಕ್ಕ ದೇವರಿಗೆ '**ವಸು**' ಎಂತ ನಾಮ.

**೪. ಅಂತರಿಕ್ಷಸತ್**– ಅಂತಃ ಈಕ್ಷತೇ ಜಗದಸ್ಮಿನ್ ನಿತ್ಯಂ ಅಂತರಿಕ್ಷಂ. ತಸ್ಮಿನ್ ತಿಷ್ಠತೀತಿ ಅಂತರಿಕ್ಷಸತ್.

**ಅಂತರಿಕ್ಷಸತ್ ಪರಮಾತ್ಮ ಇರೋ ಸ್ಥಾನ.** (ಅ) ತನ್ನೊಳು, ಸರ್ವಜಗತ್ತನ್ನು ಉಳಸಿಕೊಂಡಿರುವ ಕಾರಣದಿಂಪಲೂ. (ಆ) ಇನ್ನು ಬಾಹ್ಯಾಕಾಶದಲ್ಲೂ, ಹೃದಯಾಕಾಶದಲ್ಲೂ ಇರೋವನಾಗಿರುವುದರಿಂದಲೂ '**ಅಂತರಿಕ್ಷ**' ಎಂತ ಕರಿಸಿದ.

**೫. ಹೋತಾ** – ಜುಹೋತಿ–ಹೋತಾ, ಹು – ದಾನಾದಾನಯೋ.

(ಅ) ಶಬ್ದಾದಿ ವಿಷಯಗಳನ್ನ ಅನುಭವಿಪನಂತೆಯೂ, ಅನುಭವಕ್ಕೆ ಕೊಡುವನಾಗಿಯೂ, ಇರುವ ಕಾರಣದಿಂದಲೂ. ಇನ್ನು, (ಆ) ಆಹುತಿ ಕೊಡೋದರಲ್ಲಿಯೂ, ಆಹುತಿ ತೊಗೊಂಬೋದರಲ್ಲಿಯೂ ಇರೋಣದರಿಂದಲೂ '**ಹೋತಾ**' ಎಂತ ಕರಿಸಿದ.

**೬. ವೇದಿಷತ್** – ವೇದ್ಯಾಂ ತಿಷ್ಠತೀತಿ ವೇದಿಷತ್.

ಯಜ್ಞಕ್ಕೆ ಸಾನುಕೂಲವಾದ ಜಗಲಿಯಲ್ಲಿ ಇರೋಣದರಿಂದಲೂ, ವೇದಿ ಎಂದರೆ ವಿಧ್ಯುಕ್ತವಾದ ಪೂಜಾದಿಗಳಿಂದ ಉಪಚಾರಹೊಂದಿದ ಯಜ್ಞದ ಭೋರ್‌ಜಗಲಿ. ಇದರಲ್ಲಿ ಪರಮಾತ್ಮ ಇರೋವನಾಗಿರುವುದರಿಂದಲೂ '**ವೇದಿಷತ್**' ಎಂತ ಕರಿಸೋವನಾದ.

**೭. ಅತಿಥಿಃ** – ಅತ್ತಿ ಚರಾಚರಮಿತಿ ಅತಿಥಿಃ; ಅತತಿ ಸತತಂ ಗಚ್ಛತೀತಿ ಅತಿಥಿಃ ; ಅತಿಥಿರೂಪತಯಾ ಸತ್ಕಾರಮರ್ಹತೀತಿ ವಾ ಅತಿಥಿಃ ;

ಪ್ರಳಯಕಾಲದಲ್ಲಿ ಚರಾಚರಗಳನ್ನ ಭಕ್ಷಿಸುತ್ತಾನಾದ್ದರಿಂದಲೂ ಸರ್ವತ್ರ ಸರ್ವ ಕಾಲದಲ್ಲೂ ಇರತಕ್ಕವನಾದ್ದರಿಂದಲೂ, ಅತಿಥಿ ನಾಮಕ ಪರಮಾತ್ಮ ಅತಿಥಿಗಳಲ್ಲಿ ಇರೋ ವನಾಗಿರುವುದರಿಂದಲೂ, ಪರಮಾತ್ಮ '**ಅತಿಥಿ**' ಎಂತ ಕರಿಸಿದ.

**೮. ದ್ರೋಣಸತ್** – ದ್ರೋಣಕಲಶೇ ತಿಷ್ಠತೀತಿ ದ್ರೋಣಸತ್ ;

ದ್ರೋಣಕಲಶದಲ್ಲಿ ಇರೋಣದರಿಂದಲೂ ಅಮೃತವೆಂಬೋ ಸೋಮರಸಪಾತ್ರದಲ್ಲಿ ಆವಾಸನಾಗಿರುವುದರಿಂದಲೂ ಈ ಪರಮಾತ್ಮ '**ದ್ರೋಣ**' ಎಂತ ಕರಿಸೋವನಾದ.

**೯. ನೃಷತ್** – ನೃಷು ಮನುಷ್ಯೇಷು ಪರಮಕಾರುಣಿಕತಯಾ ರಾಮಾದ್ಯವ ತಾರಂ ಗೃಹೀತ್ವಾ ತೇಷು ತಿಷ್ಠತೀತಿ ನೃಷತ್ |

ಈ ಪರಮಾತ್ಮ ಮಾನುಷವತ್ ಅವತಾರಮಾಡಿ ಮನುಷ್ಯರಲ್ಲಿ ಮನುಷ್ಯನಂತೆ ಸಂಚಾರಮಾಡಿದ ಕಾರಣದಿಂದ, ಮನುಷ್ಯರಲ್ಲಿದ್ದು '**ನೃಷತ್**' ಎಂತ ಕರಿಸಿದ.

**೧೦. ವರಸತ್** – ವರೇಷು ಬ್ರಹ್ಮರುದ್ರಾದಿಷು ತಿಷ್ಠನ್ ತತ್ತತ್ಕಾರ್ಯನಿರ್ವಾಹಂ ಕೃತವಾನ್ ವರಸತ್ |

ರೂಪಾಂತರದಿಂದ ಬ್ರಹ್ಮರುದ್ರಾದಿಗಳಲ್ಲಿ ಪ್ರವೇಶನಾಗಿಯೂ, ಬ್ರಹ್ಮರುದ್ರಾದಿ ಗಳಲ್ಲಿ ಇದ್ದು ಸೃಷ್ಟಿಲಯಾದಿ ಕಾರ್ಯಗಳ ಮಾಡಿಸುತ್ತಲೂ ಈ ಪರಮಾತ್ಮ '**ವರಸತ್**' ನಾಮದಿಂದ ಇದ್ದಾನೆ.

**೧೧. ಋತಸತ್** – ಋತೇ ಸತ್ಯೇ ಯಥಾರ್ಥರೂಪವೇದೇ ತಿಷ್ಠತೀತಿ ಋತಸತ್.

ಇವ ಸತ್ಯವಾದ ವೇದದಲ್ಲಿದ್ದು ಸತ್ಯವಾಕ್ಯನಾದ್ದರಿಂದ '**ಋತಸತ್**' ಎಂತ ಕರಿಸಿದ.

**೧೨. ವ್ಯೋಮಸತ್** – ವಿಶ್ವಂ ವ್ಯಯತೀತಿ ಸಂವೃಣೋತೀತಿ ವಾ ವ್ಯೋಮ– ವ್ಯಯಿ ಸಂವರಣೇ, ಪ್ರಕೃತಿಃ ತಸ್ಯಾಂ ತಿಷ್ಠತೀತಿ ವ್ಯೋಮಸತ್ |

ಚರಾಚರಪ್ರಪಂಚವನ್ನ ಸುತ್ತಿಕೊಂಡಿರುವನಾದ್ದರಿಂದ 'ವ್ಯೋಮ' ಎಂತ ಕರಸಿದ. ವ್ಯೋಮಶಬ್ದವಾಚ್ಯರಾದ ಶ್ರೀದೇವೇರಲ್ಲಿ ಇರೋವನಾಗಿ ಪರಮಾತ್ಮ '**ವ್ಯೋಮಸತ್**' ಎಂತ ಕರಿಸಿದ.

**೧೩. ಅಬ್ಜ** – ಅಪ್ಸು ಜಾತಾ ಅಬ್ಜಾಃ | ತನ್ನಿಯಾಮಕಃ |

ಜಲದಲ್ಲಿ ಮತ್ಸ್ಯಾವತಾರ ಮಾಡಿದವನಾದ್ದರಿಂದಲೂ, ಜಲಚರಾದಿಗಳಲ್ಲಿ ಇರುವದ ರಿಂದಲೂ, ಪರಮಾತ್ಮ '**ಅಬ್ಜ**' ಎಂತ ಕರಸಿದ.

**೧೪. ಗೋಜ** – ಗೋಷು ಜಾತೋ ಗೋಜಾಃ, ತನ್ನೇತಾ ಗೋಜ ।

ವೇದದಿಂದ ವ್ಯಕ್ತನಾದ್ದರಿಂದಲೂ, ಭೂಮಿಯೇ ಯೋನಿಯಾದ ವೃಕ್ಷಾದಿಗಳಲ್ಲೂ, ಸ್ವರ್ಗದಲ್ಲಿ ಕಾಮಧೇನುವಿನಲ್ಲಿ ಇರೋಣದರಿಂದಲೂ ಈ ಪರಮಾತ್ಮ **'ಗೋಜ'** ಎಂತ ಕರೆಸಿದ.

**೧೫. ಋತಜ** – ಋತಾಜ್ಜಾತಾ–ಋತಜಾಃ.

ಸತ್ಯವಾದಿಗಳಾದ ತನ್ನ ಭಕ್ತರ ದೆಸೆಯಿಂದ ಸರ್ವೋತ್ತಮನೆಂದು ವ್ಯಕ್ತನಾದವ. ಇನ್ನೂ ಸತ್ಯ ಹೇಳತಕ್ಕ ವೇದದಲ್ಲಿ ಇರೋವನಾಗಿದ್ದಾನೆ. ಮುಕ್ತರಲ್ಲಿ ಇದ್ದಾನೆ. ಆದಕಡಿಯಿಂದ **' ಋತಜ '** ಎಂತ ಕರಿಸೋವನಾದ.

**೧೬. ಅದ್ರಿಜ** – ಪರ್ವತಸಂಸ್ಥಾನಾಧಿಷ್ಠಿತ–

ಪರ್ವತಾದ್ರಿಗಳಲ್ಲಿ ಇರೋಣದರಿಂದಲೂ, ಪರ್ವತಾದ್ರಿಗಳಲ್ಲಿ ಜನಿತ ಜಂತುಗಳಲ್ಲಿ ಇರೋವನಾಗಿರುವುದರಿಂದಲೂ, **' ಅದ್ರಿಜ '** ಎಂತ ಕರೆಸಿದ.

**೧೭. ಋತಂ** – ಸತ್ಯನು, ನಿತ್ಯನು, ಆದ್ದರಿಂದ ಇವ **' ಋತಂ '** ಎಂತ ಕರಿಸಿದವನಾಗಿ ಸತ್ಯದಲ್ಲಿ ಇದ್ದಾನೆ.

**೧೮. ಬೃಹತ್**– ಸರ್ವರಿಂದ ದೊಡ್ಡವನಾದ್ದರಿಂದ **'ಬೃಹತ್'** ಎಂತ ಕರಿಸಿದ.

ನವಾವರಣಸಹಿತ ಬ್ರಹ್ಮಾಂಡ, ಅದಕ್ಕೆ ಆಚೇಲಿ ಇರುವ ಸ್ಥಾನಪ್ರದೇಶದಲ್ಲಿ ಅಪರಿಚ್ಛಿನ್ನ ಅಖಂಡನಾಗಿಯೂ ಇರೋವನಾಗಿದ್ದಾನೆ. ಇದಕ್ಕೆ ಪ್ರಮಾಣ, ಶ್ರೀ ಕಾಠಕೋಪನಿಷದ್ಭಾಷ್ಯದಲ್ಲಿ ಇರುವುದು ವಿವರಿಸಲ್ಪಡತದೆ.

ನಿತ್ಯಂ ಹೀನೋಽಖಿಲೈರ್ದೋಷೈಃ ಸಾರರೂಪೋ ಯತೋ ಹರಿಃ ।
ಹಂಸ ಇತ್ಯುಚ್ಯತೇ ತಸ್ಮಾದ್ವಾಯುಸ್ಥಃ ಶುಚಿಷದ್ಸ್ಮೃತಃ ॥ ೧ ॥

ವರಸುಃ ವಸುರಿತ್ಯುಕ್ತೋ ಸ ಏವಾಪ್ಯಂತರಿಕ್ಷಗಃ ।
ಹೋತಾ ಸರ್ವೇಂದ್ರಿಯಾದಿಸ್ಥೋ ವೇದ್ಯಾಂ ಪೂಜ್ಯಶ್ಚ ವೇದಿಷತ್ ॥ ೨ ॥

ಅತ್ಯನ್ನಶ್ಚಾತಿಥಿಃ ಪ್ರೋಕ್ತೋ ಯಸ್ಮಾದನ್ನಂ ಥಮುಚ್ಯತೇ ।
ಸ ದ್ರೋಣಕಲಶೇ ಸೋಮೇ ಸ್ಥಿತ ಉಕ್ತೋ ದುರೋಣಸತ್ ॥ ೩ ॥

ನೃಷು ಸ್ಥಿತಶ್ಚ ದೇವೇಷು ವರೇಷ್ವಪಿ ಸ ಏವ ತು ।
ಋತರೂಪೇ ತಥಾ ವೇದೇ ವ್ಯೋಮಾಖ್ಯಪ್ರಕೃತಾವಪಿ ॥ ೪ ॥

ವ್ಯೋತಂ ಜಗದಿದಂ ಯಸ್ಯಾಂ ಸಾ ವ್ಯೋಮ ಶ್ರೀರುದಾಹೃತಾ ।
ಅಬ್ಜಗೋಜಾದ್ರಿಜೇಷ್ವೇವ ಆಸ್ತೇ ಅಬ್ಜಾದಿಕಸ್ತತಃ ॥ ೫ ॥

ತಥೈವರ್ತೇಷು ಮುಕ್ತೇಷು ಗತಾಸ್ತೇ ವಿಷ್ಣುಮಿತ್ಯೃತಾಃ |
ವೇದೈರ್ಮುಖ್ಯತಯಾ ಪ್ರೋಕ್ತಂ ಋತಮಿತ್ಯೇವ ಚೋಚ್ಯತೇ || ೬ ||

ಬೃಹತ್ಪೂರ್ಣಗುಣತ್ವಾಚ್ಚ ಸ ಏವ ಪುರುಷೋತ್ತಮಃ |
ನ ಕೇವಲಂ ಪ್ರಾಣ ಏವ ಚೇತನಾನಾಂ ವಿಧಾರಕಃ || ೭ ||

ಕಿಂ ತು ವಿಷ್ಣುಂ ಸಮಾಶ್ರಿತ್ಯ ಪ್ರಾಣೋ ಜೀವಾನ್ ಬಿಭರ್ತ್ಯಯಂ |
ಅತೋ ಮುಖ್ಯಾಶ್ರಯೋ ವಿಷ್ಣುಶ್ಚೇತನಾನಾಂ ಸ್ವತಂತ್ರತಃ || ೮ ||

ಕಾಠಕೋಪನಿಷದ್ಭಾಷ್ಯ—ಅ-೨, ಬ್ರಾ-೨

**ಶ್ರೀಮತ್ಸತ್ಯಪರಾಯಣತೀರ್ಥಕರಕಮಲಸಂಜಾತಶ್ರೀಮತ್ಸಂಕರ್ಷಣ-ತೀರ್ಥವಿರಚಿತಾಯಾಂ ಶ್ರೀಮದ್ಧರಿಕಥಾಮೃತಸಾರಕನ್ನಡಭಾಷಾ-ಟೀಕಾಯಾಂ ಸಕಲದುರಿತನಿವಾರಣಸಂಧಿವ್ಯಾಖ್ಯಾನಂ ಸಂಪೂರ್ಣಂ**

|| ಶ್ರೀ ಕೃಷ್ಣಾರ್ಪಣಮಸ್ತು ||

|| ಓಂ ಶ್ರೀ ಗುರುಭ್ಯೋ ನಮಃ ಹರಿಃ ಓಂ ||

# ಇಪ್ಪತ್ತಮೂರನೇ ಸಂಧಿ

## ಅಪರೋಕ್ಷ ತಾರತಮ್ಯ ಸಂಧಿ

## (ಕಲ್ಪಸಾಧನ ಸಂಧಿ)

**ಹರಿಕಥಾಮೃತಸಾರ ಗುರುಗಳ |**
**ಕರುಣದಿಂದಾಪನಿತು ಪೇಳುವೆ |**
**ಪರಮ ಭಗವದ್ಭಕ್ತರಿದನಾದರದಿ ಕೇಳುವುದು || ಪ ||**

**ಮೂಲ :**

**ಏಕವಿಂಶತಿ ಮತಪ್ರವರ್ತಕ |**
**ಕಾಕುಮಾಯ್ಗಳ ಕುಹಕಯುಕ್ತಿ ನಿ |**
**ರಾಕರಿಸಿ ಸರ್ವೋತ್ತಮನು ಹರಿಯೆಂದು ಸ್ಥಾಪಿಸಿದ ||**
**ಶ್ರೀಕಳತ್ರನ ಸದನ ದ್ವಿಜಪ ಪಿ |**
**ನಾಕಿ ಸನ್ನುತಮಹಿಮ ಪರಮ ಕೃ |**
**ಪಾಕಟಾಕ್ಷದಿ ನೋಡು ಮಧ್ವಾಚಾರ್ಯ ಗುರುವರ್ಯ || ೧ ||**

ಜೀವೋತ್ತಮರಾದ ಮಧ್ವಾಚಾರ್ಯರನ್ನು ಸ್ತೋತ್ರಮಾಡತಾರೆ.

**ಟೀಕೆ :**

ಏಕವಿಂಶತಿಮತ–ಇಪ್ಪತ್ತೊಂದು ಕುತ್ಸಿತವಾದ ಮತ ಎಂದರೆ, ಶಾಸ್ತ್ರಪ್ರಮಾಣ :– ಭಾರತೀ ವಿಜಯಶ್ಚೈವ ಸಚ್ಚಿದಾನಂದ ಏವ ಚ | ಬ್ರಹ್ಮಘೋಷಃ ಶತಾನಂದೋ| "ಉದ್ವರ್ತಶ್ಚೈವ ಪಂಚಮಃ | ವಿಜಯೋ ರುದ್ರಭಟ್ಟಶ್ಚ ವಾಮನಾಖ್ಯಸ್ತಥಾಷ್ಟಮಃ ಸ ಯಾದವಪ್ರಕಾಶಶ್ಚ ನವಮಃ ಸಂಪ್ರಕೀರ್ತಿತಃ | ರಾಮಾನುಜಃ ತಥಾ ಭರ್ತೃಪ್ರಪಂಚಃ ದ್ರವಿಡಸ್ತಥಾ | ಬ್ರಹ್ಮದತ್ತೋ ಭಾಸ್ಕರಶ್ಚ ಪಿಶಾಚೋ ವೃತ್ತಿಕಾರಕಃ | ತಥಾ ವಿಜಯ ಭಟ್ಟಶ್ಚ ವಿಷ್ಣುಕ್ರಾಂತಸ್ತಥೈವ ಚ | ವಾದೀಂದ್ರಶ್ಚ ತತಃ ಪಶ್ಚಾತ್ ತಥಾ ಮಾಧವ ದಾಸಕಃ | ತತಃ ಪಶ್ಚಾತ್ಸಂಕರಶ್ಚ ಏಕವಿಂಶತಿವಾದಿಭಿಃ ||

| | | |
|---|---|---|
| ೧. ಭಾರತೀ | ೮. ವಾಮನಃ | ೧೫. ಪಿಶಾಚಃ |
| ೨. ವಿಜಯಃ | ೯. ಯಾದವಪ್ರಕಾಶಃ | ೧೬. ವೃತ್ತಿಕಾರಕಃ |
| ೩. ಸಚ್ಚಿದಾನಂದಃ | ೧೦. ರಾಮಾನುಜಃ | ೧೭. ವಿಜಯಭಟ್ಟಃ |
| ೪. ಬ್ರಹ್ಮಘೋಷಃ | ೧೧. ಭರ್ತೃಪ್ರಪಂಚಃ | ೧೮. ವಿಷ್ಣುಕ್ರಾಂತಃ |
| ೫. ಶತಾನಂದಃ | ೧೨. ದ್ರವಿಡಃ | ೧೯. ವಾದೀಂದ್ರಃ |
| ೬. ವಿಜಯಃ | ೧೩. ಬ್ರಹ್ಮದತ್ತಃ | ೨೦. ಮಾಧವದಾಸಃ |
| ೭. ರುದ್ರಭಟ್ಟಃ | ೧೪. ಭಾಸ್ಕರಃ | ೨೧. ಸಂಕರಃ |

ಈ ೨೧ ಕುಭಾಷ್ಯಗಳು (ಮತಗಳು), ಪ್ರವರ್ತಕ–ಮೇಲೆ ಹೇಳಿದ ಇಪ್ಪತ್ತೊಂದು ಕುಮತ ಪ್ರವರ್ತಕರಾದ, ಕಾಕುಮಾಯ್ಗಳ–ಕುತ್ಸಿತವಾದ ಮಾಯಿಗಳ, ಕುಹಕ–ಯುಕ್ತಿ–ಕುತ್ಸಿತವಾದ ಯುಕ್ತಿಗಳು ಎಂದರೆ, ಹರಿಸರ್ವೋತ್ತಮ, ವಾಯುಜೀವೋತ್ತಮ, ತಾರತಮ್ಯ, ಪಂಚಭೇದ ಸತ್ಯವಾದ ನೈಜಾರ್ಥದಿಂದ ಸಹಿತವಾದ ವೇದಾರ್ಥಗಳಿಗೆ ವಿರುದ್ಧವಾದ ಅರ್ಥದಿಂದ ಸಹಿತವಾದ, ಭಿನ್ನ, ಭಿನ್ನಗಳಾದ ವೇದವಿರುದ್ಧವಾದ ಯುಕ್ತಿಗಳಿಂದ ಸಹಿತವಾದ, ಗ್ರಂಥಗತ ಕ್ಷುದ್ರಯುಕ್ತಿಗಳ ವೇದಶ್ರುತಿಗಳಿಂದ, ನಿರಾಕರಿಸಿ–ಆಯಾ ಮತ ಪ್ರವರ್ತಕರ ಪರಾಜಯ ಮಾಡಿ, ಸರ್ವೋತ್ತಮನು–ರಮಾಬ್ರಹ್ಮಾದಿಗಳಿಗಿಂತಲೂ ಶ್ರೇಷ್ಠನು, ಹರಿಯೆಂದು–ದುರಿತಪರಿಹಾರಕನಾದ ಶ್ರೀ ನಾರಾಯಣದೇವರು ಎಂದು, ಸ್ಥಾಪಿಸಿದ–ವೇದಾರ್ಥಗಳಿಂದ ಸ್ಥಾಪನಮಾಡಿದ, ಶ್ರೀಕಳತ್ರಸದನ–ಶ್ರೀದೇವೇರೇ ಪತ್ನಿಯಾಗುಳ್ಳ, ಪರಮಾತ್ಮಗೆ ಸದನ ಸಾಂಕೇತರಾದ ಮುಖ್ಯ ಅಧಿಷ್ಠಾನರಾದವರೇ, ಹಾಂಗೂ, ದ್ವಿಜಪ–ಗರುಡದೇವರು, ಪಿನಾಕಿ–ರುದ್ರದೇವರು, ಸನ್ನುತ–ಇವರುಗಳಿಂದ ಛಂದಾಗಿ ಸ್ತೋತ್ರಮಾಡಿಸಿಕೊಳ್ಳಲ್ಪಟ್ಟಂಥಾವರೇ, ಮಹಿಮ – ಅಜ್ಞಾನಾದಿ ದೋಷ ರಹಿತರಾದ, ಅಸುರಾವೇಶದಿಂದ ರಹಿತರಾದ ಏತಾದೃಶ ಮಹಿಮೋಪೇತರಾದಂಥಾವರೇ, ಗುರುವರ್ಯ–ತಾರತಮ್ಯಾನುಸಾರ ಗುರುಗಳೊಳಗೆ ಶ್ರೇಷ್ಠರಾದ ಜೀವೋತ್ತಮರಾದ ವಾಯು ಅಂಶಸಂಭೂತರಾದ, ಮಧ್ವಾಚಾರ್ಯ–ಮಧ್ವಾಚಾರ್ಯರೇ, ಪರಮ ಕೃಪಾಕಟಾಕ್ಷದಿ ನೋಡು–ಶ್ರೇಷ್ಠವಾದ ಅಂತಃಕರಣದಿಂದ ನೋಡಿ, ಕಾಪಾಡಿ ಎಂತ ತಾತ್ಪರ್ಯ.

**ವೇಧ ಮೊದಲಾಗಿಪ್ಪಮಲ ಮೋ ।**
**ಕ್ಷಾಧಿಕಾರಿಗಳಾದ ಜೀವರ ।**
**ಸಾಧನಗಳಪರೋಕ್ಷನಂತರ ಲಿಂಗಭಂಗವನು ॥**
**ಸಾಧುಗಳು ಚಿತ್ತಯಿಪುದೆನ್ನಪ ।**
**ರಾಧಗಳ ನೋಡದಲೆ ಚಕ್ರಾಂ ಗ ।**
**ದಾಧರನು ಪೇಳಿಸಿದ ತೆರದಂದದಲಿ ಪೇಳುವೆನು ॥ ೨ ॥**

ಬ್ರಹ್ಮಾದಿ ಜೀವರ ಸಾಧನ, ಅಪರೋಕ್ಷ ವಿಚಾರ ಹೇಳತೇವೆಂದು ಹೇಳತಾರೆ.

ಅಮಲ – ಸ್ವರೂಪಸ್ವಭಾವದಲ್ಲಿ ಭಗವದ್ದ್ವೇಷರಹಿತರಾದ, ನಿರ್ದೋಷರಾದ, ಪರಮಾತ್ಮನಲ್ಲಿ ಭಕ್ತಿಮಾಡತಕ್ಕ ಸ್ವಭಾವಸ್ವರೂಪದಲ್ಲಿ ತಾರತಮ್ಯಾನುಸಾರ ಯುಕ್ತರಾದ, ಪರಿಶುದ್ಧ ಜ್ಞಾನವುಳ್ಳ, ವೇಧ ಮೊದಲಾಗಿಪ್ಪ–ಬ್ರಹ್ಮಾದಿ ದೇವತೆಗಳೇ ಮೊದಲಾಗಿ ಇರತಕ್ಕ, ಮೋಕ್ಷಾಧಿಕಾರಿಗಳಾದ–ಅಜ್ಞಾನಪರಿಹಾರವಾಗಿ, ಭಗವಂತನ್ನ ಹೃದಯಾಕಾಶದಲ್ಲಿ ಪ್ರತ್ಯಕ್ಷೀಕರಿಸಿಕೊಂಬೋದಕ್ಕೆ ಅಧಿಕಾರಿಗಳಾದ, ಜೀವರ–ತೃಣಾಂತ ಜೀವರ, ಸಾಧನಗಳ–ಸಾಧನ ತಾರತಮ್ಯಗಳ, ಅಪರೋಕ್ಷಾನಂತರ–ಸಾಧನಮಾಡಿ ಸ್ಥೂಲದೇಹದಲ್ಲಿ ಭಗವದಪರೋಕ್ಷಾನಂತರ, ಲಿಂಗಭಂಗವನು–ಲಿಂಗಭಂಗವಾಗಿ, ಜೀವಾಂತರ್ಗತದಲ್ಲಿ

ಆಗತಕ್ಕ ಅಪರೋಕ್ಷಕ್ಕೆ ಸಾಧನಗಳನ್ನೂ, ಇವು ಯಾವತ್ತೂ, ಚಕ್ರಗದಾಧರನು–ಚಕ್ರ, ಗದಾ ಇವುಗಳನ್ನ ಧರಿಸಿದ ಪರಮಾತ್ಮ, ಪೇಳಿಸಿದ ತೆರದಂದದಲಿ–ಪೇಳಿಸಿದ ಕ್ರಮ ದೋಷಾದಿಯಲ್ಲಿ, ಪೇಳುವೆನು–ಹೇಳುತ್ತೇನೆ. ಸಾಧುಗಳು–ಜ್ಞಾನಿಗಳಾದವರು, ಎನ್ನ ಪರಾಧಗಳ ನೋಡದಲೆ–ಶಾಸ್ತ್ರವು ಅನೇಕ ವೈಚಿತ್ರಗಳಿಂದ ಯುಕ್ತವಾಗಿ ಅದೆ. ಆ ವೈಚಿತ್ರಗಳನುಸರಿಸಿ ಹೇಳಿದ್ದರೊಳಗೆ ಸಾವಕಾಶ, ನಿರವಕಾಶ ಪ್ರಮಾಣಗಳಿಂದ ಸಮನ್ವಯ ಮಾಡಿಕೋತಾ, ವ್ಯತ್ಯಸ್ತಗಳೆಂಬೋದರನ್ನ ನೋಡದೇನೆ, ಚಿತ್ತಯಿಪುದು–ಈ ಗ್ರಂಥವನ್ನ ಚಿತ್ತಕ್ಕೆ ತಂದುಕೊಳ್ಳೋವರಾಗಬೇಕು. (ಮತ್ತು ಶಾಸ್ತ್ರಕ್ಕೆ ಅವಿರೋಧವಾಗಿ ಹೇಳಿದ್ದರೂ ಸ್ವಾಹಂಕಾರಖಂಡನಾರ್ಥ ಜ್ಞಾನಿಗಳ ಪ್ರಾರ್ಥನ ಮಾಡತಕ್ಕ ಮರ್ಯಾದಾ ಎಂತ ತಿಳಿಯಬೇಕು.)

**ತೃಣ ಕ್ರಿಮಿ ದ್ವಿಜ ಪಶು ನರೋತ್ತಮ ।**
**ಜನಪ ನರಗಂಧರ್ವಗಣರಿವ ।**
**ರೆನಿಪರಂಶವಿಹೀನ ಕರ್ಮಸುಯೋಗಿಗಳು ಎಂದು ॥**
**ತನು ಪ್ರತೀಕದಿ ಬಿಂಬನ ಉಪಾ ।**
**ಸನವ ಗೈಯುತ ಇಂದ್ರಿಯಜ ಕ ।**
**ರ್ಮನವರತ ಹರಿಗರ್ಪಿಸುತ ನಿರ್ಮಮರು ಎನಿಸುವರು ॥ ೩ ॥**

ನಿರಂಶರು ದಾರು ಎಂದರೆ, ಅದರನ್ನ ಹೇಳತಾರೆ.

ತೃಣ–ತೃಣಜೀವನೇ ಅಂತ್ಯಜೀವ (ಇವನ ತರುವಾಯ ಅವರರಾದ ಜೀವರು ಮುಕ್ತಿಯೋಗ್ಯರಲ್ಲಿ ಇಲ್ಲ), ಕ್ರಿಮಿ–ತೃಣಜೀವನಿಗಿಂತಲೂ ಉತ್ತಮರು ಕ್ರಿಮಿಜೀವರು, ದ್ವಿಜ–ಕ್ರಿಮಿಜೀವರಿಗಿಂತಲೂ ಪಕ್ಷಿಜೀವರು ಉತ್ತಮರು. ಪಶು–ಪಕ್ಷಿಜೀವರಿಗಿಂತಲೂ ಪಶುಜೀವರು ಉತ್ತಮರು, ನರೋತ್ತಮ – ಪಶುಜೀವರಿಗಿಂತಲೂ ಮನುಷ್ಯೋತ್ತಮಜೀವರು ಉತ್ತಮರು. ಜನಪ–ಜನರನ್ನ ಪಾಲಿಸತಕ್ಕ ಅರಸರು (ಮಾನುಷ ಚಕ್ರವರ್ತಿಗಳು), ಮನುಷ್ಯೋತ್ತಮ ಜೀವರಿಗಿಂತಲೂ ಉತ್ತಮರು. ನರಗಂಧರ್ವ – ಅರಸರಿಗಿಂತಲೂ ಮಾನುಷಗಂಧರ್ವರು ಉತ್ತಮರು. ನಿರಂಶರೊಳಗೆ ಮಾನುಷಗಂಧರ್ವರಿಗಿಂತಲೂ ಉತ್ತಮರು ಇಲ್ಲ. ತೃಣಜೀವರಿಗಿಂತಲೂ ಅಧಮ ಜೀವರು ಇಲ್ಲ. ಈ ಯಾವತ್ತೂ ಜೀವರು ನಿರಂಶರು. ಗಣರಿವರೆನಿಪರು–ಪೂರ್ವೋಕ್ತ ಏಳು ವಿಧ ಗಣರಾದ, ಇವರೆನಿಪ ಜೀವರೇವೇ, ಅಂಶವಿಹೀನ–ಅಂಶರಹಿತರಾದವರು (ನಿರಂಶರು). ಕರ್ಮಸುಯೋಗಿಗಳು ಎಂದು – ಸಮೀಚೀನವಾದ ಕರ್ಮಯೋಗಿಗಳು ಅಂದರೆ, ಕರ್ಮಪ್ರಾಚುರ್ಯದಿಂದ ಸಾಧನಿಮಾಡತಕ್ಕವರು ದಾವಾಗ್ಯೂ, ತನುಪ್ರತೀಕದಿ – ದೇಹಾಖ್ಯ ಪ್ರತೀಕದಲ್ಲಿ, ಬಿಂಬನ–ಬಿಂಬರೂಪಿಯಾದ ಪರಮಾತ್ಮನ್ನ, ಉಪಾಸನವ ಗೈಯುತ–ಧ್ಯಾನೋಪಾಸನಾದಿಗಳ ಮಾಡುತ್ತಾ, ಇಂದ್ರಿಯಜಕರ್ಮ–ಏಕಾದಶೇಂದ್ರಿಯಗಳಿಂದ ಜನಿತಗಳಾದ ಕರ್ಮಗಳ, ಅನವರತ–ನಿರಂತರ, ಹರಿಗರ್ಪಿಸುತ–ತಮ್ಮ ತಮ್ಮ ಹೃದಯಾಕಾಶಗತ ಬಿಂಬರೂಪೀ

ಪರಮಾತ್ಮಗೆ ಅರ್ಪಿಸುತ್ತ, ನಿರ್ಮಮರು–ಅಹಂಮಮತಾದಿಗಳಿಂದ ರಹಿತರಾಗಿ ಸಾಧನ ಮಾಡತಕ್ಕವರೆಂತ, ಎನಿಸುವರು–ಎನಿಸೋವರಾಗತಾರೆ (ಇವರಿಗೆ ತಮ್ಮ ತಮ್ಮ ದೇಹಗತ ಬಿಂಬದರ್ಶನವೇ ಹೊರ್ತು, ಅನ್ಯದೇಹಗತ ಬಿಂಬದರ್ಶನ ಇಲ್ಲ).

ಮೇಲಿನ ಶ್ಲೋಕದ ಮೊದಲು, ಏಳನೇ ಶ್ಲೋಕದವರಿಗೆ ಪ್ರಮಾಣ :–

" ನಿರಂಶಾಃ ಸತ್ಸಾಧನಾಯೋಚಿತಜನ್ಮಸಹಸ್ರಶಃ | ಜ್ಞಾನಂ ತು ದಶಭಿಃ ಪ್ರಾಪ್ಯ ಸದ್ಭಕ್ತಿಂ ತ್ರಿಭಿರಾಪ್ಯ ಚ | ದೃಷ್ಟ್ವಾ ಹೃದಿಸ್ಥಂ ಮುಚ್ಯಂತೇ ಹ್ಯತಸ್ತೇ ಕರ್ಮಯೋಗಿನಃ ||
|| ಇತಿ ಪ್ರಕಾಶಸಂಹಿತಾಯಾಂ ||

ತೃಣಾದಿನಿತ್ಯಗಂಧರ್ವಪರ್ಯಂತಾಸ್ತೇ ಹ್ಯನೇಕಶಃ |
ನಿರಂಶಾಸ್ತೇ ಪ್ರತೀಕಾವಲಂಬಾಸ್ತೇ ಕರ್ಮಯೋಗಿನಃ |
ಪ್ರತೀಕಸ್ಥಂ ಶರೀರಸ್ಥಂ ಪಶ್ಯಂತೀತಿ ತದಾಹ್ವಯಾಃ ||

**ಏಳು ವಿಧ ಜೀವಗಣ ಬಹಳ ಸು |**
**ರಾಳಿ ಸಂಖ್ಯಾನೇಮವುಳ್ಳದು |**
**ತಾಳಿ ನರದೇಹವನು ಬ್ರಾಹ್ಮಣಕುಲದಲವತರಿಸಿ ||**
**ಸ್ಥೂಲಕರ್ಮವ ತೊರೆದು ಗುರುಗಳು |**
**ಪೇಳಿದರ್ಥವ ತಿಳಿದು ತತ್ತ |**
**ತ್ಕಾಲಧರ್ಮ ಸಮರ್ಪಿಸುತಿಹರು ಕರ್ಮಯೋಗಿಗಳು || ೪ ||**

ನಿರಂಶರಾದ, ಪೂರ್ವೋಕ್ತ ಏಳುವಿಧರಾದ ಕರ್ಮಯೋಗಿಗಳವಿಚಾರ ಹೇಳತಾರೆ.

ಏಳುವಿಧ ಜೀವಗಣ – ಪೂರ್ವೋಕ್ತ ತೃಣಜೀವರು ಆರಂಭಮಾಡಿ ಮಾನುಷ ಗಂಧರ್ವರ ಪರಿಯಂತ ಏಳುವಿಧ ಜೀವಗಣ, ಬಹಳ–ಸಂಖ್ಯಾನೇಮದಿಂದ ರಹಿತವಾದ ಬಹಳಸಮೂಹದಿಂದ ಯುಕ್ತವಾದದ್ದು. ತದ್ವ್ಯತಿರಿಕ್ತರಾದ, ಸುರಾಳಿ–ದೇವಗಂಧರ್ವರು ಆರಂಭಮಾಡಿ ಬ್ರಹ್ಮಾಂತವರಿಗೂ ದೇವತೆಗಳ ಪಙ್ಕ್ತಿ, ಸಂಖ್ಯಾನೇಮವುಳ್ಳದು–ಸಂಖ್ಯಾ ನೇಮದಿಂದ ಯುಕ್ತವಾದದ್ದು. ಅಂತು ಸಾಂಶರು, ನಿರಂಶರು ಎರಡುವಿಧ ಜೀವರೆಂದು ಹೇಳಿದಂತಾಯಿತು. ಎರಡುವಿಧದೊಳಗೆ ಏಳುವಿಧರಾದ ನಿರಂಶರ ವಿಚಾರ ಹೇಳತಾರೆ. ನರದೇಹವನು–ಈ ಏಳುವಿಧರಾದ ನಿರಂಶ ಜೀವರು ಮನುಷ್ಯ ಶರೀರವನ್ನು, ತಾಳಿ–ಧರಿಸಿ, ಪ್ರಥಮತಃ ಬ್ರಾಹ್ಮಣಜಾತಿ ವ್ಯತಿರಿಕ್ತ, ಅನ್ಯ ಜಾತೀಯವಾದ ಮಾನುಷದೇಹ ಧರಿಸಿ ಅನಂತರ, ಬ್ರಾಹ್ಮಣಕುಲದಲವತರಿಸಿ–ಬ್ರಾಹ್ಮಣಕುಲದಲ್ಲಿ ಅವತರಿಸಿದವರಾಗಿ, ಗುರುಗಳು ಪೇಳಿದರ್ಥವ ತಿಳಿದು–ಆ ಜನ್ಮದಲ್ಲಿ ಗುರುಗಳು ಪೇಳಿದ ಶಾಸ್ತ್ರಾರ್ಥವನ್ನು ತಿಳಿದು, ಸ್ಥೂಲಕರ್ಮವ ತೊರೆದು–ಬಾಹ್ಯಕರ್ಮಗಳಾದ ಸ್ಥೂಲಕರ್ಮಗಳ ತೊರೆದು, ಹೃದಯಾಕಾಶದಲ್ಲಿ ಧ್ಯಾನೋಪಾಸನಾದಿ ಅಂತರಂಗಕರ್ಮವನ್ನು ಆಚರಿಸೋವರಾಗಿ, ತತ್ತತ್ಕಾಲ

ಧರ್ಮ–ಆಯಾಕಾಲದಲ್ಲಿ ಮಾಡಲ್ಪಟ್ಟ ಯಥೋಚಿತವಾದ ಬಾಹ್ಯಗಳಾದ ಧರ್ಮ, ಕರ್ಮಗಳನ್ನು, ಕರ್ಮಯೋಗಿಗಳು–ಕರ್ಮಯೋಗಿಗಳಾದ ನಿರಂಶರು, ಸಮರ್ಪಿಸುತಿಹರು–ಹೃದಯದಲ್ಲಿ ಧ್ಯಾನೋಪಾಸನಮಾಡಿ, ತಮ್ಮ ಬಿಂಬರೂಪೀ ಪರಮಾತ್ಮಗೆ ಅರ್ಪಿಸೋವ ರಾಗತಾರೆ. ಈ ಜೀವರಿಗೆ ಜನ್ಮಗಳು ಒಂದೇ ಪ್ರಕಾರ, ಅದರಲ್ಲಿ ವ್ಯತ್ಯಾಸಗಳು ಇಲ್ಲ.

**ಹೀನಕರ್ಮಗಳಿಂದ ಬಹುವಿಧ ।**
**ಯೋನಿಯಲಿ ಸಂಚರಿಸಿ ಪ್ರಾಂತಕೆ ।**
**ಮಾನುಷತ್ವವನೈದಿ ಸರ್ವೋತ್ತಮನು ಹರಿಯೆಂಬ ॥**
**ಜ್ಞಾನಭಕ್ತಿಗಳಿಂದ ವೇದೋ ।**
**ಕ್ತಾನುಸಾರ ಸಹಸ್ರ ಜನುಮಾ ।**
**ನ್ಯೂನ ಕರ್ಮವ ಮಾಡಿ ಹರಿಗರ್ಪಿಸಿದ ನಂತರದಿ ॥ ೫ ॥**

ನಿರಂಶರ ವಿಚಾರವೇ ಹೇಳತಾರೆ.

ಹೀನಕರ್ಮಗಳಿಂದ – ಹೀನಕರ್ಮಗಳಾದ ಪಾಪಕರ್ಮಗಳಿಂದ, ಬಹುವಿಧ – ಮಾನುಷಯೋನಿ ವ್ಯತಿರಿಕ್ತ ಅನ್ಯವಾದ, ನಾನಾವಿಧವಾದ, ಯೋನಿಯಲಿ ಸಂಚರಿಸಿ– ಯೋನಿಸಮೂಹದಲ್ಲಿ ಸಂಚಾರಮಾಡಿ ಅಂದರೆ, ನಾನಾವಿಧವಾದ ಜನ್ಮಗಳಿಂದ ಸಂಚಾರ ಮಾಡಿ ಮಧ್ಯೇ ಮಧ್ಯೇ ಮನುಷ್ಯದೇಹವೇನು, ಮನುಷ್ಯರಲ್ಲಿ ಬ್ರಾಹ್ಮಣದೇಹವೇನು ಧರಿಸುತ್ತ, ಈ ಪ್ರಕಾರ ಅನೇಕಾವರ್ತಿ ಅನೇಕರೀತಿಯ ಬ್ರಾಹ್ಮಣಜನ್ಮವನ್ನೊಳಗೊಂಡ, ಮಾನುಷಜನ್ಮ ಧರಿಸುತ್ತಾ ಸಾಧನಾಮಾಡುತ್ತಾ ಬಂದು, ಪ್ರಾಂತಕೆ–ಕೊನಿಗೆ, ಪುನಃ ಮಾನುಷತ್ವವನೈದಿ–ಬ್ರಾಹ್ಮಣಜನ್ಮ ವ್ಯತಿರಿಕ್ತ ಅನೇಕ ಮಾನುಷಜನ್ಮವಾಗಿ ನಂತರ, ಬ್ರಾಹ್ಮಣಕುಲದಲಿ, (ಅವತರಿಸಿ–ಎಂಬುವುದು ಪೂರ್ವೋಕ್ತದಿಂದ ಅನ್ವಯವು.) ಇಂಥಾ ಬ್ರಾಹ್ಮಣ ಜನ್ಮಗಳು, ಸಹಸ್ರ ಜನುಮ–ಅವಿಚ್ಛಿನ್ನವಾಗಿ ಸಾವಿರಜನ್ಮ ಧರಿಸಿ, ಈ ಸಾವಿರ ಜನ್ಮಗಳಲ್ಲಿ ಪರಮಾತ್ಮನ ಧ್ಯಾನೋಪಾಸನಮಾಡುತ್ತಾ, ವೇದೋಕ್ತಾನುಸಾರ–ತಮ್ಮ ಯೋಗ್ಯತಾನುಸಾರ ವೇದದಲ್ಲಿ ಹೇಳಿದಪ್ರಕಾರ, ಅನ್ಯೂನ ಕರ್ಮವಮಾಡಿ–ನ್ಯೂನರಹಿತವಾದ ಧ್ಯಾನೋಪಾಸನಾದಿ ಸತ್ಕರ್ಮಗಳಮಾಡಿ, ಸರ್ವೋತ್ತಮನು ಹರಿಯೆಂಬ–ಸರ್ವೋತ್ತಮನು ಹರಿಯೆಂಬ ದೃಢಜ್ಞಾನದಿಂದ ಯುಕ್ತರಾಗಿ, ಜ್ಞಾನ ಭಕ್ತಿಗಳಿಂದ–ದೃಢವಾದ ಜ್ಞಾನ, ಭಕ್ತಿ, ವೈರಾಗ್ಯಗಳಿಂದ ಸಹಿತರಾಗಿ ಮಾಡಿದ ಕರ್ಮಗಳ, ಹರಿಗರ್ಪಿಸಿದನಂತರದಿ–ಬಿಂಬಗೆ ಸಮರ್ಪಣಮಾಡಿ, ಈ ಪ್ರಕಾರ ಸಾವಿರ ಜನ್ಮ ಕಳೆದ ನಂತರ, ಪ್ರಾಂತಕ್ಕೆ ಪೂರ್ವದಲ್ಲಿ ಅನೇಕಾವರ್ತಿ ಮಾನುಷಜನ್ಮವೇನು, ಬ್ರಾಹ್ಮಣ ಜನ್ಮವೇನು, ಮಧ್ಯೇ ಮಧ್ಯೇ ಬರುತ್ತಲೂ ಮತ್ತು ತದ್ವ್ಯತಿರಿಕ್ತ ಅನ್ಯವಾದ ಜನ್ಮಗಳ ಧರಿಸುತ್ತಾ ಪ್ರಾಂತವಾದ ಅಪರೋಕ್ಷಕ್ಕೆ ಸಮೀಪವಾದ ಕಾಲದಲ್ಲಿ, ಒಂದುಸಾವಿರದ ಹದಿಮೂರು ಜನ್ಮಗಳು ಮಧ್ಯೆ ವಿಚ್ಛೇದ ಬಾರದಂತೆ ಧರಿಸುತ್ತಾರೆಂದು, ಪ್ರಾಂತ ಶಬ್ದಕ್ಕೆ ತಾತ್ಪರ್ಯ.

**ಹತ್ತು ಜನುಮುಗಳಲ್ಲಿ ಹರಿ ಸ ।**
**ರ್ವೋತ್ತಮ ಸುರಾಸುರಗಣಾರ್ಚಿತ ।**
**ಚಿತ್ರಕರ್ಮ ವಿಶೋಕನಂತಾನಂತರೂಪಾತ್ಮ ॥**
**ಸತ್ಯಸತ್ಸಂಕಲ್ಪ ಜಗದು ।**
**ತ್ಪತ್ತಿ ಸ್ಥಿತಿ ಲಯ ಕಾರಣ ಜರಾ ।**
**ಮೃತ್ಯುವರ್ಜಿತನೆಂದುಪಾಸನೆಗೈದ ತರುವಾಯ ॥ ೬ ॥**

ಮತ್ತೂ ನಿರಂಶರ ವಿಚಾರ ಹೇಳತಾರೆ.

ಹತ್ತು ಜನುಮುಗಳಲ್ಲಿ–ಪೂರ್ವೋಕ್ತಪ್ರಕಾರ, ಒಂದುಸಾವಿರ ಬ್ರಾಹ್ಮಣ ಜನ್ಮಗಳು ಆದ ನಂತರದ ಹತ್ತು ಬ್ರಾಹ್ಮಣ ಜನ್ಮಗಳಲ್ಲಿ, ಹರಿಸರ್ವೋತ್ತಮ–ಬಿಂಬರೂಪನಾದ ಹರಿಶಬ್ದವಾಚ್ಯನಾದ ಪರಮಾತ್ಮ ಸರ್ವೋತ್ತಮನೆಂತಲೂ, ಸುರಾಸುರಗಣಾರ್ಚಿತ–ಸುರರಿಂದಲೂ, ಅಸುರರಿಂದಲೂ ಅರ್ಚಿತನಾದವ ಎಂದರೆ, ಸುರರಿಂದ ತಾರತಮ್ಯಾನುಸಾರ ಮಾಹಾತ್ಮ್ಯಪೂರ್ವಕ ಸುದೃಢ ಸ್ನೇಹದಿಂದ ಸರ್ವೋತ್ತಮನೆಂದು ಅರ್ಚಿತನಾದವ, ದೈತ್ಯರು ದ್ವೇಷಿಗಳಾದ್ದರಿಂದ ಅರ್ಚಿತಶಬ್ದ ಅವರಿಗೆ ಕೂಡೋದಿಲ್ಲ. ದ್ವೇಷಿಗಳಾದ ಕಾಲಕ್ಕೂ ಮಾನುಷತ್ವೇನ ದೇವರು ಅವತಾರಮಾಡಿ, ದೈತ್ಯರನ್ನ ಪರಾಜಯ ಐದಿಸೋಣದರಿಂದ, ಇವನ್ನ ಜೈಸೋಣ ಅಶಕ್ಯ, ದಾರಿಂದಲೂ ಆಗಲಾರದು ಎಂತ ಅಸುರರು ತಿಳಿಯೋಣ ದಾವದದೆ, ಅದೇ ಅಸುರರಿಂದ ಅರ್ಚನ. ಆದರೂ, ದ್ವೇಷದಿಂದ ಇಂಥಾವನ ಸಂಹಾರ ಮಾಡಿದರೆ ತಮಗೆ ಭೀತಿಪಡಿಸೋವರು ದಾರೂ ಇಲ್ಲ, ಆದ್ದರಿಂದ ಸಂಹಾರಮಾಡಬೇಕೆಂಬ ದ್ವೇಷ, ಈ ಪ್ರಕಾರ ಸುರಾಸುರರಿಂದ ಅರ್ಚಿತನಾದವ. ಸುರಶಬ್ದದಿಂದ ಮುಕ್ತಿಯೋಗ್ಯರು ತೃಣಾಂತ, ಗ್ರಾಹ್ಯ. ಅಸುರಶಬ್ದದಿಂದ ತೃಣಾಂತ ತಮೋಯೋಗ್ಯರು, ಗ್ರಾಹ್ಯ. ಚಿತ್ರಕರ್ಮ–ಸುರಾಸುರರಿಗೆ ಆಶ್ಚರ್ಯಗೊಳಿಸತಕ್ಕ ಅತ್ಯಾಶ್ಚರ್ಯ ವ್ಯಾಪಾರವುಳ್ಳವ. ವಿಶೋಕ–ಸೃಷ್ಟಿ, ಸ್ಥಿತಿ, ಸಂಹಾರಾದಿಗಳಿಂದ ಸಂತೋಷ, ಶೋಕ, ಎರಡರಿಂದ ರಹಿತನಾದವ. ಅನಂತಾನಂತರೂಪಾತ್ಮ–ಅಪರಿಚ್ಛಿನ್ನವಾದ ಅನಂತಾನಂತ ಅವತಾರಗಳುಳ್ಳವ, ನವನಾರೀಕುಂಜರವತ್, ಒಂದೇರೂಪದಲ್ಲಿ ನಾನಾವಿಚಿತ್ರಗಳಾದ ರೂಪಗಳಿಂದ ಯುಕ್ತವಾದ ದೇಹವುಳ್ಳವ, ಸತ್ಯಸತ್ಸಂಕಲ್ಪ–ಸತ್ಯವಾದ ಸತ್‌ಸಂಕಲ್ಪವುಳ್ಳವ, ತನ್ನ ಸಂಕಲ್ಪಾನುಸಾರ ಮಾಡತಕ್ಕವನೇ ಹೊರ್ತು, ಅದಕ್ಕೆ ಅನ್ಯಥಾ ಮಾಡತಕ್ಕವನಲ್ಲ. ಜಗದುತ್ಪತ್ತಿ ಸ್ಥಿತಿ ಲಯ ಕಾರಣ–ಚರಾಚರ ಜಗತ್ತು ಸೃಷ್ಟಿ ಸ್ಥಿತಿ ಸಂಹಾರಕ್ಕೆ ಕಾರಣನಾದವನು, ಜರಾಮೃತ್ಯುವರ್ಜಿತನು–ಉತ್ಪತ್ತಿ ಮರಣಗಳಿಂದ ರಹಿತನಾದವ, ಎಂದು–ಇಂಥಾ ಪರಮಾತ್ಮನೆಂದು ದೃಢಜ್ಞಾನದಿಂದ ತದನುಷ್ಠಾನಪೂರ್ವಕವಾಗಿ ನಿಶ್ಚಂಚಲ ಜ್ಞಾನದಿಂದ, ಉಪಾಸನೆ ಗೈದ ತರುವಾಯ–ಈ ಪ್ರಕಾರ ಗುಣೋಪಾಸನ ಹತ್ತು ಜನ್ಮಗಳಲ್ಲಿ ಮಾಡಿದ ತರುವಾಯ.

**ಮೂರು ಜನುಮಗಳಲ್ಲಿ ದೇಹಾ ।**
**ಗಾರ ಪಶು ಧನ ಪತ್ನಿ ಮಿತ್ರ ಕು ।**
**ಮಾರ ಮಾತಾಪಿತೃಗಳಲ್ಲಿಹ ಸ್ನೇಹದಿಂದಧಿಕ ॥**
**ಮಾರಮಣನಲಿ ಬಿಡದೆ ಮಾಡುವ ।**
**ಸೂರಿಗಳು ಈ ಉಕ್ತ ಜನುಮವ ।**
**ಮೀರಿ ಪರಮಾತ್ಮನ ಸ್ವದೇಹದಿ ನೋಡಿ ಸುಖಿಸುವರು ॥ ೭ ॥**

ಇನ್ನೂ ಸಿರಂಶರ ವಿಚಾರವೇ ಹೇಳತಾರೆ.

ಮೂರು ಜನುಮಗಳಲ್ಲಿ–ಪೂರ್ವೋಕ್ತ ಹತ್ತು ಜನುಮಗಳು ಕಳೆದು ಅನಂತರ ಮೂರು ಜನ್ಮ, ಬ್ರಾಹ್ಮಣಜನ್ಮ ಧರಿಸಿ (ಈ ಮೂರು ಜನ್ಮಗಳಲ್ಲಿ), ದೇಹ–ತನ್ನ ದೇಹ, ಆಗಾರ–ತನ್ನ ಸ್ವಗೃಹ, ಪಶು–ತನ್ನ ಸ್ವಕೀಯವಾದ ಪಶುಗಳು, ಧನ–ಸ್ವಾರ್ಜಿತ, ಸ್ವಕೀಯವಾದ ದ್ರವ್ಯಧಾನ್ಯಾದಿಗಳು, ಪತ್ನಿ–ಹೆಂಡತಿ, ಮಿತ್ರ–ಆಪತ್ಕಾಲದಲ್ಲಿ ರಕ್ಷಕನಾದ ಸ್ನೇಹಿತ, ಕುಮಾರ–ಸ್ವಪುತ್ರ ಪುತ್ರಿಯರು, ಮಾತಾಪಿತೃಗಳಲ್ಲಿ–ತಾಯಿತಂದೆಗಳಲ್ಲಿ, ಈ ಯಾವತ್ತೂ ಮಂದಿಗಳಲ್ಲಿರತಕ್ಕ, ಸ್ನೇಹದಿಂದ–ವಿಷಯಾಸಕ್ತರಾದವರಿಗೆ ಅಜ್ಞಾನ ದಶಾದಲ್ಲಿ, ದೇವರಲ್ಲಿ ಸ್ನೇಹವಿಲ್ಲದೆ ದಾರಾದಿಗಳಿಂದ ಮಹಾಸುಖಲಾಭ ಎಂತಲೂ, ಇವರೇ ತಾರಕರೆಂತಲೂ, ಇತ್ಯಾದಿ ಅನೇಕ ಸುಖಲಾಭ ಎಂತಲೂ ಇದ್ದವನಾಗಿ, ಅತ್ಯಂತ ಸ್ನೇಹ ದೇವರಲ್ಲಿ ಮರೆತು, ದೇವರಲ್ಲಿ ಮಾಡತಕ್ಕ ಸ್ನೇಹ, ದಾರಾಪುತ್ರಾದಿಗಳಲ್ಲಿ ಲೋಗರು ಮಾಡುತ್ತಾ ಇರ್ತಾರೆ. ( ಈ ಮೂರು ಜನ್ಮಗಳಲ್ಲಿ ಆದರೋ ), ಅಧಿಕ–ಅಜ್ಞಾನದಶಾದಲ್ಲಿ ದೇವರನ್ನ ಹ್ಯಾಂಗೆ ಮರೆತರೋ ತದ್ವತ್, ಜ್ಞಾನದಶಾದಲ್ಲಿ ದಾರಾ ಪುತ್ರಾದಿಗಳನ್ನು ಮರೆತು, ಆ ದಾರಾಪುತ್ರಾದಿಗಳಲ್ಲಿ ಮಾಡತಕ್ಕ ಸ್ನೇಹ ದಾವುದದೆ ಅದು ಅವರಲ್ಲಿ ಮಾಡದೆ, ಈ ಸ್ನೇಹವೇನು, ತತೋಽಪ್ಯಧಿಕ ಸ್ನೇಹವೇನು, ಮಾರಮಣನಲಿ–ಲಕ್ಷ್ಮೀಪತಿಯಾದ ಶ್ರೀ ಪರಮಾತ್ಮನಲ್ಲಿ, ಬಿಡದೆ– ಅರಲವಕಾಲವಾದರೂ ಬಿಡದೆ, ಮಾಡುವ–ಮಾಡುವರು, ಸೂರಿಗಳು–ಈ ಪ್ರಕಾರ ಮಾಡತಕ್ಕ ಅಧಿಕಾರಿಗಳು, ಜ್ಞಾನಿಗಳು ಎಂತ ಸಾರ್ಥಕ್ಯನಾಮದಿಂದ ಕರಿಸೋವರಾಗತಾರೆ. ಈ ಉಕ್ತ ಜನುಮವ ಮೀರಿ–ಈ ಉಕ್ತ ಸೂರಿಗಳು ಪೂರ್ವೋಕ್ತ ಮೂರು ಜನ್ಮವೂ ಮೀರಿ ನಾಲ್ಕನೇ ಜನ್ಮ ಪ್ರಾಪ್ತವಾದ ಕಾಲದಲ್ಲಿ, ಸ್ವದೇಹದಿ–ತಮ್ಮ ಸ್ವದೇಹವಾದ ಸ್ಥೂಲದೇಹಗತ ಹೃದಯಾಕಾಶದಲ್ಲಿ, ಪರಮಾತ್ಮನ–ಉಪಾಸ್ಯಮೂರ್ತಿಯಾದ ವಾಸನಾರೂಪನಾದ ಪರಮಾತ್ಮನ್ನ , ನೋಡಿ–ಪ್ರತ್ಯಕ್ಷೀಕರಿಸಿಕೊಂಡು, ಸುಖಿಸುವರು – ಜ್ಞಾನಾನಂದಾದಿಗಳಿಂದ, ಭಗವದ್ದರ್ಶನದಿಂದ ಸುಖಿಸುವರು. ವಾಸನಾರೂಪ ಪ್ರತ್ಯಕ್ಷವಾಗಿ, ತದ್ಗತ ಪರಮಾತ್ಮ ಪ್ರತಿಮಾಧಿಷ್ಠಾನ ದ್ವಾರಾ ಚಲನಾದಿಗಳ ಮಾಡುತ್ತಾ, ಮಾತುಗಳ ಆಡುತ್ತಾ ಇರ್ತಾನೆ. ನಂತರ ಅದೇ ಪ್ರಕಾರ ಉಪಾಸನಾ ಮಾಡತಾ ಬಂದರೆ, ತದ್ಗತನಾದ ಚಿದಾನಂದರೂಪನು ಆ ಪ್ರತಿಮಾ ಭೇದಿಸಿಕೊಂಡು, ತದಾಕಾರದಂತೆ ಸಂದರ್ಶನವನ್ನು ಕೊಡತಾನೆ. ಆ ರೂಪವನ್ನ

ಉಪಾಸನಾ ಮಾಡತಾ ಬಂದರೆ, ಆ ರೂಪ ಮರೆಯಾಗಿ ಸ್ಥೂಲದೇಹಗತ ಜೀವಾಕಾರ ನಾದ ಕಮಲಕರ್ಣಿಕಾಮಧ್ಯಗತ ಅಗ್ರೇಶನಾಮಕ ಶ್ರೀ ಪರಮಾತ್ಮ, ಸಂದರ್ಶನ ಕೊಡ ತಾನೆ. ಆಗ್ಗೆ ಅಪರೋಕ್ಷಾತ್ಪೂರ್ವಕಾಲೀನಕರ್ಮ ಯಾವತ್ತೂ, ಸಂಚಿತವೆಂದು ಕರೆಸಿ ಭಗವದಪರೋಕ್ಷದಿಂದ ನಾಶವಾಗುತ್ತದೆ. ಅಪರೋಕ್ಷಾನಂತರ ಭೋಗಿಸತಕ್ಕ ಕರ್ಮ, ಪ್ರಾರಬ್ಧಕರ್ಮ ಎಂದೆನಿಸುತ್ತದೆ. ಈ ಪ್ರಾರಬ್ಧಕರ್ಮದಲ್ಲಿ ಅನೇಕ ವೈಚಿತ್ರ್ಯಗಳು ಅವೆ ; ನಾನಾ ಯೋನಿಗಳು ಬರತಕ್ಕ ಕರ್ಮಗಳು ಅವೆ. ಇದರಲ್ಲಿ ಪೂರ್ವೋಕ್ತಪ್ರಕಾರ (೧೦೧೩) ಸಾವಿರದ ಹದಿಮೂರು ಜನ್ಮ, ಕ್ರಮ ತಪ್ಪದಲೇ ಬಂದೋಪಾದಿಯಲ್ಲಿ ಬರೋದಿಲ್ಲ. ಮಧ್ಯೇ ಮಧ್ಯೇ ನೀಚಜನ್ಮ ಬಂದಕಾಲಕ್ಕೂ ಜ್ಞಾನ ತಿರೋಧಾನವಿಲ್ಲ. ಈ ಪ್ರಾರಬ್ಧಕರ್ಮ ಲಿಂಗಭಂಗವಾಗೋವರೆಗೂ ಇರ್ತದೆ. ಈ ಪ್ರಾರಬ್ಧಕರ್ಮ ಭೋಗ ಕಾಲದಲ್ಲೂ ನಾನಾವಿಧವಾಗಿ ಕರ್ಮಾಂಕುರವಾಗಿ, ಉತ್ತರೋತ್ತರ ಭೋಗಮಾಡತಕ್ಕ ಆಗಾಮಿಕರ್ಮ ಎಂತ ಕರಿಸುತ್ತದೆ ; ಆದರೂ ತಲ್ಲೇಪವಿಲ್ಲ, ನಿರ್ಲೇಪ ಎಂಬುದು ಇಂಥಾದ್ದು ; ಆದ್ದರಿಂದ ಅಪರೋಕ್ಷಾತ್ಪೂರ್ವಕಾಲೀನ ಕರ್ಮ, ಸಂಚಿತ ಎಂತಲೂ, ಅಪರೋಕ್ಷಾನಂತರಕಾಲೀನ ಕರ್ಮ, ಆಗಾಮಿ ಎಂತಲೂ, ಒಂದು ನಾಶ, ಒಂದು ನಿರ್ಲೇಪ. ಪ್ರಾರಬ್ಧಕರ್ಮ, ಭೋಗದಿಂದ ಕ್ಷಯ, ಎಂತ ತಿಳಿಯಬೇಕು. ಇಲ್ಲಿಗೆ ನಿರಂಶ ರಾದ ಮಾನುಷಗಂಧರ್ವರಾರಭ್ಯ ತೃಣಾಂತವರಿಗೂ, ಈ ನೇಮ ಸರ್ವರಿಗೂ ಒಂದೇ ಆದರೂ, ಅಪರೋಕ್ಷದಲ್ಲೂ, ಗುಣೋಪಾಸನದಲ್ಲೂ ನ್ಯೂನಾಧಿಕ್ಯಗಳು ಇರುತ್ತವೆ. ಅದರ ವಿಸ್ತಾರ ಮುಂದೆ ಹೇಳತಾರೆ. ನಿರಂಶರ ವಿಚಾರ ಮುಗಿಯಿತು. ಸಾಂಶರಾದ ದೇವಗಂಧರ್ವರಾರಭ್ಯ ಬ್ರಹ್ಮಾಂತವರಿಗೂ ವಿಚಾರ ಮುಂದೆ ಹೇಳತಾರೆ.

**ದೇವಗಾಯಕಜಾನ ಚಿರಪಿತೃ ।**
**ದೇವರೆಲ್ಲರು ಜ್ಞಾನಯೋಗಿಗ ।**
**ಳಾವಕಾಲಕು ಪುಷ್ಕರ ಶನೈಶ್ಚರ ಉಷಾ ಸ್ವಾಹಾ ॥**
**ದೇವಿ ಬುಧ ಸನಕಾದಿಗಳು ಮೋ ।**
**ಘಾವಳಿಪ ಪರ್ಜನ್ಯ ಸಾಂಶರು ।**
**ಈ ಉಭಯಗಣದೊಳಗಿವರು ವಿಜ್ಞಾನಯೋಗಿಗಳು ॥ ೮ ॥**

ಸಾಂಶರೊಳಗೆ ಆಜಾನಜರು, ಕರ್ಮಜರು ಇವರ ವಿಚಾರ ಹೇಳತಾರೆ.

ಅಜಾನ–ಆಜಾನಜದೇವತೆಗಳು, ದಾರೆಂದರೆ, ದೇವಗಾಯಕ–ಸಾಂಶರಾದ ದೇವತೆ ಗಳೊಳಗೆ ಅಧಮರಾದವರು ದೇವಗಂಧರ್ವರು, ಇವರಿಗಿಂತಲೂ ಅಧಮರು (ಸಾಂಶರಾದ) ದೇವತೆಗಳೊಳಗೆ ಇಲ್ಲ. ಬ್ರಹ್ಮದೇವರಿಗಿಂತಲೂ ಉತ್ತಮರು ದೇವತೆಗಳೊಳಗೆ ದಾರೂ ಇಲ್ಲ. ಅಧಮತಾರತಮ್ಯರಾದ ದೇವಗಂಧರ್ವರಾರಭ್ಯ ದೇವತಾವಿಚಾರ ಹೇಳತಾರೆ. ದೇವಗಾಯಕರೆಂದರೆ, ಸ್ವರ್ಗಲೋಕದಲ್ಲಿ ಗಾನಮಾಡತಕ್ಕ ದೇವಗಂಧರ್ವರು. ಚಿರಪಿತೃ–

ದೇವಗಂಧರ್ವರಿಗಿಂತಲೂ ಚಿರಪಿತೃಗಳು ಉತ್ತಮರು. ದೇವರೆಲ್ಲರು–ಪುಷ್ಕರನ ವ್ಯತಿರಿಕ್ತ, ಪುಷ್ಕರಗೆ ಅವರರಾದ ದೇವಗಂಧರ್ವಾಂತವರಿಗೂ ಮಧ್ಯಗತರಾದ ದೇವತೆಗಳೆಲ್ಲರೂ ಆಜಾನಜರು ಒಂದು, ಇವರಿಂದ ಉತ್ಪನ್ನರಾದವರು ಅನಾಖ್ಯಾತ ಆಜಾನಜರು ಒಂದು, ಅಂತೂ ಎರಡು ವಿಧ. (ಅಂಶಾವತರಣ ಸಂಧಿಯಲ್ಲಿ ವಿದಿತವಾಗಿ ಅದೆ.) ೧. ಆಜಾನಜರು ಉತ್ತಮರು. ಇವರಿಂದ ಜನಿತರಾದ ಆಜಾನಜರು ಅವರರು, ಅನಾಖ್ಯಾತರು ; ೨. ಈ ಉಭಯರಾದ ಆಜಾನಜ ದೇವತೆಗಳೆಲ್ಲರು ಎಂದರೆ ವಿವರ. ೧. ಆಜಾನಜರು ೯೨ ಮಂದಿ ಗಂಧರ್ವರು, ೨,೯೯,೯೯,೯೦೦ ಋಷಿಗಳು, ೯೦೮ ಮಂದಿ ಅಪ್ಸರಸ್ತ್ರೀಯರು ; "ಘೃತಾಚೀ ಮೇನಕಾ ರಂಭಾ ಊರ್ವಶೀ ಚ ತಿಲೋತ್ತಮಾ | ಸುಕೇಶಾ ಶಬರೀ ಚೈವ ಮಂಜುಘೋಷಾ ಚ ಪಿಂಗಳಾ | ಇತ್ಯಾದಿಕಂ ಹ್ಯಪ್ಸರಸಾಂ ಸಹಸ್ರಂ ಪರಿಕೀರ್ತಿತಂ || " ಆಜಾನಜಸಮಾ ಹ್ಯೇತಾಃ || ೧೦೦೦ದೊಳಗೆ ಕರ್ಮಜರಲ್ಲಿ ಸೇರಿದವರು ೯೨ ಮಂದಿ ಹೋಗತಾ ಉಳಿದವರು ೯೦೮ ಮಂದಿ. ೧೬,೧೦೦ ಮಂದಿ ಅಗ್ನಿಪುತ್ರರಾದ ಗೋಪಸ್ತ್ರೀಯರು, ಅಗ್ನಿಪುತ್ರರು ; ಪವಮಾನ (೧), ಸಿಂಧು (೨) ಆಜಾನಜ ಯೋನಿಜರಾದ ಅನಾಖ್ಯಾತ ಆಜಾನಜರು ಆಜಾನಜರಿಗಿಂತಲೂ ಅವರರು. ವಿಬುಧರು ನೂರು (೧೦೦); ದೇವಭೃತ್ಯರಾದ ಪಿತೃಗಳು ನೂರು (೧೦೦); ದೇವಭೃತ್ಯರಾದ ಅಸುರರು ನೂರು (೧೦೦); ಗಾಯನಮಾಡುವ ಗಂಧರ್ವರು ನೂರು (೧೦೦); ನೃತ್ಯ ಮಾಡುವ ಅಪ್ಸರರು ನೂರು (೧೦೦); ದೇವಕಾರ್ಯದಲ್ಲಿ ಸಿದ್ಧರಾದ ಸಿದ್ಧಸಾಂಕೇತರು ಎಪ್ಪತ್ತು (೭೦); ವಾಹನ ಹೊರುವ ಯಕ್ಷರು ಎಪ್ಪತ್ತು (೭೦); ಶಿಬಿಕಾ ಹೊರುವ ರಾಕ್ಷಸರು ಮೂವತ್ತು (೩೦); ಪರಿಚಾರಕ ಚಾರಣರು ಮೂವತ್ತು (೩೦); ಸೇವಾ ಮಾಡುವ ಭೂತರು ಎಪ್ಪತ್ತು (೭೦); ಕಿನ್ನರರು ಎಪ್ಪತ್ತು (೭೦); ಪಿಶಾಚರು ಎಪ್ಪತ್ತು (೭೦); ಕುಬೇರಭೃತ್ಯರಾದ ಗುಹ್ಯಕರು ಏಳು (೭); ಪ್ರೇತರು ಎಪ್ಪತ್ತು (೭೦); ವಿದ್ಯಾಧರರು ಎಪ್ಪತ್ತು (೭೦); ವರುಣಭೃತ್ಯ ನಾಗರು ಐದು (೫); ಈ ಸರ್ವರೂ ಯಜ್ಞದಲ್ಲಿ ಸ್ವಲ್ಪ ಹವಿರ್ಭಾಗಕ್ಕೆ ಪಾತ್ರರಾದ ಪ್ರಯುಕ್ತ, ಮುಗ್ಗಭೋಗಿಗಳೆಂದು ಎನಿಸಿಕೊಂಬರು. ಆಜಾನಜ ದೇವಯೋನಿಜರಾದ ಅನಾಖ್ಯಾತಆಜಾನಜರೆಂದು ಕರಿಸುವ ಈ ಕೆಳಗೆ ಹೇಳತಕ್ಕವರು, ಮೇಲೆ ಹೇಳಿದ ವಿಬುಧಾದಿಗಳಿಗಿಂತ ನೀಚರು.

ನೂರು ಕಡಿಮೆ ನೂರುಕೋಟಿ (೯೯,೯೯,೯೯,೯೦೦) ಋಷಿಗಳು. ಅನಾಖ್ಯಾತ ಆಜಾನಜರಾದ ನೂರು ಕಡಿಮೆ ನೂರು ಕೋಟಿ ಋಷಿಗಳಿಗಿಂತಲೂ ಅವರರಾದವರು ಚಿರಪಿತೃಗಳು. ಇವರಿಗಿಂತಲೂ ದೇವಗಂಧರ್ವರು ಕಡಿಮಿ. ಎರಡನೇ ಸಂಖ್ಯಾ ಆರಂಭ ಮಾಡಿ ಐದನೇ ಸಂಖ್ಯಾವರಿಗೂ, ಆಜಾನಜ ದೇವಯೋನಿಜರು ಅನಾಖ್ಯಾತರು. ಈ ಅನಾಖ್ಯಾತರು ನಾಲ್ಕು ವಿಧ ತಾರತಮ್ಯದಿಂದ ಸಹಿತರಾದವರು, ಮೊದಲ ಸಂಖ್ಯಾದವರು ಆಜಾನಜರು. ಅಂತೂ ಆಜಾನಜರ ಸಮೂಹ ೯,೩೩,೯೯,೯೯,೯೦೦. ಇದರಲ್ಲಿ ೯೯,೯೯,೯೯,೯೦೦ ಋಷಿಗಳು ಹೋಗತಾ ಬಾಕಿ ೮,೩೪,೦೦,೦೦,೦೦೦. ಇವರು ಮೂವತ್ತುಮೂರು ಕೋಟಿ ದೇವತೆಗಳಲ್ಲಿ ಸೇರಿದವರು, ತದನ್ಯರು ಸೇರಲಿಲ್ಲ; ಆದರೂ

ಆಜಾನಜರಲ್ಲಿ ಪಠಿತರು ಮಾತ್ರವೇ. ಈ ದೇವತೆಗಳು ಯಾವತ್ತೂ ಮಂದಿ, ಜ್ಞಾನ ಯೋಗಿಗಳು–ನಿರಂಶರಾದ ಕರ್ಮಯೋಗಿಗಳ ವಿವಕ್ಷಾ ಜ್ಞಾನಯೋಗಿಗಳೆಂದು ಕರಿಸುವರು. ಈ ಆಜಾನಜರು ಕಾರ್ತವೀರ್ಯಾದಿರಾಜೇಭ್ಯಃ ಆಜಾನೇಯಾಶ್ರಿತಾವರಾಃ || ವಿಷ್ಣ್ವಾವೇಶಯುತಾಸ್ಸದಾ | ಈ ಉಭಯವಿಧರಾದ ಆಜಾನಜರಿಗಿಂತಲೂ ಉತ್ತಮರು ದಾರೆಂದರೆ, ಪುಷ್ಕರ–ಪುಷ್ಕರ ಉತ್ತಮನು, ಶನೈಶ್ಚರ–ಶನಿ ಪುಷ್ಕರನಿಗಿಂತ ಉತ್ತಮನು. ಉಷಾ–ಶನಿಗಿಂತ ಅಶ್ವಿನಿಗಳ ಭಾರ್ಯಾ ಉಷಾ ಉತ್ತಮಳು, ಬುಧಾ–ಉಷಾಗಿಂತ ಬುಧ ಉತ್ತಮನು, ಸ್ವಾಹಾದೇವಿ– ಬುಧನಿಗಿಂತಲೂ ಸ್ವಾಹಾದೇವಿ ಉತ್ತಮಳು, ಮೇಘಾವಳಿಪ ಪರ್ಜನ್ಯ–ಸ್ವಾಹಾದೇವಿಗಿಂತಲೂ ಮೇಘಪಙ್ಕ್ತಿಗಳಿಗೆ ಅಭಿಮಾನಿಯಾದ ಪರ್ಜನ್ಯ ಉತ್ತಮನು. ಸನಕಾದಿಗಳು – ಪರ್ಜನ್ಯಾದಿಗಳಿಗಿಂತಲೂ ಸನಕಾದಿಗಳು, ಬಲ್ಯಾದಿಗಳು, ಇವರೇ ಮೊದಲಾದವರು ಉತ್ತಮರು; ಪುಷ್ಕರ ಆರಂಭಮಾಡಿ ಸನಕಾದಿ ಪರ್ಯಂತ ಕರ್ಮಜರು. ಇವರೊಳಗೆ ಪೂರ್ವೋಕ್ತ ಪ್ರಕಾರ ಅವಾಂತರ ತಾರತಮ್ಯ ತಿಳಿಯಬೇಕು. ಈ ಉಭಯಗಣದೊಳಗೆ – ಈ ಪೂರ್ವೋಕ್ತ ಆಜಾನಜಗಣ ಒಂದು, ಕರ್ಮಜಗಣ ಒಂದು, ಈ ಎರಡು ಗಣದೊಳಗೆ ಆಜಾನಜರು ಜ್ಞಾನಯೋಗಿಗಳು, ಎರಡನೇವರಾದ, ಇವರು–ಈ ಕರ್ಮಜರು ಆಜಾನಜರ ವಿವಕ್ಷಾ, ವಿಜ್ಞಾನಯೋಗಿಗಳು– ವಿಜ್ಞಾನಯೋಗಿಗಳೆಂತ ಕರಿಸತಾರೆ. ಸಾಂಶರು–ಈ ಉಭಯಗಣದವರು ಸಾಂಶರು. ಆವ ಕಾಲಕು–ಅನಾದ್ಯನಂತಕಾಲಕ್ಕೂ ಆಜಾನಜರು ಜ್ಞಾನಯೋಗಿಗಳೆಂತಲೂ, ಕರ್ಮಜರು ವಿಜ್ಞಾನಯೋಗಿಗಳೆಂತಲೂ ಕರಿಸುತ್ತಾರೆ, ಈ ಉಭಯರೂ ಸಾಂಶರು.

**ಭರತಖಂಡದಿ ನೂರು ಜನುಮವ |**
**ಧರಿಸಿ ನಿಷ್ಕಾಮಕ ಸುಕರ್ಮ |**
**ಚರಿಸಿದಾನಂತರದಿ ದಶಸಾಹಸ್ರ ಜನುಮದಲಿ ||**
**ಉರುತರಜ್ಞಾನವನು ಪಡೆದೈ |**
*** ದಾರುದಶ ದೇಹದಲಿ ಭಕುತಿಯ |**
**ನಿರವಧಿಕನಲಿ ಮಾಡಿ ಕಾಂಬರು ಬಿಂಬರೂಪವನು || ೯ ||**

ಆಜಾನಜರ, ಕರ್ಮಜರ ಅಪರೋಕ್ಷಕ್ಕಾಗಿ ಸಾಧನ ಜನ್ಮಗಳನ್ನು ಹೇಳತಾರೆ.

---

* ಈ ಮುದ್ರಣಕ್ಕೆ ಮೂಲವಾದ ಹಸ್ತಪ್ರತಿಯಲ್ಲಿ ಮೇಲಿರುವ ಪಾಠವಿದೆ. ಈ ಪಾಠವು ಅರ್ಥಕ್ಕೆ ಸರಿಹೊಂದಿದರೂ ಛಂದಸ್ಸಿಗೆ ವಿರೋಧವಾಗುತ್ತದೆ. ಕ್ರಿ.ಶ. ೧೯೧೨ ರಲ್ಲಿ ಮುದ್ರಿತವಾದ ತೆಲಗು ಪ್ರತಿಯಲ್ಲಿ "...... ಪಡದೈದೆರಡು ದೇಹದಲಿ ...... | ಎಂದಿದೆ. ಇದು ಛಂದಸ್ಸಿಗೆ ಸರಿಹೊಂದಿದರೂ ಅರ್ಥ ಕೂಡೋದಿಲ್ಲ. ವರದೇಂದ್ರಸಾಹಿತ್ಯ ಪಂಚರತ್ನ ಪ್ರಕಾಶಿಕೆಯಲ್ಲಿ ಛಂದಸ್ಸಿಗೂ ಅರ್ಥಕ್ಕೂ ಹೊಂದುವ ಪಾಠ 'ಉರುತರ ಜ್ಞಾನವನು ಮೂರೈ | ದೆರಡು ದಶದೇಹದಲಿ ಭಕ್ತಿಯ |' ಈ ರೀತಿ ಇದೆ. ಆದರೆ ಆಗ 'ಪಡೆದು' ಅಧ್ಯಾಹಾರಮಾಡಿಕೊಳ್ಳಬೇಕಾಗುತ್ತದೆ.

ಭರತಖಂಡದಿ–ಭರತಖಂಡದಲ್ಲಿ ಸಾಧನಭೂಮಿ, ದೇವಮಾನುಷರಿಗೆ ವಿಭಾಗ :– ಭರತಖಂಡದ ವಿಸ್ತೀರ್ಣ ೯,೦೦೦ ಯೋಜನ. ಇದರಲ್ಲಿ ೮,೦೦೦ ಸಾವಿರ ಯೋಜನ ಭೋಗ ಭೂಮಿ, ೧,೦೦೦ ಯೋಜನ ಸಾಧನ ಭೂಮಿ. ಇದರಲ್ಲಿ ೧೦೦ ಯೋಜನ ಸಗರರಾಯನ ಮಕ್ಕಳು ಮಾಡಿದ ಭೂಖನನದಿಂದ ಸಮುದ್ರದಾಗೆ ಸೇರಿಹೋದದ್ದು. ಇನ್ನು ೯೦೦ ಯೋಜನ ಉಳಿಯಿತು. ಇದು ಸಾಧನ ಭೂಮಿ. ಇದರೊಳಗೆ ೪೫೦ ಯೋಜನ, ಮಾನುಷ ಸಾಧನ ಭೂಮಿ. ೧೦೦ ಯೋಜನ ರಾಮೇಶ್ವರ ಸವಪಾಷಾಣಾ ರಾಭ್ಯ, ಕೃಷ್ಣಾನದೀವರೆಗೆ, ೧೫೦ ಯೋಜನ ಕೃಷ್ಣಾರಭ್ಯ ಗಂಗಾತೀರದವರೆಗೆ, ೨೦೦ ಯೋಜನ ಗಂಗಾರಭ್ಯ ಚಿಕ್ಕ ಬದರೀವರೆಗೆ, ಅಂತು ೪೫೦ ಯೋಜನ ಮಾನುಷ ಸಾಧನ ಭೂಮಿ. ೪೫೦ ಯೋಜನ ಚಿಕ್ಕ ಬದರಿ ಆರಭ್ಯ ಹಿಮಾಚಲವರೆಗೆ ತದೇವ ದೇವಸಾಧನ ಭೂಮಿ. ಅಂತು ೯೦೦ ಪೂರ್ವೋಕ್ತಪ್ರಕಾರ ದೇವತಾಸಾಧನಿ ಯೋಗ್ಯವಾದ ಭರತ ಖಂಡ ಪ್ರದೇಶದಲ್ಲಿ ದೇವತಾಶರೀರಗಳಿಂದ ಮಾನಸಪೂಜಾ, ವಾಸನಾಪ್ರತೀಕಾಂತರ್ಗತ ಮಾನಸಪೂಜಾ ಮಾಡುತ್ತಾ, ಕಲ್ಪಾಂತ ಸಾಧನಿ ಆಗಿ ಅಂತ್ಯ ಕಲ್ಪವಾದ ಅಪರೋಕ್ಷ ಕಲ್ಪದಲ್ಲಿ ಮಾನುಷಸಾಧನಾ ಭರತಖಂಡ ಪ್ರದೇಶದಲ್ಲಿ, ನೂರು ಜನುಮವ ಧರಿಸಿ– ನೂರು ಜನ್ಮ ಧರಿಸಿ, ನಿಷ್ಕಾಮಕ–ಕಾಮರಹಿತವಾದ, ಸುಕರ್ಮ–ಸತ್ಕರ್ಮರೂಪವಾದ ಯಜ್ಞಯಾಗಾದಿ ಕರ್ಮಗಳ, ಆಚರಿಸಿದಾನಂತರದಿ–ಆಚರಣೆ ಮಾಡಿದನಂತರದಲ್ಲಿ, ದಶ ಸಾಹಸ್ರ ಜನುಮದಲಿ–(೧೦,೦೦೦) ಹತ್ತುಸಾವಿರ ಜನ್ಮ ಧರಿಸಿ, ಈ ಜನ್ಮದಲ್ಲಿ, ಉರು ತರ–ಅತ್ಯಂತ ಶ್ರೇಷ್ಠತರವಾದ, ಜ್ಞಾನವನು–ಜ್ಞಾನವನ್ನು, ಪಡೆದು–ಸಂಪಾದಿಸಿ, ಐದು ಆರು ದಶ ದೇಹದಲಿ–ಮೂವತ್ತು, ಹತ್ತರಿಂದ ಗುಣಿಸಿದರೆ ಮುನ್ನೂರು (೩೦೦). ಈ ಮುನ್ನೂರು ಜನ್ಮಗಳ ದೇಹಗಳಲ್ಲಿ, ಭಕುತಿಯ–ಭಕ್ತಿಯನ್ನು, ನಿರವಧಿಕನಲಿಮಾಡಿ– ಪರಮಾತ್ಮನಲ್ಲಿ ತಮ್ಮ ತಮ್ಮ ಯೋಗ್ಯತಾಕ್ಕೆ ಮಿಂಚದಂತೆ ಮಾಡಿ, ಕಾಂಬರು ಬಿಂಬರೂಪ ವನು–ವಾಸನಾಮಯ ಅಪರೋಕ್ಷ, ಪೂರ್ವೋಕ್ತ ಜನ್ಮಗಳನಂತರ ಮಾಡೋ ಉಪಾಸನಾ ದಿಂದ ಹೃದಯಾಕಾಶದಲ್ಲಿ ಬಿಂಬರೂಪವನ್ನ ಕಾಣತಾರೆ. "ಅತಾತ್ತ್ವಿಕಾ ದೇವದಾಸಾಃ ಸತ್ಕರ್ಮ ದಶಜನ್ಮಭಿಃ ಕೃತ್ವಾ ದಶಸಹಸ್ರೋರುಜನ್ಮಭಿಃ ಜ್ಞಾನಮಾಪ್ಯ ಚ || ಭಕ್ತಿಂ ತ್ರಿಶತೈರಾಪ್ಯ ಮುಚ್ಯಂತೇ ಜ್ಞಾನಯೋಗಿನಃ || ಪ್ರಕಾಶಸಂಹಿತಾಯಾಂ || ಜ್ಞಾನ ಯೋಗಿಗಳು, ಆಜಾನಜರು; ವಿಜ್ಞಾನ ಯೋಗಿಗಳು, ಕರ್ಮಜ ದೇವತೆಗಳು; ಜ್ಞಾನಿ ಯೋಗಿಗಳ ದಿಕ್ಪ್ರದರ್ಶನಮಾಡಿ, ವಿಜ್ಞಾನ ಯೋಗಿಗಳನ್ನ ಪ್ರಮಾಣದಲ್ಲಿ ಹೇಳಲಿಲ್ಲ. ಆದ್ದರಿಂದ ಉಭಯರಿಗೂ ಸಾಧನ ಜನ್ಮಗಳು ಒಂದೇ ಪ್ರಕಾರ.

| | ಸತ್ಕರ್ಮಾನುಷ್ಠಾನ ಜನ್ಮಗಳು | ಜ್ಞಾನಾನುಷ್ಠಾನ ಜನ್ಮಗಳು | ಭಕ್ತಿಯಿಂದ ಅನುಷ್ಠಾನ ಜನ್ಮಗಳು |
|---|---|---|---|
| ಮಾನುಷಗಂಧರ್ವರಾರಭ್ಯ ತೃಣಾಂತವರಿಗೆ | ೧,೦೦೦ | ೧೦ | ೩ |
| ಆಜಾನಜರಿಗೆ ಮತ್ತು ಕರ್ಮಜರಿಗೆ | ೧೦ | ೧೦,೦೦೦ | ೩೦೦ |

ಈ ಪ್ರಕಾರ, ಈ ಆಜಾನಜರು ಮತ್ತು ಕರ್ಮಜರು ಕಾರಣವಿಶೇಷಗಳಿಂದ, ಭಗವಂತನ ಸೇವಾರ್ಥ ಮಾನುಷಸಾಧನಭೂಮಿಯಲ್ಲಿ, ಉಪಾಧಿವಶಾತ್ ಜನಿಸೋವರಾಗತಾರೆ. ಮುಖ್ಯವಾದ ಸಾಧನಭೂಮಿ ಹಿಮಾಚಲ ಪ್ರದೇಶವೇಯೆ.

**ಸಾಧನಾತ್ಪೂರ್ವದಲಿ ಇವರಿಗ ।**
**ನಾದಿಕಾಲಪರೋಕ್ಷವಿಲ್ಲ ನಿ ।**
**ಷೇಧಕರ್ಮಗಳಿಲ್ಲ ನರಕಪ್ರಾಪ್ತಿ ಮೊದಲಿಲ್ಲ ॥**
**ವೇದಶಾಸ್ತ್ರಗಳಲ್ಲಿ ಇಪ್ಪ ವಿ ।**
**ರೋಧವಾಕ್ಯವ ಪರಿಹರಿಸಿ ಮಧು ।**
**ಸೂದನನೆ ಸರ್ವೋತ್ತಮೋತ್ತಮನೆಂದು ಸುಖಿಸುವರು ॥ ೧೦ ॥**

ಆಜಾನಜರ, ಕರ್ಮಜರ ವಿಚಾರ ಹೇಳತಾರೆ.

ಇವರಿಗೆ_ಆಜಾನಜರಾದ ಜ್ಞಾನಯೋಗಿಗಳು, ಕರ್ಮಜರಾದ ವಿಜ್ಞಾನಯೋಗಿಗಳು, ಈ ಉಭಯರಿಗೆ, ಸಾಧನಾತ್ಪೂರ್ವದಲಿ – ಅಪರೋಕ್ಷಸಾಧನ ಮಾಡೋದಕ್ಕೆ ಪೂರ್ವದಲ್ಲಿ, ಅಪರೋಕ್ಷವಿಲ್ಲ – ಅಪರೋಕ್ಷ ಇಲ್ಲ. ಸಾಧನಾನಂತರ ಅಪರೋಕ್ಷವೇ ಹೊರ್ತು, ತದ್ವ್ಯತಿರಿಕ್ತ ಅಪರೋಕ್ಷವಿಲ್ಲ. ಇವರು ಯಾವತ್ತೂ ಮಂದಿ ಅನ್ನಲಾಗಿ ವಿಜ್ಞಾನಯೋಗಿಗಳಾದ ಕರ್ಮಜರಾದ ಬಲ್ಯಾದಿ, ಸನಕಾದಿ ವಿಜ್ಞಾನಯೋಗಿಗಳಿಗೆ ಹದಿನಾಲ್ಕು ಬ್ರಹ್ಮಕಲ್ಪ ಸಾಧನಿ ; ಇದರಲ್ಲಿ ಏಳು ಬ್ರಹ್ಮಕಲ್ಪ, ಸ್ಥೂಲಾಪರೋಕ್ಷ ಸಾಧನಿ ; ಏಳು ಬ್ರಹ್ಮಕಲ್ಪ ಜೀವಾಂತರ್ಗತಅಪರೋಕ್ಷ ಸಾಧನಿ. ವಿಜ್ಞಾನಯೋಗಿಗಳಾದ ಪರ್ಜನ್ಯಾರಂಭ ಮಾಡಿ ಪುಷ್ಕರಾಂತ ಹನ್ನೆರಡು ಬ್ರಹ್ಮಕಲ್ಪ ಸಾಧನಿ ; ಆರು ಬ್ರಹ್ಮಕಲ್ಪ ಸ್ಥೂಲಾಪರೋಕ್ಷ ಸಾಧನಿ ; ಆರುಬ್ರಹ್ಮಕಲ್ಪ ಜೀವಾಂತರ್ಗತಅಪರೋಕ್ಷ ಸಾಧನಿ. ಇದೇ ಪ್ರಕಾರವೇ ಜ್ಞಾನಯೋಗಿಗಳಾದ ಆಜಾನಜರಿಗೂ ಇರೋದಾಗಿ ಅದೆ. ಹಾಂಗೆ ಇರಲಾಗಿ ಈ ಆಜಾನಜರಿಗೆ, ಕರ್ಮಜರಿಗೆ, ಹತ್ತುಸಾವಿರದ ನಾನೂರು ಜನ್ಮಕ್ಕೆ ಬಿಂಬಾಪರೋಕ್ಷ ; ಹ್ಯಾಂಗೆಂದರೆ, ಪೂರ್ವೋಕ್ತ ಕಲ್ಪಸಾಧನಿ ಮಾಡಿ, ಪ್ರಾಂತಭಾಗವಾದ ದಾವ ಕಲ್ಪದಲ್ಲಿ ಅಪರೋಕ್ಷ ಆಗಬೇಕೋ ಆ ಕಲ್ಪದಲ್ಲಿ, ಭರತಖಂಡದಲ್ಲಿ ಹತ್ತುಸಾವಿರದ ನಾನೂರು ಮಾನುಷಜನ್ಮ ಧರಿಸಿ ಸಾಧನವಾಗಿ ಅಂದರೆ, ಮಾನುಷರು ಸಾಧನ ಮಾಡತಕ್ಕ ಭರತಖಂಡಪ್ರದೇಶದಲ್ಲಿ ಜನ್ಮಗಳ ತಾಳಿ, ವಾಸನಾಅಪರೋಕ್ಷಾನಂತರ ಬಿಂಬಾಪರೋಕ್ಷವಾಗತದೆ. ಹತ್ತುಸಾವಿರದ ನಾನೂರು ಜನ್ಮಗಳ ಧರಿಸೇ ಅಪರೋಕ್ಷ ಆಗಬೇಕೆಂಬುದು ನೇಮ. ಆದ್ದರಿಂದ ಮಾನುಷದೇಹ ಧರಿಸೇ ಆಗಬೇಕು. ಇಷ್ಟು ಜನ್ಮಗಳ ವ್ಯತಿರಿಕ್ತ ಅನ್ಯವಾದ ಬ್ರಹ್ಮಕಲ್ಪಗಳ ಸಾಧನ ಎಂಬುದು, ಪೂರ್ವೋಕ್ತ ವಿಭಾಗದ ಮ್ಯಾರಿಗೆ ದೇವತಾ ಸಾಧನಿ ಭರತಖಂಡ ಭೂಮಿಯಲ್ಲಿ, ದೇವತಾದೇಹದಿಂದ ಸಾಧನ ಮಾಡತಾರೆ. (ವ್ಯಾಸರಾಯಪ್ರಭೃತಿಗಳಾದ

ಕರ್ಮಜದೇವತೆಗಳು, ವಾಸನಾರೂಪವನ್ನ ಅಪರೋಕ್ಷೀಕರಿಸಿಕೊಂಡು, ನಂತರ ಬಿಂಬಾಪ ರೋಕ್ಷಿಗಳಾಗಿದ್ದಾರೆ). ಸಾಧನಾತ್ಪೂರ್ವ ಇವರಿಗೆ ಅಪರೋಕ್ಷವಿಲ್ಲ. ಮತ್ತು, ಅನಾದಿ ಕಾಲ–ಈ ಆಜಾನಜ ಕರ್ಮಜರಿಗೆ ಕಾಲ ಅಪರೋಕ್ಷ ಆದ ಅನಂತರ ಕಾಲವಿಶೇಷದಲ್ಲಿ ತಿರೋಧಾನವಾಗಿ, ಮತ್ತೂ ಆದಿ ಕಾಣತಾ ಇರ್ತದೆ. ಆದ್ದರಿಂದ ಅನಾದಿ ಅಪರೋಕ್ಷಾ ನಂತರ ತಿರೋಧಾನವಾಗಿ ಪುನಃ ಆದಿ ಕಾಣದೇ ಇರುವ ಅಪರೋಕ್ಷಿಗಳೆಂಬೋ ಅಪರೋಕ್ಷ ವೇನು, ನಿಷೇಧಕರ್ಮಗಳು–ಪಾಪಕರ್ಮಗಳ ಆಚರಣವೇನೂ, ಇಲ್ಲ–ಅನಾದಿ ಅಪ ರೋಕ್ಷವಿಲ್ಲ. ಅಪರೋಕ್ಷಾತ್ಪೂರ್ವದಲ್ಲಿ ಪಾಪಕರ್ಮ ಆಚರಣೆ ಇಲ್ಲ ಎಂತ ತಾತ್ಪರ್ಯ. ನರಕಪ್ರಾಪ್ತಿ–ಪಾಪಕರ್ಮಗಳು ಇಲ್ಲದ ಮ್ಯಾಲೆ ನರಕಪ್ರಾಪ್ತಿ ಎಂಬುದು, ಮೊದಲಿಲ್ಲ– ದಾವಾಗ್ಯೂ ಇಲ್ಲ. ವೇದಶಾಸ್ತ್ರಗಳಲ್ಲಿ ಇಪ್ಪ–ಅಪರೋಕ್ಷಾತ್ಪೂರ್ವದಲ್ಲಿ, ವೇದಶಾಸ್ತ್ರ ಗಳಲ್ಲಿ ಇರತಕ್ಕ, ವಿರೋಧವಾಕ್ಯವ ಪರಿಹರಿಸಿ–ಪ್ರತೀತದಲ್ಲಿ ಹರಿ ಸರ್ವೋತ್ತಮ, ವಾಯು ಜೀವೋತ್ತಮ, ತಾರತಮ್ಯ ಪಂಚಭೇದಕ್ಕೆ ವಿರುದ್ಧವಾಗಿ ತೋರತಕ್ಕ ವಾಕ್ಯಗಳಲ್ಲಿನ ವಿರೋಧಾರ್ಥಗಳ ಪರಿಹರಿಸಿ, ಅದೇ ವಾಕ್ಯಗಳಿಗೆ ಗುಹ್ಯ, ಸಮಾಧಿ ಭಾಷಾಗಳಿಂದ ಈಶ್ವರಪರವಾಗಿ, ವೇದೋಕ್ತಾನುಸಾರ ಅರ್ಥ ಮಾಡಿ, ಮಧುಸೂದನನೆ–ಮಧುಸೂದನ ನಾಮಕ ಪರಮಾತ್ಮನೇ, ಸರ್ವೋತ್ತಮ–ಬ್ರಹ್ಮದೇವರಿಗಿಂತಲೂ ಉತ್ತಮರಾದವರು ರಮಾದೇವೇರು, ಉತ್ತಮನು – ಈ ರಮಾದೇವೇರಗಿಂತಲೂ ಉತ್ತಮನಾದವ ಪರಮಾತ್ಮ, ಎಂದು ಸುಖಿಸುವರು–ಎಂತ ದಾರಢ್ಯಮನಸ್ಸುಳ್ಳವರಾಗಿ ಭಗವದುಪಾಸನಾ ಮಾಡುತ್ತಾ ಸುಖಿಸುವರು. ಇಲ್ಲಿಗೆ ಆಜಾನಜ ಕರ್ಮಜರ ವಿಚಾರವಾಯಿತು.

**ಸತ್ಯಲೋಕಾಧಿಪನ ಪಿಡಿದು ಶ ।**
**ತಸ್ಥ ದೇವಗಣಾಂತರೆಲ್ಲರು ।**
**ಭಕ್ತಿಯೋಗಿಗಳೆಂದು ಕರೆಸುವರಾವಕಾಲದಲಿ ॥**
**ಭಕ್ತಿಯೋಗ್ಯರ ಮಧ್ಯದಲಿ ಸ ।**
**ದ್ಭಕ್ತಿವಿಜ್ಞಾನಾದಿ ಗುಣದಿಂ ।**
**ದುತ್ತಮೋತ್ತಮ ಬ್ರಹ್ಮ ವಾಯು ವಾಣಿ ವಾಗ್ದೇವಿ ॥ ೧೧ ॥**

ಬ್ರಹ್ಮದೇವರಾರಭ್ಯ ಧನಪ, ವಿಷ್ವಕ್ಸೇನ ಪರಿಯಂತ ಭಕ್ತಿಯೋಗಿಗಳ ವಿಚಾರ ಹೇಳತಾರೆ.

ಸತ್ಯಲೋಕಾಧಿಪನ ಪಿಡಿದು–ಸತ್ಯಲೋಕಾಧಿಪನಾದ ಬ್ರಹ್ಮದೇವರನ್ನ ಆರಂಭ ಮಾಡಿ, ಶತಸ್ಥದೇವಗಣಾಂತರು–ಧನಪ, ವಿಷ್ವಕ್ಸೇನಾದಿ ಶತಸ್ಥ ದೇವಗಣಾಂತ, ಎಲ್ಲರು– ಮಧ್ಯಗತರಾದ ದೇವತೆಗಳೆಲ್ಲರು, ಆವಕಾಲದಲಿ–ಸದಾ ಸರ್ವಕಾಲದಲ್ಲಿ, ಭಕ್ತಿಯೋಗಿ ಗಳೆಂದು–ಭಕ್ತಿಯೋಗಿಗಳೆಂದು, ಕರೆಸುವರು–ಕರಿಸೋವರಾಗತಾರೆ. ಭಕ್ತಿಯೋಗ್ಯರ ಮಧ್ಯದಲಿ–ಪೂರ್ವೋಕ್ತರಾದ ಭಕ್ತಿಯೋಗ್ಯರಾದ ಇವರ ಮಧ್ಯದಲ್ಲಿ, ಸದ್ಭಕ್ತಿವಿಜ್ಞಾನಾದಿ

ಗುಣದಿಂದ–ಸಮೀಚೀನವಾದ ಭಕ್ತಿಯೇನು, ಜ್ಞಾನವೇನು, ಇವೇ ಮೊದಲಾದ ಗುಣಗಳಿಂದ, ಉತ್ತಮೋತ್ತಮು–ಉತ್ತಮರಾದ ರುದ್ರಾದಿ ದೇವತೆಗಳಿಗಿಂತಲೂ ಉತ್ತಮರಾದವರು, ಬ್ರಹ್ಮವಾಯು–ಬ್ರಹ್ಮದೇವರು, ವಾಯುದೇವರು, ವಾಣಿ ವಾಗ್ದೇವಿ–ಸರಸ್ವತೀದೇವೇರು, ಭಾರತೀದೇವೇರು, ಈ ನಾಲ್ವರು ರುದ್ರಾದಿಗಳಿಗಿಂತಲೂ ಜ್ಞಾನಭಕ್ತ್ಯಾದಿಗಳಿಂದ ಉತ್ತಮರು. ಕರ್ಮಪ್ರಾಚುರ್ಯದಿಂದ ಕರ್ಮಯೋಗಿಗಳೆಂತಲೂ, ಜ್ಞಾನಪ್ರಾಚುರ್ಯದಿಂದ ಜ್ಞಾನಯೋಗಿಗಳೆಂತಲೂ, ಭಕ್ತಿಪ್ರಾಚುರ್ಯದಿಂದ ಭಕ್ತಿಯೋಗಿಗಳೆಂತಲೂ, ಈ ಪ್ರಕಾರ ಪ್ರಾಚುರ್ಯವಿಶೇಷದಿಂದ ಅವರವರು ಆಯಾ ನಾಮಗಳಿಂದ ಕರೆಸಿದರು. ಸರ್ವರಲ್ಲೂ ಕರ್ಮ, ಜ್ಞಾನ, ಭಕ್ತಿ ಪ್ರಾಚುರ್ಯಾಪ್ರಾಚುರ್ಯದಿಂದ ಅವೆ.

**ಋಜುಗಣಕೆ ಭಕ್ತ್ಯಾದಿಗುಣ ಸಾ ।**
**ಹಜವೆನಿಸುವುವು ಕ್ರಮದಿ ವೃದ್ಧ್ಯಾ ।**
**ಬ್ಜ ಜಪದವಿ ಪರ್ಯಂತ ಬಿಂಬೋಪಾಸನವು ಅಧಿಕ ॥**
**ವೃಜಿನವರ್ಜಿತರಿವರೊಳಗೆ ತ್ರಿಗು ।**
**ಣಜ ವಿಕಾರಗಳಿಲ್ಲವೆಂದಿಗು ।**
**ದ್ವಿಜ ಫಣಿಪ ಮೃಡ ಶಕ್ರ ಮೊದಲಾದವರೊಳಿರುತಿಹುವು ॥ ೧೨ ॥**

ಋಜುಗಳ ವಿಚಾರ ಹೇಳತಾರೆ.

ಋಜುಗಣಕೆ–ವರ್ತಮಾನ ಬ್ರಹ್ಮಕಲ್ಪದಲ್ಲಿ ಸೃಷ್ಟಿಗೆ ಬಂದಿರುವ ಬ್ರಹ್ಮಪದಯೋಗ್ಯರಾದ ಋಜುಗಣ ಇನ್ನೂರು (೨೦೦) ಮಂದಿ ಎಂದರೆ, ಪ್ರತಿಬ್ರಹ್ಮಕಲ್ಪಕ್ಕೂ ಸೃಷ್ಟರಾಗತಕ್ಕವರು ಒಬ್ಬರೇವೇ. ಆದರೆ ಇನ್ನೂರು ಮಂದಿ ಏಕಕಾಲಕ್ಕೆ ದಾವಾಗ ಬಂದರೆಂದರೆ, ಅನಾದಿಯಿಂದ ಇನ್ನೂರು ಮಂದಿ ಇದ್ದಾರೆ. ಆ ಬಂದ ಕ್ರಮ, ಈಶ್ವರನೇ ಬಲ್ಲ. ಯದ್ಯಪಿ, ಪ್ರತಿ ಬ್ರಹ್ಮಕಲ್ಪಕ್ಕೂ ಇನ್ನೂರು ಮಂದಿ ಇರ್ತಾರೆ. ಅದರಲ್ಲಿ ಸೇರಿದ ಬ್ರಹ್ಮದೇವರು ಮುಕ್ತರಾದರೆ ಇನ್ನೂರಕ್ಕೆ ಕಡಿಮೆ ಆಗತದೆ. ಕಡಿಮೆ ಬಿದ್ದ ಒಬ್ಬ ಋಜುವನ್ನ ಅಸೃಜ್ಯ ರಾಶಿಯಿಂದ ತೆಗೆದು ಸೃಷ್ಟಿಗೆ ತಂದು, ಯಥಾಪ್ರಕಾರ ಇನ್ನೂರು ಮಂದಿ ಪೂರ್ತಿಮಾಡತಾನೆ. ಈ ಪ್ರಕಾರವೇ ದೇವತಾಗಣರಾದ ರುದ್ರಾದಿ ದೇವಗಂಧರ್ವಾಂತವರಿಗೂ ಇದೇ ನೇಮ. ಪ್ರಕೃತ, ಪೂರ್ವೋಕ್ತಪ್ರಕಾರ ಇರತಕ್ಕ ಋಜುಗಣರಾದ ಬ್ರಹ್ಮಪದಕ್ಕೆ ಯೋಗ್ಯರಾದ ಇನ್ನೂರು ಮಂದಿಗೆ, ಭಕ್ತ್ಯಾದಿಗುಣ–ಭಕ್ತಿಯೇನು, ಜ್ಞಾನವೇನು, ವಿರಕ್ತಿಯೇನು, ಇವು ಯಾವತ್ತೂ ಗುಣಗಳು, ಸಾಹಜವೆನಿಸುವುವು–ಸೃಷ್ಟರಾಗೋಣವೇ, ಅಪ್ರಯತ್ನದಿಂದ ಸಹಜವಾಗಿ ಇರೋವಾಗತವೆ. ರುದ್ರಾದಿಗಳಿಗೆ ಜ್ಞಾನ, ಭಕ್ತಿ, ವೈರಾಗ್ಯಗಳು ಗುರೂಪದೇಶದಿಂದ ಸಾಧ್ಯವು. ಬ್ರಹ್ಮಾದಿ ಋಜುಗಳಿಗೆ ಸಹಜವಾಗಿ ಇದ್ದದ್ದನ್ನೇ ಗುರು ಮುಖದಿಂದ ಉಪದೇಶ ತೆಗೆದುಕೊಳ್ಳುತ್ತಾರೆ. ಕ್ರಮದಿ–ಈ ಋಜುಗಳ ನೈಜವಾದ ಜ್ಞಾನ, ಭಕ್ತಿ, ವೈರಾಗ್ಯಗಳು ರುದ್ರಾದಿಗಳೋಪಾದಿ ತಿರೋಧಾನವಿಲ್ಲದೆ, ಸೃಷ್ಟಿಕಾಲದಲ್ಲಿ

ಇದ್ದದ್ದು ಕ್ರಮವಾಗಿ, ಅಬ್ಜಜಪದವಿಪರ್ಯಂತ–ಅಂತ್ಯಪದವಾದ ಬ್ರಹ್ಮಪದವಿಪರ್ಯಂತ, ವೃದ್ಧಿ–ವೃದ್ಧಿ ಆಗತಾ ಬರುತ್ತದೇ ಹೊರತು, ರುದ್ರಾದಿಗಳೋಪಾದಿಯಲ್ಲಿ ಮಧ್ಯೆ ತಿರೋಧಾನವಾಗೋದಿಲ್ಲ. ಮತ್ತು ಇದಲ್ಲದೆ, ಬಿಂಬೋಪಾಸನವು ಅಧಿಕ–ಹೃದಯಾಕಾಶದಲ್ಲಿ ಬಿಂಬೋಪಾಸನ ಎಂಬುದು, ಸೃಷ್ಟರಾಗೋಣವೇ ಆರಂಭಮಾಡತಾರೆ. ಆ ಉಪಾಸನಕ್ಕೆ ತಿರೋಧಾನವಿಲ್ಲ, ಅಧಿಕವಾಗುತ್ತಾ ಬರ್ತದೆ. ವೃಜಿನವರ್ಜಿತರು – ಅಸುರಾವೇಶ, ಅಜ್ಞಾನಾದಿ ದೋಷವರ್ಜಿತರು. ಮೂಲಾವತಾರದಲ್ಲಿ ಪಾಪವರ್ಜಿತರು. ಇವರೊಳಗೆ ತ್ರಿಗುಣಜ ವಿಕಾರಗಳಿಲ್ಲವು–ಈ ಋಜುಗಣದೊಳಗೆ ಸರ್ವರಿಗೂ ತ್ರಿಗುಣಾತ್ಮಕ ಲಿಂಗದೇಹವದೆ. ಆ ಗುಣಗಳಿಂದ ದೋಷಗಳು ಜನಿತವಾಗಿ ವಿಕಾರವಿಲ್ಲ. ದೋಷಗಳ ಜನನವೂ ಇಲ್ಲ. ಎಲ್ಲಾನೂ ಪುಣ್ಯಕರ್ಮಗಳಾಗಿ ಇರುತ್ತವೆ. ಎಂದಿಗು–ಲಿಂಗಭಂಗವಾಗೋವರಿಗೂ ಮಧ್ಯಕಾಲಗಳಲ್ಲಿ ದಾವಾಗ್ಯೂ ತ್ರಿಗುಣಜವಿಕಾರವಿಲ್ಲ. ಇವರ ವ್ಯತಿರಿಕ್ತರಾದ, ದ್ವಿಜ–ಗರುಡದೇವರು, ಫಣಿಪ–ಶೇಷದೇವರು, ಮೃಡ–ರುದ್ರದೇವರು, ಶಕ್ರ–ಇಂದ್ರದೇವರು, ಮೊದಲಾದವರೊಳು – ಮೊದಲಾಗಿ, ಶತಸ್ಥದೇವತೆಗಳ ಪರಿಯಂತ ದೇವತೆಗಳೊಳು, ಇರುತಿಹುವು–ಅಪರೋಕ್ಷಾನಂತರ ತಿರೋಧಾನವೇನು, ಅಸುರಾವೇಶವೇನು, ತ್ರಿಗುಣಜ ವಿಕಾರವೇನು, ಅಜ್ಞಾನವೇನು, ಇವು ಯಾವತ್ತೂ ಇರುತ್ತವೆ. ಬ್ರಹ್ಮದೇವರಾರಭ್ಯ ಶತಸ್ಥರವರೆಗೆ, ಮುಖ್ಯತಾತ್ತ್ವಿಕರು ; ಕರ್ಮಜರು ಅಮುಖ್ಯತಾತ್ತ್ವಿಕರು ; ಆಜಾನಜರು ಅತಾತ್ತ್ವಿಕರು ಎಂತ ದೇವತೆಗಳ ಒಳಗೆ ಮೂರು ವಿಧ ಇರುತ್ತದೆ.

**ಸಾಧನಾತ್ಪೂರ್ವದಲಿ ಈ ಋ ।**
**ಜ್ವಾದಿ ತಾತ್ತ್ವಿಕರೆನಿಪ ಸುರಗಣ ।**
**ನಾದಿಸಾಮಾನ್ಯಾಪರೋಕ್ಷಿಗಳೆಂದು ಕರೆಸುವರು ॥**
**ಸಾಧನೋತ್ತರ ಸ್ವಸ್ವಬಿಂಬ ಉ ।**
**ಪಾಧಿರಹಿತಾದಿತ್ಯನಂದದಿ ।**
**ಸಾದರದಿ ನೋಡುವರು ಅಧಿಕಾರಾನುಸಾರದಲಿ ॥ ೧೩ ॥**

ಋಜ್ವಾದಿ ತಾತ್ತ್ವಿಕರ ಅಪರೋಕ್ಷ ಹೇಳತಾರೆ.

ಈ ಋಜ್ವಾದಿ ತಾತ್ತ್ವಿಕರೆನಿಪ–ಪೂರ್ವೋಕ್ತ ಇನ್ನೂರುಮುಂದಿ ಋಜುಗಳೇ ಆದಿಯಾಗಿ ಶತಸ್ಥ ದೇವಗಣಾಂತವರಿಗೂ ಮುಖ್ಯ ತತ್ತ್ವಾಭಿಮಾನಿಗಳು ಎಂತ ಅನ್ನತಕ್ಕ, ಸುರಗಣ–ಈ ದೇವತಾಗಣ, ಸಾಧನಾತ್ಪೂರ್ವದಲಿ–ಸಾಧನಾಪೂರ್ವದಲ್ಲಿ, ಸಾಮಾನ್ಯಾಪರೋಕ್ಷಿಗಳೆಂದು–ಸಾಮಾನ್ಯ ಅಪರೋಕ್ಷಿಗಳೆಂತ, ಕರೆಸುವರು–ಕರಿಸೋವರಾಗತಾರೆ. ಎಂದರೆ, ವ್ಯಾಲೆ (ಹಿಂದೆ) ಸಾಮಾನ್ಯಾಪರೋಕ್ಷ, ವಿಶೇಷಾಪರೋಕ್ಷ ಅಂತ ಎರಡು, ಈ ಋಜ್ವಾದಿ ತಾತ್ತ್ವಿಕರಿಗೆ ಅವೆ ಎಂತ ಹೇಳಿದಂತಾಯಿತು. ಸಾಮಾನ್ಯಾಪರೋಕ್ಷ ಎಂದರೆ, ಸ್ಥೂಲದೇಹದಲ್ಲಿ ಅಷ್ಟದಳಕಮಲಕರ್ಣಿಕಾ ಮಧ್ಯಗತನಾದ ಅಗ್ರೇಶ ಎಂತಲೂ,

ಪ್ರಾಜ್ಞ ಎಂತಲೂ ನಾಮಧೇಯನಾದ, ಜೀವಾಕಾರನಾದ ಬಿಂಬವ್ಯತಿರಿಕ್ತ ಅನ್ಯವಾದ, ಮೂಲೇಶ, ಪ್ರಾದೇಶರೂಪಗಳ ಸಾಧನವಿಲ್ಲದೇನೇ ಅಪರೋಕ್ಷ. ಮತ್ತು ಜೀವಾಕಾರ ನಾದ ಅಗ್ರೇಶನ ಅಪರೋಕ್ಷ, ಸ್ಥೂಲದೇಹದಲ್ಲಿ ಸಾಧನಾನಂತರ ಅಪರೋಕ್ಷೀಕರಿಸಿ ಕೊಂಬೋಣ ಇದೇ ವಿಶೇಷಾಪರೋಕ್ಷವೆಂತಲೂ, ಎರಡು ಪ್ರಕಾರ ಅಪರೋಕ್ಷ. ಸಾಧ ನೋತ್ತರ–ಸ್ಥೂಲದೇಹಗತ ಜೀವಾಕಾರನಾದ ಬಿಂಬನ್ನ ಅಪರೋಕ್ಷೀಕರಿಸಿಕೋಬೇಕಾದರೆ, ಸಾಧನಾನಂತರವೇ ಹೊರ್ತು ತತ್ಪೂರ್ವದಲ್ಲಿ ಇಲ್ಲ. ಸ್ವಸ್ವಬಿಂಬ–ಋಜ್ವಾದಿ ತಾತ್ತ್ವಿಕರು ತಮ್ಮ ತಮ್ಮ ಸ್ವಕೀಯವಾದ ಜೀವಾಕಾರ ಬಿಂಬಾಪರೋಕ್ಷಕ್ಕೆ ಸಾಧನಮಾಡತಾ ಬಂದರೆ, ಪ್ರಥಮತಃ ಜೀವಾಕಾರ ಬಿಂಬ ಸ್ಥೂಲದೇಹದಲ್ಲಿ, ಉಪಾಧಿ–ಮೇಘವೆಂಬೋ ಉಪಾಧಿ ಗತ ಸೂರ್ಯನೋಪಾದಿಯಲ್ಲಿ ಕಾಣತಾ ಬಂದು ಸಾಧನ ಪೂರ್ತಿ ಆಗೋಣವೆ, ರಹಿತ ಆದಿತ್ಯನಂದದಿ–ಮೇಘವೆಂಬೋ ಉಪಾಧಿಯಿಂದ ರಹಿತನಾದ ಸೂರ್ಯನೋಪಾದಿಯಲ್ಲಿ, ಸಾದರದಿ–ಅವರವರ ಯೋಗ್ಯತಾನುಸಾರ, ಆದರದಿಂದ ಸಹಿತರಾಗಿ, ಅಧಿಕಾರಾನುಸಾರ ದಲಿ–ದಾರು ದಾರು ಎಷ್ಟು ಸೂರ್ಯಕಾಂತಿಯಿಂದ ಯುಕ್ತರಾಗಿ ಬಿಂಬನ್ನ ಕಾಣಬೇಕೋ ಆಯಾ ಅಧಿಕಾರಾನುಸಾರದಲಿ, ನೋಡುವರು–ಬಿಂಬನಾದ ಅಗ್ರೇಶನ್ನ ಅಪರೋಕ್ಷದಿಂದ ನೋಡೋವರಾಗುತ್ತಾರೆ. ಅನಾದಿ–ಪೂರ್ವೋಕ್ತ ಸಾಮಾನ್ಯಾಪರೋಕ್ಷವೇನು, ವಿಶೇಷಾ ಪರೋಕ್ಷವೇನು, ಸಾಧನಾನಂತರ ಆದ ವಿಶೇಷವಾದ ಬಿಂಬಾಪರೋಕ್ಷವೇನು, ಪುನಃ ತಿರೋಧಾನವಾಗಿ ಆದಿ, ಕಾಣೋದಿಲ್ಲ. ಆದ್ದರಿಂದ ಋಜ್ವಾದಿ ತಾತ್ತ್ವಿಕರು ಈ ವಿವಕ್ಷಾದಿಂದ, ಅನಾದಿ ಅಪರೋಕ್ಷಿಗಳೆಂದು ಕರಿಸೋವರಾದರು. ಇದರಲ್ಲಿ ವಿಶೇಷ ಒಂದಿದೆ. ಅದರ ವಿವರ :–

೧. ಸಮಸ್ತ ದೇವತೆಗಳು ಅಂಶವಿಶೇಷದಿಂದ ಅಂಡದ ಹೊರಗೆ ಇದ್ದಾರೆ. ಅಂಡದ ಹೊರಭಾಗಗತ ತತ್ತ್ವಗಳು ಅಸಂಸ್ಪೃಷ್ಟಗಳು. ಅಲ್ಲಿ ಇರತಕ್ಕ ಋಜ್ವಾದಿ ತಾತ್ತ್ವಿಕರೇ ಮೊದಲಾದ ದೇವತೆಗಳಿಗೆ ಅಸಂಸ್ಪೃಷ್ಟ ಸ್ಥೂಲದೇಹಗಳು ಬಂದು ಅಲ್ಲೇ ಇದ್ದುಕೊಂಡು ಸಾಧನಾ ಮಾಡತಾ ಇದ್ದಾರೆ.

೨. ತದನಂತರ ಅಂಡದ ಒಳಗೆ ದೇವತೆಗಳು ಯಾವತ್ತೂ ಮಂದಿ, ಅಂಶವಿಶೇಷ ದಿಂದ ಸಂಸ್ಪೃಷ್ಟ ಸ್ಥೂಲದೇಹಗಳ ಧರಿಸಿ, ಸಾಧನ ಮಾಡತಾ ಇದ್ದಾರೆ. ಅಂತು ಎರಡು ಪ್ರಕಾರ ಅಂಡದ ಹೊರಗಿನ ಋಜ್ವಾದಿ ಶತಸ್ಥದೇವಗಣಾಂತರಾದ, ಭಕ್ತಿಯೋಗಿಗಳಾದ ಮುಖ್ಯತಾತ್ತ್ವಿಕರಿಗೆ ಸಾಮಾನ್ಯಾಪರೋಕ್ಷ, ವಿಶೇಷಾಪರೋಕ್ಷ ಎರಡಕ್ಕೂ ತಿರೋ ಧಾನವೂ, ಪುನಃ ಆದಿ ಕಾಣೋಣವೂ ಎರಡೂ ಇಲ್ಲವಾದ್ದರಿಂದ, ಅನಾದಿ ಅಪರೋಕ್ಷಿ ಗಳೆಂದು ಕರಿಸೋವರಾದರು. ಋಜ್ವಾದಿ ತಾತ್ತ್ವಿಕರಾದವರು ಅಂಡದ ಒಳಗೆ ಸಂಸ್ಪೃಷ್ಟ ದೇಹವನ್ನು ಧರಿಸುವರು. ಆಗ್ಗೆ ಋಜುಗಣಕ್ಕೆ ಅಪರೋಕ್ಷ ತಿರೋಧಾನವಿಲ್ಲದೆ ಅಂಡದ ಹೊರಗಿನೋಪಾದಿಯಲ್ಲಿ, ಯಥಾಪ್ರಕಾರ ಅಪರೋಕ್ಷ ಇರೋದಾಗಿ ಇರುತ್ತದೆ. ಆದ್ದರಿಂದ ಋಜುಗಳು ಅನಾದಿ ಅಪರೋಕ್ಷಿಗಳೆಂತಲೂ, ಸದಾ ಅಪರೋಕ್ಷಿಗಳೆಂತಲೂ ಕರಿಸೋವ ರಾದರು. ತದನ್ಯ ರುದ್ರಾದಿ ಶತಸ್ಥ ದೇವಗಣಾಂತ ಅಂಶವಿಶೇಷದಿಂದ ಅಂಡದ ಒಳಗೆ

ಪ್ರವೇಶರಾಗಿ, ಸಂಸೃಷ್ಟ ಸ್ಥೂಲದೇಹಗಳ ಧರಿಸೋವರಾಗತಾರೆ. ಈ ಕಾಲದಲ್ಲಿ ಅಸುರಾವೇಶವೂ, ಅಜ್ಞಾನವೂ, ತ್ರಿಗುಣಜ ವಿಕಾರವೂ, ಅಪರೋಕ್ಷ ತಿರೋಧಾನವೂ ಆಗಿ ಪುನಃ ಆದಿ ಕಾಣುತ್ತಾ ಇರುತ್ತದೆ. ಆದ್ದರಿಂದ ಇವರು ಅಂಡದ ಹೊರಗಿನ ಅಂಶ ವಿವಕ್ಷಯಾ, ಅನಾದಿ ಅಪರೋಕ್ಷಿಗಳೆಂತಲೂ, ಅಂಡದ ಒಳಗಿನ ಅಂಶವಿವಕ್ಷಯಾ, ಅನಾದಿ ಅಪರೋಕ್ಷಗಳಲ್ಲವೆಂತಲೂ ಕರಿಸುತ್ತಾರೆ. ಅಂಡದ ಹೊರಗಿನ ದೇವತಾಂಶಕ್ಕೆ ಎಂದರೆ, ಸಮಸ್ತ ದೇವತೆಗಳಿಗೂ ಅಸುರಾವೇಶ ಮೊದಲಾದ ದೋಷಗಳು ಒಂದೂ ಇಲ್ಲ. ಅಲ್ಲಿ ಅಸುರರ ಪ್ರವೇಶವಿಲ್ಲ. ಕರ್ಮಜ, ಆಜಾನಜ ದೇವತೆಗಳಿಗೆ ಸಾಮಾನ್ಯಾಪರೋಕ್ಷ, ವಿಶೇಷಾಪರೋಕ್ಷ, ಎರಡೂ ಸಾಧನಾನಂತರವೇ ಆಗಬೇಕು. ಇವರಿಗೆ ಅಂಡದ ಹೊರಗೆ ಸಾಮಾನ್ಯಾಪರೋಕ್ಷವಿಲ್ಲ. ಋಜ್ವಾದಿ ತಾತ್ತ್ವಿಕರು ಜಾತಾಪರೋಕ್ಷಿಗಳು, ಇದೇ ಸಾಮಾನ್ಯಾಪರೋಕ್ಷವು. ಆಜಾನಜರದೂ, ಕರ್ಮಜರದೂ ಮ್ಯಾಲೆ ವಿಸ್ತಾರವಾಗಿ ವಿವರಿಸಿದೆ ; ಎರಡೂ ಕಡಿ ಸಾಧನ ಮಾಡತಾರೆ. ಅಂಡದ ಒಳಗೆ, ಭರತಖಂಡದಲ್ಲಿ ಮಾಡಿದ ಸಾಧನಾದಿಂದ ಅಂಡದ ಒಳಗಿನ ಅಂಶರೂಪಕ್ಕೆ ದಾವಾಗ್ಗೆ ಅಪರೋಕ್ಷವೋ, ಆಗ್ಗೆ ಅಂಡದ ಹೊರಗಿನ ಅಂಶಕ್ಕೆ ಅಪರೋಕ್ಷವಾಗತದೆ. ಅಂಡದ ಒಳಗಿನ ಅಂಶಕ್ಕೆ ಅಪರೋಕ್ಷ ತಿರೋಧಾನವಾದರೆ, ಅಂಡದ ಹೊರಗಿನ ಅಂಶಕ್ಕೂ ಅಪರೋಕ್ಷ ತಿರೋಧಾನ ವಾಗತದೆ. ಇದೇ ಪ್ರಕಾರ ಪುನಃ ಆದಿ ಕಾಣತಾ ಇರತದೆ, ಇದು ಭಕ್ತಿಯೋಗಿಗಳಿಗೆ. ಭಕ್ತಿಯೋಗಿಗಳಾದವರಲ್ಲಿ ಋಜುಗಣದವರಿಗೆ, ಒಳಗೂ ಹೊರಗೂ ತಿರೋಧಾನವಿಲ್ಲ. ತದನ್ಯ ರುದ್ರಾದಿ ಶತಸ್ಥಾಂತರೊಳಗೆ ತಿರೋಧಾನವಾದರೂ ಅಂಡದ ಹೊರಗೆ ತಿರೋಧಾನವಿಲ್ಲ. ಈ ಪ್ರಕಾರ ಅನೇಕ ವೈಚಿತ್ರ್ಯವದೆ, ವಿವರಿಸಲು ಶಕ್ಯವಲ್ಲ, ಈ ಪ್ರಕಾರ ತಿಳಿಯಬೇಕು.

ಋಜುಗಳಿಗೆ ರಾಶಿಯೊಳಗೆ ಅಪರೋಕ್ಷವಿಲ್ಲ.

ಶತಜನ್ಮಗತಾನಾಂ ತು ಋಜೂನಾಂ ಪೂರ್ವಮೇವ ಹಿ |
ಅಪರೋಕ್ಷಾಭಾವ ಏವ ಹ್ಯಜ್ಞಾನಂ ಸಮುದೀರಿತಂ || ೧ ||
ಅಪರೋಕ್ಷಾನಂತರಂ ತು ನಾಸ್ತ್ಯಜ್ಞಾನಂ ನ ಸಂಶಯಃ |
ಶತಜನ್ಮಸು ದೇವೇಶ ಹ್ಯಪರೋಕ್ಷ್ಯೇಣ ಸರ್ವದಾ || ೨ ||
ಪೂರ್ಣಜ್ಞಾನಂ ಮಮಾಸ್ತ್ಯೇವ ನಾತ್ರ ಕಾರ್ಯಾ ವಿಚಾರಣಾ |
ಶತಜನ್ಮಸು ಪೂರ್ವಂ ತು ಹ್ಯಪರೋಕ್ಷಂ ಮಮ ಪ್ರಭೋ || ೩ ||
ನಾಜ್ಞಾನಂ ಚಿಂತನೀಯಂ ಹಿ ಬ್ರಹ್ಮವಾಯುವದೇವ ಹಿ |
ಅತ್ರ ಕಿಂಚಿದ್ವಿಶೇಷೋಽಸ್ತಿ ಜ್ಞಾತವ್ಯಂ ತತ್ತ್ವಮಿಚ್ಛುಭಿಃ || ೪ ||

ಇತಿ ಗಾರುಡೇ

ರುದ್ರಾದಿ ಶತಸ್ಥಪರ್ಯಂತ ತಾತ್ವಿಕರ ಅಪರೋಕ್ಷ ವಿಚಾರ :—

ಋಜ್ವಾದಿತಾತ್ವಿಕಾಸ್ಸರ್ವೇಽನಾದಿತೋ ಹ್ಯಪರೋಕ್ಷಿಣಃ |
ಸಾಮಾನ್ಯತೋ ವಿಶೇಷೇಣ ಸ್ವಸ್ವಯೋಗ್ಯಾಪರೋಕ್ಷಿಣಃ ||

ಕ್ಲಪ್ತಕಾಲೋಚಿತಮಹಾಸಾಧನೇನ ಭವಂತಿ ಹಿ |
ಯತಂತಿ ಹ್ಯಪರೋಕ್ಷಾರ್ಥಂ ಋಜವಃ ಶತಸಂಮಿತಾಃ |
ಪೂರ್ವಾಪರೋಕ್ಷಿಣಸ್ತೇ ಚ ಶತಸಂಖ್ಯಾಮಿತಾಸ್ಸದಾ ||

ಇತಿ ಪ್ರಕಾಶಸಂಹಿತಾಯಾಂ.

ಋಜ್ವಾದಿ ಸರ್ವ ಸರ್ವಜೀವರಿಗೆ ರಾಶಿ ಒಳಗೆ ನಿದ್ರಾ.

ನಾರಿಕೇಳಫಲಾಕಾರಃ ಲಿಂಗದೇಹಸ್ತ್ರಿವೃನ್ಮತಃ |
ಮೂರ್ಧ್ನಿ ಛಿದ್ರಯುತೋ ಗರ್ಭೇ ಅವಕಾಶಯುತಃ ಸದಾ || ೧ ||
ಅಂತರ್ನಿಬದ್ಧಾ ಜೀವಾಸ್ತೇ ತ್ರಿವಿಧಾ ಅಪಿ ಮೋಚನೇ |
ನಶತ್ಕಾರಮಯಾತ್ಸನ್ನಂ ಮೂರ್ಧ್ನಿ ಛಿದ್ರೇ ವಸತ್ಯಲಂ || ೨ ||
ಸ್ವರೂಪಿಕಾಜ್ಞಾನದುಃಖಾಃ ದ್ವೇಷಕಾಮೋದಯಾಸ್ಸತಾಂ |
ರುದ್ಧಾ ಭವಂತಿ ಸಾಮ್ಯೇನ ವೈಷಮ್ಯೇ ಸತಿ ಪೂರ್ವವತ್ || ೩ ||
ಸ್ಫಟಿಕಸ್ಯ ಪ್ರಭಾ ಯದ್ವತ್ ಜಪಾಕುಸುಮಸನ್ನಿಧೌ |
ಶ್ವೇತಾಪಿ ರಕ್ತಿಮಾಯುಕ್ತಾ ಭವತ್ಯದ್ಧಾ ಚಿತೋ ತಥಾ || ೪ ||
ಕ್ಷಣೇ ಕ್ಷಣೇಂತರ್ಭ್ರಮತಾಂ ಸದಾ ಸವ್ಯೇನ ಚಾನ್ಯಥಾ |
ಭ್ರಮತಾಂ ಲಿಂಗದೇಹಸ್ಥಗುಣತ್ರಯಸುಯೋಗತಃ || ೫ ||

ಇತಿ ಪ್ರಕಾಶ ಸಂಹಿತಾಯಾಂ.

ಗುಣಸಾಮ್ಯದಿಂದ ನಿದ್ರಾ, ಗುಣವೈಷಮ್ಯದಿಂದ ಜಾಗ್ರತಿ; ರಾಶೀಗತರಾದ ಅಸೃಜ್ಯರಾದ ಜೀವರು, ಅನಾದಿಯಿಂದ ಗುಣಸಾಮ್ಯ ಐದಿರೋಣದರಿಂದ ನಿದ್ರಾಯುಕ್ತರಾಗಿ ಇರುವವರಾಗಿ ಇರ್ತಾರೆ. ಸೃಷ್ಟಿಕಾಲದಲ್ಲಿ ಸಾಮ್ಯ ಪರಿಹಾರಮಾಡಿ ವೈಷಮ್ಯ ಐದಿಸೋಣದರಿಂದ ಎಚ್ಚರವಾಗುತ್ತಾರೆಂತ ತಾತ್ಪರ್ಯ, ಇದೇ ನೇಮವೇ ಪ್ರಳಯಕಾಲದಲ್ಲಿ; ಸಾಮ್ಯರಾದವರು ಸೃಷ್ಟಿಕಾಲದಲ್ಲಿ ವೈಷಮ್ಯ ಐದಿದರೆ, ಪೂರ್ವವತ್ ಜಾಗ್ರತರಾಗತಾರೆಂತ ತಾತ್ಪರ್ಯ.

ನಿದ್ರಾಯುಕ್ತರಾದ ರಾಶಿಗೆ ಎಚ್ಚರಿಕೆಕಾಲವು, ಕರ್ಮಕ್ಕೆ ಆರಂಭಕಾಲವಾಗುತ್ತದೆ.
ಕರ್ಮ ಉತ್ಪತ್ತಿ ಕ್ರಮ :–

ಸೃಷ್ಟಿಕಾಲೇ ತ್ರಿಧಾ ಭಿನ್ನಜೀವಾನಾಂ ಬುದ್ಧಿರಿಷ್ಯತೇ |
ಸಾತ್ವಿಕೀ ರಾಜಸೀ ಚೇತಿ ತಾಮಸೀ ಚ ಸಮಸ್ತಶಃ || ೧ ||
ಯೋಗ್ಯಾನಾಂ ಸಾತ್ತ್ವಿಕೀ ಬುದ್ಧಿಃ ಬಹುಳಸ್ಯಾಲ್ಪಕೀ ಮತಾ |
ಮಧ್ಯಮಾನಾಂ ತು ನೀಚಾನಾಂ ರಾಜಸೀ ತಾಮಸೀ ಮತಿಃ || ೨ ||
ಕ್ರಮಾದ್ಬಹುತರಾನ್ಯೇ ತು ಸ್ವಲ್ಪಮಾತ್ರೇ ಭವಿಷ್ಯತಃ |
ಪಂಚಮಾತ್ರಾಗತೋ ಜ್ಞಾನಪಂಚಕಂ ಲಿಂಗದೇಹಗಂ || ೩ ||

ಅನಾದ್ಯಜ್ಞಾನಮುದ್ದಿಷ್ಟಂ ಬಾಹ್ಯಂ ಸ್ವಾರೂಪಿಕಂ ನ ತು ।
ಸಾಕ್ಷೀಂದ್ರಿಯಾಣಾಂ ತು ತಮಸಾ ಯೋಗೇ ತದ್ಧಿ ಭವಿಷ್ಯತಿ ॥ ೪ ॥
ಸಾಕ್ಷೀಂದ್ರಿಯಾಣಾಂ ತ್ವಸ್ಥಮನಸಾ ಸಂಗವೋ ಯದಿ ।
ಬಾಹ್ಯಮಸ್ವಾರೂಪಿಕಂ ಚ ಕಾಮಕ್ರೋಧಾದಿಕಂ ಚ ಯತ್ ॥ ೫ ॥
ಅನಾದಿಕಾಮೋ ಜೀವಾನಾಂ ತ್ರಿವಿಧಾನಾಂ ಭವಿಷ್ಯತಿ ।
ರಜಃಪರಿಚ್ಛೇದಗತಜ್ಞಾನೇಂದ್ರಿಯಾಣಾಂ ಕಳಾ ಯದಿ ॥ ೬ ॥
ಸಾಕ್ಷೀಂದ್ರಿಯಯುತಾ ಬಾಹ್ಯಶಬ್ದಾದಿಚ್ಛಾ ಭವಿಷ್ಯತಿ ।
ಅನಾದಿಕಾಮನಾ ಪ್ರೋಕ್ತಾ ತ್ರಿವಿಧಾನಾಂ ಚಿತಾಮಿಹ ॥ ೭ ॥
ರಜಃಪರಿಚ್ಛೇದಗತಕರ್ಮೇಂದ್ರಿಯಾಣಾಂ ಕಳಾ ಯದಿ ।
ಸಾಕ್ಷೀಂದ್ರಿಯಯುತಾ ಕರ್ಮ ಜನಯತ್ಯಪ್ಯನಾದಿಕಂ ॥ ೮ ॥
ಬಾಹ್ಯಲಿಂಗಗತಂ ಕರ್ಮ ನ ತು ಸ್ವಾರೂಪಿಕಂ ಮತಂ ।
ಅನಾದ್ಯವಿದ್ಯಾಕಾಮೌ ಚ ಅನಾದಿಕರ್ಮೇವ ಚ ॥ ೯ ॥
ಲಿಂಗಗಂಯುತಿ ಮತ್ವಾ ತು ಬಂಧೋ ಭವತಿ ಚೇತಸಃ ।
ಕಾಲೇನ ಭಾರತೇ ವರ್ಷೇ ಲಬ್ಧ್ವಾ ಜನ್ಮಾಪಿ ಮಾನುಷಂ ॥ ೧೦ ॥

ಇತ್ಯಾದಿ ಅನೇಕ ಪ್ರಮಾಣಗಳ ರೀತ್ಯಾ, ರಾಶೀಗತರಾದ ಅಸೃಜ್ಯರಿಗೆ (ಅಸೃಜ್ಯತ್ವವೇ) ನಿದ್ರಾಕಾಲವೆಂತಲೂ ಅಲ್ಲಿ ಪ್ರಾಜ್ಞನೇ ಬಿಂಬ ಎಂತಲೂ ಶ್ರೀ ಜಗನ್ನಾಥದಾಸರಾಯರು ಬಿಂಬಪ್ರತಿಬಿಂಬಸಂಧಿಯಲ್ಲಿ ಹೇಳಿದ್ದಾರೆ. ಪ್ರಾಜ್ಞನ ಕಾರ್ಯ ನಿದ್ರಾನಂತರ ಎಚ್ಚರಿಕೆ ಕಾಲ, ನಂತರ ಕರ್ಮ ಉತ್ಪತ್ತಿ. ಕರ್ಮ ಉತ್ಪತ್ತಿಕ್ರಮ, ಪೂರ್ವೋಕ್ತ ಪ್ರಮಾಣಾನುಸಾರ ತಿಳಿಯಬೇಕು.

**ಛಿನ್ನಭಕ್ತರು ಎನಿಸುತಿಹರು ಸು ।**
**ಪರ್ಣ ಶೇಷಾದ್ಯಮರರೆಲ್ಲಾ ।**
**ಚ್ಛಿನ್ನಭಕುತರು ನಾಲ್ವರೆನಿಪರು ಭಾರತೀ ಪ್ರಾಣ ॥**
**ಸೊನ್ನೊಡಲ ವಾಗ್ದೇವಿಯರು ಪಣೆ ।**
**ಗಣ್ಣ ಮೊದಲಾದವರೊಳಗೆ ತ ।**
**ತ್ತನ್ನಿಯಾಮಕರಾಗಿ ವ್ಯಾಪಾರವನೆ ಮಾಡುವರು ॥ ೧೪ ॥**

ಛಿದ್ರಭಕ್ತರು, ಅಚ್ಛಿದ್ರಭಕ್ತರು ಇವರ ವಿಚಾರ ಹೇಳತಾರೆ.

ಛಿನ್ನಭಕ್ತರು–ಛಿದ್ರಯುಕ್ತರಾದ ಭಕ್ತರೆಂತ, ಎನಿಸುತಿಹರು– ಎನಿಸೋವರಾಗುತ್ತಾರೆ. ದಾರು ಎಂದರೆ, ಸುಪರ್ಣ–ಗರುಡದೇವರು, ಶೇಷ–ಶೇಷದೇವರು, ಆದಿ–ಇವರೇ ಮೊದಲಾದ ಶತಸ್ಥದೇವಗಣಾಂತವರಿಗೂ, ಅಮರರೆಲ್ಲ–ಈ ದೇವತೆಗಳು ಛಿದ್ರಭಕುತಿ

ಎಂದರೆ, ಶಶ್ವದೇಕಪ್ರಕಾರ ಭಕ್ತಿ ಇರದೆ, ಮಧ್ಯೆ ಮಧ್ಯೆ ತಿರೋಧಾನವಾಗುತ್ತದೆ. ಭಾರತೀ ಪ್ರಾಣ–ಭಾರತೀದೇವೇರು, ಇವರ ಪತಿ ಪ್ರಧಾನ ವಾಯುದೇವರು, ಇವರಿಬ್ಬರು, ಸೊನ್ನಡಲ ವಾಗ್ದೇವಿಯರು–ಹಿರಣ್ಯಗರ್ಭರಾದ ಬ್ರಹ್ಮದೇವರು, ಇವರ ಪತ್ನಿ ಸರಸ್ವತೀ ದೇವೇರು, ಇವರಿಬ್ಬರು, ನಾಲ್ವರು–ಈ ನಾಲ್ಕೂ ಮಂದಿ, ಅಚ್ಛಿನ್ನಭಕುತರು–ಛಿದ್ರರಹಿತ ರಾದ ಭಕ್ತರು, ಎನಿಪರು–ಎನಿಸೋವರಾಗುತ್ತಾರೆ. ಭಕ್ತಿಯೋಗಿಗಳೊಳಗೆ ಈ ಪ್ರಕಾರ ಎರಡು ವಿಧ. ಪಣೆಗಣ್ಣ–ಲಲಾಟನೇತ್ರರಾದ ರುದ್ರದೇವರು, ಮೊದಲಾದವರೊಳಗೆ– ಈ ಮೊದಲಾದವರ ಸ್ಥೂಲದೇಹಗಳೊಳಗೆ, ತತ್ತನ್ನಿಯಾಮಕರಾಗಿ–ಆಯಾ ಚತು ರ್ವಿಂಶತಿತತ್ತ್ವದೇವತಾ ನಾಮಗಳಿಂದ ತತ್ತ್ವಾಭಿಮಾನಿಗಳಾಗಿ ಏಕಾದಶೇಂದ್ರಿಯಗಳಿಗೆ ನಿಯಾಮಕರಾಗಿ, ವ್ಯಾಪಾರವನೆ ಮಾಡುವರು–ಆಯಾ ಇಂದ್ರಿಯವ್ಯಾಪಾರಗಳ ಭಗವ ದಾಜ್ಞಾದಿಂದ ಮಾಡೋವರಾಗುತ್ತಾರೆ. ಪೂರ್ವೋಕ್ತ ಬ್ರಹ್ಮಾದಿ ನಾಲ್ಕು ಮಂದಿ ಸ್ಥೂಲೇಂದ್ರಿಯಗಳಿಗೆ ರಮಾಮಧುಸೂದನರು ನಿಯಾಮಕರು. ಪರಂಪರಾದಿಂದ ಸ್ವೋತ್ತಮರೆಲ್ಲ ಅವರರಿಗೆ ನಿಯಾಮಕರು.

**ಹೀನ ಸತ್ಕರ್ಮಗಳೆರಡು ಪವ ।**
**ಮಾನದೇವನು ಮಾಳ್ಪನಿದಕನು ।**
**ಮಾನವಿಲ್ಲೆಂದೆನುತ ದೃಢಭಕ್ತಿಯಲಿ ಭಜಿಪರ್ಗೆ ॥**
**ಪ್ರಾಣಪತಿ ಸಂಪ್ರೀತನಾಗಿ ಕು ।**
**ಯೋನಿಗಳ ಕೊಡನೆಲ್ಲಕರ್ಮಗ ।**
**ಳಾನೆ ಮಾಡುವೆನೆಂಬ ಮನುಜರ ನರಕಕ್ಕೈದಿಸುವ ॥ ೧೩ ॥**

ದ್ವಂದ್ವಕರ್ಮಗಳು ವಾಯುದೇವರಿಂದಲೇ ಆಗುತ್ತವೆಂತ ಹೇಳತಾರೆ.

ಪವಮಾನದೇವನು–ವಾಯುದೇವರು ; ರುದ್ರಾದಿಗಳಿಗೆ ಸರ್ವೇಂದ್ರಿಯ ನಿಯಾಮ ಕತ್ವ ಇಲ್ಲ. ತೃಣಾಂತ ತ್ರಿವಿಧಜೀವರ ಏಕಾದಶೇಂದ್ರಿಯಗಳ ನಿಯಾಮಕರಾದ್ದರಿಂದ, ಈ ವಾಯುದೇವರು ಸರ್ವಪ್ರಾಣಿಗಳ ಇಂದ್ರಿಯಗಳಲ್ಲಿ ಇದ್ದು ತದ್ದ್ವಾರಾ, ಹೀನ–ಪಾಪ ಕರ್ಮ, ಸತ್ಕರ್ಮಗಳು–ಪುಣ್ಯಕರ್ಮಗಳು, ಎರಡು–ಈ ಎರಡೂ ಕರ್ಮಗಳ, ಮಾಳ್ಪನು– ಆಯಾ ಪ್ರಾಣಿಗಳ ಸ್ಥೂಲದೇಹಾಕಾರದಿಂದ ಇರತಕ್ಕ ಬಿಂಬಕ್ರಿಯಾದ್ವಾರಾ ವಾಯು ದೇವರು ಮಾಡುತ್ತಾರೆ. ತದ್ದ್ವಾರಾ ಪ್ರಾಣಿಗಳು ಸ್ಥೂಲದೇಹೇಂದ್ರಿಯಾದಿಗಳಿಂದ ಮಾಡುತ್ತಾರೆ. ಇದಕೆ–ಈ ಮಾತು ನಿಶ್ಚಯ, ಇದಕ್ಕೆ, ಅನುಮಾನವಿಲ್ಲ–ಲೇಶವಾದರೂ ಸಂದೇಹವಿಲ್ಲ, ಎಂದೆನುತ–ವಾಯುದೇವರ ಮಾಹಾತ್ಮ್ಯ ಇಂಥಾದ್ದು ಅನ್ನುತ್ತ, ದೃಢ ಭಕ್ತಿಯಲಿ–ಅಚಂಚಲವಾದ ಭಕ್ತಿಯಿಂದ ಎಂದರೆ, ಜೀವೋತ್ತಮರಾದ ವಾಯುದೇವ ರೆಂದು ದೃಢವಾಗಿ ತಿಳಿದು ಜೀವೋತ್ತಮತ್ವೇನ ಅಚಂಚಲ ಭಕುತಿಯಿಂದ, ಭಜಿಪರ್ಗೆ– ಅಂತರ್ಗತದಲ್ಲಿ ಪರಮಾತ್ಮನ್ನ ತಿಳಿದು ವಾಯುದೇವರ ಭಜಿಸತಕ್ಕವರಿಗೆ, ಪ್ರಾಣಪತಿ– ಜೀವೋತ್ತಮರಾದ ವಾಯುದೇವರಿಗೆ ಸ್ವಾಮಿಯಾದ ಪರಮಾತ್ಮ, ಸಂಪ್ರೀತನಾಗಿ–

ಈ ಪ್ರಕಾರ ತಿಳಿದ ಅಧಿಕಾರಿಯಲ್ಲಿ ಛಂದಾಗಿ ಪ್ರೀತಿಯುಕ್ತನಾಗಿ, ಕುಯೋನಿಗಳ ಕೊಡನು–ಆಯಾ ಪಾಪಕರ್ಮಗಳಿಗೆ ಬರಬೇಕಾದ ನೀಚಯೋನಿಗಳ ಕೊಡೋದಿಲ್ಲ. ಆ ಪಾಪಕರ್ಮಗಳಿಗೆ ಪೂರ್ವೋಕ್ತ ಅನುಸಂಧಾನ, ಪ್ರಾಯಶ್ಚಿತ್ತರೂಪವಾಗಿ, ಪುಣ್ಯಗಳೇ ಆಗೋವಾಗತವೆ. ಎಲ್ಲ ಕರ್ಮಗಳ – ಎಲ್ಲಾ ಕರ್ಮಗಳನ್ನು, ಆನೆ ಮಾಡುವೆನೆಂಬ ಮನುಜರ–ತಾವೇ ಮಾಡುತ್ತೇವೆ ಎಂತ ಅನ್ನತಕ್ಕ ಮನುಷ್ಯರ ಪಾಪಕರ್ಮ, ಪಾಪ ವಾಗಿನ್ನು, ಪುಣ್ಯಕರ್ಮವೂ, ಪಾಪವಾಗಿನ್ನು, ಈ ಮನುಜರ, ನರಕಕೆ ಐದಿಸುವ– ಕುಯೋನಿಗಳಲ್ಲಿ ತಂದು, ಅನಂತರ ಮಹಾದುಃಖಕರವಾದ ನರಕಕ್ಕೆ ಹಾಕತಾನೆ. (ಇವರ) ಪಾಪಕ್ಕೆ ಪ್ರಾಯಶ್ಚಿತ್ತವಿಲ್ಲವಾದ್ದರಿಂದ ಪಾಪ, ಪಾಪವಾಗೇ ನಿಂತು, ಪುಣ್ಯಕ್ಕೆ ಅಹಂ ಎಂಬ ದುಸ್ಸಾಂಗತ್ಯದಿಂದ, ಪುಣ್ಯವೂ ಪಾಪವಾಗಿ, ನೀಚಯೋನಿಪ್ರಾಪ್ತಿಯೂ, ನರಕಾನುಭವವೂ, ಎರಡಕ್ಕೂ ಕಾರಣವಾಗೋದಾಯಿತು. ಅತ ಏವ, ಅಹಂಮಮತಾ ತ್ಯಾಗಮಾಡಬೇಕು.

**ದೇವ ಋಷಿ ಪಿತೃ ನೃಪ ನರರೆನಿ ।**
**ಪೈವರೊಳು ನೆಲೆಸಿದ್ದು ಅವರ ಸ್ವ ।**
**ಭಾವ ಕರ್ಮವ ಮಾಡಿ ಮಾಡಿಪ ಒಂದು ರೂಪದಲಿ ॥**
**ಭಾವಿಬ್ರಹ್ಮನು ಕೂರ್ಮರೂಪದ ।**
**ಲೀ ವಿರಿಂಚಾಂಡವನು ಬೆನ್ನಲಿ ।**
**ತಾ ವಹಿಸಿ ಲೋಕಗಳ ಪೊರೆವನು ದ್ವಿತಿಯರೂಪದಲಿ ॥ ೧೬ ॥**

ವಾಯುದೇವರ ಮಾಹಾತ್ಮ್ಯ ಹೇಳತಾರೆ.

ದೇವ–ರುದ್ರದೇವರು ಆರಂಭಮಾಡಿ, ಧನಪ ವಿಷ್ವಕ್ಸೇನಾದಿ ಶತಸ್ಥ ದೇವಗಣಾಂತ ಎಲ್ಲಾ ದೇವತೆಗಳು, ಋಷಿ–ಋಷಿಸಾಂಕೇತದಿಂದ ಬಲ್ಯಾದಿ ಕರ್ಮಜರ ಆರಂಭಮಾಡಿ ಪುಷ್ಕರಾಂತ ಕರ್ಮಜ ದೇವತೆಗಳು, ಪಿತೃ–ಪಿತೃಸಾಂಕೇತದಿಂದ ಆಜಾನಜರು, ನರರು– ನರಸಾಂಕೇತದಿಂದ ನಿರಂಶರಾದ ನರಗಂಧರ್ವರು, ನೃಪ – ಮಾನುಷಚಕ್ರವರ್ತಿಗಳು, ಇವರ ಆರಂಭಮಾಡಿ ತೃಣಾಂತವರಿಗೆ ಗ್ರಾಹ್ಯ, ಎನಿಪ–ಈ ಪ್ರಕಾರ ನಾಮಗಳುಳ್ಳವ ರೆಂದು ಎನಿಸುವ, ಐವರೊಳು–ಐದು ವಿಧ ಜೀವರೊಳು, ತದನ್ಯರಾದ ಇದೇ ಪ್ರಕಾರ ನಿತ್ಯಸಂಸಾರಿಗಳು, ತಮೋಯೋಗ್ಯರೊಳು, ನೆಲೆಸಿದ್ದು–ವಾಯುದೇವರು ಸ್ಥೂಲದೇಹ ಗಳಲ್ಲಿ ಆವಾಸರಾಗಿದ್ದು, ಅವರ–ಆಯಾ ತ್ರಿವಿಧ ಪ್ರಾಣಿಗಳಾದವರ, ಸ್ವಭಾವಕರ್ಮವ– ಅನಾದಿಸ್ವರೂಪ ಸ್ವಭಾವಕ್ಕೆ ಅನುಸರಿಸಿದ ಜ್ಞಾನಾನುಸಾರ ಕರ್ಮಗಳ ಒಂದು ರೂಪ ದಲಿ–ಒಂದಾದ ಅಂಶರೂಪದಿಂದ, ಮಾಡಿ ಮಾಡಿಪ–ಪೂರ್ವೋಕ್ತ ಪ್ರಕಾರ ಮಾಡಿ ಮಾಡಿಸುವ, ಭಾವಿಬ್ರಹ್ಮನು–ಮುಂದಿನ ಬ್ರಹ್ಮಕಲ್ಪದಲ್ಲಿ ಬ್ರಹ್ಮಪದಕ್ಕೆ ಬರತಕ್ಕ ಭಾವೀ ಬ್ರಹ್ಮಸಾಂಕೇತರಾದ, ಪೂರ್ವೋಕ್ತ ಜೀವೋತ್ತಮರಾದ ವಾಯುದೇವರು, ಕೂರ್ಮ ರೂಪದಲಿ–ಕೂರ್ಮಾವತಾರ ಮಾಡಿ, ಕೂರ್ಮಾಂಶದಿಂದ, ಈ ವಿರಿಂಚಾಂಡವನು–ಈ

ಬ್ರಹ್ಮಾಂಡವನ್ನು, ಬೆನ್ನಲಿ ತಾ ವಹಿಸಿ–ಬೆನ್ನಿನ ಮ್ಯಾಲೆ ತಾವು ಹೊತ್ತುಕೊಂಡು, ಅಂಡದ ಹೊರಗೆ ಒಂದು ಕೂರ್ಮರೂಪದಿಂದ ಇದ್ದಾರೆ. ದ್ವಿತಿಯರೂಪದಲಿ–ಎರಡನೇ ದಾದ ಕೂರ್ಮರೂಪದಿಂದ, ಲೋಕಗಳ–ಸಮಸ್ತ ಲೋಕಗಳನ್ನು, ಪೊರೆವನು–ಈ ಪ್ರಕಾರ ರಕ್ಷಿಸುವರು.

**ಗುಪ್ತನಾಗಿದ್ದನಿಲದೇವ ದ್ವಿ ।**
**ಸಪ್ತಲೋಕದ ಜೀವರೊಳಗೆ ತ್ರಿ ।**
**ಸಪ್ತಸಾವಿರದಾರುನೂರು ಶ್ವಾಸಜಪಗಳನು ॥**
**ಸುಪ್ತಿ ಸ್ವಪ್ನದಿ ಜಾಗ್ರತಿಗಳ ।**
**ಲಾಪ್ತನಂದದಿ ಮಾಡಿ ಮಾಡಿಸಿ ।**
**ಕ್ಲುಪ್ತ ಭೋಗಗಳೀವ ಪ್ರಾಂತಕೆ ತೃತಿಯ ರೂಪದಲಿ ॥ ೧೭ ॥**

ವಾಯುದೇವರ ಮಾಹಾತ್ಮ್ಯವನ್ನೇ ಹೇಳತಾರೆ.

ದ್ವಿಸಪ್ತಲೋಕದ – ಹದಿನಾಲ್ಕು ಲೋಕಗತರಾದ, ಜೀವರೊಳಗೆ – ರುದ್ರಾದಿ ಸಮಸ್ತ ತ್ರಿವಿಧ ಜೀವರ ಸ್ಥೂಲದೇಹದೊಳು, ಅನಿಲದೇವ–ಪ್ರಧಾನ ವಾಯುದೇವರು, ಗುಪ್ತನಾಗಿದ್ದು–ಹೃದಯದ ಅಷ್ಟದಳಕಮಲದಲ್ಲಿ ಕಮಲಕರ್ಣಿಕಾಮೂಲಗತ, ಮೂಲೇಶನ ಪಾದಮೂಲದಲ್ಲಿ ಗುಪ್ತನಾಗಿದ್ದು, ತ್ರಿಸಪ್ತಸಾವಿರದ – ಇಪ್ಪತ್ತೊಂದುಸಾವಿರದ (೨೧,೦೦೦), ಆರುನೂರು–ಆರುನೂರು (೬೦೦), ಶ್ವಾಸಜಪಗಳನು–ರಾತ್ರಿಹಗಲು ಸೇರಿ ಒಂದುದಿನದಾಗೆ, ಇಪ್ಪತ್ತೊಂದುಸಾವಿರದ ಆರುನೂರು ಶ್ವಾಸ ಜಪಗಳನ್ನು, ಜಾಗ್ರತಿಗಳಲಿ–ಪ್ರಾಣಿಗಳ ಜಾಗ್ರತ್ಕಾಲದಲ್ಲೇನು, ಸ್ವಪ್ನದಿ–ಪ್ರಾಣಿಗಳ ದಶೇಂದ್ರಿಯಗಳ ವ್ಯಾಪಾರಗಳು ಉಪರಮವಾಗಿ, ಮನೋಇಂದ್ರಿಯ ವ್ಯಾಪಾರಮಾತ್ರದಿಂದ ಯುಕ್ತವಾದ ಸ್ವಪ್ನಾವಸ್ಥದಲ್ಲೇನು, ಸುಪ್ತಿ–ಮನೋವ್ಯಾಪಾರವೂಕೂಡ ಇಲ್ಲದ ನಿದ್ರಾಕಾಲದಲ್ಲೇನು, ಈ ಅವಸ್ಥಾತ್ರಯಕಾಲಗಳಲ್ಲೂ, ಆಪ್ತನಂದದಿ–ಮುಕ್ತಿಯೋಗ್ಯರಿಗೆ ಆಪ್ತನಾದ ವಾಯುದೇವರು, ಅವರವರ ಅನಾದಿಸ್ವರೂಪಯೋಗ್ಯತಾನುಸಾರ, ಮಾಡಿ–ತಾನು ಮಾಡಿ, ವರ್ಣೋಚ್ಚಾರಮಾಡಿ, ಮಾಡಿಸಿ–ಆ ವರ್ಣಗಳನ್ನು ಬಾಹ್ಯ ಜಡಶ್ವಾಸದಲ್ಲಿ ಪ್ರವೇಶ ಮಾಡಿಸಿ, ತದ್ದ್ವಾರಾ ವ್ಯಾಪ್ತರಾದ ಜೀವರ ಸ್ಥೂಲದೇಹದಿಂದ ಮಾಡಿಸಿ (ಈ ಮಾಡಿಸೋ ಕ್ರಮ ಪೂರ್ವಸಂಧಿಯಾದ ಶ್ವಾಸಸಂಧಿಯಲ್ಲಿ ಉಕ್ತವಾಗಿ ಅದೆ), ಪ್ರಾಂತಕೆ–ಕಲ್ಪಾಂತಕ್ಕೆ, ಕ್ಲುಪ್ತಭೋಗಗಳೀವ–ಸ್ವರೂಪಯೋಗ್ಯ ಭೋಗಗಳನ್ನು ಕೊಡೋವನಾಗತಾನೆ. ಪಕ್ವಾಧಿಕಾರಿಗಳಾದ ತಮೋಯೋಗ್ಯರಿಗೆ ಗದಾಪ್ರಹಾರದಿಂದ ಲಿಂಗಭಂಗವೂನೂ, ನಿತ್ಯಸಂಸಾರಿಗಳಿಗೆ ಹುಂಕಾರದಿಂದ ಲಿಂಗಭಂಗವೂನೂ, ಪಕ್ವಾಧಿಕಾರಿಗಳಾದ ಮುಕ್ತಿಯೋಗ್ಯರಿಗೆ, ಜೀವನ್ಮುಕ್ತರನ್ನಾಗಿ ಮಾಡಿಯೂ, ಅವರುಗಳನ್ನ ಮಹರಾದಿ ಲೋಕಗಳಲ್ಲಿ ಇಟ್ಟು ಭೋಗಗಳ ಕೊಡೋವನಾಗತಾನೆ, ತೃತಿಯರೂಪದಲಿ–ಮೂರನೇದಾದ ಹಂಸಮಂತ್ರ ಜಪಿಸತಕ್ಕ ವಾಯುದೇವರೆಂತ ಅರ್ಥ.

**ಶುದ್ಧ ಸತ್ತ್ವಾತ್ಮಕ ಶರೀರದೊ ।**
**ಳಿದ್ದ ಕಾಲಕು ಲಿಂಗದೇಹವು ।**
**ಬದ್ಧವಾಗದು ದಗ್ಧಪಟದೋಪಾದಿ ಇರುತಿಹುದು ॥**
**ಸಿದ್ಧ ಸಾಧನ ಸರ್ವರೊಳಗನ ।**
**ವದ್ಯನೆನಿಸುವ ಗರುಡ ಶೇಷ ಕ ।**
**ಪರ್ದಿ ಮೊದಲಾದಮರರೆಲ್ಲರು ದಾಸರೆನಿಸುವರು ॥ ೧೮ ॥**

ವಾಯುದೇವರ ಮಾಹಾತ್ಮ್ಯ ಹೇಳತಾರೆ.

ಶುದ್ಧ–ಪರಿಶುದ್ಧವಾದ ಜ್ಞಾನ, ಭಕ್ತಿ, ವೈರಾಗ್ಯದಿಂದ ಸಹಿತರಾದ, ಅನವದ್ಯನು–ಅಜ್ಞಾನ, ಅಸುರಾವೇಶಾದಿ ದೋಷದೂರರಾದ, ಎನಿಸುವ–ಸರ್ವಜೀವೋತ್ತಮರೆಂದೆನಿಸ ತಕ್ಕ ಪ್ರಧಾನವಾಯುದೇವರ, ಲಿಂಗದೇಹವು – ಅನಾದಿ ಲಿಂಗಶರೀರವು, ದಗ್ಧಪಟ ದೋಪಾದಿ–ಸುಡಲ್ಪಟ್ಟ ಅರಿವಿಯೋಪಾದಿಯಲ್ಲಿ, ಅಕಾರ್ಯಕಾರಿಯಾಗಿ, ಇರುತಿಹುದು–ಇರೋದಾಗಿದೆ. ಶರೀರದೊಳು–ವಾಯುದೇವರ ಸ್ಥೂಲದೇಹದಲ್ಲಿಯಾದರೋ, ಸತ್ತ್ವಾತ್ಮಕ–ನೂರು ಅಂಶ ಸತ್ತ್ವ, ಒಂದಂಶ ರಜ, ಇದರಲ್ಲಿ ನೂರು ಅಂಶದೊಳಗೆ ಒಂದು ಅಂಶ ತಮ, ಈ ಪ್ರಕಾರ ಸತ್ತ್ವಪ್ರಾಚುರ್ಯ ಉಳ್ಳದ್ದು ವಾಯುದೇವರ ಸ್ಥೂಲ ಶರೀರ. ಇದ್ದ ಕಾಲಕು–ಲಿಂಗದೇಹದಲ್ಲಿ ಅಣುಸ್ವರೂಪದಿಂದಲೂ, ತಮ್ಮ ಸ್ಥೂಲಶರೀರದಲ್ಲಿ ಪ್ರಕಾಶತೋ ವ್ಯಾಪ್ತಿರೂಪದಿಂದಲೂ, ಈ ಪ್ರಕಾರ ಉಭಯಶರೀರದಲ್ಲಿ ಇದ್ದ ಕಾಲಕ್ಕೂ, ಬದ್ಧವಾಗದು–ಇವರ ಜ್ಞಾನಾನಂದಾದಿಗಳು ತಿರೋಧಾನವಾಗವು, ಸಿದ್ಧ–ನಿಶ್ಚಯವು. ಸರ್ವರೊಳಗೆ–ತ್ರಿವಿಧಜೀವರೊಳಗೆ, ಸಾಧನ – ಹಂಸ ಮಂತ್ರ ಜಪಿಸೋಣದರಿಂದಲೂ, ದೇಹೇಂದ್ರಿಯಾದಿಗಳಿಗೆ ನಿಯಾಮಕರಾಗಿನ್ನೂ ಸಾಧನಾ ಮಾಡತಾ, ಆಯಾ ಪ್ರಾಣಿ ಗಳಿಂದ ಸಾಧನ ಮಾಡಿಸುತ್ತಾ ಇರತಕ್ಕ ಈ ವಾಯುದೇವರಿಗೆ, ಗರುಡ–ಗರುಡದೇವರು, ಶೇಷ–ಶೇಷದೇವರು, ಕಪರ್ದಿ–ರುದ್ರದೇವರು, ಮೊದಲಾದ–ಇವರೇ ಮೊದಲಾದ, ಅಮರರೆಲ್ಲರು–ದೇವತೆಗಳೆಲ್ಲರು, ದಾಸರೆನಿಸುವರು–ಭೃತ್ಯರೆನಿಸುವರು.

**ಗಣದೊಳಗೆ ತಾನಿದ್ದು ಋಜುವೆಂ ।**
**ದೆನಿಸಿಕೊಂಬನು ಕಲ್ಪ ಶತ ಸಾ ।**
**ಧನವ ಗೈದಾನಂತರದಿ ತಾ ಕಲ್ಕಿಯೆನಿಸುವನು ॥**
**ದ್ವಿನವಶೀತಿಯ ಪ್ರಾಂತಭಾಗದಿ ।**
**ಅನಿಲ ಹನುಮದ್ಭೀಮ ರೂಪದಿ ।**
**ದನುಜರೆಲ್ಲರ ಸದೆದು ಮಧ್ವಾಚಾರ್ಯನೆನಿಸಿದನು ॥ ೧೯ ॥**

ವಾಯುದೇವರ ಮಾಹಾತ್ಮ್ಯ ಹೇಳತಾರೆ.

ಗಣದೊಳಗೆ ತಾನಿದ್ದು–ಈ ವಾಯುದೇವರು ಇನ್ನೂರು ಮಂದಿ ಋಜುಗಣದೊಳಗೆ ತಾವು ಇದ್ದು, ಋಜುವೆಂದೆನಿಸಿಕೊಂಬನು–ಋಜು ಎಂಬ ನಾಮದಿಂದ ಯುಕ್ತರಾಗು

ತ್ತಾರೆ. ಈ ವಾಯುದೇವರು, ಒಬ್ಬ ಬ್ರಹ್ಮದೇವರು ಮುಕ್ತರಾಗೋಣವೇ ಋಜುರಾಶಿ ಯಿಂದ ಸೃಷ್ಟರಾಗುತ್ತಾರೆ. ಹೀಂಗೆ ಆದಿಯಲ್ಲಿ ಸೃಷ್ಟರಾದವರು ಈ ವಾಯುದೇವರು. ಆಗ್ಗೆ ವಾಯುಶಬ್ದವಾಚ್ಯರಾಗದೆ ಋಜುಗಳಿಂದು ಕರಿಸೋವರಾದರು. ಕಲ್ಪಶತ–ರಾಶಿ ಯಿಂದ ತೆಗೆದು ಸೃಷ್ಟಿಗೆ ಬಂದಾರಭ್ಯ ಬ್ರಹ್ಮಕಲ್ಪಗಳು ನೂರು, ಸಾಧನವ ಗೈದಾನಂತರದಿ– ಸಾಧನಮಾಡಿದ ಅನಂತರದಲ್ಲಿ ಈ ವಾಯುದೇವರು, ತಾ ಕಲ್ಕಿಯೆನಿಸುವನು–ನೂರಾ ಒಂದನೇ ಬ್ರಹ್ಮಕಲ್ಪದಲ್ಲಿ ಕಲ್ಕಿ ಎಂತ ಅನಿಸೋವರಾದರು. ನೂರಒಂದನೇ ಕಲ್ಪದಾರಭ್ಯ ನೂರು ಬ್ರಹ್ಮಕಲ್ಪ ಮತ್ತೂ ಸಾಧನ ಮಾಡಬೇಕು. ಕಲ್ಕಿ ಎಂತ ನಾಮದಿಂದ ಇದ್ದು ಸಾಧನಮಾಡುತ್ತಾ ಬಂದು, ದ್ವಿನವ–ಹದಿನೆಂಟು, ಅಶೀತಿಯ–ಎಂಭತ್ತು, ಅಂತು ತೊಂಭತ್ತೆಂಟು (೯೮), ಪ್ರಾಂತ–ತೊಂಭತ್ತೆಂಟು ಬ್ರಹ್ಮಕಲ್ಪ ಛಂದಾಗಿ ಅಂತ್ಯವಾಗಿ, ಭಾಗದಿ–೯೯ನೇ ಬ್ರಹ್ಮಕಲ್ಪದ ಭಾಗವಿಶೇಷವಾದ ಕಾಲದಲ್ಲಿ, ಅನಿಲ–ವಾಯುವೆಂತ ನಾಮಾಂಕಿತರಾಗಿ, ಹನುಮದ್ಭೀಮ–ಹನುಮ ಎಂತಲೂ, ಭೀಮ ಎಂತಲೂ, ಅವತಾರ ಮಾಡಿ, ರೂಪದಿ–ಈ ಎರಡು ರೂಪದಿಂದ, ದನುಜರೆಲ್ಲರ ಸದೆದು–ಬಲಕಾರ್ಯ ಪ್ರದರ್ಶನ ಮಾಡಿ, ಭಗವದ್ದ್ವೇಷಿಗಳು ಮತ್ತು ಪರಮಾತ್ಮನ ಭಕ್ತರ ದ್ವೇಷಿಗಳಾದ ರಾಕ್ಷಸರ ಸಂಹರಿಸಿ, ಮಧ್ವಾಚಾರ್ಯನೆನಿಸಿದನು–(ಈ ರಾಕ್ಷಸರು ಬ್ರಾಹ್ಮಣರಾಗಿ ಜನಿಸಿದರು. ಇವರುಗಳು ಸಚ್ಛಾಸ್ತ್ರಕ್ಕೆ ವಿರುದ್ಧವಾದ ಅರ್ಥಮಾಡಿರಲಾಗಿ, ಆಗ್ಗೆ), ಮಧ್ವಾಚಾರ್ಯ ರಾಗಿ ಅವತಾರಮಾಡಿ ವಾಗ್ಯುದ್ಧದಿಂದ ಮಾಯಾವಾದಿಗಳನ್ನು ಗೆಲಿದು, ಈ ಪ್ರಕಾರ ವಾಯುದೇವರು ಅವತಾರತ್ರಯಗಳಿಂದ ಸಾಧನಮಾಡೋವರಾದರು.

ಪ್ರಮಾಣ :–

ಮಣಿಮತ್ಪೂರ್ವಕಾ ದುಷ್ಟಾ ದೈತ್ಯಾ ಆಸನ್ ಕಲೌ ಯುಗೇ |
ತೇ ಕುಶಾಸ್ತ್ರಂ ಪ್ರವರ್ತಂತೇ ಹರಿವಾಯುವಿರೋಧಿನಃ |
ಏವಂ ತಮಸಿ ಸಂಪ್ರಾಪ್ತೇ ಬ್ರಹ್ಮರುದ್ರಾದಯಸ್ತದಾ |
ಶರಣ್ಯಂ ಶರಣಂ ಜಗ್ಮುಃ ವಾಸುದೇವಮನಾಮಯಂ |
ತಸ್ಯಾಜ್ಞಯಾ ಮಹಾಬಾಹುಃ ವಾಯುಃ ಸರ್ವಸುರೋತ್ತಮಃ |
ರೌಪ್ಯಪೀಠೇ ಮಧ್ಯಗೇಹೇ ನಿರ್ವಿಕಾರೋಪ್ಯಜಾಯತ |
ತೃತೀಯಮಸ್ಯ ಋಷಭ ಮಧ್ವೋ ವೋ ನಾಮ ಮಾರುತಃ |
ತದಸ್ಯ ಪ್ರಿಯಮಿತ್ಯಾದೌ ವೇದೇ ಮಧ್ವಃ ಪ್ರಕೀರ್ತಿತಃ ||

ಇತಿ ಸ್ಕಾಂದಪುರಾಣವಚನ.

**ವಿಶ್ವವ್ಯಾಪಕ ಹರಿಗೆ ತಾ ಸಾ |**
**ದೃಶ್ಯರೂಪವ ಧರಿಸಿ ಬ್ರಹ್ಮ ಸ |**
**ರಸ್ವತೀ ಭಾರತಿಗಳಿಂದೊಡಗೂಡಿ ಪವಮಾನ ||**

**ಶಾಶ್ವತ ಸುಭಕ್ತಿಯಲಿ ಸುಜ್ಞಾ ।**
**ನ ಸ್ವರೂಪನ ರೂಪಗುಣಗಳ ।**
**ನಶ್ವರವು ಎಂದೆನುತ ಪೇಳುವ ಶ್ರುತಿಗಳೊಳಗಿದ್ದು ॥ ೨೦ ॥**

ವಾಯುದೇವರ ಮಾಹಾತ್ಮ್ಯ ಹೇಳತಾರೆ.

ವಿಶ್ವ–ನವಾವರಣಸಹಿತವಾದ ಚರಾಚರ ಜಗತ್ತು, ಇದರಲ್ಲಿ, ಹರಿಗೆ–ಹರಿನಾಮಕ ಪರಮಾತ್ಮ ತದಾಕಾರ, ಅಖಂಡಾಕಾರದಿಂದ, ವ್ಯಾಪಕ–ವ್ಯಾಪ್ತನಾಗಿದ್ದಾನೆ. ಈ ಪ್ರಕಾರ ವ್ಯಾಪಿಸಿರುವ ಹರಿಗೆ, ತಾ–ವಾಯುದೇವರಾದ ತಾವು, ಭಾರತಿ–ತಮ್ಮ ಸತಿಯಾದ ಭಾರತೀದೇವೇರು, ಬ್ರಹ್ಮ–ಬ್ರಹ್ಮದೇವರು, ಸರಸ್ವತೀಗಳಿಂದ–ಸರಸ್ವತೀ ದೇವೇರು, ಇವರುಗಳಿಂದ, ಒಡಗೂಡಿ–ಈ ಮೂರುಮಂದಿ ಸಂಗಾತ, ತಮ್ಮ ಸಹ ನಾಲ್ಕುಮಂದಿ, ಸಾದೃಶ್ಯರೂಪವಧರಿಸಿ–ಹರಿನಾಮಕ ಪರಮಾತ್ಮ, ಪೂರ್ವೋಕ್ತ ಪ್ರಕಾರ ವಿರಾಟ್‌ರೂಪ ಧರಿಸಿದಮೇರೆಗೆ ತಾವೂನೂ ತತ್‌ಸದೃಶ ವಿರಾಟ್‌ರೂಪ ಧರಿಸಿ, ಇಂಥಾ ಮಹಿಮೋಪೇತರಾದ, ಪವಮಾನ–ಈ ವಾಯುದೇವರು, ಮಧ್ವಾಚಾರ್ಯರಾಗಿ ಅವತಾರಮಾಡಿ, ಇದ್ದು–ಭರತಖಂಡದಲ್ಲಿ ಯತ್ಯಾಶ್ರಮ ಧರಿಸಿದವರಾಗಿ, ಸುಭಕ್ತಿಯಲಿ–ಸಮೀಚೀನವಾದ, ಭಕ್ತಿಯಿಂದ, ಶಾಶ್ವತ–ಅನಾದ್ಯನಂತಕಾಲಕ್ಕೂ ಶಾಶ್ವತನಾದ, ಒಬ್ಬ ನಾದ, ಪರಾಧೀನನಲ್ಲದ, ಸುಜ್ಞಾನಸ್ವರೂಪನ–ಜ್ಞಾನವೇ ಸ್ವರೂಪನಾದ ಪರಮಾತ್ಮನ, ರೂಪಗುಣಗಳ–ರೂಪವೇನು, ಅವನ ಗುಣಗಳೇನು, ನಶ್ವರವು ಎಂದೆನುತ–ಶಾಶ್ವತವಲ್ಲ ವೆಂತಲೂ, ಉತ್ಪತ್ತಿ ಮರಣಾದಿಗಳಿಂದ ಯುಕ್ತನೆಂತಲೂ ಹೇಳತಕ್ಕ ಪ್ರತ್ಯಕ್ಷಾನುಮಾನ ಗಳಿಗೆ ವಿರುದ್ಧವಾಗಿ, ಶಾಸ್ತ್ರವಾಗಿ, ಪೇಳುವ–ಹೇಳತಕ್ಕ ಮಾಯಾವಾದಿ ಶಾಸ್ತ್ರವನ್ನ, ಶ್ರುತಿಗಳೊಳಗಿದ್ದು–ಖಂಡಿಸಿ, ಸತ್ಯವಾದ ಅರ್ಥವನ್ನು ವೇದಶ್ರುತಿಗಳಿಂದ ಸ್ಥಾಪನಾ ಮಾಡಿ, ಇಂಥಾ ಸತ್ಯವಾದ ಶಾಸ್ತ್ರಗಳಿಗೆ ಅಭಿಮಾನಿಗಳಾಗಿ ಇದ್ದಾರೆಂತ ತಾತ್ಪರ್ಯ.

ಪ್ರಮಾಣ :–ನಶ್ವರವು ಎಂದು ಪೇಳುವ ಎಂದರೆ

ಆನಂದಮಾತ್ರಮಜರಂ ಪುರಾಣಂ । ಆದಿತ್ಯವರ್ಣಂ ತಮಸಸ್ತು ಪಾರೇ ॥ ಏಕಂ ಸಂತಂ ಬಹುಧಾ ಕಲ್ಪಯಂತಿ । ನೈವೇತೇ ಜಾಯಂತೇ ನ ಮ್ರಿಯಂತೇ ಅಜರಾ ಅಮೃತಾ ಅಶೋಕಾ ॥ ಇತ್ಯಾದ್ಯನೇಕ ಶ್ರುತಿಗಳಿಂದ ದೇವರ ಗುಣಗಳಿಗೆ ನಿತ್ಯತ್ವ ಸಾಧಿಸುತ್ತಾರೆ.

**ಖೇಟ ಕುಕ್ಕುಟ ಜಲಟವೆಂಬ ತ್ರಿ ।**
**ಕೋಟಿರೂಪವ ಧರಿಸಿ ಸತತ ನಿ ।**
**ಶಾಟರನ ಸಂಹರಿಸಿ ಸಲಹುವ ಸರ್ವಸಜ್ಜನರ ॥**
**ಕೈಟಭಾರಿಯಪುರದ ಪ್ರಥಮಕ ।**
**ವಾಟನೆನಿಸುವ ಗರುಡ ಶೇಷ ಲ ।**
**ಲಾಟಲೋಚನಮುಖ್ಯ ಸುರರಿಗೆ ಆವಕಾಲದಲಿ ॥ ೨೧ ॥**

ವಾಯುದೇವರ ಮಾಹಾತ್ಮ್ಯ ಹೇಳತಾರೆ.

ಖೇಟ–ಆಕಾಶದಲ್ಲಿ ಸಂಚರಿಸತಕ್ಕ ಪಕ್ಷಿಗಳು (೧,೦೦,೦೦,೦೦೦), ಕುಕ್ಕುಟ–ಭೂಮಿಯಲ್ಲಿ ಸಂಚರಿಸತಕ್ಕ ಮಾನುಷಾದಿ ರೂಪಗಳು (೧,೦೦,೦೦,೦೦೦), ಜಲಟವು–ಜಲದಲ್ಲಿ ಸಂಚರಿಸತಕ್ಕ ಜಲಚರ ರೂಪಗಳು (೧,೦೦,೦೦,೦೦೦), ಎಂಬ ತ್ರಿಕೋಟಿ ರೂಪವ ಧರಿಸಿ–ಅಂತು ಮೂರುಕೋಟಿ ರೂಪಗಳ ಧರಿಸಿ ತ್ರಿವಿಕ್ರಮದೇವರ ಪೂಜಿಸಿದಂಥ ಮತ್ತು ತ್ರಿಕೋಟಿ ರೂಪದಿಂದ ಅಂಡದ ಹೊರಗಿದ್ದು ಅಂಡಖರ್ಪರ ರಕ್ಷಿಸುವಂಥಾ, ಸತತ–ನಿರಂತರ ಹರಿಯಲ್ಲಿ, ಅವರ ಭಕ್ತಿಯಲ್ಲಿ ದ್ವೇಷಮಾಡತಕ್ಕ, ನಿಶಾಟರನ–ನಿಶಿ ಸಂಚಾರಿಗಳಾದ ಅಸುರರನ್ನ, ಸಂಹರಿಸಿ–ಬ್ರಹ್ಮನ ಪ್ರತಿ ದಿನ ಕಲ್ಪದಲ್ಲೂ, ಹನುಮಾದ್ಯವ ತಾರಗಳ ಮಾಡಿ ಅಸುರರನ್ನ ಸಂಹರಿಸಿ, ಸರ್ವಸಜ್ಜನರ–ಈ ಅಸುರರು ಬ್ರಾಹ್ಮಣರಾಗಿ ಅವತಾರಮಾಡಿದಾಗ, ವಾಗ್ಬಾಣಗಳಿಂದ ಯುದ್ಧಮಾಡಿ, ಅವರನ್ನ ಪರಾಜಯಮಾಡಿ, ಸಚ್ಛಾಸ್ತ್ರ ಸ್ಥಾಪನಮಾಡಿ, ಸಮಸ್ತರಾದ ಸಜ್ಜನರನ್ನ, ಸಲಹುವ–ಸಂರಕ್ಷಣ ಮಾಡತಕ್ಕ ಈ ವಾಯುದೇವರು, ಕೈಟಭಾರಿಯ–ಕೈಟಭಾರಿಯೆಂಬ ಪರಮಾತ್ಮನ, ಪುರದ–ವೈಕುಂಠ ಪುರಕ್ಕೆ, ಪ್ರಥಮ ಕವಾಟನೆನಿಸುವ–ಮುಖ್ಯವಾದ ಪ್ರಥಮಬಾಗಿಲು ಎಂತ ಕರಿಸುತ್ತಾರೆ. ಇಂಥಾ ಪ್ರಥಮ ಕವಾಟಸಾಂಕೇತರಾದ ವಾಯುದೇವರ ಬಿಟ್ಟು, ಇರತಕ್ಕವರಿಗೆ, ಭಗವದಪರೋಕ್ಷವೂ, ವೈಕುಂಠ ಪ್ರವೇಶವೂ ಇಲ್ಲ. ಗರುಡ–ಗರುಡದೇವರು, ಶೇಷ–ಶೇಷದೇವರು, ಲಲಾಟಲೋಚನ–ರುದ್ರದೇವರು, ಇವರುಗಳೇ, ಮುಖ್ಯ ಸುರರಿಗೆ–ಮೊದಲಾದ ದೇವತೆಗಳಿಗೆ, ಆವಕಾಲದಲಿ–ಸರ್ವಕಾಲದಲ್ಲಿ ಪ್ರಥಮ ಕವಾಟವೆಂದರೆ, ರುದ್ರಾದಿಗಳಿಗೆ ಭಾರತೀರಮಣಮುಖ್ಯಪ್ರಾಣಾಂತರ್ಗತ ಪರಮಾತ್ಮನ ಉಪಾಸನ. ತದವರರಾದ ಇಂದ್ರಾದಿಗಳಿಗೆ, ರುದ್ರಾದಿಗಳೆಂಬೋ ಕವಾಟ ಒಂದು, ವಾಯುಕವಾಟ ಒಂದು. ತದವರರಿಗೆ ಮೂರು ಕವಾಟವಾದ ಗೋಳಕಗಳ ಚಿಂತನ, ಕೊನಿಗೆ ಭಾರತೀರಮಣಮುಖ್ಯಪ್ರಾಣಗೋಳಕ ಚಿಂತಿಸಿ, ಈ ವಾಯುಗೋಳಕಾಂತರ್ಗತ, ಭಗವದುಪಾಸನವೇ ಯುಕ್ತ. ತದನ್ಯಚಿಂತನದಿಂದ ಭಗವದಪರೋಕ್ಷ ಆಗೋದಿಲ್ಲ. ಮತ್ತು ಅಧಿಕಾರಿದೇಹವೇ ಇದರಲ್ಲಿ ಪ್ರಥಮ ಕವಾಟ, ಈ ಪ್ರಕಾರ ಚಿಂತನೆ ಮಾಡಬೇಕು.

**ಈ ಋಜುಗಳೊಳಗೊಬ್ಬ ಸಾಧನ ।**
**ನೂರು ಕಲ್ಪದಿ ಮಾಡಿ ಕರೆಸುವ ।**
**ಚಾರುತರ ಮಂಗಳಸುನಾಮದಿ ಕಲ್ಪಕಲ್ಪದಲಿ ॥**
**ಸೂರಿಗಳು ಸಂತುತಿಸಿ ವಂದಿಸೆ ।**
**ಘೋರದುರಿತಗಳಳಿದು ಪೋಪುವು ।**
**ಮಾರಮಣ ಸಂಪ್ರೀತನಾಗುವ ಸರ್ವಕಾಲದಲಿ ॥ ೨೨ ॥**

ಋಜುಗಳ ನಾಮಸ್ಮರಣ ಮಾಡಬೇಕೆಂತ ಹೇಳತಾರೆ.

ಈ ಋಜುಗಳೊಳಗೆ– ಇನ್ನೂರು ಮಂದಿ ಋಜುಗಳೊಳಗೆ ಅಸೃಜ್ಯರಾಶಿಯಿಂದ ಅದೇ ಬ್ರಹ್ಮಕಲ್ಪದಲ್ಲಿ ಸೃಷ್ಟಿಗೆ ತಂದ, ಒಬ್ಬ–ಒಬ್ಬನಾದ ಋಜು, ಸಾಧನ–ಸೃಷ್ಟಿಗೆ ಬಂದಾರಭ್ಯ ಸಾಧನಕ್ಕೆ ಆರಂಭಿಸಿ, ನೂರು ಕಲ್ಪದಿ–ನೂರು ಬ್ರಹ್ಮಕಲ್ಪ ತನಗೆ ಯೋಗ್ಯವಾದ ಸಾಧನೆಯ, ಮಾಡಿ–ಮಾಡಿದವನಾಗಿ, ಕಲ್ಪಕಲ್ಪದಲಿ–ಸಾಧನ ಮಾಡಿದ ನೂರು ಬ್ರಹ್ಮಕಲ್ಪದೊಳಗೆ, ಪ್ರತಿ ಪ್ರತೀ ಬ್ರಹ್ಮಕಲ್ಪದಲ್ಲೂ ಒಂದೊಂದು ಬ್ರಹ್ಮಕಲ್ಪಕ್ಕೆ, ಚಾರುತರ–ಮನೋಹರಕರವಾದ, ಮಂಗಳ–ಮಂಗಳಕರವಾದ, ಸುನಾಮದಿ–ಸಮೀಚೀನವಾದ ನಾಮದಿಂದ, ಕರೆಸುವ–ಒಬ್ಬ ಋಜುವೇ ನೂರು ಬ್ರಹ್ಮಕಲ್ಪಗಳಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ನೂರು ನಾಮದಿಂದ ಕರಿಸುವನು. ಒಬ್ಬ ಋಜುಗೆ ಒಂದು ಬ್ರಹ್ಮಕಲ್ಪವೆಂಬುದು ಒಂದು ಜನ್ಮಸಾಂಕೇತವು. ಸೂರಿಗಳು–ಜ್ಞಾನಿಗಳು, ಸಂತುತಿಸಿ ನಂದಿಸೆ– ಈ ನೂರು ನಾಮುವ ಉಚ್ಚಾರಮಾಡುತ್ತಾ ಋಜುಗಳ ಮಾಹಾತ್ಮ್ಯವನ್ನ ಛಂದಾಗಿ ಸ್ತೋತ್ರಮಾಡಿ ವಂದನಮಾಡಿದರೆ, ಘೋರದುರಿತಗಳು–ಪ್ರಾಯಶ್ಚಿತ್ತಕ್ಕೆ ಪರಿಹಾರವಲ್ಲದ ಘೋರವಾದ ಪಾಪಗಳು, ಅಳಿದು ಪೋಪುವು–ನಾಶವಾಗಿ ಹೋಗೋವಾಗತವೆ. ಮಾರಮಣ–ಲಕ್ಷ್ಮೀಪತಿಯಾದ ಶ್ರೀ ಪರಮಾತ್ಮ, ಸಂಪ್ರೀತನಾಗುವ–ಈ ಋಜುಗಳ ಸ್ತೋತ್ರದಿಂದ ಛಂದಾಗಿ ಪ್ರೀತನಾಗುವ. ಆದ್ದರಿಂದ, ಸರ್ವಕಾಲದಲಿ–ಸರ್ವದಾ ಋಜುಗಳನ್ನ ಭಜಿಸಬೇಕು.

**ಪಾಹಿ ಕಲ್ಕಿ ಸುತೇಜದಾಸನೆ ।**
**ಪಾಹಿ ಧರ್ಮಾಧರ್ಮಖಂಡನೆ ।**
**ಪಾಹಿ ವರ್ಚಸ್ವೀ ಋಷಣ ನಮೋ ಸಾಧು ಮಹಿಪತಿಯೆ ॥**
**ಪಾಹಿ ಸದ್ಧರ್ಮಜ್ಞ ಧರ್ಮಜ ।**
**ಪಾಹಿ ಸಂಪೂರ್ಣ ಶುಚಿ ವೈಕೃತ ।**
**ಪಾಹಿ ಅಂಜನ ಸರ್ಷಪನೆ ಖರ್ಪಟ ಶ್ರದ್ಧಾಢ್ಯ ॥ ೨೩ ॥**

ಋಜುಗಳ ಹೆಸರು ಹೇಳತಾರೆ.

ಪಾಹಿ ಕಲ್ಕಿ–ಒಬ್ಬ ಋಜು ನೂರು ಕಲ್ಪಸಾಧನಮಾಡಿ, ಅನಂತರ ನೂರಾಒಂದನೇ ಕಲ್ಪದಲ್ಲಿ ಕಲ್ಕಿ ಎಂತ ಕರಿಸುತ್ತಾನೆ. ಇದೇ ಪ್ರಕಾರ ಇಲ್ಲಿಂದ ಮುಂದೆ ಬ್ರಹ್ಮಪದವಾದ ನೂರು ಕಲ್ಪದವರಿಗೂ ನೂರು ನಾಮುಗಳಿಂದ ಒಬ್ಬ ಋಜು ಕರಿಸುತ್ತಾನೆ. ಮತ್ತು ನೂರು ಕಲ್ಪ ಸಾಧನಿ ಆದ ಋಜುಗಳು ನೂರುಮಂದಿ ಇದ್ದಾರೆ. ಆ ನೂರುಮಂದಿಗೂ ಇದೇ ನಾಮ. ವರ್ತಮಾನ ಲಾತವ್ಯ ಸಾಂಕೇತ ಋಜುಸಹಿತ, ನೂರುಮಂದಿ ಎಂತ ತಾತ್ಪರ್ಯ. ಕಲ್ಕಿ ಎಂಬುವನೇ ಸಂರಕ್ಷಣಮಾಡು. ಸುತೇಜ–ಸುತೇಜ ಎಂಬ, ದಾಸನೇ ಪಾಹಿ–ದಾಸ ಎಂಬವನೇ ರಕ್ಷಿಸು, ಧರ್ಮ–ಧರ್ಮ ಎಂಬವನೇ, ಅಧರ್ಮಖಂಡನೆ– ಅಧರ್ಮಖಂಡನ ಎಂಬವನೇ, ಪಾಹಿ ವರ್ಚಸ್ವಿ–ವರ್ಚಸ್ವಿ ನಾಮಕನೇ ಸಂರಕ್ಷಿಸು, ಋಷಣ ನಮೋ–ಋಷಣನಾಮಕನೇ ನಮಸ್ಕಾರ, ಸಾಧು–ಸಾಧುವೆಂಬುವನೇ, ಮಹಿ

ಪತಿಯೆ – ಮಹೀಪತಿ ಎಂಬುವನೇ, ಪಾಹಿ ಸದ್ಧರ್ಮಜ್ಞ–ಸದ್ಧರ್ಮಜ್ಞ ಎಂಬುವನೆ ಸಂರಕ್ಷಿಸು. ಧರ್ಮಜ–ಧರ್ಮಜ ಎಂಬುವನೇ, ಪಾಹಿ ಸಂಪೂರ್ಣ–ಸಂಪೂರ್ಣ ಎಂಬುವನೇ ಸಂರಕ್ಷಿಸು, ಶುಚಿ–ಶುಚಿ ಎಂಬುವನೇ, ವೈಕೃತ ಪಾಹಿ–ವೈಕೃತ ಎಂಬುವನೇ ರಕ್ಷಿಸು, ಅಂಜನ–ಅಂಜನ ಎಂಬುವನೇ, ಸರ್ಷಪನೇ–ಸರ್ಷಪ ಎಂಬುವನೇ, ಖರ್ಪಟ–ಖರ್ಪಟ ಎಂಬುವನೇ, ಶ್ರದ್ಧಾಹ್ವ–ಶ್ರದ್ಧಾ ಎಂಬುವನೇ ರಕ್ಷಿಸು.

**ಪಾಹಿ ಸಂಧ್ಯಾತ ವಿಜ್ಞಾನನೆ ।**
**ಪಾಹಿ ಮಹವಿಜ್ಞಾನ ಕೀರ್ತನ ।**
**ಪಾಹಿ ಸಂಕೀರ್ಣಾಖ್ಯ ಕತ್ಥನೆ ಮಹಾಬುದ್ಧ ಜಯಾ ॥**
**ಪಾಹಿ ಸುಮಹತ್ತರ ಸುವೀರ್ಯನೆ ।**
**ಪಾಹಿ ಮಾಂ ಮೇಧಾವಿ ವಿಜಯ ಜಯ ।**
**ಪಾಹಿ ಮಾಂ ರಂತಿಮ್ನ ಮನು ಮಾಂ ಪಾಹಿ ಮಾಂ ಪಾಹಿ ॥ ೨೪ ॥**

ಇನ್ನೂ ಋಜುಗಳ ನಾಮವನ್ನೇ ಹೇಳತಾರೆ.

ಪಾಹಿ ಸಂಧ್ಯಾತ–ಸಂಧ್ಯಾತನಾಮಕನೇ ನನ್ನ ರಕ್ಷಿಸು, ವಿಜ್ಞಾನನೆ ಪಾಹಿ–ವಿಜ್ಞಾನನಾಮಕನೇ ಸಂರಕ್ಷಿಸು. ಮಹವಿಜ್ಞಾನ–ಮಹವಿಜ್ಞಾನ ಎಂಬುವನೇ, ಕೀರ್ತನ–ಕೀರ್ತನ ಎಂಬುವನೇ, ಪಾಹಿ ಸಂಕೀರ್ಣಾಖ್ಯ–ಸಂಕೀರ್ಣ ಎಂಬುವನೇ ಸಂರಕ್ಷಣ ಮಾಡು. ಕತ್ಥನೆ–ಕತ್ಥನಾಮಕನೆ, ಮಹಾಬುದ್ಧ–ಮಹಾಬುದ್ಧನೆಂಬುವನೇ, ಜಯಾ ಪಾಹಿ–ಜಯಾನಾಮಕನೇ ಸಂರಕ್ಷಣಮಾಡು. ಸುಮಹತ್ತರ–ಸುಮಹತ್ತರನಾಮಕನೇ, ಸುವೀರ್ಯನೆ ಮಾಂ ಪಾಹಿ–ಸುವೀರ್ಯ ಎಂಬುವನೇ, ನನ್ನ ರಕ್ಷಿಸು. ಮೇಧಾವಿ–ಮೇಧಾವಿನಾಮಕನೇ, ವಿಜಯ–ವಿಜಯನಾಮಕನೇ, ಜಯ ಪಾಹಿ ಮಾಂ–ಜಯ ಎಂಬುವನೇ ನನ್ನ ರಕ್ಷಿಸು. ರಂತಿಮ್ನ–ರಂತಿಮ್ನನಾಮಕನೇ, ಮನು ಮಾಂ ಪಾಹಿ–ಮನುನಾಮಕನೇ ನನ್ನ ರಕ್ಷಿಸು. ಮಾಂ ಪಾಹಿ–ಪೂರ್ವೋಕ್ತ ಋಜುಗಳು ನಮ್ಮನ್ನ ರಕ್ಷಣಮಾಡಲಿ ಎಂತ ತಾತ್ಪರ್ಯ.

**ಪಾಹಿ ಮೋದ ಪ್ರಮೋದ ಸಂತಸ ।**
**ಪಾಹಿ ಆನಂದ ಸಂತುಷ್ಟನೆ ।**
**ಪಾಹಿ ಮಾಂ ಚಾರ್ವಾಂಗ ಚಾರು ಸುಬಾಹು ಚಾರುಪದ ॥**
**ಪಾಹಿ ಪಾಹಿ ಸುಲೋಚನನೆ ಮಾಂ ।**
**ಪಾಹಿ ಸಾರಸ್ವತ ಸುವೀರನೆ ।**
**ಪಾಹಿ ಪ್ರಾಜ್ಞನೆ ಕಪಿಯಲಂಪಟ ಪಾಹಿ ಸರ್ವಜ್ಞ ॥ ೨೫ ॥**

ಋಜುಗಳ ನಾಮಗಳೇ ಹೇಳತಾರೆ.

ಪಾಹಿ ಮೋದ–ಮೋದನಾಮಕನೇ ಸಂರಕ್ಷಣೆ ಮಾಡು. ಪ್ರಮೋದ–ಪ್ರಮೋದ ನಾಮಕನೇ, ಸಂತಸ ಪಾಹಿ–ಸಂತಸ ಎಂಬವನೇ ಸಂರಕ್ಷಣೆ ಮಾಡು. ಆನಂದ–ಆನಂದ ನಾಮಕನೇ, ಸಂತುಷ್ಟನೆ ಪಾಹಿ–ಸಂತುಷ್ಟನೇ ನನ್ನ ಸಂರಕ್ಷಣ ಮಾಡು. ಚಾರ್ವಾಂಗ–ಚಾರ್ವಾಂಗನಾಮಕನೇ, ಚಾರು–ಚಾರು ಎಂಬವನೇ, ಸುಬಾಹು–ಸುಬಾಹು ಎಂಬ ವನೇ, ಚಾರುಪದ–ಚಾರುಪದ ಎಂಬವನೇ, ಪಾಹಿ ಪಾಹಿ ಸುಲೋಚನನೆ–ಸುಲೋಚನ ನೆಂಬುವನೇ ಸಂರಕ್ಷಣ ಮಾಡು, ಸಂರಕ್ಷಣ ಮಾಡು, ಮಾಂ ಪಾಹಿ ಸಾರಸ್ವತ–ಸಾರಸ್ವತ ಎಂಬುವನೇ, ನನ್ನ ಸಂರಕ್ಷಣ ಮಾಡು, ಸುವೀರನೆ–ಸುವೀರ ಎಂಬುವನೇ, ಪಾಹಿ ಪ್ರಾಜ್ಞನೆ–ಪ್ರಾಜ್ಞ ಎಂಬುವನೇ, ಕಪಿಯೆ–ಕಪಿನಾಮಕನೇ, ಅಲಂಪಟ–ಅಲಂಪಟ ಎಂಬುವನೇ, ಪಾಹಿ ಸರ್ವಜ್ಞ–ಸರ್ವಜ್ಞ ಎಂಬುವನೇ, ಸಂರಕ್ಷಣ ಮಾಡು.

**ಪಾಹಿ ಮಾಂ ಸರ್ವಜಿತ್ ಮಿತ್ರನೆ ।**
**ಪಾಹಿ ಪಾಪವಿನಾಶಕನೆ ಮಾಂ ।**
**ಪಾಹಿ ಧರ್ಮವಿನೇತ ಶಾರದ ಓಜ ಸುತಪಸ್ವೀ ॥**
**ಪಾಹಿ ಮಾಂ ತೇಜಸ್ವಿ ನಮೋ ಮಾಂ ।**
**ಪಾಹಿ ದಾನಸುಶೀಲ ನಮೋ ಮಾಂ ।**
**ಪಾಹಿ ಯಜ್ಞಸುಕರ್ತ ಯಜ್ವೀ ಯಾಗವರ್ತಕನೆ ॥ ೨೬ ॥**

ಋಜುಗಳ ನಾಮಗಳೇ ಹೇಳತಾರೆ.

ಪಾಹಿ ಮಾಂ ಸರ್ವಜಿತ್–ಸರ್ವಜಿತ್ ಎಂಬುವನೇ ನನ್ನ ರಕ್ಷಿಸು. ಮಿತ್ರನೆ–ಮಿತ್ರ ನೆಂಬುವನೇ, ಪಾಹಿ ಪಾಪವಿನಾಶಕನೆ – ಪಾಪವಿನಾಶಕನೆಂಬುವನೇ ರಕ್ಷಿಸು. ಮಾಂ ಪಾಹಿ ಧರ್ಮವಿನೇತ – ಧರ್ಮವಿನೇತನೆಂಬುವನೇ ನನ್ನ ಸಂರಕ್ಷಿಸು, ಶಾರದ–ಶಾರದ ನಾಮಕನೇ, ಓಜ–ಓಜನಾಮಕನೇ, ಸುತಪಸ್ವಿ–ಸುತಪಸ್ವಿ ಎಂಬುವನೇ, ಪಾಹಿ ಮಾಂ ತೇಜಸ್ವಿ ನಮೋ–ತೇಜಸ್ವಿ ಎಂಬುವನೇ, ನಮಃ, ನನ್ನ ಸಂರಕ್ಷಿಸು, ಮಾಂ ಪಾಹಿ ದಾನ ಸುಶೀಲ–ದಾನಸುಶೀಲ ಎಂಬುವನೇ, ನನ್ನ ರಕ್ಷಿಸು. ನಮೋ ಮಾಂ ಪಾಹಿ ಯಜ್ಞ ಸುಕರ್ತ–ಯಜ್ಞಸುಕರ್ತ ಎಂಬುವನೇ, ನಮಃ, ನನ್ನ ರಕ್ಷಿಸು, ಯಜ್ವೀ–ಯಜ್ವೀ ನಾಮಕನೇ, ಯಾಗವರ್ತಕನೇ–ಯಾಗವರ್ತಕನೆಂಬುವನೇ.

**ಪಾಹಿ ಪ್ರಾಣ ತ್ರಾಣ ಅಮರ್ಷಿ ।**
**ಪಾಹಿ ಮಾಂ ಉಪದೇಷ್ಟ ಮಾರಕ ।**
**ಪಾಹಿ ಕಾಲಕ್ರೀಡನ ಸುಕರ್ತಾ ಸುಕಾಲಜ್ಞ ॥**
**ಪಾಹಿ ಕಾಲಸುಸೂಚಕನೆ ಮಾಂ ।**
**ಪಾಹಿ ಕಲಿಸಂಹರ್ತ ಕಲಿ ಮಾಂ ।**
**ಪಾಹಿ ಕಾಲ ಶ್ಯಾಮರೇತ ಸದಾರತ ಸುಬಲನೆ ॥ ೨೭ ॥**

ಋಜುಗಳ ನಾಮ ಹೇಳತಾರೆ.

ಪಾಹಿ ಪ್ರಾಣ–ಪ್ರಾಣ ಎಂಬುವನೇ, ಸಂರಕ್ಷಣ ಮಾಡು, ತ್ರಾಣ–ತ್ರಾಣ ಎಂಬುವನೇ, ಅಮರ್ಷಿ–ಅಮರ್ಷಿ ಎಂಬುವನೇ, ಪಾಹಿ ಮಾಂ ಉಪದೇಷ್ಟ–ಉಪದೇಷ್ಟ ಎಂಬುವನೇ, ನನ್ನ ಸಂರಕ್ಷಿಸು. ಮಾರಕ–ಮಾರಕ ಎಂಬುವನೇ, ಪಾಹಿ ಕಾಲಕ್ರೀಡನ–ಕಾಲಕ್ರೀಡನ ಎಂಬುವನೇ ರಕ್ಷಿಸು. ಸುಕರ್ತ–ಸುಕರ್ತ ಎಂಬುವನೇ, ಸುಕಾಲಜ್ಞ–ಸುಕಾಲಜ್ಞ ಎಂಬುವನೇ, ಪಾಹಿ ಕಾಲಸುಸೂಚಕನೆ–ಕಾಲಸುಸೂಚಕ ಎಂಬುವನೇ ಸಂರಕ್ಷಿಸು, ಮಾಂ ಪಾಹಿ ಕಲಿಸಂಹರ್ತಾ – ಕಲಿಸಂಹರ್ತಾ ಎಂಬುವನೇ ನನ್ನ ರಕ್ಷಿಸು, ಕಲಿ ಮಾಂ ಪಾಹಿ–ಕಲಿನಾಮಕನೇ ನನ್ನ ರಕ್ಷಿಸು, ಕಾಲ–ಕಾಲ ಎಂಬುವನೇ, ಶ್ಯಾಮರೇತ–ಶ್ಯಾಮರೇತ ಎಂಬುವನೇ, ಸದಾರತ–ಸದಾರತ ಎಂಬುವನೇ, ಸುಬಲನೇ–ಸುಬಲ ಎಂಬುವನೇ, ನನ್ನ ರಕ್ಷಿಸು.

**ಪಾಹಿ ಪಾಹಿ ಸಹೋ ಸದಾಕಪಿ ।**
**ಪಾಹಿ ಗಮ್ಯ ಜ್ಞಾನ ದಶಕುಲ ।**
**ಪಾಹಿ ಮಾಂ ಶ್ರೋತವ್ಯ ನಮೋ ಸಂಕೀರ್ತಿತವ್ಯ ನಮೋ ॥**
**ಪಾಹಿ ಮಾಂ ಮಂತವ್ಯ ಕವ್ಯನೆ ।**
**ಪಾಹಿ ಮಾಂ ದ್ರಷ್ಟವ್ಯ ಸಖ್ಯನೆ ।**
**ಪಾಹಿ ಮಾಂ ಗಂತವ್ಯ ಕ್ರವ್ಯನೆ ಪಾಹಿ ಸ್ಮರ್ತವ್ಯ ॥ ೨೮ ॥**

ಋಜುಗಳ ನಾಮವೇ ಹೇಳತಾರೆ.

ಪಾಹಿ ಪಾಹಿ ಸಹೋ–ಸಹೋ ಎಂಬುವನೇ ರಕ್ಷಿಸು ರಕ್ಷಿಸು, ಸದಾಕಪಿ–ಸದಾಕಪಿ ಎಂಬುವನೆ, ಪಾಹಿ ಗಮ್ಯ–ಗಮ್ಯನಾಮಕನೇ ರಕ್ಷಿಸು, ಜ್ಞಾನ–ಜ್ಞಾನ ಎಂಬುವನೇ, ದಶಕುಲ ಮಾಂ ಪಾಹಿ–ದಶಕುಲನೆಂಬುವನೇ ನನ್ನ ರಕ್ಷಿಸು, ಶ್ರೋತವ್ಯ ನಮೋ–ಶ್ರೋತವ್ಯ ಎಂಬುವನೇ ನಮಸ್ಕಾರವು, ಸಂಕೀರ್ತಿತವ್ಯ ನಮೋ–ಸಂಕೀರ್ತಿತವ್ಯ ಎಂಬುವನೇ ನಮಸ್ಕಾರವು, ಪಾಹಿ ಮಾಂ ಮಂತವ್ಯ–ಮಂತವ್ಯನಾಮಕನೇ ನನ್ನ ರಕ್ಷಿಸು, ಕವ್ಯನೇ ಪಾಹಿ ಮಾಂ–ಕವ್ಯ ಎಂಬುವನೇ ಸಂರಕ್ಷಣಮಾಡು, ದ್ರಷ್ಟವ್ಯ–ದ್ರಷ್ಟವ್ಯನಾಮಕನೇ, ಸಖ್ಯನೇ–ಸಖ್ಯ ಎಂಬುವನೇ ನಮಸ್ಕಾರವು, ಪಾಹಿ ಮಾಂ ಗಂತವ್ಯ–ಗಂತವ್ಯ ನಾಮಕನೇ ನನ್ನ ರಕ್ಷಿಸು, ಕ್ರವ್ಯನೇ–ಕ್ರವ್ಯನಾಮಕನೇ, ಪಾಹಿ ಸ್ಮರ್ತವ್ಯ–ಸ್ಮರ್ತವ್ಯ ಎಂಬುವನೇ ಸಂರಕ್ಷಣಮಾಡು.

**ಪಾಹಿ ಸವ್ಯ ಸುಭವ್ಯ ನಮೋ ಮಾಂ ।**
**ಪಾಹಿ ಸ್ವರ್ಗವ್ಯ ನಮೋ ಭಾವ್ಯನೆ ।**
**ಪಾಹಿ ಮಾಂ ಜ್ಞಾತವ್ಯ ನಮೋ ವಕ್ತವ್ಯ ಗವ್ಯ ನಮೊ ॥**

**ಪಾಹಿ ಮಾಂ ಲಾತವ್ಯ ವಾಯುವೆ ।**
**ಪಾಹಿ ಬ್ರಹ್ಮ ಬ್ರಾಹ್ಮಣಪ್ರಿಯ ।**
**ಪಾಹಿ ಪಾಹಿ ಸರಸ್ವತೀಪತೆ ಜಗದ್ಗುರುವರ್ಯ ॥ ೨೯ ॥**

ಅವಶಿಷ್ಟ ಋಜುಗಳ ನಾಮ ಹೇಳತಾರೆ.

ಪಾಹಿ ಸವ್ಯ–ಸವ್ಯ ಎಂಬುವನೇ ರಕ್ಷಿಸು, ಸುಭವ್ಯ ನಮೋ–ಸುಭವ್ಯ ಎಂಬುವನೇ ನಮಸ್ಕಾರ, ಮಾಂ ಪಾಹಿ ಸ್ವರ್ಗವ್ಯ–ಸ್ವರ್ಗವ್ಯ ಎಂಬುವನೇ ನನ್ನ ಸಂರಕ್ಷಿಸು, ನಮೋ ಭಾವ್ಯನೇ–ಭಾವ್ಯ ಎಂಬುವನೇ ನಮಸ್ಕಾರ, ಪಾಹಿ ಮಾಂ ಜ್ಞಾತವ್ಯ–ಜ್ಞಾತವ್ಯ ಎಂಬುವನೇ ಸಂರಕ್ಷಣಮಾಡು, ನಮೋ ವಕ್ತವ್ಯ–ವಕ್ತವ್ಯ ಎಂಬುವನೇ ನಮಸ್ಕಾರವು, ಗವ್ಯ ನಮೋ–ಗವ್ಯ ಎಂಬುವನೇ ನಮಸ್ಕಾರವು, ಪಾಹಿ ಮಾಂ ಲಾತವ್ಯ–ಲಾತವ್ಯ ನಾಮಕನೇ ಸಂರಕ್ಷಿಸು, ವಾಯುವೆ–ವಾಯು ಎಂಬುವನೇ.

ಪ್ರಮಾಣ :–

ವಿಷ್ಣೋರ್ಭಕ್ತಿಂ ವರ್ಧಯತಿ ಭಕ್ತಾನಾಂ ಹೃದಿ ಸಂಸ್ಥಿತಃ ।
ಅತೋಽಸೌ ವಿಷ್ಣುಭಕ್ತಶ್ಚ ಕೀರ್ತಿತೋ ನಾತ್ರ ಸಂಶಯಃ ।
ಸರ್ವೇಷಾಂ ಚ ಹೃದಿ ಸ್ಥಿತ್ವಾ ಸ್ಮರತೇ ಸರ್ವದಾ ಹರಿಂ ॥
ಅತೋ ವಾಯುಃ ಸ್ಮೃತಿರ್ನಾಮ್ನಾ ಸ ಬಭೂವ ಖಗೇಶ್ವರ ।
ಸರ್ವೇಷಾಂ ಚ ಹೃದಿ ಸ್ಥಿತ್ವಾ ಜ್ಞಾನಂ ವಿಷ್ಣೋರುದೀರಣಾತ್ ।
ಅತೋ ಮೇಧೇತಿನಾಮಾಭೂದ್ವಾಯುರೇವ ನ ಸಂಶಯಃ ।
ಯೋಗಿನಾಂ ಹೃದಯೇ ಸ್ಥಿತ್ವಾ ಸದಾ ಧ್ಯಾತಿ ಹರಿಂ ಪರಂ ।
ಪಾರ್ಥಕ್ಯೇನಾಪಿ ತಂ ಧ್ಯಾತಿ ಮಹಾಧ್ಯಾತೇತಿ ವಿಶ್ರುತಃ ।
ದೇವಾನಾಂ ಪುಣ್ಯಪಾಪಾನಾಂ ಸುಖಮೇವೋತ್ತರೋತ್ತರಂ ।
ತತ್ಸುಖಾತ್ತೂತ್ತರೇಷಾಂ ತು ವಾಯುಪರ್ಯಂತಮೇವ ಚ ।
ಭುಂಜತೇ ಸರ್ವದಾ ವೀಂದ್ರ ತತ್ರ ಮುಖ್ಯಸ್ತು ಮಾರುತಃ ॥

ಇತ್ಯಾದಿ ಗರುಡಪುರಾಣೇ ॥

ಪಾಹಿ ಬ್ರಹ್ಮ–ಬ್ರಹ್ಮ ಎಂಬುವನೇ ॥ ೧೦೦ ॥ ಈ ಬ್ರಹ್ಮ ಎಂಥಾವನೆಂದರೆ, ಬ್ರಾಹ್ಮಣಪ್ರಿಯ–ಬ್ರಹ್ಮಜ್ಞಾನಿನಾಂ ಪ್ರಿಯನಾದವ, ಮತ್ತು ಸರಸ್ವತೀಪತೆ–ವಾಣೀದೇವೇರಿಗೆ ಪತಿಯಾದವ ಮತ್ತು, ವರ್ಯಾ–ಪೂರ್ವೋಕ್ತ ಋಜುಗಣದೊಳಗೆ ಸಾಧನ ಸಂಪೂರ್ತಿಯಾದ್ದರಿಂದ ತದ್ವಿವಕ್ಷಯಾ, ಶ್ರೇಷ್ಠನಾದವ, ಜಗದ್ಗುರು–ಜಗದ್ಗುರುಗಳಾದ ವಾಯುದೇವರಿಗಿಂತಲೂ ಪದಾಧಿಕ್ಯನಾದವನೇ, ಪಾಹಿ ಪಾಹಿ – ಸಂರಕ್ಷಣಮಾಡು, ಸಂರಕ್ಷಣಮಾಡು.

**ವಿಶೇಷಾರ್ಥ :**–೨೩ ನೇ ಶ್ಲೋಕದಿಂದ ೨೯ ನೇ ಶ್ಲೋಕದ ಪರಿಯಂತ ಹೇಳಿದ ಋಜುಗಳ ನಾಮುಗಳನ್ನ ನಿರ್ವಚನಪೂರ್ವಕ ವಿವರ ತಿಳಿಸಲ್ಪಟ್ಟಿವೆ.

(೧) ಕಲಿಯನ್ನು ನಿರಾಕರಿಸುವದ್ದರಿಂದ 'ಕಲ್ಕಿ' ನಾಮಕನೇ.

(೨) ಸುಪರಾಕ್ರಮಿಯಾಗಿ ಭಕ್ತಾಗ್ರೇಸರನಾದ್ದರಿಂದಲೂ, ವಿಶೇಷ ಬ್ರಹ್ಮ ವರ್ಚಸ್ವಿಯಾದ್ದರಿಂದಲೂ 'ಸುತೇಜ' ನಾಮಕನೇ.

(೩) ಶ್ರೀ ಪರಮಾತ್ಮಗೆ ಕೇವಲ ಶಿಷ್ಯನಾದ್ದರಿಂದ 'ದಾಸ' ನಾಮಕನೇ.

(೪) 'ಅಧರ್ಮಖಂಡನ', ಎಂದರೆ ಅಧರ್ಮ ಮಾಡುವ ಜನರನ್ನ ದಂಡನ ಮಾಡತಕ್ಕವನೇ.

(೫) 'ವರ್ಚಸ್ವಿ' ಎಂದರೆ ಮಹಾಕಾಂತಿಯುಕ್ತನಾಗಿರುವದ್ದರಿಂದ, 'ವರ್ಚಸ್ವಿ' ನಾಮಕನೇ.

(೬) ಶತ್ರುಭಯಂಕರನಾಗಿರುವದ್ದರಿಂದ 'ಖಷಣ' ನಾಮಕನೇ.

(೭) ಸತ್ತ್ವೋದ್ರಿಕ್ತನಾದಕಡಿಯಿಂದ 'ಸಾಧು' ನಾಮಕನೇ.

(೮) ಪೂಜ್ಯ ಸ್ವಾಮಿಯಾದುದರಿಂದ 'ಮಹೀಪತಿ' ನಾಮಕನೇ.

(೯) ಸದ್ಧರ್ಮವನ್ನ ತಿಳಿದವನಾದ್ದರಿಂದ 'ಸದ್ಧರ್ಮಜ್ಞ' ನಾಮಕನೇ.

(೧೦) ಧರ್ಮವನ್ನ ಉತ್ಪತ್ತಿ ಮಾಡುತ್ತಾನಾದಕಡಿಯಿಂದ 'ಧರ್ಮಜ' ನಾಮಕನೇ.

(೧೧) 'ಸಂಪೂರ್ಣ' ಎಂದರೆ ಪೂರ್ಣಪ್ರಜ್ಞನಾದ ಶ್ರೀ ಹರಿಯನ್ನ ಛಂದಾಗಿ ತಿಳಿದವನಾದ್ದರಿಂದ 'ಸಂಪೂರ್ಣ'ನೇ.

(೧೨) ಪರಿಶುದ್ಧ ಜ್ಞಾನವುಳ್ಳವನಾದ್ದರಿಂದ 'ಶುಚಿ' ನಾಮಕನೇ.

(೧೩) ಅನೇಕ ರೂಪನಾದ್ದರಿಂದ 'ವೈಕೃತ' ನಾಮಕನೇ.

(೧೪) ಭಕ್ತರಿಗೆ ಪುಣ್ಯವನ್ನೇ ಅಭ್ಯಂಜನ್ನಮಾಡುವದ್ದರಿಂದ 'ಅಂಜನ' ನಾಮಕನೇ.

(೧೫) ಇನ್ನೂ 'ಅಕಾರಃ ಸರ್ವವಾಗಾತ್ಮಾ ಪರಬ್ರಹ್ಮಾಭಿದಾಯಕಃ' ಎಂತ ತಿಳಿದು ಉಪಾಸನ ಮಾಡುವದ್ದರಿಂದಲೂ 'ಅಂಜನ' ನಾಮಕನೇ.

(೧೬) 'ಸರ್ಷಪ' ಎಂದರೆ ಖುಷ ಜ್ಞಾನೇ ಎಂಬ ಧಾತುವಿನಿಂದ ಸರ್ಷರೆಂಬ ಜ್ಞಾನಸಹಿತರನ್ನ ಪರಿಪಾಲಿಸುತ್ತಾನಾದ್ದರಿಂದ 'ಸರ್ಷಪ' ನಾಮಕನೇ.

(೧೭) 'ಖರ್ಪಟ' ಎಂದರೆ, ಖಃ ಖಪತಯೇ ನಮಃ ಎಂದು ದೇವರಲ್ಲಿ ಸರ್ವಕ್ರಿಯಾ ಅರ್ಪಿಸಿ ನಡಿಯುತ್ತ ಇರುವನಾದ್ದರಿಂದ 'ಖರ್ಪಟ' ನಾಮಕನೇ. (ಕರಿಷ್ಯಮಾಣಾನಿ ಚ ತಸ್ಯ ಪೂಜಾಂ ಸಂಕಲ್ಪಯಾಮಾಸ ಸ ಶುದ್ಧ ಬುದ್ಧಿಃ।)

(೧೮) ದೇವರು ಶ್ರದ್ಧಾಢ್ಯ ಎಂದರೆ, 'ಶ್ರನ್ನಾಮಾಸ್ತಿಕ್ಯಬುದ್ಧಿಸ್ಸ್ಯಾತ್' ಎಂಬುವ ವಚನಾನುಸಾರ ಸಂಪೂರ್ಣಾಸ್ತಿಕ್ಯಬುದ್ಧಿ ದೇವರಲ್ಲಿಟ್ಟಿರುವದ್ದರಿಂದ 'ಶ್ರದ್ಧಾ' ಎಂತ ನಾಮ ಪಡೆದವನೇ.

(೧೯) ಕೇವಲ ಸದಾ ದೇವರ ಧ್ಯಾನಶೀಲನಾದ್ದರಿಂದ 'ಸಂಧ್ಯಾತ' ನಾಮಕನೇ.

(೨೦) ನಿತ್ಯಾಪರೋಕ್ಷಿದೇವತೆಗಳಿಗೆಲ್ಲ ಅಧಿಕನಾದ್ದರಿಂದ 'ವಿಜ್ಞಾನ' ನಾಮಕನೇ.

(೨೧) ನಿತ್ಯಾಪರೋಕ್ಷಿಯಾದ್ದರಿಂದ 'ಮಹಾವಿಜ್ಞಾನ' ನಾಮಕನೇ.

(೨೨) ನಿತ್ಯ ಸಂಸ್ಮರಣವುಳ್ಳವನಾದ್ದರಿಂದ 'ಕೀರ್ತನ' ನಾಮಕನೇ.

(೨೩) ಸರ್ವತ್ರ ಕೂಡಿರುವದ್ದರಿಂದ 'ಸಂಕೀರ್ಣ' ನಾಮಕನೇ.

(೨೪) ಇದ್ದ ಸ್ವಬಲವನ್ನ ಪೇಳುವದ್ದರಿಂದ 'ಕತ್ಥ' ನಾಮಕನೇ. 'ಸಹಸ್ರಗುಣ ಮಪ್ಯೇತನ್ಮಯಿ ಸಂಭಾವಯಾಮ್ಯಹಂ' ಎಂದು ಶ್ರೀಕೃಷ್ಣ ಅಂಗೀಕರಿಸಿದ್ದ ರಿಂದ ಶ್ಲಾಘನದೋಷವಿಲ್ಲೆಂದು ಅರ್ಥ.

(೨೫) ಸಂಶಯರಹಿತನಾದ್ದರಿಂದ 'ಮಹಾಬುದ್ಧ' ಎಂತ ನಾಮಕನೇ.

(೨೬) ಉತ್ಕರ್ಷ ತೋರಿಸುವನಾದ್ದರಿಂದ 'ಜಯ' ನಾಮಕನೇ.

(೨೭) ಸರ್ವಜೀವೋತ್ತಮನಾದ್ದರಿಂದ 'ಸುಮಹತ್ತರ' ನಾಮಕನೇ.

(೨೮) ಅತ್ಯಂತ ಬಲವಂತನಾದ್ದರಿಂದ 'ಸುವೀರ್ಯ' ನಾಮಕನೇ.

(೨೯) ಉತ್ಕೃಷ್ಟ ಧಾರಣಾಶಕ್ತಿಯಿಂದ 'ಮೇಧಾವೀ' ಎನಿಸುವನೇ.

(೩೦) ವಿಶೇಷಾಕಾರವಾದ ಜಯಶೀಲನಾದ್ದರಿಂದ 'ವಿಜಯ' ನಾಮಕನೇ.

(೩೧) 'ರಂತಿಮ್ನಾ' ಎಂದರೆ "ರಂ ತಿಷ್ಠತ್ಯಸ್ಮಿನ್ನಿತಿ ರಂತಿಃ ವೃಕಾಗ್ನಿಃ ಸ ಅಸ್ಯಾಸ್ತೀತಿ ರಂತಿಮಾನ್" ರಂ ಎಂಬ ಅಗ್ನಿಬೀಜಮುಖ್ಯವಾಚ್ಯತ್ವ ಇರುವದ್ದರಿಂದ ವೃಕನಾಮಕ ಅಂಗುಷ್ಟಪರಿಮಿತ ಅಗ್ನಿನಾಮಕ ದೇವರ ರೂಪಕ್ಕೆ 'ರಂತಿ' ಎಂತ ಹೆಸರು. ಇದು ಈತನಲ್ಲಿ ಇರುವದ್ದರಿಂದ 'ರಂತಿಮ್ನಾ' ಎಂಬುವನೇ.

(೩೨) ಮನು ಅವಬೋಧನೆ ಎಂಬ ಧಾತುವಿನಿಂದ ಜ್ಞಾನರೂಪನಾದ್ದರಿಂದ 'ಮನು' ನಾಮವುಳ್ಳವನೇ.

(೩೩) ಐಹಿಕಸುಖಪ್ರದನಾದ್ದರಿಂದ 'ಮೋದ' ನಾಮಕನೇ.

(೩೪) ಪರಲೋಕಸುಖಪ್ರದನಾದ್ದರಿಂದ 'ಪ್ರಮೋದ' ನಾಮಕನೇ.

(೩೫) ಸ್ವಚ್ಛ ಚಿತ್ತನಾದ್ದರಿಂದ 'ಸಂತ' ನಾಮಕನೇ.

(೩೬) ಸರ್ವಜೀವರಿಗಿಂತ ಆನಂದ ಅಧಿಕನಾದ್ದರಿಂದ, 'ಆನಂದ' ನಾಮಕನೇ.

(೩೭) ಇತರಾಪೇಕ್ಷೆ ಇಲ್ಲದ್ದರಿಂದ, 'ಸಂತುಷ್ಟ' ನಾಮಕನೇ.

(೩೮) ಅತಿಮನೋಹರ ಅವಯವವುಳ್ಳವನಾದ್ದರಿಂದ, 'ಚಾರ್ವಂಗ' ನಾಮಕನೇ.

(೩೯) ಮನೋಹರ ಲಕ್ಷಣವುಳ್ಳವನಾದ್ದರಿಂದ, 'ಚಾರು' ನಾಮಕನೇ.

(೪೦) ಅಧಿಕ ಬಾಹುಬಲವುಳ್ಳವನಾದ್ದರಿಂದ, 'ಸುಬಾಹು' ನಾಮಕನೇ.

(೪೧) ಮನೋಹರ ಸಲ್ಲಕ್ಷಣ ಪಾದವುಳ್ಳವನಾದ್ದರಿಂದ, 'ಚಾರುಪದ' ನಾಮಕನೇ.

(೪೨) ಸುಲಕ್ಷಣ ನೇತ್ರನಾದ್ದರಿಂದ, 'ಸುಲೋಚನ' ನಾಮಕನೇ.

(೪೩) ಸರ್ವವೇದ ಜ್ಞಾನವುಳ್ಳವನಾದ್ದರಿಂದ, 'ಸಾರಸ್ವತ' ನಾಮಕನೇ.

(೪೪) ಆರಬ್ಧಾಂತಗಾಮಿಯಾದ್ದರಿಂದ, 'ಸುವೀರ' ನಾಮಕನೇ.

(೪೫) ತತ್ತ್ವಜ್ಞಾನಸುಖಪಾನವುಳ್ಳವನಾದ್ದರಿಂದ, 'ಕಪಿ' ನಾಮಕನೇ.

(೪೬) ದೇವರ ತತ್ತ್ವಜ್ಞಾನವುಳ್ಳವನಾದ್ದರಿಂದ, 'ಪ್ರಾಜ್ಞ' ನಾಮಕನೇ.

(೪೭) ವಿಷಯಚಾಪಲ್ಯರಹಿತನಾದ್ದರಿಂದ, 'ಅಲಂಪಟ' ನಾಮಕನೇ.

(೪೮) ಆಲೋಚನಿಯಿಂದ ಸರ್ವಜಗದ್ವ್ಯಾಪಾರ ಇರುವದ್ದರಿಂದ, 'ಸರ್ವಜ್ಞ' ನಾಮಕನೇ.

(೪೯) ಈ ಬ್ರಹ್ಮಾಂಡಗತ ಸರ್ವಜೀವರನ್ನ ಗೆದ್ದದ್ದರಿಂದ, 'ಸರ್ವಜಿತ್' ನಾಮಕನೇ.

(೫೦) ಆಪದ್ರಕ್ಷಕನಾದ್ದರಿಂದ, 'ಮಿತ್ರ' ನಾಮಕನೇ.

(೫೧) ಜ್ಞಾನಿಗಳ ಪಾಪ ನಾಶಮಾಡುವದ್ದರಿಂದ, 'ಪಾಪನಾಶನ' ನಾಮಕನೇ.

(೫೨) ವಿಶೇಷಾಕಾರವಾದ ಧರ್ಮವನ್ನುಪದೇಶಮಾಡುವನಾದ್ದರಿಂದ, 'ಧರ್ಮವಿನೀತ' ನಾಮಕನೇ.

(೫೩) ಕುಶಲಬುದ್ಧಿಯಾದ್ದರಿಂದಲೂ 'ಶಂ ಅರಂ' ಎಂಬ ಬಾಹ್ಯಸುಖದುಃಖ ಬಂಧನವನ್ನ ಖಂಡಿಸಿ ಮಂಗಳಕೊಡುವನಾದ್ದರಿಂದ, 'ಶಾರದ' ನಾಮಕನೇ.

(೫೪) ಹಿಡಿಯುವ ಶಕ್ತನಾದ್ದರಿಂದ 'ಓಜ' ನಾಮಕನೇ.

(೫೫) ಜ್ಞಾನಸಿದ್ಧಿಯಾದ್ದರಿಂದಲೂ, ತಪಸ್ವಿಯಾದ್ದರಿಂದಲೂ, 'ಸುತಪಸ್ವಿ' ನಾಮಕನೇ.

(೫೬) ಶೌರ್ಯ ತಪಸ್ವಿಯಾದ್ದರಿಂದ, 'ಬ್ರಹ್ಮತೇಜಸ್ಸು'ಳ್ಳವನೇ.

(೫೭) ಸರ್ವರಿಗೂ ತತ್ತದ್ಯೋಗ್ಯತಿ ಕೊಡುವದ್ದರಿಂದ, 'ದಾನಸುಶೀಲ' ನಾಮಕನೇ.

(೫೮) ಭಜನೀಯನಾದ್ದರಿಂದಲೂ, ಕಾರ್ಯನಿರ್ವಾಹಕನಾದ್ದರಿಂದಲೂ, 'ಯಜ್ಞಸುಕರ್ತ' ನಾಮಕನೇ.

(೫೯) ದೇವರನ್ನೇ ಕುರಿತು ಸರ್ವಕರ್ಮ ಯಾಗವಾಗಿ ಅರ್ಪಿಸುವದ್ದರಿಂದ, 'ಯಜ್ವೀ' ನಾಮಕನೇ.

(೬೦) ಸರ್ವರಿಂದಲೂ ದೇವತಾರಾಧನೆ ಮಾಡಿಸುವದ್ದರಿಂದ 'ಯಾಗವರ್ತಕ' ನಾಮಕನೇ.

(೬೧) ಅನ ಚೇಷ್ಟಾಯಾಂ ಎಂಬ ಧಾತುವಿನಿಂದ ವಿಶಿಷ್ಟಚೇಷ್ಟಾಪ್ರದನಾದ್ದರಿಂದ, 'ಪ್ರಾಣ' ನಾಮಕನೇ.

(೬೨) ಸ್ವಾಧೀನ ಜೀವರನ್ನು ರಕ್ಷಿಸುವದ್ದರಿಂದ, 'ತ್ರಾಣ' ನಾಮಕನೇ.

(೬೩) ದೇವರ ದ್ವೇಷಿಗಳಲ್ಲಿ ಸದಾ ಕೋಪವುಳ್ಳವನಾದ್ದರಿಂದ, 'ಅಮರ್ಷ' ನಾಮಕನೇ.

(೬೪) ಸನ್ಮುಕ್ತಿಯೋಗ್ಯರಿಗೆಲ್ಲ ಜ್ಞಾನೋಪದೇಶಕನಾದ್ದರಿಂದ, 'ಉಪದೇಷ್ಟ' ನಾಮಕನೇ.

(೬೫) ಸರ್ವದೇಹಿಗಳ ಆಯುಃಪೂರ್ತಿಕಾಲ ತಿಳಿದು ಹಂಸಮಂತ್ರ ನಿಲ್ಲಿಸುವದ್ದರಿಂದ, 'ಮಾರಕ' ನಾಮಕನೇ.

(೬೬) ಕಾಲಾಭಿಮಾನಿಯಾಗಿಯೂ ಜಗತ್ತನ್ನ ಆಟವಾಡಿಸುವದ್ದರಿಂದ 'ಕಾಲ ಕ್ರೀಡನ' ನಾಮಕನೇ.

(೬೭) ಸಜ್ಜನರಿಂದ ಒಳ್ಳೇ ಕಾರ್ಯ ಮಾಡಿಸುವದ್ದರಿಂದ 'ಸುಕರ್ತ' ನಾಮಕನೇ.

(೬೮) ಸುಕಾಲವುಳ್ಳ ಸಜ್ಜನರಿಗೆ ತಿಳಿಸುವದ್ದರಿಂದ 'ಸುಕಾಲಜ್ಞ' ನಾಮಕನೇ.

(೬೯) ಕಿಮಿ (ಕಿವಿ) ಮುಚ್ಚಿಕೊಂಡರೆ ಕೇಳುವ ಪ್ರಾಣಘೋಷವನ್ನ, ಮರಣ ಕಾಲದಲ್ಲಿ ಕೇಳದ ಹಾಂಗೆ ಮಾಡಿ, ಮೃತ್ಯು ಸೂಚಿಸುವದ್ದರಿಂದ 'ಕಾಲ ಸುಸೂಚಕ' ನಾಮಕನೇ.

(೭೦) ಅಜ್ಞಾನವನ್ನು, ದೈತ್ಯರನ್ನು, ಕಲಿಯನ್ನು ಸಂಹರಿಸುವನಾದ್ದರಿಂದ 'ಕಲಿ ಸಂಹರ್ತ' ನಾಮಕನೇ.

(೭೧) ಕಲಿ ಬಂಧನೇ ಎಂಬ ಧಾತುವಿನಿಂದ ದುಷ್ಟರನ್ನ ಬಂಧಿಸುವದ್ದರಿಂದ 'ಕಲಿ' ನಾಮಕನೇ.

(೭೨) ಕಲ ದ್ರವಣೇ ಎಂಬ ಧಾತುವಿನಿಂದ ದುರ್ಜನರನ್ನ ಪರಾಜಯಗೊಳಿಸೋವನಾದ್ದರಿಂದ 'ಕಾಲ' ನಾಮಕನೇ.

(೭೩) 'ಶರ್ವೋ ಮನ್ನಿಷ್ಠತಾ ಬುದ್ಧಿಃ' ಎಂಬ ಭಾಗವತವಚನದಿಂದ, ದೇವರಲ್ಲಿ ಭಕ್ತಿ ಅತಿಶಯನಾದ್ದರಿಂದಲೂ, ಸರ್ವಸನ್ನಿಹಿತನಾದ್ದರಿಂದಲೂ, ರೇತ ಎಂಬ ದೇವರ ಮುಖ್ಯಾಧಿಷ್ಠಾನನಾದ್ದರಿಂದ 'ರೇತೋ' ನಾಮಕನೇ,

ಅಥವಾ "ಯದಾ ತ್ವಮಭಿವರ್ಷಸ್ಯಥೇಮಾಃ ಪ್ರಾಣಪತೇ ಪ್ರಜಾಃ ಆನಂದ ರೂಪಾಸ್ತಿಷ್ಠಂತಿ" ಎಂಬ ಶ್ರುತಿಯಿಂದಲೂ, 'ದೇವಾನಾಂ ರೇತೋವೃಷ್ಟಿಃ' ಎಂಬ ಶ್ರುತಿಯಿಂದಲೂ, ರೇತಸ್ಸೆಂಬ ವೃಷ್ಟಿಯನ್ನು ಉಂಟುಮಾಡುವದ್ದರಿಂದ, 'ರೇತ' ಎಂಬ ನಾಮಕನೇ.

(೭೪) ಸರ್ವಕಾಲದಲ್ಲೂ ಶ್ರೀ ಪರಮಾತ್ಮನಲ್ಲಿ ಆಸಕ್ತಿವುಳ್ಳವನಾದ್ದರಿಂದ, 'ಸದಾ ರತ' ನಾಮಕನೇ.

(೭೫) ಸಜ್ಜನರಿಗೆ ಬಲಪ್ರದನಾದ್ದರಿಂದ, 'ಸುಬಲ' ನಾಮಕನೇ.

(೭೬) ಭಕ್ತಾಪರಾಧಸಹಿಷ್ಣುವಾದ್ದರಿಂದ, 'ಸಹೋ' ನಾಮಕನೇ.

(೭೭) ಅಕವೆಂಬ ದುಃಖವನ್ನ, ಪಿನಷ್ಟಿ ಕುಟ್ಟಿ ಪುಡಿ ಮಾಡುವದ್ದರಿಂದ 'ಸದಾ ಕಪಿ' ನಾಮಕನೇ.

(೭೮) ಸಜ್ಜನಪ್ರಾಪ್ಯನಾದ್ದರಿಂದ, 'ಗಮ್ಯ' ನಾಮಕನೇ.

(೭೯) ಅಂತಃಜ್ಞಾನ ಪ್ರೇರಕನಾದ್ದರಿಂದ 'ಜ್ಞಾನ' ನಾಮಕನೇ.

(೮೦) ದಶೇಂದ್ರಿಯವೂ ಮನೆಯಂತೆ ಅಧಿಷ್ಠಾನವಾಗಿರುವದ್ದರಿಂದಲೂ, ದಶಶಬ್ದ ವಾಚ್ಯ ಸರ್ವವೂ ಅಧಿಷ್ಠಾನವಾಗಿರುವದ್ದರಿಂದಲೂ 'ದಶಕುಲ'ನಾಮಕನೇ.

(೮೧) ಸುಶಬ್ದ ಕೇಳೋವನಾದ್ದರಿಂದ, 'ಶ್ರೋತವ್ಯ' ನಾಮಕನೇ.

(೮೨) ವಿಶೇಷವಾಗಿ ಕೀರ್ತನಮಾಡಿಸಿಕೊಳ್ಳುವನಾದ್ದರಿಂದ 'ಸಂಕೀರ್ತಿತವ್ಯ' ನಾಮಕನೇ.

(೮೩) ಮನಸ್ಸಿನಿಂದ ತಿಳಿಸಿಕೊಳ್ಳುವನಾದ್ದರಿಂದ, 'ಮಂತವ್ಯ' ನಾಮಕನೇ.

(೮೪) ಕವನವೆಂಬ ವರ್ಣನೆಗೆ ಯೋಗ್ಯನಾದ್ದರಿಂದ 'ಕವ್ಯ' ನಾಮಕನೇ.

(೮೫) ದರ್ಶನಮಾಡಿಸಿಕೊಳ್ಳುವುದಕ್ಕೆ ಅರ್ಹನಾದ್ದರಿಂದ 'ದ್ರಷ್ಟವ್ಯ' ನಾಮಕನೇ.

(೮೬) ಸರ ಗತೌ ಎಂಬ ಧಾತುವಿನಿಂದ ಸರ ಎಂದರೆ, ಅನುಸರಣೆಮಾಡಿ ಹೊಂದು ವುದಕ್ಕೆ ಅರ್ಹನಾದ್ದರಿಂದ 'ಸಖ್ಯ' ನಾಮಕನೇ.

(೮೭) ಗಮಲೃ ಗತೌ ಎಂಬ ಧಾತುವಿನಿಂದ, ಚಲಾಚಲರೂಪ ಪ್ರತಿಮಾಧಿಷ್ಠಾನ ವಿಶೇಷ ಇದ್ದಲ್ಲಿಗೆ, ನಡೆದುಹೋಗಿ ಹೊಂದಲು ಅರ್ಹನಾದ್ದರಿಂದ, 'ಗಂತವ್ಯ' ನಾಮಕನೇ.

(೮೮) ಕೃ ಕರಣೆ ಎಂಬ ಧಾತುವಿನಿಂದ ಮಂತ್ರ ಜಪಾದಿ ಕ್ರಿಯಾದಿಂದ ಭಜನೀಯ ನಾದ್ದರಿಂದ, 'ಕ್ರವ್ಯ' ನಾಮಕನೇ.

(೮೯) ತದಶಕ್ತರಿಗೆ ಮನಸಾ ಸ್ಮರಣೆಗೆ ಸದಾ ವಿಷಯನಾದ್ದರಿಂದ 'ಸ್ಮರ್ತವ್ಯ' ನಾಮಕನೇ.

(೯೦) ಯಥಾಯೋಗ್ಯವಾಗಿ ಆರಾಧನೆ ಮಾಡಿಸಿಕೊಳ್ಳುವನಾದ್ದರಿಂದ, 'ಸೇವ್ಯ' ನಾಮಕನೇ.

(೯೧) ಪರಮಚತುರನಾದ್ದರಿಂದ, 'ಸುಭವ್ಯ' ನಾಮಕನೇ.

(೯೨) "ಪ್ರಾಣಸ್ಯೇದಂ ವಶೇ ಸರ್ವಂ ತ್ರಿದಿವೇ ಯತ್ಪ್ರತಿಷ್ಠಿತಂ" ಎಂಬ ಶ್ರುತ್ಯನುಸಾರ ಸ್ವರ್ಗದಲ್ಲಿ ರಕ್ಷಕನಾದ್ದರಿಂದ, 'ಸ್ವರ್ಗವ್ಯ' ನಾಮಕನೇ.

(೯೩) ಧ್ಯಾನವಿಷಯನಾದ್ದರಿಂದ, 'ಭಾವ್ಯ' ನಾಮಕನೇ.

(೯೪) ಸಚ್ಛಾಸ್ತ್ರಮೂಲಕವಾಗಿ ತಿಳಿಸಿಕೊಳ್ಳುವನಾದ್ದರಿಂದ, 'ಜ್ಞಾತವ್ಯ' ನಾಮಕನೇ.

(೯೫) ವಕ್ತೃವಾದ ಗುರುವಿನಿಂದ ಇತರರ ವಿಷಯಕವಾಗಿ ಹೇಳಿಸಿಕೊಳ್ಳುವನಾದ್ದರಿಂದ, 'ವಕ್ತವ್ಯ' ನಾಮಕನೇ.

(೯೬) ವೇದಾದಿಗಳಿಂದ 'ಗೌಃ' ಎಂಬ ವಾಕ್ಯಕ್ಕೆ ಗೋಚರನಾದ್ದರಿಂದ 'ಗವ್ಯ' ನಾಮಕನೇ.

(೯೭) ಮುಂದಿನ ಪದ ವಾಯುಪದವುಳ್ಳವನಾದ್ದರಿಂದ, 'ಲಾತವ್ಯ' ನಾಮಕನೇ.

(೯೮) ಸರ್ವಜೀವರ ಹೃತ್ಕಮಲದಲ್ಲಿ ಶ್ವಾಸರೂಪ ಜಪಮಾಡಿ ಸರ್ವಚೇಷ್ಟಾಪ್ರದನಾಗಿಯೂ ಶ್ರೀಪರಮಾತ್ಮಗೆ ಪ್ರಥಮಾಂಗಭೂತನಾಗಿಯೂ ಇರುವನಾದ್ದರಿಂದ 'ವಾಯು' ನಾಮಕನೇ.

(೯೯) ಸರ್ವಜೀವರಿಂದಲೂ ಭಕ್ತಿಜ್ಞಾನಾಧಿಕಪೂರ್ಣಗುಣನಾದ್ದರಿಂದಲೂ, ಬ್ರಾಹ್ಮಣರಲ್ಲಿ ಪ್ರೀತಿ ಉಳ್ಳವನಾದ್ದರಿಂದಲೂ, ಸರಸ್ವತೀದೇವೇರಿಗೆ ಪತಿಯಾದ್ದರಿಂದಲೂ, ಋಜುಗಳಲ್ಲಿ, ಪೂರ್ತಿಯಾದ ಸಾಧನವುಳ್ಳವನಾದ್ದರಿಂದಲೂ, ಜಗತ್ತಿಗೇ ಮುಖ್ಯ ಗುರುವಾದ್ದರಿಂದಲೂ, 'ಬ್ರಹ್ಮ' ನಾಮಕನೇ.

**ವಾಮನಪುರಾಣದಲಿ ಪೇಳಿದ ।**
**ಈ ಮಹಾತ್ಮರ ಪರಮಮಂಗಳ ।**
**ನಾಮಗಳ ಸಂಪ್ರೀತಿಪೂರ್ವಕ ನಿತ್ಯ ಸ್ಮರಿಸುವರ ॥**
**ಶ್ರೀಮನೋರಮನವರು ಬೇಡಿದ ।**
**ಕಾಮಿತಾರ್ಥಗಳಿತ್ತು ತನ್ನ ತ್ರಿ ।**
**ಧಾಮದೊಳಗನುದಿನದಲಿಟ್ಟಾನಂದ ಪಡಿಸುವನು ॥ ೩೦ ॥**

ಈ ಋಜುಗಳ ಸ್ಮರಣೆಯಿಂದ ಆಗತಕ್ಕ ಫಲವನ್ನ ಹೇಳತಾರೆ.

ವಾಮನ ಪುರಾಣದಲಿ–ವಾಮನ ಪುರಾಣದಲ್ಲಿ, ಪೇಳಿದ–ಹೇಳಿರುವಂಥ, ಈ ಮಹಾತ್ಮರ–ಈ ಪೂರ್ವೋಕ್ತರಾದ, ನೂರುಮಂದಿ ಮಹಾತ್ಮರ, ಪರಮಮಂಗಳನಾಮಗಳ–ಅತ್ಯಂತ ಮಂಗಳಪ್ರದವಾದ ಹೆಸರುಗಳ, ಸಂಪ್ರೀತಿಪೂರ್ವಕ–ಛಂದಾಗಿ ಆದರಯುಕ್ತರಾಗಿ, ನಿತ್ಯ ಸ್ಮರಿಸುವರ–ಸತತ ಸ್ಮರಣೆಮಾಡುವಂಥಾವರಿಗೆ, ಶ್ರೀಮನೋರಮನು–ಲಕ್ಷ್ಮೀದೇವೇರಿಗೆ ಹರುಷಕೊಡುವಂಥ ಶ್ರೀ ಪರಮಾತ್ಮನು, ಅವರು ಬೇಡಿದ–ಸತತ ಸ್ಮರಣೆಮಾಡುವಂಥಾವರು, ಅಪೇಕ್ಷಿಸಿದ, ಕಾಮಿತಾರ್ಥಗಳ–ಜ್ಞಾನ, ಭಕ್ತಿ, ವೈರಾಗ್ಯವು, ತನ್ನ ಅಪರೋಕ್ಷವೂ ಇತ್ಯಾದಿಗಳ, ಇತ್ತು–ಕೊಟ್ಟವನಾಗಿ, ತನ್ನ ತ್ರಿಧಾಮದೊಳಗೆ–ಸ್ವಕೀಯವಾದ ವೈಕುಂಠಾದಿ ಮೂರುಸ್ಥಾನದೊಳಗೆ, ಇಟ್ಟು–ಲಿಂಗಭಂಗಾನಂತರ ಇಟ್ಟವನಾಗಿ, ಅನುದಿನದಲಿ–ಸದಾ ಸರ್ವಕಾಲಗಳಲ್ಲೂ, ಆನಂದಪಡಿಸುವನು–ಸಂತೋಷಪಡಿಸುತ್ತಾನೆ. ಸ್ವರೂಪಾನಂದ ಕೊಡುತ್ತಾನೆ. ಈ ನೂರುಮಂದಿ, ನೂರು ಬ್ರಹ್ಮಕಲ್ಪಸಾಧನ ಮಾಡಿದವರು, ಅಪರೋಕ್ಷಜ್ಞಾನಿಗಳು ಹೋಗತಾ, ಇನ್ನೂ ನೂರುಮಂದಿ ಅಪರೋಕ್ಷಕ್ಕಾಗಿ ಸಾಧನಾ ಮಾಡುತ್ತಾ ಇದ್ದಾರೆ. ಇದು ವಾಮನಪುರಾಣ ಉತ್ತರಖಂಡ ಋಜೂಪಾಖ್ಯಾನ ವಿಂಶೋಧ್ಯಾಯದಲ್ಲಿದೆ.

**ಈ ಸಮೀರಗೆ ನೂರುಜನುಮ ಮ |**
**ಹಾಸುಖ ಪ್ರಾರಬ್ಧ ಭೋಗ ಪ್ರ |**
**ಯಾಸವಿಲ್ಲದಲೈದಿದನು ಲೋಕಾಧಿಪತ್ಯವನು ||**
**ಭೂಸುರನ ಒಪ್ಪಿಡಿಯವಲಿಗೆ ವಿ |**
**ಶೇಷಸೌಖ್ಯವನಿತ್ತ ದಾತನ |**
**ದಾಸವರ್ಯನು ಲೋಕಪತಿಯೆನಿಸುವುದು ಅಚ್ಚರವೆ || ೩೧ ||**

ನೂರುಜನ್ಮ ಪ್ರಾರಬ್ಧಭೋಗ ವಾಯುದೇವರಿಗೆ ಎಂದು ಹೇಳತಾರೆ.

ಈ ಸಮೀರಗೆ–ವರ್ತಮಾನ ಪ್ರಧಾನ ವಾಯುದೇವರಿಗೆ, ನೂರುಜನುಮ–ನೂರು ಜನ್ಮ ಸಾಧನಾನಂತರ, ಸ್ಥೂಲಾಪರೋಕ್ಷವನ್ನು ಹೊಂದಿ ಕಲ್ಕಿ ಎಂತ ನಾಮ ಪಡೆದು, ತದಾರಭ್ಯ ಬ್ರಹ್ಮಪದಪರ್ಯಂತ ನೂರು ಬ್ರಹ್ಮಕಲ್ಪಸಾಂಕೇತವಾದ ನೂರು ಜನ್ಮ, ಪ್ರಾರಬ್ಧಭೋಗ–ಪ್ರಾರಬ್ಧಕರ್ಮ ಭೋಗ ಮಾಡಬೇಕು. ಅಪರೋಕ್ಷಾತ್ಪೂರ್ವಕಾಲೀನ ಕರ್ಮ, ಪ್ರಾರಬ್ಧಕರ್ಮ ಎಂತ ಕರಿಸೋದಿಲ್ಲ. ಅಪರೋಕ್ಷಾನಂತರಕಾಲೀನಕರ್ಮವೇ, ಪ್ರಾರಬ್ಧಕರ್ಮವೆಂತ ಎನಿಸುತ್ತದೆ ಆದ್ದರಿಂದ ಅಪರೋಕ್ಷಾನಂತರ ಬ್ರಹ್ಮಪದಾಂತವರಿಗೂ ಭೋಗಮಾಡತಕ್ಕ ಕರ್ಮ, ಪ್ರಾರಬ್ಧಕರ್ಮ. ಮಹಾಸುಖ–ಋಜುಗಳಿಗೆ ದುಃಖ ಪ್ರಾರಬ್ಧ ಇಲ್ಲ, ಸುಖಪ್ರಾರಬ್ಧವೆ, ಇದು ಮಹಾಸುಖಕರವಾದದ್ದು. ಆದ್ದರಿಂದ, ಪ್ರಯಾಸವಿಲ್ಲದಲೆ–ಪ್ರಯಾಸವಿಲ್ಲದೆ, ಭೋಗಮಾಡಿ ಸತ್ಯಲೋಕಾಧಿಪತ್ಯವನ್ನು ನೂರನೇ ಜನ್ಮದಲ್ಲಿ ಐದತಾರೆ. ಐದಿದನು ಲೋಕಾಧಿಪತ್ಯವನು–ವರ್ತಮಾನ ಸತ್ಯಲೋಕಾಧಿಪ ಬ್ರಹ್ಮದೇವರು, ತತ್ಪೂರ್ವದಲ್ಲಿ ಪೂರ್ವೋಕ್ತಪ್ರಕಾರ ತೊಂಭತ್ತೊಂಭತ್ತು ಜನ್ಮ ಸುಖ

ಪ್ರಾರಬ್ಧ ಭೋಗಮಾಡಿ, ನೂರನೇದಾದ ಈ ಕಲ್ಪದಲ್ಲಿ ಸತ್ಯಲೋಕಾಧಿಪತ್ಯವನ್ನು ಐದಿದ್ದಾರೆ. ವಾಯುದೇವರಿಗೆ ಈಗ್ಗೆ ತೊಂಭತ್ತೊಂಭತ್ತನೇ (೯೯ ನೇ) ಜನ್ಮ. ಮುಂದೆ, ನೂರನೇ ಜನ್ಮದಲ್ಲಿ ಸತ್ಯಲೋಕಾಧಿಪರಾಗತಾರೆ. ಈಗಿನ ಬ್ರಹ್ಮ, ಮುಂದಿನ ಕಲ್ಪಕ್ಕೆ ಇರೋದಿಲ್ಲ, ಈ ಕಲ್ಪದಲ್ಲಿ ಮುಕ್ತರಾಗುತ್ತಾರೆ. ಭೂಸುರನ – ಬ್ರಾಹ್ಮಣನಾದ ಸುಧಾಮನ, ಒಪ್ಪಿಡಿಯವಲಿಗೆ – ಒಂದುಹಿಡಿ ಅವಲಕ್ಕಿಗೆ, ವಿಶೇಷ ಸೌಖ್ಯವನಿತ್ತ– ಅತಿಸೌಖ್ಯ ಪರಮಾತ್ಮ ಕೊಡೋವನಾದ, ದಾತನ–ಇಂಥಾ ದಾತನಾದ ಪರಮಾತ್ಮನ, ದಾಸವರ್ಯನು–ದಾಸರಾದ ರುದ್ರಾದಿಗಳಿಗಿಂತಲೂ ಶ್ರೇಷ್ಠ ದಾಸರಾದ ವಾಯುದೇವರು, ಲೋಕಪತಿಯೆನಿಸುವುದು–ಸತ್ಯಲೋಕಾಧಿಪತಿ ಎನಿಸುವುದು, ಅಚ್ಚರವೆ–ಏನು ಆಶ್ಚರ್ಯ? ಆಶ್ಚರ್ಯವಲ್ಲ ಎಂತ ತಾತ್ಪರ್ಯ.

**ದ್ವಿಶತಕಲ್ಪಗಳಲ್ಲಿ ಬಿಡದೀ ।**
**ಪೆಸರಿನಿಂದಲಿ ಕರೆಸಿದನು ತ ।**
***ನ್ನೊಂಶದಮರರೊಳಗಿಟ್ಟು ಮಾಡುವನವರ ಸಾಧನವ ॥**
**ಅಸದುಪಾಸನಗೈವ ಕಲ್ಯಾ ।**
**ದ್ಯಸುರ ಪರ ಸಂಹರಿಸಿ ತಾ ಪೊಂ ।**
**ಬಸಿರಪದವೈದಿದನು ಗುರುಪವಮಾನ ಸತಿಯೊಡನೆ ॥ ೩೨ ॥**

ಅಪರೋಕ್ಷಿಗಳಾದವರ ನಾಮವೂ, ವಾಯುದೇವರ ವಿಚಾರವೂ ಹೇಳತಾರೆ.

ದ್ವಿಶತಕಲ್ಪಗಳಲ್ಲಿ–ಒಬ್ಬ ಋಜುವಿಗೆ ಲಿಂಗಭಂಗವಾಗಬೇಕಾದರೆ, ಇನ್ನೂರು ಬ್ರಹ್ಮ ಕಲ್ಪಸಾಧನ. ಇದು ಇನ್ನೂರು ಜನ್ಮಸಾಂಕೇತವು. ಈ ಜನ್ಮಗಳಲ್ಲಿ, ಈ ಪೆಸರಿನಿಂದಲಿ– ಈ ಪೂರ್ವೋಕ್ತ ನಾಮಗಳಿಂದ, ಬಿಡದೆ–ಬಿಡದೇನೆ (ಈ ನಾಮಗಳ ಬಿಟ್ಟು ಬೇರೆ ಹೆಸರಿನಿಂದ ಕರಿಸೋದಿಲ್ಲ), ಕರೆಸಿದನು–ಕರಿಸೋವರಾದರು, ವರ್ತಮಾನ ಪ್ರಧಾನ ವಾಯುದೇವರು, ಅನಾಪರೋಕ್ಷಿಗಳಾದ, ನೂರು ಜನ್ಮಗಳಲ್ಲಿ, ಪೂರ್ವೋಕ್ತ ಸಂಖ್ಯಾ ನಾಮಗಳಿಂದಲೂ, ಒಂದೊಂದು ಜನ್ಮದಲ್ಲಿ, ಒಂದೊಂದು ನಾಮದ ಮ್ಯಾರಿಗೆ, ನೂರು ಜನ್ಮಗಳಲ್ಲಿ, ಅದೇ ಸಂಖ್ಯಾನಾಮಗಳಿಂದಲೂ, ಅದೇಪ್ರಕಾರ ಅಪರೋಕ್ಷಾನಂತರ, ನೂರು ಜನ್ಮಗಳಲ್ಲಿಯೂ, ಇದೇ ನೂರು ನಾಮಗಳಿಂದ ಕರಿಸಿದರು. ದ್ವಿಶತಕಲ್ಪಗಳಲ್ಲಿ, ಇದೇ ನಾಮವೇ, ಆವರ್ತನವು, ಬ್ಯಾರೆ ಇಲ್ಲ, ಇದೇ ನೇಮ ಸರ್ವಋಜುಗಳಿಗೆ. *ತನ್ನಂಶವ–ಈ ವಾಯುದೇವರು, ಅಂಶವ ಎಂದರೆ, ತನ್ನ ಅಂಶವನ್ನು, ಅಮರರೊಳಗೆ– ತತ್ತ್ವಾಭಿಮಾನಿ ದೇವತೆಗಳಲ್ಲಿ, ಕಲ್ಯಾದ್ಯಸುರ–ಕಲ್ಯಾದಿ ಅಸುರರಾದ ತತ್ತ್ವದೈತ್ಯರಲ್ಲಿ, ಪರ–ಇನ್ನೂ ಭಗವದ್ಭಕ್ತರಾದ ಸಮಸ್ತ ಮುಕ್ತಿಯೋಗ್ಯರಲ್ಲಿ, ಹಾಂಗೆ ಭಗವಂತನಲ್ಲಿ ದ್ವೇಷಪರರಾದ ಸಮಸ್ತ ತಮೋಯೋಗ್ಯರಲ್ಲಿ ಈ ಪ್ರಕಾರ ತ್ರಿವಿಧ ಜೀವರಲ್ಲಿ, ಇಟ್ಟು–

* ಪದ್ಯದಲ್ಲಿ 'ತನ್ನೊಂಶದ' ಎಂತ ಇದ್ದು ಅರ್ಥ ವಿಸ್ತರಣೆಯಲ್ಲಿ 'ತನ್ನಂಶವ' ಎಂಬ ಪದಕ್ಕೆ ಅರ್ಥ ಬರೆಯಲ್ಪಟ್ಟಿದೆ.

ಇಷ್ಟವರಾಗಿ, ಮಾಡುವನು – ತಮ್ಮ ಸಾಧನ ತಾವು ಮಾಡುತ್ತ, ಅವರ–ಆಯಾ ಪ್ರಾಣಿಗಳ ಯೋಗ್ಯತಾನುಸಾರ, ಸಾಧನವ–ಅವರವರಿಂದ ಸಾಧನಮಾಡಿಸುತ್ತಾರೆ. ಅಸದುಪಾಸನೆಗೈವ–ಪರಮಾತ್ಮನೇ ನಾನು ಎಂತಲೂ, ಆನಂದ ತಾರತಮ್ಯ ಇಲ್ಲಾ ಎಂತಲೂ ಈ ಪ್ರಕಾರ ಸೋಹಂ ಉಪಾಸಕರಾದ ಭಗವದ್ದ್ವೇಷಿಗಳ, ಸಂಹರಿಸಿ–ವಾಯು ದೇವರು ಹನುಮದ್ಭೀಮ ಅವತಾರಗಳಿಂದ ಸಂಹಾರಮಾಡಿ, ಮಧ್ವಾವತಾರದಿಂದ, ವಾಗ್ಯುದ್ಧದಿಂದ, ಅವರ ಉತ್ಸಾಹಗಳ ಸಂಹಾರಮಾಡಿ ಅನಂತರ, ಗುರುಪವಮಾನ– ಜಗದ್ಗುರುಗಳಾದ ಈ ವಾಯುದೇವರು, ಸತಿಯೊಡನೆ–ತಮ್ಮ ಪತ್ನಿಯಾದ ಭಾರತೀ ದೇವೇರ ಸಹಿತರಾಗಿ, ತಾ ಪೊಂಬಸಿರಪದವ–ತಾವು ಹಿರಣ್ಯಗರ್ಭರಾದ ಬ್ರಹ್ಮನ ಪದ, ಈ ನೂರನೇ ಬ್ರಹ್ಮಕಲ್ಪದಲ್ಲಿ ಐದೋವರಾಗುತ್ತಾರೆ. ಐದಿದನು–ವರ್ತಮಾನ ಬ್ರಹ್ಮ ದೇವರು, ಹಿಂದೆ ವಾಯುಪದಸ್ಥರಾಗಿದ್ದಕಾಲದಲ್ಲಿ ಪೂರ್ವೋಕ್ತ ಸಾಧನಮಾಡಿ, ಬ್ರಹ್ಮ ಪದ ಐದಿದ್ದಾರೆ. ಈ ವಾಯುದೇವರೂನೂ ಈ ಪ್ರಕಾರವೇ ಬ್ರಹ್ಮಪದವ ಐದುತ್ತಾರೆ.

**ಅನಿಮಿಷರ ನಾಮದಲಿ ಕರೆಸುವ ।**
**ಅನಿಲದೇವನು ಒಂದು ಕಲ್ಪದಿ ।**
**ವನಜಸಂಭವನೆನಿಸಿ ಎಂಭತ್ತೇಳುವರೆವರುಷ ॥**
**ಗುಣತ್ರಯವರ್ಜಿತನ ಮಂಗಳ ।**
**ಗುಣ ಕ್ರಿಯ ಸುರೂಪಗಳುಪಾ ।**
**ಸನವು ಅವ್ಯಕ್ತಾದಿ ಪೃಥ್ವ್ಯಂತರದಿ ಇರುತಿಹುದು ॥ ೩೩ ॥**

ವಾಯುದೇವರ ವಿಚಾರವೇ ಹೇಳತಾರೆ.

ಅನಿಲದೇವನು – ಈ ವಾಯುದೇವರು, ಒಂದು ಕಲ್ಪದಿ – ತೊಂಭತ್ತೊಂಭತ್ತನೇ (೯೯) ಕಲ್ಪದಲ್ಲಿ, ಅನಿಮಿಷರ ನಾಮದಲಿ–ದೇವತೆಗಳ ಮಧ್ಯದಲ್ಲಿ, ಜೀವೋತ್ತಮರೆಂಬ ನಾಮದಲ್ಲಿ, ಕರೆಸುವ – ಕರೆಸೋವರಾಗುತ್ತಾರೆ. ಎಂಭತ್ತೇಳುವರೆವರುಷ – ಅಂಡದ ಹೊರಗೆ ವಾಸುದೇವನಿಂದ ನೂರನೇ ಬ್ರಹ್ಮಕಲ್ಪದಲ್ಲಿ ಪುರುಷನಾಮಕ ಬ್ರಹ್ಮನೆಂದು ಜನಿಸಿ, ತದಾರಭ್ಯ, ಪ್ರಳಯಾಂತವರಿಗೂ ನೂರು ವರ್ಷ ಎಂತ ಕರೆಸಿ, ಒಂದು ಬ್ರಹ್ಮ ಕಲ್ಪ ಎಂತ ಸಾಂಕೇತವಾಗುತ್ತದೆ ; ಈ ನೂರರಲ್ಲಿ, ಎಂಭತ್ತೇಳುವರಿ ವರುಷ ಸ್ಥಿತಿಕಾಲ ; ಹನ್ನೆರಡುವರಿ ವರುಷ ಪ್ರಳಯಕಾಲ, ಈ ಪ್ರಕಾರ, ಎಂಬತ್ತೇಳುವರಿ ವರುಷದಲ್ಲಿ, ವನಜಸಂಭವನೆನಿಸಿ – ಐವತ್ತನೇ ವರುಷ ಅಂತ್ಯದಿನ ರಾತ್ರಿಯಲ್ಲಿ ಪದ್ಮನಾಭದೇವರ ನಾಭಿಕಮಲದಿಂದ, ಪುನಶ್ಚ ಅಂಡದ ಹೊರಗೆ ಸಂಭವರೆನಿಸಿ, ಪ್ರಳಯಕಾಲ ವ್ಯತಿರಿಕ್ತ, ಮೂವತ್ತೇಳುವರಿ ವರುಷ, ಅವ್ಯಕ್ತಾದಿ–ಅಂಡದ ಹೊರಗೆ ರಮಾಭಿಮನ್ಯಮಾನವಾದ ಅವ್ಯಕ್ತತತ್ತ್ವದಲ್ಲಿ ಪ್ರವೇಶ ಇಲ್ಲದೇ ದೂರದಿಂದ ನೋಡುತ್ತಾ ಮಹತ್ತತ್ತ್ವದಾರಭ್ಯ, ಪೃಥ್ವ್ಯಂತರದಿ–ಅಂತ್ಯ ತತ್ತ್ವವಾದ ಪೃಥ್ವೀತತ್ತ್ವ ಪರಿಯಂತ ವ್ಯಾಪ್ತವಾಗಿ, ಗುಣ ತ್ರಯವರ್ಜಿತನ–ಪ್ರಾಕೃತ ಗುಣತ್ರಯಗಳಿಂದ, ಶೂನ್ಯನಾದ ಪರಮಾತ್ಮನ, ಮಂಗಳ–

ಮಂಗಳಕರಗಳಾದ, ಗುಣ ಕ್ರಿಯ ಸುರೂಪಗಳ–ಗುಣಗಳೇನು, ಕ್ರಿಯೆಗಳೇನು, ರೂಪ ಗಳೇನು, ಇವುಗಳ, ಉಪಾಸನವು–ಉಪಾಸನವು, ನೂರನೇದಾದ ಕಲ್ಪದಲ್ಲಿ, ಇರು ತಿಹುದು–ಇರೋದಾಗಿ ಅದೆ.

**ಮಹಿತ ಋಜುಗಣಕೊಂದೆ ಪರಮೋ ।**
**ತ್ಸಹವಿವರ್ಜಿತವೆಂಬ ದೋಷವು ।**
**ವಿಹಿತವೇ ಸರಿ ಇದನು ಪೇಳದೆ ಮುಕ್ತ ಬ್ರಹ್ಮರಿಗೆ ॥**
**ಬಹುದು ಸಾಮ್ಯ ಜ್ಞಾನ ಭಕುತಿಯು ।**
**ದ್ರುಹಿಣಪದಪರಿಯಂತ ವೃದ್ಧಿಯು ।**
**ಬಹಿರುಪಾಸನೆಯುಂಟನಂತರ ಬಿಂಬದರ್ಶನವು ॥ ೩೪ ॥**

ಋಜುಗಣದವರ ವಿಚಾರ ಹೇಳತಾರೆ.

ಮಹಿತ–ಏಕಕಾಲಾವಚ್ಛೇದೇನ ಇರತಕ್ಕ ಪೂಜ್ಯರಾದ ಇನ್ನೂರು ಮಂದಿ ಋಜು ಗಳು, ಒಂಪೇ ಕಾಲದಲ್ಲಿ ವರ್ತಮಾನ ಸೃಷ್ಟಿಯೊಳಗೆ ಇರೋವರಾಗಿದ್ದಾರೆ. (ಏಕಕಾಲ ದಲ್ಲಿ ಇನ್ನೂರು ಮಂದಿ ಇರೋ ಕ್ರಮ, ಈಶ್ವರನೇ ಬಲ್ಲ.) ಋಜುಗಣಕೆ–ಏಕಕಾಲಾ ವಚ್ಛೇದೇನ ಇರತಕ್ಕ ಋಜುಗಳಾದ ಇನ್ನೂರು ಮಂದಿಯ ಗಣಕ್ಕೆ, ಪರಮೋತ್ಸಾಹ– ಅತ್ಯಂತವಾಗಿ ಅತಿಶಯವಾದ ಉತ್ಸಾಹ, ಬ್ರಹ್ಮದೇವರಿಗೆ ಮಾತ್ರವೇ, ತದನ್ಯ ನೂರ ತೊಂಭತ್ತೊಂಭತ್ತು (೧೯೯) ಮಂದಿಗೆ, ವಿವರ್ಜಿತವು – ಬ್ರಹ್ಮದೇವರೋಪಾದಿಯಲ್ಲಿ ಉತ್ಸಾಹವಿರದೇ, ಅದರಿಂದ ವರ್ಜಿತರಾಗಿ ಇದ್ದಾರೆ. ಏಕಕಾಲಾವಚ್ಛೇದೇನ ಇದ್ದ ಮ್ಯಾಲೆ ಸಾಧನಿ, ಉತ್ಸಾಹ ಸರ್ವರಿಗೂ ಸಂಪೂರ್ಣದಿಂದ ಇರಬೇಕು. ಹಾಂಗೆ ಇರದೆ, ಪ್ರತಿ ಋಜುವಿಗೂ ಸಾಧನ ವ್ಯತ್ಯಾಸ, ಉತ್ಸಾಹ ವ್ಯತ್ಯಾಸವೂ ಇರೋದಾಗಿ ಸಮ ವರ್ಜಿತರಾಗಿ ವಿಷಮದಿಂದ ಇರೋವರಾಗಿ ಇದ್ದಾರೆ; (ಇದರ ಕಾರಣವೂ ದೇವರೇ ಬಲ್ಲ.) ಎಂಬ – ಪರಮೋತ್ಸಾಹ ವರ್ಜಿತವೆಂಬ, ಒಂದೇ – ಒಂದಾದ, ದೋಷವು–ಈ ದೋಷವೂ, ಇರೋದಾಗಿ ಅದೆ. ತದನ್ಯ ದೋಷ ದಾವುದೂ ಇಲ್ಲ. ವಿಹಿತವೇ ಸರಿ– ಈ ದೋಷ ವಿಹಿತವಾದದ್ದೇ ಸರಿ. ಇದು ಋಜುಗಳಿಗೆ ದೋಷಬಾಧಕವಲ್ಲ. ಇದನು ಪೇಳದೆ–ಇಂಥಾ ದೋಷವನ್ನು ಹೇಳದೇ ಹೋದರೆ, ಮುಕ್ತಬ್ರಹ್ಮರಿಗೆ–ಲಿಂಗಭಂಗರಾಗಿ, ಮುಕ್ತರಾದ ಬ್ರಹ್ಮರಿಗೆ, ಬಹುದು ಸಾಮ್ಯ–ಸಾಧನತಾರತಮ್ಯ ಕೆಟ್ಟು, ಬಹಳವಾಗಿ ಸಾಮ್ಯರಲ್ಲದವರ ಸಾಮ್ಯ, ಎಂತ ಹೇಳಬೇಕಾಗುತ್ತದೆ. ಇಂಥಾ ದುಸ್ಸಾಮ್ಯ ಅಂಗೀಕರಿಸ ಬೇಕಾಗತದೆ. ಇಂಥ ಸಾಮ್ಯ ಅನಾದಿಯಿಂದ ಇಲ್ಲ, ಈಗಲೂ ಇಲ್ಲ. ದ್ರುಹಿಣಪದ ಪರಿಯಂತ–ಈ ಇನ್ನೂರು ಮಂದಿ ಋಜುಗಳಿಗೆ, ಇನ್ನೂರನೇ ಪದವಾದ ಅಜಪದ ಪರಿಯಂತ, ವೃದ್ಧಿಯು–ಜ್ಞಾನಭಕುತಿ ವೈರಾಗ್ಯಾದಿಗಳ ಅಭಿವೃದ್ಧಿಯು, ಜ್ಞಾನಭಕು ತಿಯು–ಇವುಗಳು ಅಧಿಕವೇ ಹೊರ್ತು, ರುದ್ರಾದಿಗಳೋಪಾದಿಯಲ್ಲಿ ತಿರೋಧಾನವಾಗಿ ಮತ್ತೂ ವ್ಯಕ್ತವಾಗೋದಿಲ್ಲ. ಬಹಿರುಪಾಸನೆಯುಂಟನಂತರ–ಸ್ವರೂಪಕ್ಕೆ ಬಾಧ್ಯವಾದ

ಸ್ಥೂಲದೇಹದಲ್ಲೂ, ಸ್ಥೂಲದೇಹಕ್ಕೆ ಬಾಹ್ಯವಾದ ಬ್ರಹ್ಮಾಂಡದಲ್ಲೂ ಭಗವದುಪಾಸನಾ ಉಂಟು. ಈ ಉಪಾಸನ ಮಾಡಿದ ನಂತರ, ಬಿಂಬದರ್ಶನವು–ಜೀವಾಂತರ್ಗತನಾದ ಬಿಂಬದರ್ಶನವಾಗೋದ್ಹಾಗತದೆ.

**ಜ್ಞಾನರಹಿತ ಭಯುತ್ವ ಪೇಳ್ವ ಪು ।**
**ರಾಣ ದೈತ್ಯರ ಮೋಹಕವು ಚತು ।**
**ರಾನನಗೆ ಕೂಡುವುದೆ ಮೋಹಾಜ್ಞಾನ ಭಯ ಶೋಕ ॥**
**ಭಾನುಮಂಡಲ ಚಲಿಸಿದಂದದಿ ।**
**ಕಾಣುವುದು ದೃಗ್ದೋಷದಿಂದಲಿ ।**
**ಶ್ರೀನಿವಾಸನ ಪ್ರೀತಿಗೋಸುಗ ತೋರ್ದನಲ್ಲದಲೆ ॥ ೩೫ ॥**

ಬ್ರಹ್ಮದೇವರಿಗೆ ಅಜ್ಞಾನಾದಿ ದೋಷವಿಲ್ಲೆಂದು ಹೇಳತಾರೆ.

ಚತುರಾನನಗೆ – ಬ್ರಹ್ಮದೇವರಿಗೆ, ಜ್ಞಾನರಹಿತ – ಕಾಲವಿಶೇಷದಲ್ಲಿ ಅಜ್ಞಾನ, ಭಯುತ್ವ–ಭಯ ಅಂದರೆ, ಪದ್ಮನಾಭದೇವರ ನಾಭಿಕಮಲದಿಂದ ಜನಿಸಿದಾಗ್ಗೆ, ಬ್ರಹ್ಮ ದೇವರಿಗೆ ನಾಲ್ಕು ಬಾರಿ ಅಜ್ಞಾನವೂ, ಎರಡು ಬಾರಿ ಭಯವೂ, ಪ್ರಾಪ್ತವಾಯಿತೆಂದು, ಪೇಳ್ವ ಪುರಾಣ – ಪೇಳತಕ್ಕ ಪುರಾಣಗತ ಏಕದೇಶವಾಕ್ಯಗಳು, ದೈತ್ಯರ ಮೋಹಕವು – ದೈತ್ಯರ ಸ್ವರೂಪಸ್ವಭಾವ ದೋಷವಾದ್ದರಿಂದ, ಆ ಸ್ವರೂಪಾನುಸಾರ ಅವರಿಗೆ ಸಾಧನ ವಾಗಬೇಕು. ಬ್ರಹ್ಮದೇವರಲ್ಲಿ ವಿಪರೀತ ತಿಳಿದ ಹೊರ್ತು, ಅಸುರರಿಗೆ ಸಾಧನಿ ಪೂರ್ತಿ ಆಗೋದಿಲ್ಲ. ಆದ್ದರಿಂದ ಬ್ರಹ್ಮದೇವರಾದರೋ ತಮಗೆ ಲಿಂಗದೇಹವದೆ (ದಗ್ಧಪಟದಂತೆ ಅಕಾರ್ಯಕಾರಿಯಾಗಿ ಜ್ಞಾನತಿರೋಧಾನ ಮಾಡತಕ್ಕದ್ದಲ್ಲ) ಆದರೂ ಲಿಂಗದೇಹ ಇದ್ದ ಮ್ಯಾಲೆ ತತ್ಕಾರ್ಯ ಅಕಾರ್ಯಕಾರಿಯಾಗಿ ಪ್ರದರ್ಶನ ಮಾಡಬೇಕಾಗಿ ತೋರಿಸೋವ ರಾದರೇ ಹೊರ್ತು, ಮೋಹಾಜ್ಞಾನ ಭಯಶೋಕ–ಮೋಹ, ಅಜ್ಞಾನ, ಭಯ, ದುಃಖ, ಚತುರಾನನಗೆ ಕೂಡುವದೆ–ಬ್ರಹ್ಮದೇವರಿಗೆ ಹೇಳೋಣೆಂಬುದು ಕೂಡುವದೆ ಎಂದರೆ, ಕೂಡಲಾರದು. ಕಂಡದೇ ಎಂದರೆ, ದೃಗ್ದೋಷದಿಂದಲಿ–ನೇತ್ರದೋಷದಿಂದಲಿ, ಭಾನು ಮಂಡಲ ಚಲಿಸಿದಂದದಿ–ಸೂರ್ಯ ಮಂಡಲವನ್ನು ಮಧ್ಯಾಹ್ನ ಕಾಲದಲ್ಲಿ ದೃಷ್ಟಿಸಿ ನೋಡಿದರೆ, ಆ ಮಂಡಲ ಚಕ್ರಾಕಾರವಾಗಿ ಚಲಿಸಿದೋಪಾದಿಯಲ್ಲಿ, ಕಾಣುವುದು– ನೋಡತಕ್ಕವ ಕಾಣತಾನೆ. ಇವನ ಕಣ್ಣಿಗೆ ಹಾಗೆ ಕಂಡಿತೇ ಹೊರ್ತು, ಮಂಡಲವೇನೋ ಚಲಿಸಲಿಲ್ಲ. ತದ್ವತ್, ಅಸುರರ ಅಜ್ಞಾನದೋಷದಿಂದ ಅವರಿಗೆ ಹಾಗೆ ತೋರತದೇ ಹೊರ್ತು, ಬ್ರಹ್ಮಗೆ ಅಜ್ಞಾನಾದಿ ದೋಷವಿಲ್ಲ. ಶ್ರೀನಿವಾಸನ ಪ್ರೀತಿಗೋಸುಗ– ಅಸುರರನ್ನ ಮೋಹಿಸಿ ಅವರಿಗೆ ಅಜ್ಞಾನಾಭಿವೃದ್ಧಿ ಮಾಡುವುದು, ಶ್ರೀನಿವಾಸಗೆ ಪ್ರೀತಿಕರ ವಾದದ್ದು. ಆದಕಡಿಯಿಂದ ದೇವರ ಆಜ್ಞಾನುಸಾರ, ತೋರ್ದನಲ್ಲದಲೆ–ತೋರಿಸೋವ ರಾದರೇ ಹೊರ್ತು, ಬ್ರಹ್ಮಗೆ ಅಜ್ಞಾನಾದಿ ದೋಷವೂ ಇಲ್ಲ, ತದ್ವತ್ ಋಜು ಗಳಿಗೂ ಇಲ್ಲ.

**ಕಮಲಸಂಭವ ಸರ್ವರೊಳಗು ।**
**ತ್ತಮನೆನಿಸುವನು ಎಲ್ಲ ಕಾಲದಿ ।**
**ವಿಮಲ ಭಕುತಿ ಜ್ಞಾನ ವೈರಾಗ್ಯಾದಿ ಗುಣದಿಂದ ॥**
**ಸಮಭ್ಯಧಿಕವಿವರ್ಜಿತನ ಗುಣ ।**
**ರಮೆಯ ಮುಖದಿಂದರಿತು ನಿತ್ಯದಿ ।**
**ದ್ಯುಮಣಿಕೋಟಿಗಳಂತೆ ಕಾಂಬನು ಬಿಂಬರೂಪವನು ॥ ೩೬ ॥**

ಬ್ರಹ್ಮದೇವರ ವಿಚಾರ ಹೇಳತಾರೆ.

ಕಮಲಸಂಭವ–ಬ್ರಹ್ಮದೇವರು, ಸರ್ವರೊಳಗೆ–ಸಮಸ್ತ ತ್ರಿವಿಧ ಜೀವರೊಳಗೆ ಸ್ವರೂಪತಃ, ವಿಮಲ–ನಿರ್ದೋಷಗಳಾದ, ಭಕುತಿ ಜ್ಞಾನ ವೈರಾಗ್ಯಾದಿ–ಭಕ್ತಿ, ಜ್ಞಾನ, ವೈರಾಗ್ಯವೇ ಮೊದಲಾದ, ಗುಣದಿಂದ–ಗುಣಗಳಿಂದ, ಎಲ್ಲಕಾಲದಿ–ಸದಾಕಾಲದಲ್ಲಿ, ಉತ್ತಮನೆನಿಸುವನು – ಉತ್ತಮ ಎಂತ ಎನಿಸೋವರಾಗುತ್ತಾರೆ. ಇಂಥಾ ಜ್ಞಾನ ಭಕ್ತ್ಯಾದಿಗಳು ರುದ್ರಾದಿಗಳಿಗೆ ಇಲ್ಲ, ಬ್ರಹ್ಮದೇವರ ಸಂಗಡ ಋಜುಗಳೂ ಗ್ರಾಹ್ಯ. ಈ ಬ್ರಹ್ಮದೇವರು, ಸಮಭ್ಯಧಿಕವಿವರ್ಜಿತನ – ಸಮಾಧಿಕಶೂನ್ಯನಾದ ಪರಮಾತ್ಮನ, ಗುಣ–ಗುಣಗಳೇನು, ಇವುಗಳನ್ನ, ರಮೆಯ ಮುಖದಿಂದರಿತು–ರಮಾದೇವೇರ ಮುಖ ದಿಂದ ಉಪದಿಷ್ಟಿತರಾಗಿ ಗುಣೋಪಾಸನಮಾಡತಾ, ನಿತ್ಯದಿ–ಸತತ, ಬಿಂಬರೂಪವನು– ತಮ್ಮ ಸ್ವರೂಪ ಹೃದಯಾಂತರ್ಗತ ಬಿಂಬರೂಪವನ್ನ, ದ್ಯುಮಣಿಕೋಟಿಗಳಂತೆ– ಕೋಟಿ ಸೂರ್ಯಪ್ರಕಾಶದಂತೆ, ಕಾಂಬನು–ಅಪರೋಕ್ಷದಿಂದ ಕಾಣತಾರೆ.

**ಜ್ಞಾನಭಕ್ತ್ಯಾದ್ಯಖಿಳಗುಣ ಚತು ।**
**ರಾನನನೊಳಿಪ್ಪಂತೆ ಮುಖ್ಯ ।**
**ಪ್ರಾಣನಲಿ ಚಿಂತಿಪುದು ಯತ್ಕಿಂಚಿತು ಕೊರತೆಯಾಗಿ ॥**
**ನ್ಯೂನ ಋಜುಗಣ ಜೀವರಲಿ ಕ್ರ ।**
**ಮೇಣ ವೃದ್ಧಿ ಜ್ಞಾನಭಕುತಿ ಸ ।**
**ಮಾನ ಭಾರತಿ ವಾಣಿಗಳಲಿ ಪದಪ್ರಯುಕ್ತಧಿಕ ॥ ೩೭ ॥**

ಬ್ರಹ್ಮನ ಜ್ಞಾನಕ್ಕೂ, ವಾಯ್ವಾದಿ ಋಜುಗಳ ಜ್ಞಾನಕ್ಕೂ ತಾರತಮ್ಯ ಹೇಳತಾರೆ.

ಚತುರಾನನನೊಳು – ಬ್ರಹ್ಮದೇವರೊಳಿರುವಂಥಾ, ಜ್ಞಾನಭಕ್ತ್ಯಾದ್ಯಖಿಳಗುಣ– ಜ್ಞಾನ, ಭಕ್ತಿ ಇವೇ ಮೊದಲಾದ ಯಾವತ್ತೂ ಗುಣಗಳು, ಇಪ್ಪಂತೆ–ಬ್ರಹ್ಮದೇವರಲ್ಲಿ ಇದ್ದಂತೆ, ಅಷ್ಟು ಗುಣಗಳು, ಮುಖ್ಯಪ್ರಾಣನಲಿ–ಭಾವೀ ಬ್ರಹ್ಮರಾದ ವಾಯುದೇವರಲ್ಲಿ ಅವೆ, ಆದರೆ, ಯತ್ಕಿಂಚಿತು ಕೊರತೆಯಾಗಿ–ಸ್ಪಷ್ಟತ್ವದಲ್ಲಿ ಸ್ವಲ್ಪ ಕಡಿಮೆಯಾಗಿ ಅವೆ. ಚಿಂತಿಪುದು–ಬ್ರಹ್ಮದೇವರಲ್ಲಿ ಎಷ್ಟುಗುಣಗಳು ಅವೋ, ಅಷ್ಟೂ ಗುಣಗಳು ವಾಯು ದೇವರಲ್ಲಿವೆ, ಎಂತ ತಿಳಿಯಬೇಕು. ಋಜುಗುಣ ಜೀವರಲಿ–ವಾಯುದೇವರ ವ್ಯತಿರಿಕ್ತ

ಅಪರೋಕ್ಷಿಗಳಾದ ತೊಂಭತ್ತೆಂಟು (೯೮) ಮಂದಿ, ಅನಾಪರೋಕ್ಷಿಗಳು ನೂರುಮಂದಿ, ಅಂತು, ನೂರತೊಂಭತ್ತೆಂಟು (೧೯೮) ಮಂದಿ ಋಜು ಜೀವರಲ್ಲಿ, ನ್ಯೂನ–ವಾಯು ದೇವರಿಗಿಂತಲೂ ಕ್ರಮಾತ್ ತಾರತಮ್ಯಾನುಸಾರ ಸ್ಪಷ್ಟತ್ವದಲ್ಲಿ ನ್ಯೂನವು. ಈ ಸ್ಪಷ್ಟತ್ವಕ್ಕೆ ದೃಷ್ಟಾಂತ : ಇನ್ನೂರು (೨೦೦) ಬತ್ತಿಹಚ್ಚಿದ ದೀಪಪ್ರಕಾಶ ಬ್ರಹ್ಮದೇವರಿಗೆ, ನೂರತೊಂಭತ್ತೊಂಭತ್ತು (೧೯೯) ಬತ್ತಿ ಪ್ರಕಾಶ ವಾಯುದೇವರಿಗೆ. ಇದೇ ಪ್ರಕಾರ ತಾರತಮ್ಯಾನುಸಾರ ಕಡಿಮೆ ಸ್ಪಷ್ಟತ್ವ ಸರ್ವರಿಗೆ. ಸಮಾನ–ಋಜುಗಳು ಸ್ವರೂಪತಃ ೨೦೦ ಮಂದಿ ಸಮಾನರು, ಮೋಕ್ಷದಲ್ಲಿ ಸಮಾನ ಆನಂದವುಳ್ಳವರು. ಪದಪ್ರಯುಕ್ತಧಿಕ–ಸ್ಥಿತಿಕಾಲದಲ್ಲಿ ಸಾಧನಾತಾರತಮ್ಯದಿಂದಲೂ, ಪದಪ್ರಯುಕ್ತತಾರತಮ್ಯದಿಂದಲೂ ಒಬ್ಬರಿಂದ ಮತ್ತೊಬ್ಬರು ಅಧಿಕರೆಂತಲೂ ಕರಿಸುತ್ತಾರೆ. ಭಾರತಿವಾಣಿಗಳಲ್ಲಿ–ಬ್ರಹ್ಮಪತ್ನಿ ಸರಸ್ವತೀ, ವಾಯುಪತ್ನಿ ಭಾರತೀ, ತದನ್ಯರಾದ ೧೯೮ ಮಂದಿ ಋಜು ಪತ್ನೇರು, ಇವರ ಜ್ಞಾನಭಕ್ತ್ಯಾದಿಗಳು, ಬ್ರಹ್ಮ, ವಾಯು ಇತ್ಯಾದಿ ೨೦೦ ಋಜುಗಳು ಎಲ್ಲರೂ, ಇವರುಗಳಲ್ಲಿ ಸ್ಪಷ್ಟತ್ವ ಹ್ಯಾಂಗೋ ತದ್ವತ್, ವಾಣೀ, ಭಾರತೀ ಇವರುಗಳಿಗೂ ಹಾಂಗೇ, ಜ್ಞಾನಭಕುತಿ-ಋಜುಗಳಿಗೇನು, ಋಜುಪತ್ನೇರಿಗೇನು, ಜ್ಞಾನ, ಭಕ್ತಿ, ಕ್ರಮೇಣವೃದ್ಧಿ–ಬ್ರಹ್ಮಪದಪರಿಯಂತ ತಿರೋಧಾನವಿಲ್ಲದೆ ಕ್ರಮವಾಗಿ ವೃದ್ಧಿಹೊಂದುತ್ತಾ ಬರುತ್ತವೆ. ರುದ್ರಾದಿಗಳಿಗೆ ಮಧ್ಯೇ ಮಧ್ಯೇ ತಿರೋಧಾನವಾಗತಾ ಇರುತ್ತದೆ.

**ಸೌರಿ ಸೂರ್ಯನ ತೆರದಿ ಬ್ರಹ್ಮ ಸ ।**
**ಮೀರ ಗಾಯತ್ರೀ ಗಿರಿಗಳೊಳು ।**
**ತೋರುವುದು ಅಸ್ಪಷ್ಟರೂಪದಿ ಮುಕ್ತಿಪರಿಯಂತ ॥**
**ವಾರಿಜಾಸನ ವಾಯು ವಾಣೀ ।**
**ಭಾರತಿಗಳಿಗೆ ಮಹಾಪ್ರಳಯದಿ ।**
**ಬಾರದಜ್ಞಾನಾದಿದೋಷವು ಹರಿಕೃಪಾಬಲದಿ ॥ ೩೮ ॥**

ಋಜುಗಳ ಸ್ಪಷ್ಟತ್ವ ಜ್ಞಾನವಿಚಾರ ಹೇಳತಾರೆ.

ಬ್ರಹ್ಮ–ಬ್ರಹ್ಮದೇವರ ಸ್ಪಷ್ಟತ್ವ ಎಂಥಾದ್ದೆಂದರೆ, ಗಾಯತ್ರೀ–ವೇದಕ್ಕೆ ಮಾತೃಭೂತವಾದ ಗಾಯತ್ರೀ, ಗಿರಿಗಳೊಳು–ವೇದಗಳು, ಈ ಎರಡು ಅಧಿಷ್ಠಾನಗಳೊಳು, ಇದರಂತೆ ಸರ್ವ ಚರಾಚರ ಅಧಿಷ್ಠಾನಗಳೊಳು, ತನ್ನ ಹೃದಯಾಕಾಶದಲ್ಲಿ ಇದ್ದ ಪರಮಾತ್ಮ, ಈ ಸ್ಥಾನಗತ, ಸೂರ್ಯನ ತೆರದಿ–ಸೂರ್ಯನ ಪ್ರಕಾಶಗತ ಪದಾರ್ಥಗಳು ಹ್ಯಾಂಗೆ ಸ್ಪಷ್ಟವಾಗಿ ಗೋಚರವಾಗತವೋ ತದ್ವತ್, ಪೂರ್ವೋಕ್ತ ವೇದಾಧಿಷ್ಠಾನಗತ ಭಗವದ್ರೂಪಗಳು ಮತ್ತು ಅವನ ಗುಣಗಳು, ಬ್ರಹ್ಮದೇವರಿಗೆ ಸ್ಪಷ್ಟವಾಗಿ ತೋರೋವಾಗತವೆ. ಸಮೀರ–ವಾಯುದೇವರೂನೂ, ಪೂರ್ವೋಕ್ತ ಅಧಿಷ್ಠಾನಗತ ಭಗವದ್ರೂಪಗಳ ಕಾಣೋದರಲ್ಲಿ ಸ್ಪಷ್ಟತ್ವ ಎಂಥಾದ್ದೆಂದರೆ "ಅಸ್ಪಷ್ಟರೂಪೇ ಜ್ಞಾನಬಲೇ ವಿಶೇಷತಃ"

ಪ್ರಮಾಣ :–

"ಸೌರಿಪ್ರಕಾಶಸ್ಯ ಯಥೈವ ದರ್ಶನಂ ತಥಾ ಮಮ ಜ್ಞಾನಗತೋ ವಿಶೇಷಃ ||
ದೀಪಪ್ರಕಾಶಸ್ಯ ಯಥೈವ ದರ್ಶನಂ ತಥಾ ಜ್ಞಾನಂ ವಾಯುದೇವಸ್ಯ ಚಾಸ್ತಿ ||
ಅಸ್ಪಷ್ಟತಾ ನ್ಯೂನತಾ ಹ್ಯಸ್ತಿ ವಾಯೋಃ ತಥ್ಯಾಜ್ಞಾನಂ ನೈವ ಸಂಚಿಂತನೀಯಂ |
ಚೈತಾದೃಶ ಜ್ಞಾನವ್ಯಕ್ತಿರ್ಮುರಾರೇ ವಾಯ್ವಾದೀನಾಂ ಮೋಕ್ಷಪರ್ಯಂತಮಸ್ತಿ |
ವಾಯೋರ್ಮಮ ಪ್ರಳಯೇ ಸೃಷ್ಟಿಕಾಲೇ ತಥಾ ಗಾಯತ್ರ್ಯಾ ನಾಸ್ತಿ ನಾಸ್ತ್ಯೈವ
ಮೋಹಃ || ಗಾಯಿತ್ರೀವದ್ಭಾರತೀ ದೇವದೇವ" ಇತಿ ಗಾರುಡೇ ಬ್ರಹ್ಮಕಾಂಡೇ ||

ಸೌರಿ–ದೀಪವು ; ಸೂರ್ಯಸಂಬಂಧಿ ಸೌರಿ ; ದೀಪದಲ್ಲಿರುವ ಅಗ್ನಿಗೆ ಇರುವ ಪ್ರಕಾಶ ಗುಣ ಸೂರ್ಯಂದು, ಅಗ್ನಿಯದಲ್ಲ. ಆದ್ದರಿಂದ ಸೌರಿ ಎಂದರೆ, ದೀಪ ಎಂತ ಅರ್ಥ, ವಿಷ್ಣು ಪುರಾಣದಲ್ಲಿ ಉಕ್ತವಾಗಿದೆ. ಆದ್ದರಿಂದ ದೀಪಪ್ರಕಾಶಗತ ಪದಾರ್ಥಗಳು ಕಂಡೋಪಾದಿಯಲ್ಲಿ ವಾಯುದೇವರು ಕಾಣೋವರಾಗತಾರೆ. 'ಗಾಯತ್ರೀ ಗಿರಿಗಳೊಳು' ಈ ಪದ ಇಲ್ಲಿ ಮತ್ತೆ ಆವರ್ತನ ಮಾಡಿಕೋಬೇಕು. (ಈ ಪದ ಮೇಲೆ ಬಂದಿದೆ) ಬ್ರಹ್ಮಪತ್ನಿ ಗಾಯತ್ರೀ ದೇವೇರು. ಗಿರಿ ಎಂದರೆ, ವಾಯುಪತ್ನಿ ಭಾರತೀ ದೇವೇರು. ಇವರಿಗೆ ಬ್ರಹ್ಮವಾಯುಗಳೋಪಾದಿಯಲ್ಲಿ ಪರಸ್ಪರ ಸ್ಪಷ್ಟತ್ವದಲ್ಲಿ ತಾರತಮ್ಯವದೆ. ಅಸ್ಪಷ್ಟರೂಪದಿ–ಪೂರ್ವೋಕ್ತರಾದ ಬ್ರಹ್ಮ ಸರಸ್ವತೀಗಳಿಗೆ ಸ್ಪಷ್ಟತ್ವ ಇದ್ದೋಪಾದಿಯಲ್ಲಿ ವಾಯು ಭಾರತೀಗಳಿಗೆ ಇಲ್ಲದೇ, ಅಸ್ಪಷ್ಟ ರೂಪದಿಂದ ಕಾಣತಾರೆ. ಇದೇ ರೀತ್ಯಾ ಪರಸ್ಪರ ದಂಪತಿಗಳಲ್ಲಿ ತಾರತಮ್ಯ, ಮುಕ್ತಿಪರಿಯಂತ–ಪೂರ್ವೋಕ್ತರಿಗೆ ದಗ್ಧಪಟದೋ ಪಾದಿಯಲ್ಲಿ ಲಿಂಗದೇಹ ಇರೋಣದರಿಂದ, ಆ ಲಿಂಗ, ಭಂಗವಾಗಿ ಮುಕ್ತರಾಗೋ ಪರಿ ಯಂತ, ಕಿಂಚಿತ್ ಅಸ್ಪಷ್ಟವಾಗಿರೋದಾಗಿ ಇರುತ್ತದೆ. ಲಿಂಗಭಂಗವಾದ ಮೇಲೆ, ಆ ಅಸ್ಪಷ್ಟತ್ವ, ಪರಿಹಾರವಾಗಿ ತಮ್ಮ ತಮ್ಮ ಸ್ವರೂಪ ಹೃದಯಾಂತರ್ಗತ ಬಿಂಬ, ಸ್ಪಷ್ಟ ತ್ವೇನ ದರ್ಶನ, ತೋರುವುದು–ಪೂರ್ವೋಕ್ತ ಪ್ರಕಾರ ಸ್ಪಷ್ಟತ್ವದಿಂದ ತೋರತಾ ಇರು ತ್ತದೆ. ವಾರಿಜಾಸನ–ಬ್ರಹ್ಮದೇವರು, ವಾಯು–ಭಾವಿಬ್ರಹ್ಮರಾದ ಪ್ರಧಾನ ವಾಯು ದೇವರು, ವಾಣೀ–ಸರಸ್ವತೀ ದೇವೇರು, ಭಾರತಿಗಳಿಗೆ–ಭಾರತೀ ದೇವೇರು, ಈ ನಾಲ್ಕು ಮಂದಿಗಳಿಗೂ, ಹರಿಕೃಪಾಬಲದಿ–ಬಿಂಬನಾದ ಪರಮಾತ್ಮನ ಕೃಪಾಬಲದಿಂದ, ಮಹಾ ಪ್ರಳಯದಿ–ಮಹಾಪ್ರಳಯಪರಿಯಂತ ಮತ್ತು ಪ್ರಳಯವಾಗಿ ಉದರಪ್ರವೇಶಾನಂತರ, ದಾವಾಗ್ಯೂ, ಅಜ್ಞಾನಾದಿ ದೋಷವು–ಅಜ್ಞಾನಾದಿ ದೋಷವು, ಬಾರದು–ಬರೋದಿಲ್ಲ. ಹಾಂಗೆ ೨೦೦ ಮಂದಿ ಋಜುಗಳಿಗೂನೂ ; ರುದ್ರಾದಿಗಳಿಗಾದರೋ, ಅಜ್ಞಾನಾದಿಗಳು ಉಂಟು. ಬ್ರಹ್ಮದೇವರಿಗೆ, ವಾಯುದೇವರ ವಿವಕ್ಷಾ ಸ್ಪಷ್ಟತ್ವ ಅಧಿಕವೆಂತಲೂ, ಈ ಬ್ರಹ್ಮದೇವರಿಗೆ ಲಿಂಗಭಂಗವಾಗೋವರಿಗೂ ಅಸ್ಪಷ್ಟತ್ವ ಇರುತ್ತದೆ ಎಂತಲೂ, ಲಿಂಗ ಭಂಗಾನಂತರ ಇರತಕ್ಕ ಸ್ಪಷ್ಟತ್ವ, ಈಗ ಇಲ್ಲ ಎಂತಲೂ ಹೇಳಿದಂತಾಯಿತು ; ಇದಕ್ಕೂ ಸೂರ್ಯ ದೃಷ್ಟಾಂತವೇ. ಸೂರ್ಯಮಂಡಲ ದೃಷ್ಟಿಸಿ ನೋಡಿದರೆ, ಮಂಡಲ ಕಾಣು ತ್ತದೆ. ಆ ಕಾಣೋದರಲ್ಲಿ ಸ್ಪಷ್ಟತ್ವ ಹ್ಯಾಂಗೆ ಕಡಿಮೆಯೋ ತದ್ವತ್, ಎಂತ ತಾತ್ಪರ್ಯ.

**ನೂರು ವರುಷಾನಂತರದಲಿ ಸ ।**
**ರೋರುಹಾಸನ ತನ್ನ ಕಲ್ಪದ ।**
**ಲಾರು ಮುಕ್ತಿಯನೈದುವರೊ ಅವರವರ ಕರೆದೊಯ್ದು ॥**
**ಶೌರಿಪುರದೊಳಗಿಪ್ಪ ನದಿಯಲಿ ।**
**ಕಾರುಣಿಕ ಸುಸ್ನಾನ ನಿಜಪರಿ ।**
**ವಾರ ಸಹಿತದಿ ಮಾಡಿ ಹರಿಯುದರ ಪ್ರವೇಶಿಸುವ ॥ ೩೯ ॥**

ಬ್ರಹ್ಮದೇವರ ಲಿಂಗಭಂಗ ವಿಚಾರ ಹೇಳತಾರೆ.

ಸರೋರುಹಾಸನ–ಬ್ರಹ್ಮದೇವರು, ಬ್ರಹ್ಮಪದಕ್ಕೆ ಬಂದ ವರ್ತಮಾನ ಬ್ರಹ್ಮಕಲ್ಪ ಎಂಬುದು, ನೂರುವರುಷ – "ಚತುರ್ಯುಗಸಹಸ್ರಾಣಿ ಬ್ರಹ್ಮಣೋ ದಿನಮುಚ್ಯತೇ" ಎಂಬ ಪ್ರಮಾಣಾನುಸಾರ, ಇಂಥಾ ಕಾಲಸಾಂಕೇತದಿಂದ ನೂರುವರ್ಷ ಇರೋದಾಗಿ ಇರುತ್ತದೆ; ಪ್ರತಿ ಬ್ರಹ್ಮಕಲ್ಪಕ್ಕೂ ಇದೇ ನೇಮ; ಈ ನೂರುವರುಷ ಬ್ರಹ್ಮಗೆ ಆಯು ಮಾನ; ಈ ನೂರುವರ್ಷಕ್ಕೆ ಅನುಸರಿಸಿದ್ದು ಬ್ರಹ್ಮಗೆ ಒಂದು ಜನ್ಮ. ಅನಂತರದಲಿ– ಈ ನೂರುವರುಷಾನಂತರ ಪ್ರಳಯ; ಆಗ ಬ್ರಹ್ಮದೇವರು ತಮ್ಮ ಸ್ಥೂಲದೇಹ ತ್ಯಾಗ ಮಾಡತಾರೆ. ತದ್ವತ್, ಸರ್ವದೇವತೆಗಳಿಗೂ ಈ ಪ್ರಕಾರ ನವಾವರಣಸಹಿತ ಚರಾಚರ ಗಳಿಗೂ ನೂರುವರುಷಕ್ಕೆ ಸರಿಯಾಗಿ ಪ್ರಳಯ ಆಗುತ್ತದೆ. ನಂತರ, ತನ್ನ ಕಲ್ಪದಲಿ– ತಾನು ಸತ್ಯಲೋಕಾಧಿಪತ್ಯ ಆಳತಕ್ಕ ಬ್ರಹ್ಮಕಲ್ಪದಲ್ಲಿ ವಿದ್ಯಮಾನರಾದ, ಸಾಂಶನಿರಂಶರ ಜೀವರೊಳಗೆ ತನ್ನಸಂಗಡ ಲಿಂಗಭಂಗ ಐದತಕ್ಕವರು, ಹಾಂಗೇ ವಾಯುದೇವರು, ಹಾಂಗೇ ತದನ್ಯ ಋಜುಗಳು, ಇವರಸಂಗಡ ಲಿಂಗಭಂಗ ಐದತಕ್ಕವರು; ಈ ಪ್ರಕಾರ ದ್ವಿವಿಧ ಜೀವರು ಇರೋವರಾಗಿ ಇದ್ದಾರೆ. ಇವರಲ್ಲಿ ಸಾಧನಿ ಪೂರ್ತಿಯಾದವರನ್ನ ಈ ತನ್ನ ಕಲ್ಪದಲ್ಲಿ, ತನ್ನಸಂಗಡ, ಆರು ಮುಕ್ತಿಯನು ಐದುವರೊ–ದಾರು ದಾರು ಮುಕ್ತಿ ಐದಬೇಕಾದವರೋ, ಅವರವರ–ಆ ಸಾಂಶ, ನಿರಂಶರಾದವರನ್ನ, ಕರೆದೊಯ್ದು– ಕರಕೊಂಡು ಹೋಗುತ್ತಾರೆ. ತದನ್ಯರಾದ ಸಾಧನಿ ಅವಶಿಷ್ಟ ಉಳಿದವರನ್ನ, ಈ ವಾಯುದೇವರು ಬ್ರಹ್ಮಪದಕ್ಕೆ ಬಂದನಂತರ, ಇವರ ಸಂಗಡ ಮುಕ್ತರಾಗತಕ್ಕವರನ್ನ ಬಿಟ್ಟು ಎಂದರೆ, ಇವರೊಳಗೂ, ಸಾಂಶನಿರಂಶರನ್ನ ಬಿಟ್ಟು ಎಂತ ಅರ್ಥ, ಶೌರಿಪುರದೊಳಗಿಪ್ಪ– ಪರಮಾತ್ಮ ಇರತಕ್ಕ ವೈಕುಂಠಸ್ಥಾನಗತ, ನದಿಯಲಿ–ಈ ವೈಕುಂಠಕ್ಕೆ ಏಳನೇ ಪ್ರಾಕಾರ ಮಧ್ಯದಲ್ಲಿ ಇರುವ ಲಕ್ಷ್ಮ್ಯಾಖ್ಯ ರಮಾಭಿನ್ನವಾದ ಜಲದಿಂದ ಯುಕ್ತವಾದ ನದಿಯಲ್ಲಿ, ಕಾರುಣಿಕ–ಕರುಣವುಳ್ಳ ಬ್ರಹ್ಮದೇವರು, ನಿಜಪರಿವಾರಸಹಿತದಿ – ನಿಜಪರಿವಾರರಾದ, ಮುಖ್ಯ ತತ್ತ್ವಾಭಿಮಾನಿಗಳಾದ, ಗರುಡ ಶೇಷಾದಿ ಶತಸ್ಥಪರಿಯಂತ, ಅಮುಖ್ಯ ತತ್ತ್ವಾಭಿಮಾನಿಗಳಾದ ಪುಷ್ಕರಾಂತ ಏತಾದೃಶಪರಿವಾರಸಹಿತ, ವೈಕುಂಠಗತ ವಿರಜಾ ನದಿಯಲ್ಲೂ, ತದನ್ಯ ಅತಾತ್ತ್ವಿಕರಾದ, ಸಾಂಶರಾದ ಆಜಾನಜ ದೇವತೆಗಳು, ನಿರಂಶ ರಾದ ಮಾನುಷಗಂಧರ್ವಾರಭ್ಯ ತೃಣಾಂತ ನಿರಂಶರ, ಶ್ವೇತದ್ವೀಪಸ್ಥ ಲಕ್ಷ್ಮ್ಯಾತ್ಮಕ

ವಿರಜಾನದಿಯಲ್ಲೂ, ಎಂದರೆ, ಆಜಾನಜರಿಗೆ ನಿರಂಶರಿಗೆ ಲಿಂಗಭಂಗಾನಂತರ ಮುಕ್ತಸ್ಥಾನ, ಮಹರಾದಿ ಸತ್ಯಲೋಕಾಂತವಾದ್ದರಿಂದ ಇವರಿಗೆ ಶ್ವೇತದ್ವೀಪಗತ ವಿರಜಾನದಿ ಸ್ನಾನ; ಈ ಪ್ರಕಾರ ಕಾಲಭೇದದಿಂದ ಸ್ಥಾನಭೇದಗಳಲ್ಲಿ, ಸುಸ್ನಾನ–ಸಮೀಚೀನವಾದ ಸ್ನಾನ ವನ್ನು, ಮಾಡಿ–ತಾವು ಮಾಡಿ, ಸರ್ವರಿಗೂ ಮಾಡಿಸಿ ಲಿಂಗಭಂಗ ಐದಿಸೋವರಾಗು ತ್ತಾರೆ. ತಮ್ಮಸಹಿತ ಸರ್ವರಿಗೂ ಈಶ್ವರೇಚ್ಛಾವರಣ ಮಾತ್ರ ಇರೋದಾಗಿ ಇರುತ್ತದೆ. ಇದು ಸೃಷ್ಟಿ ಪ್ರಾರಂಭದಲ್ಲಿ, ಶ್ವೇತದ್ವೀಪಗತ ವಾಸುದೇವನ ದ್ವಾರಾ ಅಪಸರಣವಾಗೋ ದಾಗತದೆ. ಈ ಪ್ರಕಾರ ಸ್ನಾನಮಾಡಿ, ಲಿಂಗಭಂಗವಾಗಿ, ಹರಿಯುದರ ಪ್ರವೇಶಿಸುವ– ಪರಮಾತ್ಮನಾದ ವಾಸುದೇವನ ಉದರಪ್ರವೇಶ ಮಾಡುತ್ತಾರೆ. ವಾಯುದೇವರು ಲಿಂಗ ಭಂಗವಿಲ್ಲದ ಅಮುಕ್ತರ ಸಹಿತರಾಗಿ ವಾಸುದೇವನ ಉದರಪ್ರವೇಶ ಮಾಡುತ್ತಾರೆ. ಈ ಪ್ರಕಾರ ತ್ರಿವಿಧಜೀವರೂ, ಅನಂತಕಲ್ಪದ ಮುಕ್ತರೂ ವಾಸುದೇವನ ದ್ವಾರಾ ನಾರಾಯಣನ ಉದರಪ್ರವೇಶರಾಗಿ, ಉದರದಲ್ಲಿ ಅವರವರು ಸ್ಥಾನಾಂತರದಲ್ಲಿ ಇರುತ್ತಾರೆ.

**ವಾಸುದೇವನ ಉದರದಲಿ ಪ್ರ ।**
**ವೇಶಗೈದಾನಂತರದಿ ನಿ ।**
**ರ್ದೋಷಮುಕ್ತರು ಉದರದಿಂ ಪೊರಮಟ್ಟು ಹರುಷದಲಿ ॥**
**ಈಶನಿಂದಾಜ್ಞವ ಪಡೆದನಂ ।**
**ತಾಸನ ಶ್ವೇತದ್ವೀಪ ಮೋಕ್ಷದಿ ।**
**ವಾಸವಾಗಿ ವಿಮುಕ್ತದುಃಖರು ಸಂಚರಿಸುತಿಹರು ॥ ೪೦ ॥**

ಪ್ರಳಯಾನಂತರದ ವಿಚಾರ ಹೇಳತಾರೆ.

ವಾಸುದೇವನ–ಪರಮಾತ್ಮನಾದ ವಾಸುದೇವನ, ಉದರದಲಿ ಪ್ರವೇಶ–ಇಚ್ಛಾ ವರಣರಹಿತರಾದ ಅನಂತಕಲ್ಪದ ನಿರ್ದೋಷಮುಕ್ತರೇನು, ಇಚ್ಛಾವರಣಸಹಿತರಾದ ಲಿಂಗಭಂಗಮಾತ್ರ ಐದಿದ ದೋಷಯುಕ್ತರಾದ ಮುಕ್ತರೇನು, ಈ ಉಭಯರೂ ಉದರ ಪ್ರವೇಶ, ಗೈದಾನಂತರದಿ – ಮಾಡಿದ ಅನಂತರದಲ್ಲಿ, ವಾಸುದೇವ ನಾರಾಯಣನಲ್ಲಿ 'ಗುಂಜಾಪುಂಜವತ್' ಏಕೀಭವಿಸುತ್ತಾರೆ. ನಂತರ ಸರ್ವರೂ, ತದ್ದ್ವಾರಾ ನಾರಾಯಣನ ಉದರಪ್ರವಿಷ್ಟರಾಗುತ್ತಾರೆ. ನಂತರ, ಉದರದಿಂ ಪೊರಮಟ್ಟು–ಇಚ್ಛಾವರಣಸಹಿತರಾದ ವರು ನಾರಾಯಣನ ಹೃದಯದಿಂದ ಹೊರಟು ಪದ್ಮಸೃಷ್ಟಿಕಾಲದಲ್ಲಿ, ಈಶನಿಂದ– ಮಾಯಾನಾಮಕರಾದ ಲಕ್ಷ್ಮೀದೇವೇರಿಗೆ ಈಶನಾದ ವಾಸುದೇವನಿಂದ ಇಚ್ಛಾವರಣ, ಅಪಸರಣಮಾಡಲ್ಪಟ್ಟು, ನಿರ್ದೋಷಮುಕ್ತರು–ದೋಷರಹಿತರಾದ ಮುಕ್ತರು ಎಂತ ಕರಿಸಿದವರಾಗಿ, ಆಜ್ಞವ ಪಡೆದು–ವಾಸುದೇವನ ಆಜ್ಞಾ ಹೊಂದಿ, ಇವರೇನು, ವಿಮುಕ್ತ ದುಃಖರು – ತದನ್ಯರಾದ ಅನಂತಕಲ್ಪದ, ವಿಶೇಷಾಕಾರರಾದ ಮುಕ್ತಜೀವರೇನು, ಹರುಷದಲಿ–ತಮ್ಮ ತಮ್ಮ ಸ್ವರೂಪಾನಂದದಲ್ಲಿ, ಅನಂತಾಸನ–ಅನಂತಾಸನದಲ್ಲಿ ಕೆಲವು

ಅಧಿಕಾರಿಗಳು, ಶ್ವೇತದ್ವೀಪ–ಶ್ವೇತದ್ವೀಪದಲ್ಲಿ ಕೆಲವು ಅಧಿಕಾರಿಗಳು, ಮೋಕ್ಷದಿ–ಮೋಕ್ಷ ಸಾಂಕೇತವಾದ ವೈಕುಂಠದಲ್ಲಿ ಕೆಲವು ಅಧಿಕಾರಿಗಳು, ವಾಸವಾಗಿ–ಆವಾಸರಾಗಿ, ಸಂಚರಿಸುತಿಹರು–ಸಂಚಾರಮಾಡುತ್ತಾ ಇರತಾರೆ.

**ಸತ್ತ್ವ ಸತ್ತ್ವ ಮಹಾಸುಸೂಕ್ಷ್ಮವು ।**
**ಸತ್ತ್ವಸತ್ತ್ವಾತ್ಮಕ ಕಳೇವರ ।**
**ಸತ್ಯಲೋಕಾಧಿಪನೆನಿಪಗತ್ಯಲ್ಪವೆರಡು ಗುಣ ॥**
**ಮುಕ್ತಿಯೋಗ್ಯವಿದಲ್ಲಜಾಂಡೋ ।**
**ತ್ಪತ್ತಿಕಾರಣವಲ್ಲ ಹರಿಪ್ರೀ ।**
**ತ್ಯರ್ಥವಾಗೀ ಜಗದ್ವ್ಯಾಪಾರಗಳ ಮಾಡುವನು ॥ ೪೧ ॥**

ಬ್ರಹ್ಮನ ಸ್ಥೂಲಶರೀರ ವಿಚಾರ ಹೇಳತಾರೆ.

ಸತ್ತ್ವ–ಸೃಷ್ಟಿಗೆ ಕಾರಣವಾದ ಸತ್ತ್ವಗುಣವೊಂದು, ಸತ್ತ್ವ–ಇದರಲ್ಲಿ ವಿಭಾಗ ಮಾಡಿದ ಸತ್ತ್ವ, ಮಹಾಸುಸೂಕ್ಷ್ಮವು–ಮತ್ತೂ ಇದರಲ್ಲಿ ವಿಭಾಗವಾದ, ಶ್ರೇಷ್ಠವಾದ, ಸಮಿಾಚೀನವಾದ ಸೂಕ್ಷ್ಮ ಸತ್ತ್ವವು ಎಂಬೋಣದರಿಂದ, ಒಂದು ಸತ್ತ್ವಗುಣವನ ಮೂರಾವರ್ತಿ ಶೋಧನಮಾಡಿದರೆ, ಅದರಿಂದ ನಿಂತ ನಿರ್ದೋಷವಾದ ಸತ್ತ್ವಗುಣ, ಸತ್ತ್ವ ಸತ್ತ್ವಾತ್ಮಕ–ಈ ಪ್ರಕಾರ ಸತ್ತ್ವದಲ್ಲಿ ವಿಭಾಗವಾದ ಸತ್ತ್ವಪ್ರಾಚುರ್ಯಗುಣವೊಂದು, ಅತ್ಯಲ್ಪವೆರಡು ಗುಣ–ಈ ಸತ್ತ್ವದ ಕೂಡ ಗಣನಕ್ಕೆ ಯೋಗ್ಯವಲ್ಲದ, ಅತ್ಯಲ್ಪ ಎಂತ ಹೇಳೋದಕ್ಕೆ ಮಾತ್ರ ಸಾಧ್ಯವಾದ ರಜೋಗುಣ, ತಮೋಗುಣ, ಎರಡು ಗುಣಗಳು, ಅಂತು ಮೂರುಗುಣಗಳು ಸೇರಿ, ಕಳೇವರ–ಮಹತ್ತತ್ತ್ವಾತ್ಮಕ ಶರೀರವುಳ್ಳವನೆಂದು, ಸತ್ಯಲೋಕಾಧಿಪನು–ಸತ್ಯಲೋಕಾಧಿಪ ಬ್ರಹ್ಮದೇವರು, ಎನಿಪಗೆ–ಎನಿಸಿಕೊಂಬೋವರಿಗೆ, ಮುಕ್ತಿಯೋಗ್ಯವಿದಲ್ಲ–ಬ್ರಹ್ಮದೇವರ ಶರೀರಕ್ಕೆ ಬದ್ಧವಾಗಿರುವ ಸತ್ತ್ವಗುಣ, ಲಿಂಗಭಂಗರಾದ ಮುಕ್ತರು, ಸತ್ತ್ವಗುಣದಿಂದ ನಾನಾದೇಹಗಳ ಧರಿಸಿ ಭೋಗಮಾಡತಕ್ಕ ಸತ್ತ್ವಗುಣ ದಾವುದದೆ, ಅದು ಪ್ರತ್ಯೇಕ. ಈ ಸತ್ತ್ವಗುಣ ಬ್ರಹ್ಮನ ಶರೀರವಾಗಲಿಲ್ಲ. ಬ್ರಹ್ಮನ ಶರೀರಕ್ಕೆ ಬದ್ಧವಾಗಿರುವ ಸತ್ತ್ವಗುಣ ಬ್ಯಾರೆ, ಅಜಾಂಡೋತ್ಪತ್ತಿ ಕಾರಣವಲ್ಲ–ಮತ್ತು ಬ್ರಹ್ಮನ ಶರೀರಕ್ಕೆ ಬದ್ಧ, ಸತ್ತ್ವ, ರಜ, ತಮೋಗುಣಗಳು ಬ್ರಹ್ಮಾಂಡ ಉತ್ಪತ್ತಿಗೆ ಕಾರವಾದ ಗುಣತ್ರಯಗಳಿಂದ ಆದ ಶರೀರವ ಎಂದರೆ, ಅಂಥಾ ಗುಣತ್ರಯಗಳಿಂದಲೂ ಆದ ಶರೀರವಲ್ಲ, ಸರ್ವವಿಲಕ್ಷಣಶರೀರವೆಂತ ಅರ್ಥ. ಈ ಜಗದ್ವ್ಯಾಪಾರಗಳ–ಈ ಜಗತ್ತಿನ ಸೃಷ್ಟಿ ಮಾಡೋ ವ್ಯಾಪಾರಗಳ, ಗುಣತ್ರಯ ಪ್ರತಿಬಂಧಕದಿಂದ ಮಾಡತಾರಾ ಎಂದರೆ, ತತ್ಪ್ರತಿಬಂಧಕದಿಂದಲೂ ಮಾಡೋದಿಲ್ಲ. ಗುಣತ್ರಯಗಳ ಪ್ರತಿಬಂಧಕವೂ ಇಲ್ಲ. ಹರಿಪ್ರೀತ್ಯರ್ಥವಾಗಿ – ಬಿಂಬನಾದ ಪರಮಾತ್ಮನ ಪ್ರೀತ್ಯರ್ಥವಾಗಿ, ಮಾಡುವನು – ಜಗದ್ವ್ಯಾಪಾರಗಳ ಮಾಡೋವರಾಗತಾರೆ. ಬ್ರಹ್ಮನ ಶರೀರಕ್ಕೆ ಬದ್ಧವಾಗಿರುವ ಗುಣತ್ರಯಗಳು, ಚರಾಚರ ಪ್ರಪಂಚಕ್ಕೆ ವಿಲಕ್ಷಣವಾದ ಗುಣತ್ರಯಗಳು. ಇಲ್ಲಿಗೆ ಋಜುಗಳ

ವಿಚಾರ ಮುಗಿಯಿತು. ಇವರಿಗೆ ೨೦೦ ಕಲ್ಪ ಆದ್ಯಂತ ಸಾಧನ ವಿಚಾರ ಹೇಳಿದಂತಾಯಿತು. ಇನ್ನು, ರುದ್ರಾದಿಗಳ ಸಾಧನ ವಿಚಾರ ಹೇಳುತ್ತಾರೆ.

**ಪಾದನ್ಯೂನ ಶತಾಬ್ದ ಪರಿಯಂ ।**
**ತೋದಿ ಉಗ್ರತಪಾಹ್ವಯದಿ ಲವ ।**
**ಣೋದಧಿಯೊಳಗೆ ಕಲ್ಪದಶ ತಪವಿದ್ದನಂತರದಿ ॥**
**ಸಾಧಿಸಿದ ಮಹದೇವ ಪದವಾ ।**
**ರೈದುನವಕಲ್ಪಾವಸಾನಕೆ ।**
**ಐದುವನು ಶೇಷನ ಪದವ ಪಾರ್ವತಿಸಹಿತವಾಗಿ ॥ ೪೨ ॥**

ರುದ್ರದೇವರ ಸಾಧನ ವಿಚಾರ ಹೇಳುತ್ತಾರೆ.

ಮಹದೇವ–ವರ್ತಮಾನ ಕೈಲಾಸಾಧಿಪತಿಯಾದ ರುದ್ರದೇವರು, ಪದವ–ವರ್ತಮಾನ ರುದ್ರಪದಕ್ಕೆ ಬರಬೇಕಾದರೆ ಸಾಧನವಮಾಡಿದರು. ಹ್ಯಾಂಗೆಂದರೆ, ಶತಾಬ್ದ–ನೂರು ವರುಷ ಎಂದರೆ, ಒಂದು ಬ್ರಹ್ಮಕಲ್ಪಕ್ಕೆ ಬ್ರಹ್ಮಮಾನದಿಂದ ಆದ್ಯಂತ ವರುಷಗಳು ನೂರು (ಈ ಶ್ಲೋಕಾರ್ಥಕ್ಕೆ ಸಮಾಖ್ಯಾನವಾದ ನಾಂದಿ ಸಂಧಿಯಾದ ಪ್ರಥಮ ಸಂಧಿ, ೧೧ ನೇ ಶ್ಲೋಕ ಪ್ರಮಾಣತ್ವೇನ ಉಪಹರಿಸಿ ಅರ್ಥ ಹೇಳಲ್ಪಡತದೆ).

ಕೃತ್ತಿವಾಸನೆ ಹಿಂದೆ ನೀ ನಾ ।
ಲ್ವತ್ತು ಕಲ್ಪ ಸಮೀರನಲಿ ಶಿ ।
ಷ್ಯತ್ವ ವಹಿಸ್ಯಖಿಳಾಗಮಾರ್ಥಗಳೋದಿ ಜಲಧಿಯೊಳು ॥
ಹತ್ತು ಕಲ್ಪದಿ ತಪವ ಗೈದಾ ।
ದಿತ್ಯರೊಳಗುತ್ತಮನೆನಿಸಿ ಪುರು ।
ಷೋತ್ತಮನ ಪರಿಯಂಕ ಪದವೈದಿದೆಯೊ ಮಹದೇವ ॥

ಪಾದನ್ಯೂನ–ಪೂರ್ವೋಕ್ತ ಒಂದು ಬ್ರಹ್ಮಕಲ್ಪದ ನೂರು ವರುಷಗಳು, ಇದರಲ್ಲಿ ಪಾದಸಾಂಕೇತವಾದ ವರುಷಗಳು ಇಪ್ಪತ್ತೈದು (೨೫) ಕಡಿಮೆ ಮಾಡಿದರೆ, ಉಳಿದ ವರುಷಗಳು ಎಪ್ಪತ್ತೈದು. ಪರಿಯಂತ–ಈ ಎಪ್ಪತ್ತೈದು ವರುಷ ವಾಯುದೇವರ ಕುರಿತು ತಪಸ್ಸುಮಾಡಿದ್ದು, ನಾಂದಿ ಸಂಧಿಯ ೧೧ ನೇ ಶ್ಲೋಕದಲ್ಲಿ 'ಹಿಂದೆ' ಎಂತ ಪ್ರಯೋಗ ಮಾಡಿ ಇರೋಣದರಿಂದ, 'ಹಿಂದೆ' ಎಂಬುದು ರುದ್ರಪದ ಆಳತಕ್ಕ ಕಲ್ಪವಾದ ವರ್ತಮಾನ ಬ್ರಹ್ಮಕಲ್ಪಕ್ಕೆ ಹಿಂದಿನ ಬ್ರಹ್ಮಕಲ್ಪ ಎಂತ ಸಾಂಕೇತವು. ದಾವದರಾರಭ್ಯ ಎಪ್ಪತ್ತೆಂಟನೇ ಕಲ್ಪ ಎಂದರೆ, ರುದ್ರದೇವರು ಅಸೃಜ್ಯರಾಶಿಯಿಂದ ದಾವ ಕಲ್ಪದಲ್ಲಿ ಸೃಷ್ಟಿಗೆ ಬಂದರೋ, ಆ ಕಲ್ಪದಾರಭ್ಯ ವರ್ತಮಾನ ಕಲ್ಪಕ್ಕೆ, ಹಿಂದಿನ ಕಲ್ಪದವರಿಗೂ ೭೮ ಕಲ್ಪವಾಗುತ್ತದೆ. ೭೯ ನೇ ದಾದ ವರ್ತಮಾನ ಕಲ್ಪದಲ್ಲಿ ರುದ್ರಪದ ಪ್ರಾಪ್ತಿ. ಮುಂದಿನ ೮೦ನೇ ಕಲ್ಪದಲ್ಲಿ ಶೇಷದೇವರ ಪದಪ್ರಾಪ್ತಿ. ೮೦ನೇ ಕಲ್ಪದ ಅಂತ್ಯ ಭಾಗವಾದ

ಪ್ರಳಯಕಾಲದಲ್ಲಿ ಲಿಂಗಭಂಗವಾಗತದೆ. ಇದು ನೇಮವಾದ್ದರಿಂದ ವರ್ತಮಾನ ಶ್ಲೋಕ ಗತ ಸಾಧನಿ 'ಹಿಂದೆ' ಎಂಬೋಣದರಿಂದ ಈ ಕಲ್ಪಕ್ಕೆ ಹಿಂದಿನ ಕಲ್ಪವಾದ ೭೮ನೇ ಬ್ರಹ್ಮ ಕಲ್ಪದಲ್ಲಿ ಮಾಡಿದ ಸಾಧನಿ. ಪೂರ್ವೋಕ್ತ ೭೫ ವರುಷಗಳು ವಾಯುದೇವರ ಅನುಗ್ರಹ ಸಂಪಾದಿಸೋದಕ್ಕಾಗಿ ವಾಯುದೇವರ ಕುರಿತು ತಪಸ್ಸು ಮಾಡೋವರಾದರು. ವಾಯು ದೇವರ ಪ್ರಸಾದ ಸಂಪಾದಿಸಿದ ವ್ಯಾಲಿ ಇಪ್ಪತ್ತೈದು (೨೫) ವರುಷ ಉಳಿದದೆ. ಈ ಇಪ್ಪತ್ತೈದು ವರುಷದೊಳಗೆ ಹನ್ನೆರಡುವರಿ (೧೨ ೧/೨) ವರುಷ ಪ್ರಳಯಕಾಲದ ವರುಷ ಗಳು. ಇದರನ್ನ ಇಪ್ಪತ್ತೈದರಲ್ಲಿ ಕಡಿಮೆ ಮಾಡಿದರೆ ಉಳಿದ ವರುಷಗಳು ಹನ್ನೆರಡುವರಿ (೧೨ ೧/೨), ಇವು ಸ್ಥಿತಿಕಾಲದ ವರುಷಗಳು. ಇವಕ್ಕೆ ದಿನಗಳ ವಿವರ.

ನಾಲ್ಕುಸಾವಿರ ಐದುನೂರು (೪,೫೦೦) ದಿನಗಳು ಇದರಲ್ಲಿ ಸಾಧನಕ್ರಮ. ಓದಿ– ನಾಲ್ವತ್ತು (೪೦) ದಿನಕಲ್ಪ ಸಮೀರನಲ್ಲಿ ಶಿಷ್ಯರಾಗಿ ಅಖಿಲಾಗಮಾರ್ಥಗಳ ಓದಿದನಂತರ, ಉಗ್ರತಪ–ನಾಲ್ಕುಸಾವಿರದ ನಾನೂರು ಅಯಿವತ್ತು (೪,೪೫೦), ಈ ದಿನಕಲ್ಪಗಳಲ್ಲಿ ಉಗ್ರ ತಪಸ್ಸು ಮಾಡಿ, ಆಹ್ವಯದಿ–**'ಉಗ್ರತಪ'** ಎಂತ ನಾಮದಿಂದ ಕರಿಸಿ ನಂತರ, ಕಲ್ಪದಶ–ಹತ್ತು, ಬ್ರಹ್ಮನ ದಿನಕಲ್ಪಗಳು ಹತ್ತರ ಪರಿಯಂತ, ಲವಣೋದಧಿಯೊಳಗೆ– ಲವಣ ಸಮುದ್ರದೊಳಗೆ, ತಪವಿದ್ದ–ತಪಸ್ಸು ಮಾಡತಾ ಇರೋವರಾದರು. ಅಂತು ೪,೫೦೦ ದಿನಗಳು ಆದುವು. ಈ ದಿನಗಳಿಗೆ ಹನ್ನೆರಡುವರಿ (೧೨ ೧/೨) ವರುಷ ವಾಯಿತು. ಅನಂತರದಿ–ಅನಂತರದಲ್ಲಿ ಉಳಿದ ವರುಷಗಳು ಹನ್ನೆರಡುವರಿ (೧೨ ೧/೨), ಇವು ಪ್ರಳಯಕಾಲದ ವರುಷಗಳು ಆದ್ದರಿಂದ, ಪ್ರಳಯ ಪ್ರಾಪ್ತವಾಗಿ ೭೮ ಬ್ರಹ್ಮಕಲ್ಪದ ವರುಷಗಳು. ೧೦೦ ಕಲ್ಪಗಳು ಅಂತ್ಯವಾಗಿ ಪ್ರಳಯವಾಗೋದಾಯಿತು. ಸಾಧಿಸಿದ– ಅನಂತರ ೭೯ನೇ ಕಲ್ಪದಲ್ಲಿ ರುದ್ರಪದವೇನು, ಕೈಲಾಸಾಧಿಪತ್ಯವೇನು ಸಾಧಿಸಿದವರಾದರು. ಹೀಗೆ ಇರತಕ್ಕ ರುದ್ರದೇವರು ಹಿಂದೆ ೭೮ನೇ ಕಲ್ಪದಲ್ಲಿ, ಇಷ್ಟು ಸಾಧನಿ ಮಾಡಿ ರುದ್ರ ಪದಕ್ಕೆ ಬಂದವರು. ಈ ರುದ್ರಪದದಲ್ಲಿ ಈ ೭೯ನೇ ಕಲ್ಪದ ಅಂತ್ಯದವರಿಗೂ ಸಾಧನಿಮಾಡಿ ಮುಂದಿನ ಎಂಭತ್ತನೇ (೮೦) ಕಲ್ಪಕ್ಕೆ ಶೇಷಪದವಿ ಆಳತಾರೆ. ಆರೈದುನವ–ರುದ್ರದೇವ ರಿಗೆ ಆದ್ಯಂತ ಸಾಧನಿ ಎಂಭತ್ತು ಕಲ್ಪ. ಅದರಲ್ಲಿ ೩೯ ಹ್ಯಾಂಗೆಂದರೆ, ಆರು ಅಯಿದು ಎಂದರೆ ಮೂವತ್ತು (೬×೫=೩೦), ನವ ಎಂದರೆ, ಒಂಭತ್ತು, ಕಲ್ಪಾವಸಾನಕೆ–ಮೂವ ತ್ತೊಂಭತ್ತನೇ ಕಲ್ಪದ ಪ್ರಳಯಾವಸಾನವಾಗಿ, ಪುನಃ ನಾಲ್ವತ್ತನೇ ಕಲ್ಪ ಸೃಷ್ಟಿಕಾಲಕ್ಕೆ, ಭಗವದಪರೋಕ್ಷ ಸ್ಥೂಲದೇಹದಲ್ಲಿ ಆಗೋದಾಯಿತು. ಅಂತು ಅಪರೋಕ್ಷಾರ್ಥ ನಾಲ್ವತ್ತು ಕಲ್ಪ, ಅಪರೋಕ್ಷಾನಂತರ, ಆರೈದು ನವಕಲ್ಪಾವಸಾನ ಎಂದರೆ ಮೇಲೆ ಉಕ್ತ ವಾದ ರೀತಿಯಲ್ಲೇ ಪುನಃ ನಾಲ್ವತ್ತುಕಲ್ಪ (೪೦), ಅಂತು ಎಂಭತ್ತು (೮೦) ಕಲ್ಪ. ಪಾರ್ವತೀಸಹಿತವಾಗಿ–ಪಾರ್ವತೀ ದೇವೇರಿಂದ ಸಹಿತರಾಗಿ, ಶೇಷನ ಪದವ–ಶೇಷದೇವರ ಪದವ, ಐದುವನು–ಐದತಾರೆ. ವರ್ತಮಾನ ಶೇಷದೇವರೂನೂ, ಶೇಷಪದಾತ್ಪೂರ್ವ ಈ ಪ್ರಕಾರ ಸಾಧನ ಮಾಡಿ, ವರ್ತಮಾನ ಕಲ್ಪದಲ್ಲಿ ಶೇಷಪದ ಐದೋವರಾಗಿದ್ದಾರೆ.

ಇದೇ ಪ್ರಕಾರ ವರ್ತಮಾನ ರುದ್ರದೇವರು ಮುಂದಿನ ಬ್ರಹ್ಮಕಲ್ಪಕ್ಕೆ ಶೇಷಪದ ಐದತಾರೆ, ಎಂತ ತಾತ್ಪರ್ಯ. ಪ್ರಮಾಣ :– ಪ್ರಕಾಶಸಂಹಿತಾಯಾಂ

ದ್ವಿಪಂಚಾಸೀತ್ಕಲ್ಪಮಿತಾಃ ಶೇಷಾದ್ಯಾಸ್ತು ಸಭಾರ್ಯಕಾಃ ।

**ಅರ್ಥ :–**

ಪಂಚ–ಐದು, ಅಸೀ–ಎಂಟು, (ಐದು, ಎಂಟುಗಳು, ನಾಲ್ವತ್ತು ಎಂತ ಅರ್ಥ ಮಾಡಬೇಕು.) ಅಷ್ಟಪಂಚ ಖಗೇಶ್ವರ ಎಂತ ದೇವರು, ಗರುಡದೇವರಿಗೆ ಗರುಡ ಪುರಾಣ ದಲ್ಲಿ ಹೇಳಿ, ನಾಲ್ವತ್ತು ಎಂತಲೇ ಹೇಳಿದ್ದಾರಾದ್ದರಿಂದ ನಾಲ್ವತ್ತು ಎಂತ ತಾತ್ಪರ್ಯ. ದ್ವಿ–ಎರಡು ನಾಲ್ವತ್ತುಗಳು, ಎಂಭತ್ತು ಎಂತ ಅರ್ಥ. ಕಲ್ಪಮಿತಾಃ–ರುದ್ರದೇವರು ರಾಶಿ ಯಿಂದ ಸೃಷ್ಟಿಗೆ ಬಂದಾರಭ್ಯ ಲಿಂಗಭಂಗದವರಿಗೂ ಎಂಭತ್ತು ಕಲ್ಪ (ಬ್ರಹ್ಮಕಲ್ಪ) ಎಂತ ಮಿತವೇ ಹೊರ್ತು, ಅದಕ್ಕೆ ಮೇಲೆ ಇಲ್ಲ. ಆ ನೇಮ ದಾರದಾರಿಗೆಂದರೆ, ಶೇಷಾದ್ಯಾಸ್ತು ಸಭಾರ್ಯಕಾಃ–ಭಾರ್ಯರಿಂದ ಸಹಿತರಾದ ಶೇಷ, ಗರುಡರಿಗೆ, ಹಾಂಗೇ ಷಣ್ಮಹಿಷಿಯ ರಿಗೂ ; ಆದಿ ಶಬ್ದದಿಂದ ಷಣ್ಮಹಿಷಿಯರೂ ಗ್ರಾಹ್ಯ.

ಪ್ರಮಾಣ :– ಭಾಗವತ (ಚತುರ್ಥಸ್ಕಂಧ)ತಾತ್ಪರ್ಯ, ೨೩ನೇ ಅಧ್ಯಾಯ. "ತಥೈವ ಚತ್ವಾರಿಂಶದ್ಭಿಃ ಪದಂ ಶೈವಂ ಚ ಜನ್ಮಭಿಃ ವಿಂಶದ್ಭಿರಿಂದ್ರ ದಶಭಿಃ ಅನ್ಯೇಷಾ ಮಪ್ಯುದೀರಿತಮಿತಿ ಷಾಡ್ಗುಣ್ಯೇ ॥"

ತಥೈವ–ಬ್ರಹ್ಮದೇವರ ಸಾಧನಿ ೨೦೦ ಬ್ರಹ್ಮಕಲ್ಪ ಸಾಧನಿ ಒಳಗೆ, ಅಪರೋಕ್ಷಾತ್ಪೂರ್ವ ನೂರು (೧೦೦) ಕಲ್ಪ, ಅಪರೋಕ್ಷಾನಂತರ ನೂರು (೧೦೦) ಕಲ್ಪ, ಅಂತು ಎರಡು ಭಾಗ ಹ್ಯಾಂಗೋ, ಹಾಂಗೇವೇ, ಚತ್ವಾರಿಂಶದ್ಭಿಃ–ಎಂಭತ್ತುಕಲ್ಪ ಸಾಧನಿ ಒಳಗೆ, ಸೃಷ್ಟಿಗೆ ಬಂದಾರಭ್ಯ ನಾಲ್ವತ್ತು (೪೦) ಬ್ರಹ್ಮಕಲ್ಪಗಳಲ್ಲಿ ಸಾಧನಿಮಾಡಿ, ಪದಂ ಶೈವಂ ಚ–ಶೈವಪದ ಹೊಂದಿದರು. ೪೦ನೇ ಕಲ್ಪಕ್ಕೆ ಈ ಶಿವಪದವಾದ ನಾಲ್ವತ್ತನೇ ಕಲ್ಪದಲ್ಲಿ ಅಪರೋಕ್ಷ. ಜನ್ಮಭಿಃ–ತದಾರಭ್ಯ ಒಂದೊಂದು ಬ್ರಹ್ಮಕಲ್ಪ, ಒಂದೊಂದು ಜನ್ಮಸಾಂಕೇತವಾಗಿ, ಆಯಾ ಜನ್ಮಗಳಿಂದ ಸಾಧನಾ ಮಾಡುತ್ತಾ ಬಂದು, ನಾಲ್ವತ್ತನೇ ಬ್ರಹ್ಮಕಲ್ಪಕ್ಕೆ ಶೇಷ ರಾದರೆಂತ ತಾತ್ಪರ್ಯ.

ಅಂತೂ ೪೦ ಕಲ್ಪ ಅಂದರೆ, ಬ್ರಹ್ಮಕಲ್ಪ, ರುದ್ರದೇವರ ಸಾಧನಿ. ಅನ್ಯೇಷಾಂ– ಅನ್ಯರಾದವರು, ವಿಂಶದ್ಭಿಃ ಇಂದ್ರ–ಪೂರ್ವೋಕ್ತಪ್ರಕಾರವೇ ಇಂದ್ರಗೆ ಅಪರೋಕ್ಷಾತ್ಪೂರ್ವ ಇಪ್ಪತ್ತು ಬ್ರಹ್ಮಕಲ್ಪ, ನಂತರ (ಎಂದರೆ ಅಪರೋಕ್ಷಾನಂತರ) ೨೦ ಬ್ರಹ್ಮಕಲ್ಪ, ಅಂತು ನಾಲ್ವತ್ತು (೪೦) ಬ್ರಹ್ಮಕಲ್ಪಸಾಧನಿ. ದಶಭಿಃ–ಸೂರ್ಯಚಂದ್ರಾದಿಗಳಿಗೆ ಅಪರೋಕ್ಷಾ ತ್ಪೂರ್ವ ಹತ್ತು ಬ್ರಹ್ಮಕಲ್ಪಸಾಧನಿ, ಅನಂತರ ಹತ್ತು ಕಲ್ಪಸಾಧನಿ. ಅಂದರೆ, ಅಸೃಜ್ಯ ರಾಶಿಯಿಂದ ಸೃಷ್ಟಿಗೆ ಬಂದಾರಭ್ಯ ಎಂತ ತಾತ್ಪರ್ಯ. ಅಪಿ–ಮತ್ತು, ಉತ್ತರೋತ್ತರ ಇರುವ ದೇವತಿಗಳಿಗೂ ಇದೇ ನೇಮ ಎಂತ, ಉದೀರಿತಂ–ಹೇಳಲ್ಪಡುತ್ತದೆ.

ಅನುವ್ಯಾಖ್ಯಾನೇ —

ಸುಶ್ರಾವೋಗ್ರತಪೋ ನಾಮ ಯೋಗ್ಯೋ ರುದ್ರಪದಸ್ಯ ಯಃ |
ಸಾರ್ಧಂ ಪರಾರ್ಧಂ ವಿಷ್ಣೋಸ್ತು ಗುಣಾನ್ ಭಕ್ತ್ಯಾ ಸದೋದಿತಃ ||
ತತ್ರ ಭಾಗಮುಪಾಸಾಂ ಚ ಚಕ್ರೇ ಸಂಭೃತಮಾನಸಃ |
ದಶಕಲ್ಪತಪಶ್ಚೀರ್ಣಂ ರುದ್ರೇಣ ಲವಣಾರ್ಣವೇ ||

ಅರ್ಥ :– ರುದ್ರಪದಸ್ಯ–ರುದ್ರಪದಕ್ಕೆ ಬರತಕ್ಕ, ಯಃ–ನಾಲ್ವತ್ತನೇ ಕಲ್ಪದಲ್ಲಿ, ಅಪರೋಕ್ಷ ಹೊಂದಿದ ದಾವ ಶೈವಸಾಂಕೇತವಾದ ರುದ್ರಗಣಪ್ರವಿಷ್ಟರಾದ ಶೈವಸಾಧನಾ ಮಾಡತಾ ಬಂದು, ೭೮ನೇ ಕಲ್ಪದಲ್ಲಿ ೭೫ ವರ್ಷಗಳು, ಸುಶ್ರಾವ–ಸಮೀಚೀನವಾದ ಭಗವನ್ಮಾಹಾತ್ಮ್ಯ, ಗುರುಗಳಾದ ವಾಯುದೇವರಿಂದ ಶ್ರವಣಮಾಡೋ ಉದ್ದಿಶ್ಯ, ವಾಯುಪ್ರಸಾದಾರ್ಥ ತಪ ಮಾಡಿದರಾದ್ದರಿಂದ **'ಸುಶ್ರಾವ'** ಎಂತ ಕರಿಸಿದರು. ನಂತರ – ನಾಲ್ವತ್ತು ದಿನಕಲ್ಪ ಸಮೀಚೀನವಾದ ಭಗವತ್ತತ್ತ್ವವನ್ನ ವಾಯುದೇವರ ಮುಖದಿಂದ ಶ್ರವಣ ಮಾಡಿ, **'ಸುಶ್ರಾವ'** ಎಂತ ಕರಿಸಿದರು. ಉಗ್ರತಪ–ನಂತರ ನಾಲ್ಕುಸಾವಿರದನಾನೂರ ಐವತ್ತು (೪,೪೫೦) ದಿನಕಲ್ಪಗಳು ಉಗ್ರತಪ ಮಾಡಿ **'ಉಗ್ರತಪ'** ಎಂತ ಕರಿಸಿದರು- ನಂತರ, ದಶಕಲ್ಪ-ಹತ್ತು ದಿನಕಲ್ಪಗಳಲ್ಲಿ, ಲವಣಾರ್ಣವೇ–ಲವಣಸಮುದ್ರದಲ್ಲಿ ಮುಣುಗಿ, ತಪಶ್ಚೀರ್ಣಂ–ತಪಸ್ಸನ್ನು ಮಾಡಿ, ಉಗ್ರತಪ–**'ಉಗ್ರತಪ'** ಎಂತ ಕರಿಸೋವರಾದರು. ನಂತರ, ರುದ್ರಃ–ಭಾವೀ ರುದ್ರರಾದ ಇವರು, ಸಾರ್ಧ–ಎಂಭತ್ತು ಬ್ರಹ್ಮಕಲ್ಪ ಸಾಧನಿ ಮಾಡೋದರಲ್ಲಿ ಅರ್ಧದಿಂದ ಸಹಿತವಾದ ಪೂರ್ವಾರ್ಧವಾದ ೪೦ ಬ್ರಹ್ಮಕಲ್ಪಗಳಲ್ಲಿ ಅನಪರೋಕ್ಷದಶಾದಲ್ಲೇನು, ಪರಾರ್ಧ–ಅಪರೋಕ್ಷಾನಂತರ ಅನ್ಯವಾದ ಅರ್ಧಸಾಂಕೇತ ವಾದ ೪೦ ಬ್ರಹ್ಮಕಲ್ಪಗಳಲ್ಲಿ ಏನು, ಎರಡರಲ್ಲೂ, ಭಕ್ತ್ಯಾ–ಭಕ್ತಿಯಿಂದ, ವಿಷ್ಣೋಸ್ತು– ವಿಶೇಷಾಕಾರವಾಗಿ ಪರಮಾತ್ಮನ, ಗುಣಾನ್–ಗುಣಗಳನ್ನು, ಸದಾ ಉದಿತಃ–ಸದಾ ಗಾನಮಾಡುತ್ತಾ, ಸದಾ ಅವನ ಸೇವಾದಲ್ಲೇ ಉದ್ಯುಕ್ತರಾಗಿ ಇರುತ್ತಾರೆ. ತತ್ರ–ಆ ಪೂರ್ವಾಪರ ಭಾಗದ್ವಯಗಳಲ್ಲಿ, ಭಾಗಂ–ಅಪರೋಕ್ಷಾನಂತರಕಾಲೀನಭಾಗವಾದ ೪೦ ಕಲ್ಪಗಳಲ್ಲಿ, ಸಂಭೃತಮಾನಸಃ–ಸಂಭೃತಮನಸ್ಕರಾಗಿ, ಉಪಾಸಾಂ ಚ ಚಕ್ರೇ–ಭಗವ ದುಪಾಸನಾ ಮಾಡತಾರೆ. ಇತ್ಯಾದಿ ಪ್ರಮಾಣಗಳಿಂದ ರುದ್ರದೇವರಿಗೆ ೮೦ ಬ್ರಹ್ಮಕಲ್ಪ ಸಾಧನವೆಂದು ತಿಳಿಯಬೇಕು.

**ಇಂದ್ರಮನು ದಶಕಲ್ಪಗಳಲಿ ಸು |**
**ನಂದನಾಮದಿ ಶ್ರವಣಗೈದು ಮು |**
**ಕುಂದನಪರೋಕ್ಷಾರ್ಥ ನಾಲ್ಕು ಸುಕಲ್ಪ ತಪವಿದ್ದು ||**
**ನೊಂದು ಪೊಗೆಯೊಳು ಕೋಟಿವರುಷ ಪು |**
**ರಂದರನು ಅದನುಂಡನಂತರ |**
**ಪೊಂದಿದನು ನಿಜಲೋಕ ಸುರಪತಿ ಕಾಮನಿದರಂತೆ || ೪೩ ||**

ಇಂದ್ರಕಾಮರ ಸಾಧನಿ ವಿಚಾರ ಹೇಳತಾರೆ.

ಇಂದ್ರಮನು–ಇಂದ್ರದೇವರು, ನಲವತ್ತು ಬ್ರಹ್ಮಕಲ್ಪ ಸಾಧನಿ ಉಳ್ಳವರು, ಸೃಷ್ಟಿ ಆರಭ್ಯ ಎಂತ ತಾತ್ಪರ್ಯ. ಮುಕುಂದನ–ಮೋಕ್ಷಪ್ರದನಾದ ಪರಮಾತ್ಮನ, ಅಪರೋಕ್ಷಾರ್ಥ–ಸ್ಥೂಲಾಪರೋಕ್ಷಾರ್ಥವಾಗಿ, ಪೂರ್ವಾರ್ಧವಾದ ಇಪ್ಪತ್ತು ಬ್ರಹ್ಮಕಲ್ಪ ಸಾಧನಿ ಮಾಡಿ, ೨೦ನೇ ಬ್ರಹ್ಮಕಲ್ಪಕ್ಕೆ ಅಪರೋಕ್ಷ ಹೊಂದಿದ್ದಾರೆ. ಸುನಂದನಾಮದಿ–ನಂತರ ಉಳಿದಿರುವುದು ಇಪ್ಪತ್ತು ಬ್ರಹ್ಮಕಲ್ಪಗಳು. ಇದರಲ್ಲಿ ಹದಿನೆಂಟು ಬ್ರಹ್ಮಕಲ್ಪಗಳಲ್ಲಿ ಸಾಧನಿಮಾಡುತ್ತಾ ಬಂದು ಹತ್ತೊಂಭತ್ತನೇ ಬ್ರಹ್ಮಕಲ್ಪದಲ್ಲಿ ಸಾಧನಮಾಡುವ ಕ್ರಮ :– **'ಸುನಂದ'** ಎಂತ ನಾಮದಿಂದ ಕರಿಸೋವರಾದರು. ಈ ಹತ್ತೊಂಭತ್ತನೇ ಬ್ರಹ್ಮಕಲ್ಪದಲ್ಲೇ **'ಸುನಂದ'** ಎಂತ ನಾಮದಿಂದಲೇ, ನಾಲ್ಕು ಸುಕಲ್ಪ ತಪವಿದ್ದು–ಸಮೀಚೀನವಾದ ಆನಂದಕೊಡತಕ್ಕ ವೇದಶ್ರವಣ, ಗುರುಗಳಾದ ರುದ್ರದೇವರ ಮುಖದಿಂದ ಶ್ರವಣಮಾಡೋ ಉದ್ದಿಶ್ಯ ಗುರುಪ್ರಸಾದಾರ್ಥ, ನಾಲ್ಕು ದಿನಕಲ್ಪಗಳು ರುದ್ರದೇವರ ಕುರಿತು ತಪಸ್ಸಿನಾಗೆ ಇರೋವರಾಗಿದ್ದರು. ದಶಕಲ್ಪಗಳಲ್ಲಿ–ನಂತರ ರುದ್ರದೇವರು ಪ್ರಸನ್ನರಾದ ಮ್ಯಾಲೆ, ಹತ್ತು ದಿನಕಲ್ಪಗಳಲ್ಲಿ, ಶ್ರವಣಗೈದು–ಋಜುಗಳ ದ್ವಾರಾ ವೇದಶ್ರವಣ ಮಾಡಿದ ನಂತರ, ಕೋಟಿ ವರುಷ–ದೇವಮಾನ ವರುಷಗಳು ಎಂಭತ್ತು ಚಿಲ್ಲರಿ, ಮಹಾಯುಗವಾಗುತ್ತದೆ. ಪೊಗೆಯೊಳು–ಹೊಗಿಯೊಳಗೆ ಕೂತು ತಪಸ್ಸುಮಾಡಿ, ನೊಂದು–ಶ್ರಾಂತರಾಗಿ, ಅದ ಉಂಡನಂತರ–ಧೂಮಪಾನ ಮಾಡಿ, ಧೂಮದಲ್ಲೇ ಕೂತು ತಪಸ್ಸುಮಾಡಿದ ನಂತರ, ಪುರಂದರನು–ಭಾವಿ ಪುರಂದರರೆಂತ ಕರಿಸೋವರಾದರು. ಸುರಪತಿ–ತದನಂತರ ಇಪ್ಪತ್ತನೇ ಕಲ್ಪದಲ್ಲಿ **'ಸುರಪತಿ'** ಎಂತ ಕರಿಸಿ, ನಿಜಲೋಕ–ತದನಂತರ, ತಮಗೆ ನೈಜವಾದ ಸ್ವರ್ಗಾಧಿಪತ್ಯವನ್ನು, ಪೊಂದಿದನು–ಹೊಂದೋವರಾದರು. ಕಾಮನು–ಕಾಮದೇವರು, ಇದರಂತೆ–ಇಂದ್ರದೇವರೋಪಾದಿಯಲ್ಲಿ ಸಾಧನಿ ಮಾಡಿ, ಈಗಿನ ತಮ್ಮ ಪದವನ್ನು ತಾವು ಐದೋವರಾದರು. ಇಂದ್ರಕಾಮರಿಗೆ ನಾಲ್ವತ್ತು ಬ್ರಹ್ಮಕಲ್ಪಸಾಧನವು.

**ಕರೆಸುವರು ಪೂರ್ವದಲಿ ಚಂದ್ರಾ ।**
**ರ್ಕರತಿ ಶಾಂತ ಸುರೂಪ ನಾಮದಿ ।**
**ಎರಡೆರಡು ಮನುಕಲ್ಪ ಶ್ರವಣಗೈದು ಮನುಕಲ್ಪ ॥**
**ವರತಪೋಬಲದಿಂದಲರ್ವಾಕ್ ।**
**ಶಿರಗಳಾಗೀರ್ಲೈದುಸಾವಿರ ।**
**ವರುಷ ದುಃಖವ ನೀಗಿ ಕಾಂಬರು ಬಿಂಬರೂಪವನು ॥ ೪೪ ॥**

ಸೂರ್ಯಚಂದ್ರಾದಿಗಳ ಸಾಧನಿ ವಿಚಾರ ಹೇಳತಾರೆ.

ಚಂದ್ರಾರ್ಕರು–ಚಂದ್ರ, ಸೂರ್ಯರು, ಈ ಉಭಯರು, ರಾಶಿಯಿಂದ ಸೃಷ್ಟಿಗೆ ಬಂದಾರಭ್ಯ, ಇಪ್ಪತ್ತು (೨೦) ಬ್ರಹ್ಮಕಲ್ಪವೇ ಅಂತ್ಯವಾದ ಸಾಧನಿ ಉಳ್ಳವರು. ಈ

ಇಪ್ಪತ್ತು ಕಲ್ಪದ ಒಳಗೆ, ಹತ್ತು ಬ್ರಹ್ಮಕಲ್ಪ ಸಾಧನಿ ಮಾಡಿ, ಬಿಂಬರೂಪವನು–ಸ್ಥೂಲ ದೇಹಗತ ಬಿಂಬರೂಪವನ್ನು, ಕಾಂಬರು–ಹತ್ತನೇ ಬ್ರಹ್ಮಕಲ್ಪದಲ್ಲಿ ಕಾಣತಾರೆ. ನಂತರ ಹತ್ತು ಕಲ್ಪ ಉಳಿದದೆ. ಪೂರ್ವದಲಿ–ಈ ಉಳಿದ ಹತ್ತು ಕಲ್ಪಗಳ ಒಳಗೆ, ಎಂಟು ಕಲ್ಪದವರಿಗೂ ಜನ್ಮಗಳ ಧರಿಸಿ ಸಾಧನಾಮಾಡತಾ ಬಂದು, ಗತವಾದ ವರ್ತಮಾನ ಕಲ್ಪಕ್ಕೆ, ಪೂರ್ವಕಲ್ಪವಾದ, ಒಂಭತ್ತನೇ ಕಲ್ಪದಲ್ಲಿ, ಅತಿಶಾಂತ–ಚಂದ್ರ, **'ಅತಿಶಾಂತ'** ಎಂತಲೂ, ಸೂರ್ಯ, ಸುರೂಪ–**'ಸುರೂಪ'** ಎಂತಲೂ, ನಾಮದಿ–ನಾಮದಿಂದ, ಕರೆಸು ವರು–ಕರಿಸೋವರಾಗತಾರೆ. ಇವರು, ಮನುಕಲ್ಪ–ಗುರುಗಳ ಉಪದೇಶಕ್ಕಾಗಿ, ಗುರು ಪ್ರಸಾದಾರ್ಥವಾಗಿ ಒಂದು ಮನುಕಲ್ಪ, ವರತಪೋಬಲದಿಂದಲಿ–ಉತ್ತಮವಾದ ತಪಸ್ಸು ಮಾಡಿ, ಆ ತಪೋಬಲದಿಂದ ಗುರುಗಳನ್ನ ಪ್ರಸನ್ನೀಕರಿಸಿಕೊಂಡು, ಎರಡೆರಡು–ನಾಲ್ಕು ಸಂಖ್ಯಾಕವಾದ, ಮನುಕಲ್ಪ–ಮನುಕಲ್ಪಗಳಲ್ಲಿ, ಶ್ರವಣಗೈದು–ಗುರುಮುಖದಿಂದ ಶ್ರವಣ ಗೈದು, ಅನಂತರ, ಐದುಸಾವಿರ ವರುಷ–ದೇವಮಾನದಿಂದ, ಐದುಸಾವಿರ ವರುಷಗಳು, ಅರ್ವಾಕ್‌ಶಿರಗಳಾಗಿ–ತಲೆ ಕೆಳಗೆ, ಕಾಲು ಮ್ಯಾಲೆ ಮಾಡಿ, ತಪಸ್ಸುಮಾಡಿ, ದುಃಖವ ನೀಗಿ–ತಪೋದುಃಖವನ್ನ ನೀಗಿ, ಹತ್ತನೇ ಕಲ್ಪವಾದ ವರ್ತಮಾನ ಕಲ್ಪದಲ್ಲಿ, ಚಂದ್ರನು, ಚಂದ್ರಪದವನ್ನೂ, ಸೂರ್ಯನು, ಸೂರ್ಯಪದವನ್ನೂ ಐದೋವರಾದರು. ಈ ಸಾಧನ ಎಂಬುದು ಇದೇ ಸಂಧಿಯಲ್ಲಿ ೯ ನೇ ಶ್ಲೋಕದಲ್ಲಿ ಹೇಳಿದೆ. ದೇವತಾಸಾಧನಕ್ಕೆ ಯೋಗ್ಯ ವಾದ ಮಾನುಷಪ್ರವೇಶವಿಲ್ಲದ ೪೫೦ ಯೋಜನ ವಿಸ್ತಾರವಾದ ಭರತಖಂಡದಲ್ಲಿ ಸಾಧನಿ ಮಾಡಿದರು. ಈ ಪೂರ್ವೋಕ್ತ ಸೂರ್ಯ, ವಿವಸ್ವಾನ್ ನಾಮಕನೆಂದು ತಾತ್ಪರ್ಯ.

**ಸಾಧನಗಳಪರೋಕ್ಷನಂತರ ।**
**ಐದುವರು ಮೋಕ್ಷವನು ಶಿವ ಶ ।**
**ಕ್ರಾದಿದಿವಿಜರು ಉಕ್ತಕ್ರಮದಿಂ ಕಲ್ಪಸಂಖ್ಯೆಯಲಿ ॥**
**ಐದಲೆಯುಗೈವತ್ತು ಉಪೇಂದ್ರ ಸ ।**
**ಹೋದರನಿಗಿಪ್ಪತ್ತು ದ್ವಿನವ ತ್ವ ।**
**ಗಾಧಿಪತಿ ಪ್ರಾಣನಿಗೆ ಗುರುಮನುಗಳಿಗೆ ಷೋಡಶವು ॥ ೪೫ ॥**

ಸಾಧನಮಾಡಬೇಕಾದ ಬ್ರಹ್ಮಕಲ್ಪಗಳ ಹೇಳತಾರೆ.

ಆದಿ–ಜೀವೋತ್ತಮರಾದ ವಾಯುದೇವರು, ಶಿವ–ರುದ್ರದೇವರು, ಶಕ್ರ–ಇಂದ್ರ ದೇವರು, ದಿವಿಜರು–ದೇವಗಂಧರ್ವಾಂತ ದೇವತೆಗಳು, ಸಾಧನಗಳ–ಅವರವರಿಗೆ ರಾಶಿ ಯಿಂದ ಸೃಷ್ಟಿಗೆ ಬಂದಾರಭ್ಯ, ಲಿಂಗಭಂಗದವರಿಗೂ, ಏರ್ಪಟ್ಟಿರುವ ಆದ್ಯಂತ ಸಾಧನಿ ಬ್ರಹ್ಮಕಲ್ಪಗಳೊಳಗೆ ತದರ್ಧಕಾಲ ಸಾಧನಗಳು ಮಾಡಿ, ಅಪರೋಕ್ಷ–ಸ್ಥೂಲಹೃದಯ ದಲ್ಲಿ ಭಗವಂತನ ಅಪರೋಕ್ಷೀಕರಿಸಿಕೊಂಡು, ತದಾರಭ್ಯ, ಅವಶಿಷ್ಟ ಉಳಿದ, ಅರ್ಧಕಲ್ಪ ಗಳ ಸಾಂಕೇತವಾದ ಬ್ರಹ್ಮಕಲ್ಪಗಳಲ್ಲಿ, ಜೀವಾಂತರ್ಗತ ಬಿಂಬಾಪರೋಕ್ಷಕ್ಕಾಗಿ,

ಸಾಧನಗಳು ಮಾಡುತ್ತಾ ಒಂದು, ಕೆಲವು ಕಲ್ಪಗಳ, ನಂತರ–ಅನಂತರದಲ್ಲಿ, ಉಕ್ತ ಕ್ರಮದಿಂ–ಪೂರ್ವೋಕ್ತ ಕ್ರಮದಿಂದ, ಉಕ್ತಕ್ರಮ ಯಾವುದೆಂದರೆ :

೧. ವಾಯುದೇವರಿಗೆ, ೧೯೯ ನೇ ಕಲ್ಪವಾದ ವರ್ತಮಾನ ಕಲ್ಪದಲ್ಲಿ ಮಧ್ವಾಚಾರ್ಯರಾಗಿ, ವೇದವ್ಯಾಸದೇವರಲ್ಲಿ ಓದಿ, ಮುಂದಿನ ಕಲ್ಪಕ್ಕೆ ಬ್ರಹ್ಮಪದಕ್ಕೆ ಬರೋಣ.

೨. ರುದ್ರದೇವರು, ೭೮ ನೇ ಬ್ರಹ್ಮಕಲ್ಪದ ನೂರು ವರ್ಷಗಳಲ್ಲಿ ೭೫ ವರುಷ ಗುರುಗಳ ಪ್ರಸಾದಾರ್ಥ ತಪಸ್ಸುಮಾಡೋಣ, ನಲವತ್ತು ದಿನಕಲ್ಪಗಳಲ್ಲಿ ಓದೋಣ, ೪,೪೬೦ ದಿನಕಲ್ಪಗಳಲ್ಲಿ ಉಗ್ರತಪ ಮಾಡೋಣ, ಇದರಲ್ಲಿ ೪,೪೫೦ ದಿನಕಲ್ಪಗಳಲ್ಲಿ, ಬಾಹ್ಯದಲ್ಲಿ ಉಗ್ರತಪ, ಹತ್ತು ದಿನಕಲ್ಪಗಳಲ್ಲಿ ಲವಣಸಮುದ್ರದಲ್ಲಿ ಉಗ್ರತಪ ಮಾಡೋಣ, ಈ ಪ್ರಕಾರ ಮಾಡಿ ಶೇಷಪದ ಐದೋಣ.

೩. ಇಂದ್ರದೇವರು, ೩೯ ನೇ ಬ್ರಹ್ಮ ಕಲ್ಪದಲ್ಲಿ (ಅ) ನಾಲ್ಕು ದಿನಕಲ್ಪ ಗುರು ಪ್ರಸಾದಕ್ಕಾಗಿ ತಪಸ್ಸು. (ಆ) ಹತ್ತು ದಿನಕಲ್ಪ ಗುರುಗಳಲ್ಲಿ ಓದೋಣ. (ಇ) ದೇವಮಾನ ಕೋಟಿವರುಷ ಧೂಮ್ರಪಾನಮಾಡಿ, ಉಗ್ರತಪ ಮಾಡಿ ಇಂದ್ರಪದ ಐದೋಣ.

೪. ಸೂರ್ಯಚಂದ್ರಾದಿಗಳು, ೧೯ ನೇ ಬ್ರಹ್ಮಕಲ್ಪದಲ್ಲಿ (ಅ) ಒಂದು ಮನುಕಲ್ಪ ಗುರುಗಳ ಉದ್ದಿಶ್ಯ ತಪಸ್ಸು. (ಆ) ನಾಲ್ಕು ಮನುಕಲ್ಪ ಗುರುಗಳಲ್ಲಿ ಓದೋಣ. (ಇ) ಐದುಸಾವಿರ (೫,೦೦೦) ದೇವಮಾನ ವರುಷ ಉಗ್ರತಪ ಮಾಡಿ ಸೂರ್ಯ, ಚಂದ್ರ ಪದ ಪ್ರಾಪ್ತಿ.

ಉಕ್ತಕ್ರಮದಿಂದ ಎಂಬುದು ಇದೇವೇ. ಈ ಉಕ್ತಕ್ರಮದಿಂದ ಸಾಧನಮಾಡಿ ಪದಪ್ರಾಪ್ತರಾಗುತ್ತಾರೆ. ಐದಲೆಗೈವತ್ತು–ಐದುತಲೆವುಳ್ಳ ರುದ್ರದೇವರಿಗೆ, ಐವತ್ತು ಎಂದರೆ, ೪೦ ದಿನಕಲ್ಪಗಳಲ್ಲಿ ಓದಿದ್ದು, ಹತ್ತು ದಿನಕಲ್ಪಗಳಲ್ಲಿ ಲವಣಸಮುದ್ರದಲ್ಲಿ ತಪಸ್ಸುಮಾಡಿದ್ದು, ಅಂತು ೫೦. ಐವತ್ತು ಕಲ್ಪಸಂಖ್ಯೆಯಲಿ–ಪೂರ್ವೋಕ್ತಪ್ರಕಾರ ಒಂದು ಬ್ರಹ್ಮದಿನ ಕಲ್ಪದಲ್ಲಿ, ಒಂದು ಮನುದಿನ ಕಲ್ಪದಲ್ಲಿ ಈ ರೀತ್ಯಾ ಸಾಧನಿಮಾಡಿ, ಐದುವರು–ಅವರವರು ತಮ ತಮಗೆ ಯೋಗ್ಯವಾದ ಪದ ಐದೋವರಾಗುತ್ತಾರೆ. ಬ್ರಹ್ಮದೇವರಿಗೆ ೨೦೦ ಬ್ರಹ್ಮಕಲ್ಪಗಳು ; ಅಪರೋಕ್ಷಾತ್ಪೂರ್ವ ೧೦೦, ಅಪರೋಕ್ಷಾನಂತರ ೧೦೦ ಅಂತು ೨೦೦. ರುದ್ರದೇವರಿಗೆ ೮೦ ಬ್ರಹ್ಮಕಲ್ಪಗಳು, ಇದು ಮೂಲದಲ್ಲಿ ವ್ಯಕ್ತಮಾಡಲಿಲ್ಲ ; ಪ್ರಮಾಣಗಳಿಂದ ಸಿದ್ಧ, ಅಪರೋಕ್ಷಾತ್ಪೂರ್ವ ೪೦, ಅಪರೋಕ್ಷಾನಂತರ ೪೦ ; ಷಣ್ಮಹಿಷಿಯರಿಗೆ ೮೦ ಬ್ರಹ್ಮಕಲ್ಪಗಳು, ಪಾರ್ವತ್ಯಾದಿಗಳಿಗೆ ೮೦ ಕಲ್ಪ. ಉಪೇಂದ್ರಸಹೋದರನಿಗೆ–ಸ್ವರ್ಗಗತ ಉಪೇಂದ್ರನಾಮಕ ಪರಮಾತ್ಮನ ಸಹೋದರನಾದ ಇಂದ್ರದೇವರಿಗೆ, ಇಪ್ಪತ್ತು–ಅಪರೋಕ್ಷಾತ್ಪೂರ್ವ ೨೦ ಕಲ್ಪ, ಅಪರೋಕ್ಷಾನಂತರ ೨೦ ಕಲ್ಪ, ಅಂತು ೪೦ ಕಲ್ಪ. ತ್ವಗಾಧಿಪತಿ ಪ್ರಾಣಗೆ–ತ್ವಗಿಂದ್ರಿಯಾಭಿಮಾನಿಯಾದ ಅಹಂಕಾರ ಪ್ರಾಣನಿಗೆ, ದ್ವಿನವ–ಅಪರೋಕ್ಷಾತ್ಪೂರ್ವ ೧೮ ಕಲ್ಪ, ಅಪರೋಕ್ಷಾನಂತರ ೧೮ ಕಲ್ಪ. ಗುರುಮನುಗಳಿಗೆ–ಎಂದರೆ, ೧. ಬೃಹಸ್ಪತ್ಯಾಚಾರ್ಯರು, ೨. ಸ್ವಯಂಭುವ

ಮನು, ೩. ಕಾಮಪುತ್ರ ಅನಿರುದ್ಧ, ೪. ಕಾಮಪತ್ನಿ ರತೀದೇವಿ, ೫. ದಕ್ಷಪ್ರಜೇಶ್ವರ, ೬. ಶಚೀದೇವಿ, ಷೋಡಶವು–ಅಪರೋಕ್ಷಾತ್ಪೂರ್ವ ಹದಿನಾರು ಕಲ್ಪ, ಅಪರೋಕ್ಷಾನಂತರ್ಯ ಹದಿನಾರು ಕಲ್ಪ, ಅಂತುಮೂವತ್ತೆರಡು ಕಲ್ಪಗಳು. ಮೋಕ್ಷವನು–ಪೂರ್ವೋಕ್ತ ಕಲ್ಪಗಳು ಅಂತ್ಯವಾಗೋಣವೇ, ಲಿಂಗಭಂಗಾಖ್ಯ ಮೋಕ್ಷವನ್ನು ಐದಿ, ಜೀವಾಕಾರ ಬಿಂಬನ್ನ ತಮ್ಮ ತಮ್ಮ ಸ್ವರೂಪದಲ್ಲಿ ಸ್ಪಷ್ಟವಾಗಿ ಕಾಣೋವರಾಗುತ್ತಾರೆ. ಈ ಪೂರ್ವೋಕ್ತ ಕಲ್ಪಗಳೆಲ್ಲ ಬ್ರಹ್ಮಕಲ್ಪಗಳೇವೇ. (ಮನುಕಲ್ಪವೂ, ದಿನಕಲ್ಪವೂ ಅಲ್ಲ. ಕಲ್ಪಸಂಖ್ಯಾ "ಬ್ರಹ್ಮಮಾನವಿಜ್ಞೇಯಾ ಯೋಗ್ಯಚೇತಸಾ" ಎಂಬ ಪ್ರಕಾಶಸಂಹಿತಾಪ್ರಮಾಣ.)

**ಪ್ರವಹಮರುತಗೆ ಹನ್ನೆರಡು ಸೈಂ ।**
**ಧವ ದಿವಾಕರ ಧರ್ಮರಿಗೆ ದಶ ।**
**ನವಸುಕಲ್ಪವು ಮಿತ್ರರಿಗೆ ಶೇಷಶತಜನರಿಗೆಂಟು ॥**
**ಕವಿ ಸನಕ ಸುಸನಂದನ ಸನ ।**
**ತ್ಕುವರ ಮುನಿಗಳಿಗೇಳು ವರುಣನ ।**
**ಯುವತಿ ಪರ್ಜನ್ಯಾದಿ ಪುಷ್ಕರಗಾರು ಕಲ್ಪದಲಿ ॥ ೪೬ ॥**

ಅವಶಿಷ್ಟ ಹೇಳತಾರೆ.

ಪ್ರವಹಮರುತಗೆ–ಪ್ರವಹವಾಯುವಿಗೆ, ಹನ್ನೆರಡು–ಅಂದರೆ ಅಪರೋಕ್ಷಾತ್ಪೂರ್ವ ಹನ್ನೆರಡು, ಅಪರೋಕ್ಷಾನಂತರ ಹನ್ನೆರಡು, ಅಂತು ಇಪ್ಪತ್ತುನಾಲ್ಕು ಬ್ರಹ್ಮಕಲ್ಪಗಳು. ಸೈಂಧವ–"ಸಿಂಧೋಃ ಅಪತ್ಯಂ ಪುಮಾನ್ ಸೈಂಧವಃ" ಚಂದ್ರದೇವರು (೧), ದಿವಾಕರ–ವಿವಸ್ವಾನ್ ನಾಮಕ ಸೂರ್ಯದೇವರು (೨), ಧರ್ಮರಿಗೆ–ಯಮದೇವರು (೩), ಸ್ವಾಯಂಭುವಮನುಪತ್ನಿ ಶತರೂಪಾದೇವಿ (೪), ಈ ನಾಲ್ಕು ಮಂದಿಗೆ, ದಶ–ಅಪರೋಕ್ಷಾತ್ಪೂರ್ವ ಹತ್ತು, ಅಪರೋಕ್ಷಾನಂತರ ಹತ್ತು, ಅಂತು ಇಪ್ಪತ್ತು ಬ್ರಹ್ಮಕಲ್ಪಗಳು. ಮಿತ್ರರಿಗೆ–ವರುಣ ಆರಂಭ ಮಾಡಿ ಮಿತ್ರಾಂತವರಿಗೆ ಅವರ ಹೆಸರುಗಳು :– ಹದಿಮೂರನೇ ಕಕ್ಷದವರಾದ ವರುಣದೇವರು ಒಂದು, ಹದಿನಾಲ್ಕನೇ ಕಕ್ಷದವರಾದ ನಾರದರು ಒಂದು, ಹದಿನೈದನೇ ಕಕ್ಷದವರಾದ ಭೃಗುಋಷಿ ಒಂದು, ಅಗ್ನಿ ಎರಡು, ದಕ್ಷಪತ್ನಿ ಪ್ರಸೂತಿ ಮೂರು, ಹದಿನಾರನೇ ಕಕ್ಷದವರಾದ ಸಪ್ತಋಷಿಗಳು ಒಂದು, ಮರೀಚಿ ಎರಡು, ಅತ್ರಿ ಮೂರು, ಅಂಗಿರಸ ನಾಲ್ಕು, ಪುಲಸ್ತ್ಯ ಐದು, ಪುಲಹ ಆರು, ಕ್ರತು ಏಳು, ವಸಿಷ್ಠ ಎಂಟು, ವಿಶ್ವಾಮಿತ್ರ ಒಂಭತ್ತು, ವೈವಸ್ವತಮನು ಹತ್ತು, ಹದಿನೇಳನೇ ಕಕ್ಷದವರಾದ ಮಿತ್ರನಾಮಕ ಸೂರ್ಯ ಒಂದು, ಗುರುಪತ್ನಿ ತಾರಾದೇವಿ ಎರಡು, ನಿರಋತಿ ಮೂರು, ಪ್ರವಹವಾಯುಪತ್ನಿ ಪ್ರಾವಹೀ ನಾಲ್ಕು, ಈ ರೀತಿ ೧೩, ೧೪, ೧೫, ೧೬, ೧೭. ಈ ನಾಲ್ಕು ಕಕ್ಷಗತರಾದ, ವರುಣನಾರಭ್ಯ ಮಿತ್ರಾಂತವರಿಗೂ ಹದಿನೆಂಟು ಮಂದಿಗೆ, ನವಸುಕಲ್ಪವು–ಸಮೀಚೀನವಾದ ಬ್ರಹ್ಮಕಲ್ಪಗಳು, ಅಪರೋಕ್ಷಾತ್ಪೂರ್ವ

ಒಂಭತ್ತು, ಅಪರೋಕ್ಷಾನಂತರ ಒಂಭತ್ತು, ಅಂತು ಹದಿನೆಂಟು ಬ್ರಹ್ಮಕಲ್ಪಗಳು, ಶೇಷ ಶತಜನರಿಗೆಂಟು—ಎಂದರೆ, ರುದ್ರರು ಹತ್ತು, ಆದಿತ್ಯರು ಆರು, ಅಶ್ವಿನೀಗಳು ಎರಡು, ಋಭು ಒಂದು, ವಸುಗಳು ಏಳು, ವಿಶ್ವೇದೇವತೆಗಳು ಹತ್ತು, ದ್ಯಾವಾಪೃಥ್ವೀ ಎರಡು, ಮರುತರು ನಲವತ್ತೇಳು, ಅಂತು ಎಂಭತ್ತೈದು ಮಂದಿ. ಕುಬೇರ ಒಂದು, ವಿನಾಯಕ ಎರಡು, ವಾಯುಪುತ್ರ ವಿಷ್ವಕ್ಸೇನ ಮೂರು, ಅಂತು ಎಂಭತ್ತೆಂಟು ಮಂದಿ, ಇವರು ಹದಿನೆಂಟನೇ ಕಕ್ಷದವರು ; ಅಪರೋಕ್ಷಾತ್ಪೂರ್ವ ಎಂಟು ಬ್ರಹ್ಮಕಲ್ಪ, ಅಪರೋಕ್ಷಾನಂತರ ಎಂಟು ಬ್ರಹ್ಮಕಲ್ಪ, ಅಂತು ಹದಿನಾರು ಬ್ರಹ್ಮಕಲ್ಪಗಳು. ಕವಿ—೧೯ನೇ ಕಕ್ಷದವರಾದ ಶುಕ್ರಾಚಾರ್ಯರು ಒಂದು, ಸನಕ ಸುಸನಂದನ ಸನತ್ಕುವರ— ಸನಕ, ಸುಸನಂದನ, ಸನತ್ಕುಮಾರ ಇವರುಗಳು, ಮುನಿಗಳಿಗೆ—ಈ ಮುನಿಗಳಿಗೇನು, ಇನ್ನೂ ಈ ಕಕ್ಷದವ ರಾದ, ಇಂದ್ರರು ಏಳು, ಪ್ರಹ್ಲಾದ ಒಂದು, ಮನುಗಳು ಹನ್ನೊಂದು, ವಾಯುಪುತ್ರ ಮರೀಚಿ ಒಂದು, ಅಗ್ನಿಪುತ್ರ ಪಾವಕ ಒಂದು, ಹರಿ ಒಂದು, ಅಂಗಾರಕ ಒಂದು, ಚಂಡಗಣ ಒಂದು, ಕಪಾಲ ಒಂದು, ಕಾಮಧೇನು ಒಂದು, ನದ್ಯಭಿಮಾನಿಗಳು ಒಂದು, ಕೇಚನ ದ್ವಾರಪಾಲಕರು ಒಂದು, ಚಿಂತಾಮಣಿ ಒಂದು, ಶಿಕತಾಭಿಮಾನಿಗಳು ಒಂದು, ಚಿತ್ರಗುಪ್ತರು ಒಂದು, ಯಮವಾಹನ ಮಹಿಷ ಒಂದು, ಸರೋವರಾಭಿಮಾನಿಗಳು ಒಂದು, ಹೈಹಯಾದಿ ಧ್ರುವ ಮೊದಲಾದ ಅರಸರು ನೂರು ಜನರು, ಪಾರಿಜಾತವೃಕ್ಷ ಒಂದು, ಯೂಪಾಭಿಮಾನಿಗಳು ಒಂದು, ಕಲ್ಪವೃಕ್ಷ ಒಂದು, ಉಚ್ಛೈಶ್ರವ ಒಂದು, ಋಷಿಗಳು ಒಂದು, ಪಿತೃಗಳು ಏಳು, ವಿಷ್ಣುಪಾರ್ಷದರು ಒಂದು, ಗಂಧರ್ವರು ಎಂಟು, ಐರಾವತ ಒಂದು, ಕಾಲಾಖ್ಯರು ಒಂದು, ಅಪ್ಸರಸ್ತ್ರೀಯರು ಎರಡು, ಔಷಧಿಮಾನಿ ಗಳು ಒಂದು, ಅರ್ಚಿರಮಾರ್ಗದಿವಿಜರು ಒಂದು, ಕೂಪಾಭಿಮಾನಿಗಳು ಒಂದು, ಧೂಮ ಮಾರ್ಗ ದಿವಿಜರು ಒಂದು, ಏತಾದೃಶರಾದ ೧೯ನೇ ಕಕ್ಷದವರಾದ ಬಹುಮಂದಿ ದೇವತೆ ಗಳಿಗೆ, ಏಳು—ಅಪರೋಕ್ಷಾತ್ಪೂರ್ವ ಏಳು ಬ್ರಹ್ಮಕಲ್ಪಗಳು, ಅಪರೋಕ್ಷಾನಂತರ ಏಳು, ಅಂತು ಹದಿನಾಲ್ಕು ಬ್ರಹ್ಮಕಲ್ಪಗಳು. ವರುಣನ ಯುವತಿ – ಇಪ್ಪತ್ತನೇ ಕಕ್ಷದವರಾದ ವರುಣನ ಪತ್ನಿ ಗಂಗಾ ಒಂದು, ಯಮಪತ್ನಿ ಶ್ಯಾಮಲಾ ಎರಡು, ಚಂದ್ರಪತ್ನಿ ರೋಹಿಣೀ ಮೂರು, ಪರ್ಜನ್ಯ—ಪರ್ಜನ್ಯಾ ನಾಲ್ಕು, ಸೂರ್ಯಪತ್ನಿ ಸಂಜ್ಞಾ ಐದು, ಅನಿರುದ್ಧನ ಪತ್ನಿ ವಿರಾಟ್ ಆರು, ಆದಿ—ವರುಣಪತ್ನಿ ಆರಂಭಮಾಡಿ, ಪುಷ್ಕರಗೆ—ಪುಷ್ಕರನವರಿಗೂ, ಈ ಮಧ್ಯಗತರಾದ ದೇವತೆಗಳು (೨೧ನೇ ಕಕ್ಷ. ೨೬ನೇ ಸಂಧಿಯಲ್ಲಿ ಹೇಳಿದ ಮ್ಯಾರಿಗೆ), ಅನಭಿಮಾನಿ ದೇವತೆಗಳು ಒಂದು, ಕೇಚನ ಮುನಿಗಳು ಒಂದು, ೨೨ನೇ ಕಕ್ಷ ಅಗ್ನಿಪತ್ನಿ ಸ್ವಾಹಾದೇವಿ, ೨೩ನೇ ಕಕ್ಷ ಜಲಾಭಿಮಾನಿ ಬುಧ, ೨೪ನೇ ಕಕ್ಷ ಅಶ್ವಿನೀ ಭಾರ್ಯಾ ಉಷಾ, ೨೫ನೇ ಕಕ್ಷ ಧರಣೀದೇವಿ, ೨೬ನೇ ಕಕ್ಷ ಶನೈಶ್ಚರ, ೨೭ನೇ ಕಕ್ಷ ಪುಷ್ಕರ ; ಇಪ್ಪತ್ತನೇ ಕಕ್ಷ ವರುಣಪತ್ನಿ ಆರಂಭಮಾಡಿ ಇಪ್ಪತ್ತೇಳನೇ ಕಕ್ಷದವನಾದ ಪುಷ್ಕರನ ವರಿಗೂ, ಈ ಯಾವತ್ತೂ ದೇವತೆಗಳಿಗೂ, ಆರು ಕಲ್ಪದಲಿ—ಅಪರೋಕ್ಷಾತ್ಪೂರ್ವ ಆರು ಬ್ರಹ್ಮಕಲ್ಪ, ಅಪರೋಕ್ಷಾನಂತರ ಆರು ಬ್ರಹ್ಮಕಲ್ಪ, ಅಂತು ಹನ್ನೆರಡು ಬ್ರಹ್ಮಕಲ್ಪ

ಗಳಲ್ಲಿ ಲಿಂಗಭಂಗ. ಅಂತು ಬ್ರಹ್ಮದೇವರಾರಭ್ಯ ಪುಷ್ಕರಾಂತವರಿಗೂ ಒಂಭತ್ತು ಕೋಟಿ ದೇವತೆಗಳ ಸಾಧನ ಉಕ್ತವಾಯಿತು. ಇನ್ನುಮ್ಯಾಲೆ ಆಜಾನಜರ ಸಾಧನವಿಚಾರ.

**ಐದು ಕರ್ಮಜ ಸುರರಿಗಾಜಾ ।**
**ನಾದಿಗಳಿಗೀರೆರಡು ಕಲ್ಪಾ ।**
**ರ್ಧಾಧಿಕತ್ರಯ ಗೋಪಿಕಾಸ್ತ್ರೀಯರಿಗೆ ಪಿತೃತ್ರಯವು ॥**
**ಈ ದಿವೌಕಸ ಮನುಜ ಗಾಯಕ ।**
**ರೈದುವರು ಎರಡೊಂದು ಕಲ್ಪನ ।**
**ರಾಧಿಪರಿಗರೆ ಕಲ್ಪದೊಳಗಪರೋಕ್ಷವಿರುತಿಹುದು ॥ ೪೭ ॥**

ಆಜಾನಜರ ಸಾಧನವೂ, ಮನುಷ್ಯೋತ್ತಮರ ಸಾಧನವೂ ಹೇಳತಾರೆ.

ಕರ್ಮಜಸುರರಿಗೆ–ಎಂದರೆ ಆಜಾನಜದೇವತೆಗಳಲ್ಲಿ ಎರಡು ಪ್ರಕಾರ, ದಾವ್ಯವೆಂದರೆ : ಕರ್ಮದೇವತೆಗಳಿಂದ ಜನಿತರಾದ ಆಜಾನಜರು, ಕರ್ಮಜರೆಂದು ಸಾಂಕೇತವು, ಇವರು ಆಜಾನಜರೊಳಗೆ ಉತ್ತಮರು. ಆಖ್ಯಾತರು ಅಂತ ಒಂದುಪ್ರಕಾರ, ಉತ್ತಮರಾದ ಕರ್ಮಜಸಾಂಕೇತರಾದ ಪೂರ್ವೋಕ್ತರಾದ ಆಖ್ಯಾತ ಆಜಾನಜರಿಂದ ಉತ್ಪನ್ನರು, ಇವರು ಅವರರು, ಅನಾಖ್ಯಾತರೆಂತ ಕರಿಸತಾರೆ. ಇದು ಇನ್ನೊಂದುಪ್ರಕಾರ. ಅಂತೂ ಆಜಾನಜರಲ್ಲಿ ಆಖ್ಯಾತರು (ಉತ್ತಮರು), ಅನಾಖ್ಯಾತರು (ಅವರರು) ಎಂತ ಎರಡು ಪ್ರಕಾರ. ಆಖ್ಯಾತರು ದಾರೆಂದರೆ, ೯೨ ಮಂದಿ ಗಂಧರ್ವರು, ೯೦೮ ಮಂದಿ ಅಪ್ಸರ ಸ್ತ್ರೀಯರು, ಮುನ್ನೂರು ಕಡಿಮೆ ಮೂರುಕೋಟಿ ಋಷಿಗಳು ; ಒಂದು, ಕ್ರತು ; ಎರಡು, ಸಿಂಧು ; ಮೂರು, ಹದಿನಾರುಸಾವಿರ ಒಂದುನೂರು (೧೬,೧೦೦) ಮಂದಿ ಅಗ್ನಿಪುತ್ರರಾದ ಗೋಪಸ್ತ್ರೀಯರು ; ಇವರೇ ಮೊದಲಾದ ಅನೇಕಮಂದಿ, ಆಖ್ಯಾತ ಆಜಾನಜರು, ಕರ್ಮಜರಿಂದ ಜನಿತರು. ಇವರಿಗೆ ಕಲ್ಪಸಾಧನ ವಿಚಾರ :–ಇವರೇ ಕರ್ಮಜ ಸಾಂಕೇತರಾದ ಆಜಾನಜ ಸುರರು ಮುಖ್ಯರು, ಅನಾಖ್ಯಾತರಿಗೆ ಉತ್ತಮರು. ಇವರಿಗೆ ಸಾಧನಿ ಹ್ಯಾಂಗೆಂದರೆ, ಈ ಕರ್ಮಜ ಸಾಂಕೇತ ಆಜಾನಜ ಸುರರಿಗೆ, ಐದು– ಎಂದರೆ (ವಿವರ :– ೯೨ ಗಂಧರ್ವರು, ೯೦೮ ಅಪ್ಸರ ಸ್ತ್ರೀಯರು, ೧ ಕ್ರತು, ೨ ಸಿಂಧು, ಇವರಿಗೇನು, ಇವರಲ್ಲದೆ ಇನ್ನೂ ಅನೇಕಮಂದಿಗೇನು), ಅಪರೋಕ್ಷಾತ್ಪೂರ್ವ ಐದು ಬ್ರಹ್ಮಕಲ್ಪ, ಅಪರೋಕ್ಷಾನಂತರ ಐದು ಬ್ರಹ್ಮಕಲ್ಪ, ಅಂತು ಹತ್ತು ಬ್ರಹ್ಮಕಲ್ಪಗಳು. ಈರೆರಡು ಕಲ್ಪ–ನಾಲ್ಕು ಕಲ್ಪಗಳು ; ನೂರು ಕಡಿಮೆ ನೂರುಕೋಟಿ ಋಷಿಗಳು, ಇವರ ಸಮಾನರಾದ ಅನೇಕಮಂದಿ ಇವರಿಗೆ ಅಪರೋಕ್ಷಾತ್ಪೂರ್ವ ನಾಲ್ಕು ಬ್ರಹ್ಮಕಲ್ಪ, ಅಪರೋಕ್ಷಾನಂತರ ನಾಲ್ಕು ಬ್ರಹ್ಮಕಲ್ಪ, ಅಂತು ಎಂಟು ಬ್ರಹ್ಮಕಲ್ಪಗಳು. ಅರ್ಧಾಧಿಕ– ಅರ್ಧವೇ ಅಧಿಕವಾಗಿವುಳ್ಳ, ತ್ರಯ–ಮೂರುಕಲ್ಪ ಅಂದರೆ, ಮೂರುವರಿ (೩ ೧/೨) ಬ್ರಹ್ಮ ಕಲ್ಪ, ಗೋಪಿಕಾಸ್ತ್ರೀಯರಿಗೆ–ಗೋಪಿಕಾಸ್ತ್ರೀಯರಿಗೆ ಅಪರೋಕ್ಷಾತ್ಪೂರ್ವ ಮೂರುವರಿ ಬ್ರಹ್ಮಕಲ್ಪ, ಅಪರೋಕ್ಷಾನಂತರ ಮೂರುವರಿ ಬ್ರಹ್ಮಕಲ್ಪ, ಅಂತು ಏಳು ಬ್ರಹ್ಮಕಲ್ಪಗಳು.

ಇನ್ನೂ ಅನಾಖ್ಯಾತರ ವಿಚಾರ. ಪಿತೃ–ಚಿರಪಿತೃಗಳು, ದೇವಗಂಧರ್ವರು ಇವರ ಪರಿಯಂತ ಅನಾಖ್ಯಾತರು ; ಆಖ್ಯಾತರ ತರುವಾಯ ಅನಾಖ್ಯಾತರು, ೧೦೦ ವಿಬುಧಗಣ, ೧೦೦ ದೇವಭೃತ್ಯರಾದ ಪಿತೃಗಣ, ೧೦೦ ದೇವಭೃತ್ಯರಾದ ಅಸುರರು, ೧೦೦ ಗಾಯನ ಮಾಡುವ ಗಂಧರ್ವರು, ೧೦೦ ನೃತ್ಯ ಮಾಡುವ ಅಪ್ಸರರು, ೧೭೦ ದೇವಕಾರ್ಯ ಸಿದ್ಧ ರಾದ ಸಿದ್ಧರು, ೧೭೦ ವಾಹನ ಹೊರುವ ಯಕ್ಷರು, ೩೦ ಶಿಬಿಕಾ ಹೊರುವ ರಾಕ್ಷಸರು, ೩೦ ಪರಿಚರ್ಯ ಮಾಡುವ ಚಾರಣರು, ೭೦ ಸೇವಾ ಮಾಡುವ ಭೂತರು, ೭೦ ಪ್ರೇತರು, ೭೦ ವಿದ್ಯಾಧರರು, ೭೦ ಕಿನ್ನರರು, ೭೦ ಪಿಶಾಚಾದಿಗಳು, ೭ ಕುಬೇರ ಭೃತ್ಯರು, ಗುಹ್ಯಕರು, ೫ ವರುಣ ಭೃತ್ಯರು, ನಾಗರು, ನೂರು ಕಡಿಮೆ ನೂರುಕೋಟಿ ಋಷಿಗಳು, ಚಿರಪಿತೃಗಳು, ದೇವಗಂಧರ್ವರು, ಇವರೇ ಮೊದಲಾದ ಅನೇಕಮಂದಿ ಅನಾಖ್ಯಾತರು. ಇವರೊಳಗೆ ಮೂರುಪ್ರಕಾರ : (೧) ದೇವಗಂಧರ್ವರು, (೨) ಚಿರಪಿತರು, (೩) ತದನ್ಯ ಯಾವತ್ತೂಮಂದಿ, ಅಂತು ಮೂರುವಿಧರಿಗೆ ಸಾಧನಿಕಲ್ಪಗಳು ವ್ಯತ್ಯಾಸ. ಅದರನ್ನ ವಿವರಿಸತೇವು : ಪಿತರು ಎಂದರೆ, ವಿಬುಧರು ಆರಂಭಮಾಡಿ ಚಿರಪಿತೃಗಳವರಿಗೆ, ತ್ರಯವು–ಅಪರೋಕ್ಷಾತ್ಪೂರ್ವ ಮೂರು ಬ್ರಹ್ಮಕಲ್ಪ, ಅಪರೋಕ್ಷಾನಂತರ ಮೂರು ಬ್ರಹ್ಮಕಲ್ಪ, ಅಂತು ಆರು ಬ್ರಹ್ಮಕಲ್ಪಗಳು. ಈ ದಿವೌಕಸ–ಈ ಅನಾಖ್ಯಾತ ದೇವತೆಗಳಲ್ಲಿ ಅಂತ್ಯದವರಾದ ದೇವಗಂಧರ್ವರು ಎಂತ ತಾತ್ಪರ್ಯ. ಎರಡು – ದೇವಗಂಧರ್ವರಿಗೆ ಅಪರೋಕ್ಷಾತ್ಪೂರ್ವ ಎರಡು ಬ್ರಹ್ಮಕಲ್ಪ, ಅಪರೋಕ್ಷಾನಂತರ ಎರಡು ಬ್ರಹ್ಮಕಲ್ಪ, ಅಂತು ನಾಲ್ಕು ಬ್ರಹ್ಮಕಲ್ಪಗಳು. ಮನುಜಗಾಯಕರು–ಮನುಷ್ಯಗಂಧರ್ವರು, ಮಾನು ಷೋತ್ತಮರು, ಇವರಿಗೆ, ಒಂದುಕಲ್ಪ – ಅಪರೋಕ್ಷಾತ್ಪೂರ್ವ ಒಂದು ಬ್ರಹ್ಮಕಲ್ಪ, ಅಪರೋಕ್ಷಾನಂತರ ಒಂದು ಬ್ರಹ್ಮಕಲ್ಪ, ಅಂತು ಎರಡು ಬ್ರಹ್ಮಕಲ್ಪಗಳು. ಆಜಾನಾದಿ ಗಳಿಗೆ–ಮುಖ್ಯಾಮುಖ್ಯ ಆಜಾನಜರು ಆರಂಭಮಾಡಿ ತೃಣಾಂತವರಿಗೆ ಪೂರ್ವೋಕ್ತ ಪ್ರಕಾರ ಸಾಧನಕಲ್ಪಗಳೆಂತ ಅರ್ಥ. ಐದುವರು–ಪೂರ್ವೋಕ್ತ ಕಲ್ಪಸಂಖ್ಯೆಯಲ್ಲಿ ಅರ್ಧ ಕಲ್ಪಗಳಲ್ಲಿ ಸಾಧನಿ ಮಾಡಿ ಸ್ಥೂಲಾಪರೋಕ್ಷ ಐದುವರು. ನಂತರ, ನರಾಧಿಪರಿಗೆ ಅರೆಕಲ್ಪ ದೊಳಗೆ–ಉಳಿದಿರುವ ಅರ್ಧಕಲ್ಪದೊಳಗೆ, ಅಪರೋಕ್ಷವಿರುತಿಹುದು–ಲಿಂಗಭಂಗವಾಗಿ ಜೀವಾಂತರ್ಗತಬಿಂಬಾಪರೋಕ್ಷ ಸ್ಪಷ್ಟವಾಗಿ ಆಗುತ್ತದೆ. ಬ್ರಹ್ಮದೇವರು ಆರಂಭಮಾಡಿ ತೃಣಾಂತವರಿಗೂ ಹೇಳಿದ ಆದ್ಯಂತ ಕಲ್ಪಗಳಲ್ಲಿ, ಅರ್ಧದಲ್ಲಿ ಸ್ಥೂಲಾಪರೋಕ್ಷ, ಅರ್ಧದಲ್ಲಿ ಬಿಂಬಾಪರೋಕ್ಷ ಎಂತ ತಾತ್ಪರ್ಯ.

**ದೀಪಗಳನನುಸರಿಸಿ ದೀಪ್ತಿಯು ।**
**ವ್ಯಾಪಿಸಿ ಮಹಾತಿಮಿರ ಕಳೆದು ಪ ।**
**ರೋಪಕಾರವ ಮಾಳ್ಪ ತೆರದಂದದಲಿ ಪರಮಾತ್ಮ ॥**
**ಆ ಪಯೋಜಾಸನನೊಳಿದ್ದು ಸ್ವ ।**
**ರೂಪಶಕ್ತಿಯ ವ್ಯಕ್ತಗೈಸುತ ।**
**ತಾ ಪೊಳೆವನವರಂತೆ ಚೇಷ್ಟೆಯ ಮಾಡಿ ಮಾಡಿಸುತ ॥ ೪೮ ॥**

ಸ್ವರೂಪಶಕ್ತಿ ವ್ಯಕ್ತಮಾಡತಾನೆಂತ ಹೇಳತಾರೆ.

ದೀಪಗಳನನುಸರಿಸಿ–ದೀಪಗಳ ಅನುಸರಿಸಿದ, ದೀಪ್ತಿಯು–ಪ್ರಕಾಶವು, ದೀಪದಲ್ಲಿ ಇರುವ ಪ್ರಕಾಶ ಸೂರ್ಯಂದು, ಈ ಪ್ರಕಾಶ, ಮಹಾತಿಮಿರ–ನಿಬಿಡೀಭೂತವಾದ ತಿಮಿರದಲ್ಲಿ, ವ್ಯಾಪಿಸಿ–ಪ್ರವೇಶಮಾಡಿ, ಕಳೆದು–ಆ ಅಂಧಕಾರವನ್ನು ಕಳೆದು, ಪರೋಪ–ಕಾರವ ಮಾಳ್ಪ–ಸ್ವಪ್ರಯೋಜನವಿಲ್ಲದೇನೇ ಪರೋಪಕಾರ ಮಾಡೋದಾಗತದೆ. ತೆರ ದಂದದಲಿ–ಈ ದೀಪದೋಪಾದಿಯಲ್ಲಿ, ಪರಮಾತ್ಮ–ದೀಪಸದೃಶನಾದ ಪರಮಾತ್ಮ, ತನ್ನ ಕರುಣಾಕಟಾಕ್ಷವೆಂಬ ಪ್ರಕಾಶದಿಂದ, ಸ್ವರೂಪಸ್ವಭಾವದಲ್ಲಿ ಭಕ್ತರಾದವರ ಬಾಹ್ಯಪ್ರತಿ ಬಂಧಕದಿಂದ ಪ್ರಾಪ್ತವಾದ ಅಜ್ಞಾನಾಂಧಕಾರ ಪರಿಹಾರ ಮಾಡಿ, ದೀಪಪ್ರಕಾಶದಲ್ಲಿ, ಸರ್ವಪದಾರ್ಥಗಳು ಕಂಡಂತೆ ತನ್ನ ಮಾಹಾತ್ಮ್ಯ ವ್ಯಕ್ತಮಾಡಿ ತೋರಿಸುತ್ತಾ, ತನ್ನ ಸಂದರ್ಶನ ಕೊಟ್ಟು, ಆ ಪಯೋಜಾಸನನೊಳಿದ್ದು–ಆ ಎಂದರೆ, ಪೂರ್ವೋಕ್ತ ಪರಾ ಮರ್ಶನವು : ಹಿಂದಿನ ಬ್ರಹ್ಮಕಲ್ಪದಲ್ಲಿ ವರ್ತಮಾನ ಬ್ರಹ್ಮದೇವರು ವಾಯುದೇವರಾಗಿ ಇರಲಿಕ್ಕಾಗಿ, ಅವರಂತರ್ಗತ ಭಗವದ್ರೂಪವನ್ನ ಉಪಾಸನ ಮಾಡಿದ ಆ ಜೀವರೇ, ಆ ವಾಯುದೇವರು, ವರ್ತಮಾನ ಬ್ರಹ್ಮಕಲ್ಪದಲ್ಲಿ ಬ್ರಹ್ಮರಾಗಿ ಬರೋಣವೆ, ಅದೇ ಜೀವರು ಜೀವನ್ಮುಕ್ತರಾಗಿ ಈ ಬ್ರಹ್ಮರ ಆಶ್ರಯ ಮಾಡಿದ್ದಾರೆ. ಈ ಜೀವರ, ಈ ಪಯೋ ಜಾಸನನೊಳಿದ್ದು, ಸ್ವರೂಪಶಕ್ತಿಯ ವ್ಯಕ್ತಗೈಸುತ–ಬ್ರಹ್ಮನ ಸಹ ಲಿಂಗಭಂಗ ಐದಿಸಿ ಸ್ವರೂಪಶಕ್ತಿ ವ್ಯಕ್ತ, ಬ್ರಹ್ಮದೇವರ ದ್ವಾರಾ ಮಾಡಿಸುತ್ತ, ಅವರಂತೆ–ಆಯಾ ಜೀವಾಂತ ರ್ಗತದಲ್ಲಿ ಜೀವಾಕಾರದಂತೆ ಬಿಂಬನಾಗಿ ಇರುವ ಪರಮಾತ್ಮ ಅವರವರ ಸ್ವರೂಪಾಕಾರ ದಂತೆ, ತಾ ಪೊಳೆವನು–ಸ್ಪಷ್ಟವಾಗಿ ತಾನು ಅಪರೋಕ್ಷಾದಿಂದ ಪೊಳೆವ, ಚೇಷ್ಟೆಯು–ಮೋಕ್ಷದಲ್ಲಿ ಆಯಾ ಜೀವರುಗಳಿಂದ ಬಿಂಬನಾದ ಪರಮಾತ್ಮ ಏಕಾದಶೇಂದ್ರಿಯಗಳಿಂದ ಚೇಷ್ಟೆಗಳ, ಮಾಡಿ–ಬಿಂಬನಾದ ತಾನು ಮಾಡಿ, ಮಾಡಿಸುತ–ಜೀವರ ಕಡಿಯಿಂದ ಮಾಡಿಸುತ್ತಾ ಇರ್ತಾನೆ.

**ಸ್ವೋದರಸ್ಥಿತ ಪ್ರಾಣ ರುದ್ರೇಂ ।**
**ದ್ರಾದಿ ಸುರರಿಗೆ ದೇಹಗಳ ಕೊ ।**
**ಟ್ಟಾದರದಲವರವರ ಸೇವೆಯ ಕೊಂಬನನವರತ ॥**
**ಮೋದ ಬೋಧ ದಯಾಬ್ಧಿ ತನ್ನವ ।**
**ರಾಧಿರೋಗವ ಕಳೆದು ಮಹದಪ ।**
**ರಾಧಗಳ ನೋಡದಲೆ ಸಲಹುವ ಸತತ ಸ್ಮರಿಸುವರ ॥ ೪೯ ॥**

ಸಾಧನೋದ್ದಿಶ್ಯ ದೇಹಗಳ ಕೊಡತಾನೆ ಎಂತ ಹೇಳತಾರೆ.

ಸ್ವೋದರಸ್ಥಿತ–ಪೂರ್ವೋಕ್ತ ಪ್ರಕಾರ ಪ್ರಳಯ ಕಾಲದಲ್ಲಿ, ಸಾಧನಿ ಪೂರ್ತಿ ಆದ ಜೀವರಿಗೆ ಲಿಂಗಭಂಗ ಐದಿಸಿ ತನ್ನ ಉದರದಲ್ಲಿ, ಲಿಂಗಭಂಗವಾದವರ, ತದನ್ಯರಾದ ಸಾಧನಿ

ಅವಶಿಷ್ಟವುಳ್ಳ ಲಿಂಗದೇಹ ಸಹಿತರಾದ ಈ ಉಭಯರ, ಪ್ರಳಯ ಕಾಲದಲ್ಲಿ ಉದರದಲ್ಲಿ ಧರಿಸೋವನಾಗಿ, ಪುನಃ ಸೃಷ್ಟಿ ಕಾಲದಲ್ಲಿ ಸ್ವೋದರಸ್ಥಿತ ಸಾಧನಿ ಅವಶಿಷ್ಟವುಳ್ಳ ಲಿಂಗ ಸಹಿತರಾದವರ, ಹಾಂಗೆ ಮುಕ್ತರಾಗೋಣದರಿಂದ, ಆ ಜೀವರು ಸೃಷ್ಟಿಯೊಳಗೆ ಕಡಿಮೆ ಆಗೋವರಾಗುತ್ತಾರೆ. ಆ ಕಡಿಮಿ ಪೂರ್ಣ (ಕಡಿಮೆ ಬಿದ್ದುದನ್ನು ತುಂಬಿ ಭರ್ತಿ ಮಾಡಿಕೊಂಬೋಣ) ಆಗೋದಕ್ಕೋಸ್ಕರ, ಅಸೃಜ್ಯ ರಾಶಿಯಿಂದ ಆಯಾ ಸಜಾತಿ ಸಲಿಂಗರಾದ ಜೀವರನ್ನು, ಈ ಪ್ರಕಾರ ತನ್ನ ಉದರದಲ್ಲಿರತಕ್ಕವರನ್ನು, ಪ್ರಾಣರುದ್ರೇಂದ್ರಾದಿ–ಪ್ರಾಣದೇವರು, ರುದ್ರದೇವರು, ಇಂದ್ರದೇವರು ಮೊದಲಾದ ತ್ರಿವಿಧ ಜೀವರನ್ನು ಸೃಷ್ಟಿಕಾಲದಲ್ಲಿ ಉದರದಿಂದ ಹೊರಗೆ ತೆಗೆದು, ಸುರರಿಗೆ–ಸಾಂಶರಾದ ದೇವಾಸುರರಿಗೆ, ನಿರಂಶರಿಗೆ, ದೇಹಗಳ ಕೊಟ್ಟು–ಸ್ಥೂಲದೇಹಗಳ ಕೊಟ್ಟು, ಆದರದಲಿ–ಆದರಪೂರ್ವಕವಾಗಿ, ಸತತಸ್ಮರಿಸುವರ–ನಿರಂತರ ತನ್ನ ಸ್ಮರಿಸುವ ಭಕ್ತರ, ದಯಾಬ್ಧಿ–ದಯಾಸಮುದ್ರನಾದ ಪರಮಾತ್ಮ, ಮೋದ–ಸುಖಸ್ವರೂಪರಾದ ತನ್ನ ಭಕ್ತರಿಗೆ, ಬೋಧ–ಗುರ್ವಂತರ್ಗತನಾಗಿ, ಗುರುಗಳ ದ್ವಾರಾ ಸಮೀಚೀನಜ್ಞಾನ ಬೋಧ ಮಾಡಿ, ತನ್ನವರ–ತನ್ನ ಭಕ್ತರಲ್ಲಿ ಅನುಗ್ರಹದಿಂದ, ಆಧಿ–ಅಹಂಮಮತವೆಂಬ ಮನೋರೋಗವೇನು, ರೋಗವ–ಸಾಧನಿಗೆ ಪ್ರತಿಬಂಧಕಗಳಾದ ಜ್ವರಾದಿ ರೋಗಗಳೇನು, ಅಂದರೆ, ಅವಕ್ಕೆ ಕಾರಣವಾದ ಪಾಪಗಳ, ಕಳೆದು–ಪರಿಹಾರ ಮಾಡಿ, ಮಹದಪರಾಧಗಳ ನೋಡದಲೆ–ಅಹಂ ಬ್ರಹ್ಮ ಎಂಬ ಮಹಾಪರಾಧಗಳ ಮಾಡತಕ್ಕ ದ್ವೇಷಿಗಳಾದ ಅಸುರರ ಕಣ್ಣೆತ್ತಿಯೂ ನೋಡದಲೆ, ಭಕ್ತರು ಮಾಡಿದ ಬ್ರಹ್ಮಹತ್ಯಾದಿ ಮಹಾಪರಾಧಗಳ ಅಪರಾಧತ್ವೇನ ನೋಡದೆ, ಸಲಹುವ–ಲಿಂಗಭಂಗ ಐದಿಸಿ, ವೈಕುಂಠ ಲೋಕದಲ್ಲಿ ಇಟ್ಟು ರಕ್ಷಿಸುವ. ಮಹಾಪರಾಧಿಗಳಾದ ಅಸುರರ ಲಿಂಗಭಂಗ ಐದಿಸಿ ಅಂಧಂತಮದಲ್ಲಿ ಇಟ್ಟು ದುಃಖಪಡಿಸುವ. ಮುಕ್ತಿಯೋಗ್ಯರಿಗೆ ಸುಖವೂ, ತಮೋಯೋಗ್ಯರಿಗೆ ದುಃಖವೂ ಕೊಟ್ಟು ಸಲಹುವ, ಅವರವರ–ಆಯಾ ತ್ರಿವಿಧ ಜೀವರ ಸ್ವರೂಪಾನುಸಾರ ಸ್ಥಿತಿಕಾಲವಾದ ಸಾಧನಿ ಕಾಲದಲ್ಲಿ, ಅನವರತ–ನಿರಂತರದಲ್ಲೂ, ಸೇವೆಯ ಕೊಂಬನು–ಭಕ್ತಿರೂಪವಾದ ಸೇವಾ ಮುಕ್ತಿಯೋಗ್ಯರಿಂದ, ಮಿಶ್ರದ್ವೇಷರೂಪವಾದ ಸೇವಾ ನಿತ್ಯಸಂಸಾರಿಗಳಿಂದ, ಪೂರ್ಣದ್ವೇಷರೂಪವಾದ ಸೇವಾ ತಮೋಯೋಗ್ಯರಿಂದ ಮಾಡಿಸಿಕೊಂಬೋ ಪರಮಾತ್ಮ, ಲಿಂಗಭಂಗಾನಂತರ ತ್ರಿವಿಧ ಜೀವರಿಗೆ ತ್ರಿವಿಧಗತಿ ಕೊಡತಾನೆ. ಸತತ ಸ್ಮರಿಸುವರ–(ಇದು ಆವರ್ತನವು) ನಿರಂತರದಲ್ಲೂ, ಪೂರ್ವೋಕ್ತ ತ್ರಿವಿಧ ಪ್ರಕಾರ ಸ್ಮರಿಸತಕ್ಕವರಿಗೆ ಮೋಕ್ಷ ಕೊಡೋದರಲ್ಲಿ ವ್ಯತ್ಯಾಸವಾದರೂ, ಸ್ಥಿತಿಕಾಲದಲ್ಲಿ ಅನ್ನೋದಕಾದಿಗಳ ಕೊಟ್ಟು ರಕ್ಷಿಸೋ ಕಾಲದಲ್ಲಿ, ವ್ಯತ್ಯಾಸವಿಲ್ಲದೇ ಸರ್ವರಿಗೂ ಅವರವರ ಕರ್ಮಾನುಸಾರ ಅನ್ನೋದಕಾದಿಗಳ ಕೊಟ್ಟು ಪಾಲನಿ ಮಾಡತಾನೆ.

**ಪ್ರತಿಪ್ರತೀ ಕಲ್ಪದಲಿ ಸೃಷ್ಟಿ ।**
**ಸ್ಥಿತಿ ಲಯವ ಮಾಡುತಲೆ ಮೋದಿಪ ।**
**ಚತುರಮುಖ ಪವಮಾನರನ್ನವ ಮಾಡಿ ಭುಂಜಿಸುವ ॥**

**ಘೃತವೆ ಮೃತ್ಯುಂಜಯನೆನಿಪ ದೇ ।**
**ವತೆಗಳೆ ಉಪಸೇಚನರು ಶ್ರೀ ।**
**ಪತಿಗೆ ಮೂರ್ಜಗವೆಲ್ಲವೋದನತಿಥಿಯೆನಿಸಿಕೊಂಬ ॥ ೫೦ ॥**

ಪರಮಾತ್ಮ ಪ್ರಾಕೃತ ಭೋಜನ ಮಾಡತಾನೆ ಎಂತ ಹೇಳತಾರೆ.

ಪ್ರತಿಪ್ರತೀ ಕಲ್ಪದಲಿ – ಪ್ರತಿ ಪ್ರತೀ ಬ್ರಹ್ಮಕಲ್ಪವು ಲಯವಾಗಿ, ಅನಂತರದಲ್ಲಿ ಸೃಷ್ಟಿ–ಸಾಧನಿ ಅವಶಿಷ್ಟರ, ರಾಶಿಗತರ ಸೃಷ್ಟಿಮಾಡಿ, ಸ್ಥಿತಿ–ಪ್ರಳಯಕಾಲ ಪ್ರಾಪ್ತ ವಾಗೋವರಿಗೂ ಪಾಲನೆಮಾಡಿ, ಲಯವ ಮಾಡುತಲಿ–ತದನಂತರ ಲಯಕಾಲ ಪ್ರಾಪ್ತ ವಾಗೋಣವೇ ನಾಶಮಾಡಿ, ಈ ಪ್ರಕಾರ ಸೃಷ್ಟ್ಯಾದಿಗಳ ಮಾಡುತ್ತ, ಮೋದಿಪ– ಸೃಷ್ಟಿಕಾರ್ಯದಿಂದ ಸಂತೋಷವಾಗಲಿ, ಲಯದಿಂದ ದುಃಖವಾಗಲಿ ಎರಡೂ ಇಲ್ಲದೇ ಸ್ವಾನಂದದಿಂದ ಯುಕ್ತನಾಗಿ ಇದ್ದಾನೆ. ಮತ್ತು ಮೋದಸ್ವರೂಪರಾದ ಜೀವರು ಮೋದಿಗಳೆಂದು ಕರಿಸುತ್ತಾರೆ. ಇವರನ್ನ ಸದಾ ಜ್ಞಾನಭಕ್ತ್ಯಾದಿಗಳ ಕೊಟ್ಟು ಪಾಲನೆ ಮಾಡುತ್ತಾ ಇದ್ದಾನೆ. ಈ ಪರಮಾತ್ಮ, ಚತುರಮುಖ–ಬ್ರಹ್ಮದೇವರು, ಪವಮಾನರು– ವಾಯುದೇವರು, ಇವರಿಬ್ಬರ, ಅನ್ನವ ಮಾಡಿ – ಪ್ರಳಯಕಾಲದಲ್ಲಿ ಅನ್ನವಾಗಿ ಮಾಡಿ ಕೊಂಡು, ಘೃತವೆ ಮೃತ್ಯುಂಜಯನು ಎನಿಪ–ಅನ್ನಕ್ಕೆ ತುಪ್ಪ ಎನಿಸುವ ರುದ್ರದೇವರನ್ನ ಈ ರೀತಿ ಮಾಡಿಕೊಂಡು, ದೇವತೆಗಳೆ–ತದನ್ಯರಾದ ದೇವತೆಗಳೆ, ಉಪಸೇಚನರು– ವ್ಯಂಜನಾದಿ ಚಿಲ್ಲರಿ ಭೋಜನದ್ರವ್ಯಗಳನ್ನಾಗಿ ಮಾಡಿಕೊಂಡು, ಮೂರ್ಜಗವೆಲ್ಲವು– ಈ ಪ್ರಕಾರ ಚರಾಚರ ಜಗತ್ರಯವೆಲ್ಲ, ಶ್ರೀಪತಿಗೆ–ಲಕ್ಷ್ಮೀಪತಿಯಾದ ಶ್ರೀ ನಾರಾಯಣ ದೇವರಿಗೆ, ಓದನ–ಭೋಜನಮಾಡತಕ್ಕ ಅನ್ನ, ಎಂತ ಅನಿಸಿ, ಅತಿಥಿಯೆನಿಸಿಕೊಂಬ– ಈ ಚರಾಚರ ಜಗತ್ತನ್ನುಅನ್ನತ್ವೇನ ಭೋಜನಕ್ಕೆ ಯೋಗ್ಯನಾದ ಅತಿಥಿ ಎಂತ ಎನಿಸಿ ಕೊಂಬೋ ಪರಮಾತ್ಮ, ಭುಂಜಿಸುವ–ಭೋಜನಮಾಡತಾನೆ, ಎಂದರೆ ಪ್ರಳಯಕಾಲ ದಲ್ಲಿ ನಾರಾಯಣದೇವರು ಚರಾಚರ ಜಗತ್ತನ್ನು ಉದರದಲ್ಲಿ ಇಡತಾನಾದ್ದರಿಂದ ಚರಾಚರ ಜಗತ್ತು ಅನ್ನಸಾಂಕೇತವಾಗಿ ಭೋಜನ ಎಂತ ಕರಿಸುತ್ತದೆ. ಪ್ರಾಕೃತ ಜಡಪದಾರ್ಥ ಈ ರೀತ್ಯಾ ಪ್ರಾಣಿಗಳು ಭಗವದರ್ಪಣ ಮಾಡಿದ್ದು, ಈ ರೀತ್ಯಾ ಭೋಜನಮಾಡತಾನೆಂತ ತಾತ್ಪರ್ಯ. ಇದು ಔಪಚಾರಿಕವು. ಪರಮಾತ್ಮನ ಶರೀರಕ್ಕೆ ಸೇರತಕ್ಕ ನಿಜವಾದ ಭೋಜನಪದಾರ್ಥ, ತನ್ನ ಅಭಿನ್ನವಾದ ಸ್ವಾಖ್ಯರೂಪಗಳ ಭೋಜನವೇ ನಿಜವಾದ ಭೋಜನವು.

**ಗರ್ಭಿಣಿಸ್ತ್ರೀ ಉಂಡಭೋಜನ ।**
**ಗರ್ಭಗತ ಶಿಶು ಉಂಬ ತೆರದಲಿ ।**
**ನಿರ್ಭಯನು ತಾನುಂಡುಣಿಸುವನು ಸರ್ವಜೀವರಿಗೆ ॥**
**ನಿರ್ಬಲತಿಪರಮಾಣು ಜೀವಗೆ ।**
**ಅಬ್ಬುವುದೆ ಸ್ಥೂಲಾನ್ನಭೋಜನ ।**
**ಅರ್ಭಕರು ಪೇಳುವರು ಕೋವಿದರಿದನೊಡಂಬಡರು ॥ ೫೧ ॥**

ಜಡರಸ, ಜೀವರಿಗೆ ಬಿಂಬಕ್ರಿಯಾವ್ಯತಿರಿಕ್ತ, ಉಪಚಯವಿಲ್ಲೆಂತ ಹೇಳತಾರೆ.

ಗರ್ಭಿಣಿಸ್ತ್ರೀ–ಗರ್ಭದಲ್ಲಿ ಶಿಶುವನ್ನು ಧರಿಸಿರುವ ಸ್ತ್ರೀ, ಉಂಡ ಭೋಜನ–ಭೋಜನಪದಾರ್ಥಗಳ ಉಂಬೋಣದರಿಂದ, ಗರ್ಭಗತ ಶಿಶು–ಗರ್ಭದಲ್ಲಿ ಇರುವ ಶಿಶು, ಉಂಬ ತೆರದಲಿ–ಉಂಡೋಪಾದಿಯಲ್ಲಿ, ಎಂದರೆ, ತಾಯಿಯಾದವಳ ಭೋಜನಕ್ರಿಯಾದಿಂದ ಗರ್ಭಗತ ಶಿಶುವಿನ ಭೋಜನಕ್ರಿಯಾ ನಡಿಯೋದಾಗತವೆ. ಅದರಲ್ಲಿ ಶಿಶುವಿಗೆ ಸೇರತಕ್ಕ ಭಾಗ ಶಿಶುವಿಗೆ, ತಾಯಿಗೆ ಸೇರತಕ್ಕ ಭಾಗ ತಾಯಿಗೆ ಸೇರಿ, ಅವರವರ ಸ್ಥೂಲ ದೇಹಗಳಿಗೆ ಸೇರೋವಾಗತವೆ. ಇದರೋಪಾದಿಯಲ್ಲಿ, ನಿರ್ಭಯನು–ದೇವಾಸುರರಿಂದ ಭಯಶೂನ್ಯನಾದ, ದೇಹಗತ, ದೇಹಾಕಾರನಾದ ಬಿಂಬರೂಪೀ ಪರಮಾತ್ಮ ಮಾತೃಸದೃಶನಾದವ. ಪರಮಾತ್ಮ ಬಿಂಬ, ಜೀವ ಪ್ರತಿಬಿಂಬ ; ಪುರುಷ, ಅವನ ಛಾಯದೋಪಾದಿಯಲ್ಲಿ, ಬಿಂಬ ಪ್ರತಿಬಿಂಬರು, ತಾನುಂಡು–ಪರಮಾತ್ಮ ತನ್ನ ಬಿಂಬಕ್ರಿಯಾದ್ವಾರಾ, ಜೀವ ಭುಕ್ತ ಜಡಪದಾರ್ಥಗತ ತನ್ನ ಸ್ವಾಖ್ಯಭೋಜನದ್ರವ್ಯ ತಾನುಂಡು, ತನ್ನ ಕ್ರಿಯಾದ್ವಾರಾ, ಉಣಿಸುವನು–ಸ್ಥೂಲದೇಹಗತ ತದಾಕಾರದಿಂದ ವ್ಯಾಪ್ತನಾದ ಜೀವಗೆ ದೇಹದ್ವಾರಾ ಜಡಪದಾರ್ಥಗಳ ಉಣಿಸೋವನಾಗತಾನೆ. ಸರ್ವಜೀವರಿಗೆ–ಈ ಪ್ರಕಾರ ೮೪ ಲಕ್ಷ ಸಾಂಕೇತರಾದ ಸರ್ವಜೀವರಿಗೆ, ಉಣಿಸೋವನಾಗತಾನೆ. ನಿರ್ಬಲ–ಜೀವನಾದವ ಸ್ವತಃ ಪ್ರವರ್ತನಸಾಮರ್ಥ್ಯದಿಂದ ಶೂನ್ಯನಾದವ, ಬಿಂಬಾಧೀನನಾದವ, ಅತಿಪರಮಾಣು–ಅತ್ಯಂತ ಪರಮಾಣುವಾದವ, ಜೀವಗೆ–ಇಂಥಾ ಜೀವಗೆ, ಸ್ಥೂಲಾನ್ನ ಭೋಜನ–ಸ್ಥೂಲರಸ ಭೋಜನ ಎಂಬುದು, ಅಬ್ಬುವುದೆ–ಸ್ವತಃ ಪ್ರವರ್ತನದಿಂದ ಸಾಧ್ಯವಾಗೋದೇ ? ಮತ್ತು ಸ್ವರೂಪದೇಹಕ್ಕೆ ಉಪಚಯವಾಗೋದೇ ? ಅಬ್ಬಲಾರದು ಎಂತ ಅರ್ಥ. ಇದನ–ಸ್ವತಃ ಪ್ರವರ್ತಿಯಿಂದ ಭೋಜನವು ಜೀವಗೆ ಉಪಚಯುವೆಂಬುವುದು ಇದನ್ನ, ಅರ್ಭಕರು ಪೇಳುವರು–ಜ್ಞಾನಶೂನ್ಯರು ಪೇಳುವರು, ಕೋವಿದರು–ಜ್ಞಾನಿಗಳಾದವರು ಇದರನ್ನ, ಒಡಂಬಡರು–ವೇದವಿರುದ್ಧವಾದ್ದರಿಂದ ಅಂಗೀಕರಿಸೋದಿಲ್ಲ.

**ಅಪಚಯುಗಳಿಲ್ಲುಂಡುದದರಿಂ ।**
**ದುಪಚಯುಗಳಿಲ್ಲಮರಗಣದೊಳ ।**
**ಗುಪಮರೆನಿಸುವರಿಲ್ಲ ಜನುಮಾದಿಗಳು ಮೊದಲಿಲ್ಲ ॥**
**ಅಪರಿಮಿತಸನ್ಮಹಿಮ ನರಹರಿ ।**
**ಅಪುನಾವರ್ತರನ ಮಾಡುವ ।**
**ಕೃಪಣವತ್ಸಲ ಸ್ವಪದಸೌಖ್ಯವನಿತ್ತು ಶರಣರಿಗೆ ॥ ೫೨ ॥**

ಪೂರ್ವೋಕ್ತ ಭೋಜನದಿಂದ ಹರಿಗೆ ದೋಷವಾಗೋದಿಲ್ಲ ಎಂತ ಹೇಳತಾರೆ.

ಉಂಡುದದರಿಂದ–ಭೋಜನ ಮಾಡಿದ ಆ ಚರಾಚರ ಜಗತ್ತಿನಿಂದ, ಉಪಚಯುಗಳಿಲ್ಲ–ಗುಣಪೂರ್ಣನಾದ ಪರಮಾತ್ಮನ ದೇಹಕ್ಕೆ ಉಪಚಯುವಾಗಿ ಬಲಿಯೋಣವೇನೂ

ಇಲ್ಲ. ಅಪಚಯಗಳಿಲ್ಲ–ಭೋಜನ ಮಾಡದೇ ಇರೋಣದರಿಂದ ಉಪಚಯರಹಿತವಾಗಿ ಶುಷ್ಕವಾಗೋಣವೇನು, ಈ ಎರಡೂ ಇಲ್ಲ. ಭೋಜನಸಾಂಕೇತದಿಂದ ರಕ್ಷಣಾರ್ಥ ಉದರದಲ್ಲಿ ಧರಿಸುತ್ತಾನೆ, ಘಟದಲ್ಲಿ ಧಾನ್ಯ ತುಂಬಿದೋಪಾದಿಯಲ್ಲಿ ಭೋಜನವು. ಅಮರಗಣದೊಳಗೆ–ದೇವಗಣದೊಳಗೆ, ಈ ಪ್ರಕಾರ ಚರಾಚರಗಳ ಭೋಜನ ಮಾಡ ತಕ್ಕ ಶ್ರೀ ಪರಮಾತ್ಮಗೆ, ಉಪಮರೆನಿಸುವರಿಲ್ಲ–ಸದೃಶರಾದವರು ದಾರು ದಾರೂ ಇಲ್ಲ. ಜನುಮಾದಿಗಳು–ದೇವತಿಗಳ ತಾನು ಸೃಷ್ಟಿ ಲಯಾದಿಗಳು ಮಾಡಿದಂತೆ, ಮೊದಲಿಲ್ಲ– ತನ್ನ ಸೃಷ್ಟ್ಯಾದಿಗಳು ಮಾಡತಕ್ಕ ಪುರುಷ ಆದಿಭೂತನಾದವ, ಇಲ್ಲವೆಂಬೋಣದರಿಂದ ಸರ್ವೋತ್ತಮನೆಂತಲೂ, ಅಸದೃಶನೆಂತಲೂ ತಾತ್ಪರ್ಯ. ಅಪರಿಮಿತ ಸನ್ಮಹಿಮ ನರಹರಿ – ಪರಿಮಿತಿ ಇಲ್ಲದ ನಿರ್ದುಷ್ಟವಾದ, ಮಹಿಮಾ ಉಳ್ಳ ನರಸಿಂಹರೂಪೀ ಪರಮಾತ್ಮ, ಕೃಪಣವತ್ಸಲ–ತನ್ನ ಭಕ್ತರಲ್ಲಿ ವಾತ್ಸಲ್ಯ ಉಳ್ಳ ಇಂಥಾ ಪರಮಾತ್ಮ, ಶರಣರಿಗೆ–ಏಕಾದಶೇಂದ್ರಿಯಗಳಿಂದ ಶರಣು ಪೊಕ್ಕವರಿಗೆ ಪ್ರತ್ಯಕ್ಷನಾಗತಕ್ಕವ. ಸಾಧನ ಪರಿಪಕ್ವವಾದ ತನ್ನ ಭಕ್ತರನ್ನ, ಸ್ವಪದಸೌಖ್ಯವನಿತ್ತು – ತನ್ನ ಪಾದಧ್ಯಾನರೂಪ ವಾದ ಸೌಖ್ಯವನ್ನ ಕೊಟ್ಟು ಲಿಂಗಭಂಗ ಐದಿಸಿ, ಅಪುನರಾವರ್ತರನ ಮಾಡುವ–ಪುನಃ ಜನುಮ ಇಲ್ಲದಂತೆ ಮಾಡುವ; ತದನ್ಯರಿಗೆ ಸ್ವಪದಸೌಖ್ಯವಲ್ಲದ ದ್ವೇಷ ಕೊಟ್ಟು ಅಂಧಂತಮಸ್ಸಿನಲ್ಲಿ ಇಟ್ಟು, ಅಪುನರಾವರ್ತರನ್ನ ಮಾಡುವ.

**ಬಿತ್ತಿ ಬೀಜವ ಭೂಮಿಯೊಳು ನೀ ।**
**ರೆತ್ತಿ ಬೆಳೆಸಿದ ಬೆಳಸು ಪ್ರಾಂತಕೆ ।**
**ಕಿತ್ತಿ ಮೆಲುವಂದದಲಿ ಲಕುಮಿಾರಮಣ ಲೋಕಗಳ ॥**
**ಮತ್ತೆ ಜೀವರ ಕರ್ಮ ಕಾಲೋ ।**
**ತ್ಪತ್ತಿ ಸ್ಥಿತಿ ಲಯ ಮಾಡುತಲಿ ಸಮ ।**
**ವರ್ತಿಯೆನಿಸುವ ಖೇದ ಮೋದಗಳಿಲ್ಲದನವರತ ॥ ೫೩ ॥**

ಸೃಷ್ಟ್ಯಾದಿಗಳಿಂದ ಸುಖದುಃಖಾದಿಗಳು ಪರಮಾತ್ಮಗೆ ಇಲ್ಲವೆಂದು ದೃಷ್ಟಾಂತದಿಂದ ಹೇಳತಾರೆ.

ಭೂಮಿಯೊಳು – ಲೋಕದಲ್ಲಿ, ಪೈರುಮಾಡತಕ್ಕವರು ಭೂಮಿಯಲ್ಲಿ, ಬಿತ್ತಿ ಬೀಜವ–ಬೀಜಗಳನ್ನ ಬಿತ್ತಿದವರಾಗಿ, ನೀರೆತ್ತಿ–ಆ ಪೈರು ರಕ್ಷಣಾರ್ಥ ನೀರುಕಟ್ಟಿ, ಬೆಳೆಸಿದ ಬೆಳಸು–ಅಭಿವೃದ್ಧಿಮಾಡಿದ ಧಾನ್ಯಾದಿ ಪೈರುಗಳು, ಪ್ರಾಂತಕೆ–ಅದದು ಫಲಿತ ವಾಗಿ ಪಕ್ವವಾಗೋಣವೇ, ಕೊನಿಗೆ, ಕಿತ್ತಿ–ಕೊಯಿದು, ಆ ಧಾನ್ಯಾದಿಗಳ, ಮೆಲು ವಂದದಲಿ – ಭೋಜನಮಾಡಿದೋಪಾದಿಯಲ್ಲಿ, ಲಕುಮಿಾರಮಣ – ಲಕ್ಷ್ಮೀಪತಿಯಾದ ನಾರಾಯಣದೇವರು, ಲೋಕಗಳ–ಹದಿನಾಲ್ಕು ಲೋಕಗಳ, ಮತ್ತೆ ಜೀವರ–ಮತ್ತೂ ಜೀವರನ್ನ, ಕರ್ಮಕಾಲ–ಕರ್ಮವೇನು, ಕಾಲವೇನು, ಇವುಗಳೆಂಬೋ ಬೀಜಗಳ, ಉತ್ಪತ್ತಿ–ಪ್ರದೇಶಸಾಂಕೇತವಾದ ಭೂಮಿಯಲ್ಲಿ ಬಿತ್ತಿ ಉತ್ಪತ್ತಿಮಾಡೋಣ. ಸ್ಥಿತಿ–

ಪೈರಿಗೆ ನೀರೆತ್ತಿ ಪಾಲನೆಮಾಡಿದೋಪಾದಿಯಲ್ಲಿ, ಅನ್ನೋದಕಾದಿಗಳ ಕೊಟ್ಟು ಪಾಲನೆ ಮಾಡೋಣ, ಲಯ–ಪೈರು ಫಲಿಸಿ ಪಕ್ವವಾಗುತ್ತಲೆ ಕೊಯ್ದೋಪಾದಿಯಲ್ಲಿ, ಜಗದಾಖ್ಯ ಪೈರು ಕಾಲದಿಂದ ಪಕ್ವವಾಗುತ್ತಲೆ ಕೊಯ್ಯೋಣವೆಂಬುವೇ ನಾಶಮಾಡೋಣ, ಧಾನ್ಯ ಗಳ ಪ್ರಾಣಿಗಳು ಭೋಜನಮಾಡಿದಂತೆ ಜಗತ್ತನ್ನ ಭೋಜನರೂಪದಿಂದ ಉದರದಲ್ಲಿ ಧರಿಸೋಣ, ಮಾಡುತಲಿ–ಈ ಪ್ರಕಾರ ಸೃಷ್ಟ್ಯಾದಿ ವ್ಯಾಪಾರ ಮಾಡುತ್ತಾ, ಅನವರತ– ನಿರಂತರದಲ್ಲೂ, ಖೇದವೋದಗಳಿಲ್ಲವೆ– ಸೃಷ್ಟಿಯಿಂದ ಸಂತೋಷವೂ, ಸಂಹಾರದಿಂದ ವ್ಯಸನವೂ, ಇವು ಎರಡೂ ಇಲ್ಲವೇ, ಸಮವರ್ತಿಯೆನಿಸುವ–ತನ್ನ ಸ್ವಾನಂದದಿಂದ ಪೂರ್ಣನಾಗಿ ಸರ್ವಪ್ರಾಣಿಗಳಲ್ಲಿ ಇದ್ದು, ಅವರವರ ಯೋಗ್ಯತಾಕ್ಕೆ ಸಮವಾಗಿ ವರ್ತಿ ಸುತ್ತಾ ಇರ್ತಾನೆ.

**ಶ್ವಸನ ರುದ್ರೇಂದ್ರ ಪ್ರಮುಖ ಸುಮ ।**
**ನಸರೊಳಿದ್ದರು ಕ್ಷುತ್ಪಿಪಾಸೆಗ ।**
**ಳೊಶದೊಳಿಪ್ಪುವು ಸಕಲಭೋಗಕೆ ಸಾಧನಗಳಾಗಿ ॥**
**ಅಸುರ ಪ್ರೇತ ಪಿಶಾಚಿಗಳ ಬಾ ।**
**ಧಿಸುತಲಿಪ್ಪುವು ದಿನದಿನದಿ ಮಾ ।**
**ನಿಸರೊಳಗೆ ಮೃಗ ಪಕ್ಷಿ ಜೀವರೊಳಿದ್ದು ಪೋಗುವುವು ॥ ೫೪ ॥**

ಬ್ರಹ್ಮಾದಿ ತೃಣಾಂತ ಜೀವರಿಗೆ ಕ್ಷುತ್ಪಿಪಾಸಾದಿಗಳುಂಟು ಎಂತ ಹೇಳತಾರೆ.

ಕ್ಷುತ್ಪಿಪಾಸೆಗಳು–ಹಸಿವಿ, ನೀರಡಕಿ, ಎರಡು, ಶ್ವಸನ ರುದ್ರೇಂದ್ರ–ಪ್ರಧಾನ ವಾಯುದೇವರು, ರುದ್ರದೇವರು, ಇಂದ್ರದೇವರು, ಪ್ರಮುಖ–ಇವರೇ ಮೊದಲಾದ, ಸುಮನಸರೊಳು–ದೇವಗಂಧರ್ವಾಂತರಾದ ದೇವತೆಗಳೊಳಗೆ, ಅಸುರ–ದೈತ್ಯರು, ಪ್ರೇತ– ಪ್ರೇತಗಣದೊಳು, ಮಾನಿಸರೊಳಗೆ–ಮನುಷ್ಯಗಣದೊಳಗೆ, ಮೃಗಗಣದೊಳಗೆ, ಪಕ್ಷಿ– ಪಕ್ಷಿಗಣದೊಳಗೆ, ಜೀವರೊಳು–ಅವಶಿಷ್ಟ ಯಾವತ್ತೂ ಜೀವರೊಳು ಕ್ಷುತ್ಪಿಪಾಸಾದಿಗಳು ಇರೋವಾಗಿ ಅವೆ. ಇದ್ದರು–ಈ ಪ್ರಕಾರ ಕ್ಷುತ್ಪಿಪಾಸಾದಿಗಳು ಇದ್ದಕಾಲಕ್ಕೂ, ಸಕಲ ಭೋಗಕೆ–ಸಕಲ ದೇವತೆಗಳಲ್ಲಿ ಇರತಕ್ಕ ಕ್ಷುತ್ಪಿಪಾಸಾದಿಗಳು ಪೀಡಾಕಾರವಾಗದೆ ಸಕಲ ದೇವತೆಗಳಿಗೆ ಅವರವರ ಯೋಗ್ಯತಾನುಸಾರ ಭೋಗಕ್ಕೆ, ಸಾಧನಗಳಾಗಿ–ಸಾಧಕಗಳಾಗಿ ಇರೋವಾಗಿ ಅವೆ, ಎಂದರೆ, ಯಥೇಚ್ಛ ಭೋಜನ ಪಾನಾದಿಗಳು ಮಾಡಬೇಕೆಂಬ ಇಚ್ಛಾ ಪ್ರಾಪ್ತವಾದರೆ, ಭೋಜನರೂಪವಾದ ಭೋಗಕ್ಕೆ ಜಠರಾಗ್ನಿ ಅವಕಾಶ ಕೊಡೋ ದಾಗತದೆ. ತದಿಚ್ಛಾ ಇಲ್ಲದಾಗ್ಯೆ, ಜಠರಾಗ್ನಿ ಶಾಂತವಾಗಿ ಕ್ಷುತ್ಪಿಪಾಸಾದಿಗಳು ಇಲ್ಲದಂತೆ ಮಾಡುತ್ತದೆ. ಈ ಪ್ರಕಾರ, ಭೋಗಸಾಧಕಗಳಾಗಿ ಇರುತ್ತವೆ. ವಶದೊಳಿಪ್ಪುವು– ಈ ಕ್ಷುತ್ಪಿಪಾಸಾದಿಗಳು ದೇವತೆಗಳಿಗೆ ಅವರವರ ವಶದಲ್ಲಿ ಇರೋವಾಗಿ ಇರುತ್ತವೆ. ಅಸುರ ಪ್ರೇತ ಪಿಶಾಚಿಗಳ (ಆವರ್ತನವು) ಬಾಧಿಸುತಲಿಪ್ಪುವು–ಅಸುರ ಪ್ರೇತ ಪಿಶಾಚಾದಿ ಗಳಲ್ಲಿ ಇರತಕ್ಕ ಕ್ಷುತ್ಪಿಪಾಸಾದಿಗಳು ವಶದೊಳಗೆ ಇರವೆ, ಎಷ್ಟು ಭೋಜನಮಾಡಿದರೂ

ನಿವಾರಣವಾಗದೇ, ಅವರನ್ನ ಬಾಧಿಸುತ್ತಾ ಇರುತ್ತವೆ. ದಿನದಿನದಿ–ಪ್ರತಿದಿನದಲ್ಲೂ, ಇದ್ದು ಪೋಗುವುವು–ಮನುಷ್ಯರೊಳು, ಮೃಗ ಪಕ್ಷಿ ತೃಣಾಂತ ಜೀವರೊಳು ಕ್ಷುತ್ಪಿಪಾಸಾದಿಗಳು ಇದ್ದು, ಪ್ರತಿದಿನ ಭೋಜನಕಾಲದಲ್ಲಿ ನಿವಾರಣೆ, ಭೋಜನವಿಲ್ಲದಿರುವ ಕಾಲದಲ್ಲಿ ಬಾಧಾ, ಈ ಪ್ರಕಾರ ಇರೋವಾಗಿ ಇರುತ್ತವೆ ; ಶುದ್ಧವಾಗಿ ನಿವಾರಣ ಇಲ್ಲ, ವಶದೊಳಗೆ ಇರೋದಿಲ್ಲ, ಕಾಲವಿಶೇಷದಲ್ಲಿ ಎಂತ ಅರ್ಥ.

**ವಾಸುದೇವಗೆ ಸ್ವಪ್ನ ಸುಷುಪ್ತಿ ಪಿ ।**
**ಪಾಸೆ ಕ್ಷುಧೆ ಭಯ ಶೋಕ ಮೋಹಾ ।**
**ಯಾಸ ವಿಸ್ಮೃತಿ ಮಾತ್ಸರ್ಯ ಮದ ಪುಣ್ಯ ಪಾಪಾದಿ ॥**
**ದೋಷವರ್ಜಿತನೆಂದು ಬ್ರಹ್ಮ ಸ ।**
**ದಾಶಿವಾದಿ ಸಮಸ್ತದಿವಿಜರು ।**
**ಪಾಸನೆಯ ಗೈದೆಲ್ಲಕಾಲದಿ ಮುಕ್ತರಾಗಿಹರು ॥ ೫೫ ॥**

ಪರಮಾತ್ಮ ದೋಷದೂರನೆಂದು ಉಪಾಸನಮಾಡಿ, ಬ್ರಹ್ಮಾದಿ ಮುಕ್ತಿಯೋಗ್ಯರು ಮುಕ್ತರಾದರೆಂದು ಹೇಳುತ್ತಾರೆ.

ವಾಸುದೇವಗೆ – ಗುಣಪೂರ್ಣನಾದ, ನಿರ್ದೋಷನಾದ ವಾಸುದೇವಗೆ, ಸ್ವಪ್ನ ಸುಷುಪ್ತಿ – ಸ್ವಪ್ನಾವಸ್ಥಾ, ನಿದ್ರಾವಸ್ಥಾ, ಪಿಪಾಸೆ ಕ್ಷುಧೆ–ನೀರಡಕೆ, ಹಸಿವು, ಭಯ ಶೋಕ–ಅಂಜಿಕೆ, ದುಃಖ, ಮೋಹಾಯಾಸ–ಮೋಹವೇನು, ಆಯಾಸವೇನು, ವಿಸ್ಮೃತಿ ಮಾತ್ಸರ್ಯ–ಮರವು, ಮತ್ಸರ, ಮದ–ಅಷ್ಟಮದಗಳು, ಪುಣ್ಯಪಾಪ–ಪುಣ್ಯಪಾಪಾದಿ ವಿಧಿಗಳು, ಆದಿ–ಈ ಪೂರ್ವೋಕ್ತಗಳಾದ, ದೋಷವರ್ಜಿತನೆಂದು–ದೋಷದಿಂದ ರಹಿತನಾದವನೆಂದು, ಬ್ರಹ್ಮಸದಾಶಿವಾದಿ–ಬ್ರಹ್ಮರುದ್ರಾದಿ, ಸಮಸ್ತ ದಿವಿಜರು–ಸಮಸ್ತಮುಕ್ತಿಯೋಗ್ಯ ದೇವತೆಗಳು, ಜೀವರು, ಎಲ್ಲಕಾಲದಿ–ಸರ್ವಕಾಲದಲ್ಲಿ, ಉಪಾಸನೆಯ ಗೈದು–ಉಪಾಸನ ಮಾಡಿ, ಮುಕ್ತರಾಗಿಹರು–ಲಿಂಗದೇಹಭಂಗವನ್ನ ಐದಿ ವೈಕುಂಠಾದಿಲೋಕದಲ್ಲಿ ಇರೋವರಾಗಿದ್ದಾರೆ.

**ಪರಮಸೂಕ್ಷ್ಮ ಕ್ಷಣವೈದು ತ್ರುಟಿ ।**
**ಕರೆಸುವುದು ಐವತ್ತು ತ್ರುಟಿ ಲವ ।**
**ಎರಡು ಲವವು ನಿಮೇಷ ನಿಮಿಷಗಳೆಂಟು ಮಾತ್ರ ಯುಗ ॥**
**ಗುರು ದಶ ಪ್ರಾಣವು ಪಳವು ಹ ।**
**ನ್ನೆರಡು ಬಾಣವು ಘಳಿಗೆ ತ್ರಿಂಶತಿ ।**
**ಇರುಳು ಹಗಲರವತ್ತು ಘಟಿಕಗಳಹೋರಾತ್ರಿಗಳು ॥ ೫೬ ॥**

ಕಾಲಪರಿಮಿತಿ ವಿಚಾರ ಹೇಳತಾರೆ.

ಪರಮಸೂಕ್ಷ್ಮ ಕ್ಷಣವು–ಅತ್ಯಂತ ಸೂಕ್ಷ್ಮಗಳಾದ ಕ್ಷಣವು, ಐದು ತ್ರುಟಿ ಕರೆಸುವುದು–ಐದು ಗತವಾದ ಕಾಲವೆಂದು ತ್ರುಟಿಕಾಲವೆಂತ ಕರಿಸತದೆ. ಐವತ್ತು ತ್ರುಟಿ–ಇಂಥಾ ತ್ರುಟಿಗಳು ಐವತ್ತು ಸೇರಿದ ಕಾಲ, ಲವ–ಒಂದು ಲವ ಕಾಲವೆಂದು ಕರಿಸುತ್ತದೆ. ಎರಡು ಲವವು–ಎರಡು ಲವಕಾಲಗಳು ಸೇರಿ, ನಿಮೇಷ–ಒಂದು ನಿಮೇಷವೆಂತ ಕರಿಸೋದಾಗತದೆ. ನಿಮಿಷಗಳೆಂಟು–ನಿಮೇಷಗಳೆಂಟು ಕೂಡಿದರೆ, ಮಾತ್ರ–ಒಂದು ಮಾತ್ರಕಾಲವೆಂದು ಕರಿಸುತ್ತದೆ. ಯುಗ–ಯುಗವೆಂದರೆ ಎರಡು ಮಾತ್ರಗಳು. ಎರಡೂ ಕೂಡಿದರೆ, ಗುರು–ಒಂದು ಗುರುಕಾಲವೆಂದು ಕರೆಸುತ್ತದೆ. ದಶ–ಹತ್ತು ಗುರುಕಾಲ ಸೇರಿದರೆ, ಪ್ರಾಣವು–ಪ್ರಾಣಸಾಂಕೇತಕಾಲವೆಂದು ಅನಿಸುತ್ತದೆ. ಪಳವು–ಪ್ರಾಣಸಾಂಕೇತವಾದ ಕಾಲ ಹತ್ತಾದರೆ, ಒಂದು ಪಳವು. (ದಶ ಶಬ್ದ ಆವರ್ತನವು.) ಹನ್ನೆರಡು–ಪಳಗಳು ಹನ್ನೆರಡು ಆದರೆ, ಬಾಣವು–ಒಂದು ಬಾಣಕಾಲವೆಂದು ಕರಿಸುತ್ತದೆ. ಘಳಿಗೆ–ಹನ್ನೆರಡು ಬಾಣಕಾಲ ಸೇರಿದರೆ ಒಂದು ಘಳಿಗೆ ಎನಿಸುತ್ತದೆ. ತ್ರಿಂಶತಿ–ಘಳಿಗಿ ಮೂವತ್ತಾದರೆ, ಇರುಳು–ಒಂದು ರಾತ್ರಿಕಾಲವೆಂದು ಕರಿಸುತ್ತದೆ. ಹಗಲು–ಮೂವತ್ತು ಘಳಿಗಿ ಆದನಂತರ ಮತ್ತೂ ಮೂವತ್ತು ಘಳಿಗಿ ಕಳೆದರೆ ಒಂದು ಹಗಲು ಎಂತ ಕರಿಸುತ್ತದೆ. ಅರವತ್ತು ಘಟಿಕಗಳು–ಪೂರ್ವೋಕ್ತ ಹಗಲು ಘಳಿಗಿ ಮೂವತ್ತು, ರಾತ್ರಿ ಘಳಿಗಿ ಮೂವತ್ತು, ಅಂತು ಅರವತ್ತು ಘಟಿಕಗಳು ಸೇರಿದರೆ, ಅಹೋರಾತ್ರಿಗಳು–ಹಗಲು ರಾತ್ರಿ ಎಂತ ಕರಿಸಿ, ಒಂದು ದಿನ ಎಂತ ಕರಿಸುತ್ತದೆ.

**ಈ ದಿವಾರಾತ್ರಿಗಳೆರಡು ಹದಿ ।**
**ನೈದು ಪಕ್ಷಗಳೆರಡು ಮಾಸಗ ।**
**ಳಾದಪವು ಮಾಸದ್ವಯವೆ ಋತು ಋತುತ್ರಯಗಳಯನ ॥**
**ಐದುವುವು ಅಯನದ್ವಯಾಬ್ದ ಕೃ ।**
**ತಾದಿಯುಗಗಳು ದೇವಮಾನದಿ ।**
**ದ್ವಾದಶಸಹಸ್ರವರುಷಗಳಹವದನು ಪೇಳುವೆನು ॥ ೫೭ ॥**

ಕಾಲದ ವಿವರ ಹೇಳತಾರೆ.

ಈ ದಿವಾರಾತ್ರಿಗಳೆರಡು – ಈ ಹಗಲುರಾತ್ರಿಗಳೆರಡೂ ಸೇರಿ ಒಂದು ದಿನವೆಂದು ಕರಿಸುತ್ತದೆ. ಹದಿನೈದು–ಹದಿನೈದು ದಿನಗಳು ಸೇರಿ, ಪಕ್ಷ–ಒಂದು ಪಕ್ಷಕಾಲವೆಂದು ಕರಿಸುತ್ತದೆ. (ಪಕ್ಷ)ಗಳೆರಡು–ಎರಡು ಪಕ್ಷಗಳು ಸೇರಿದರೆ, ಮಾಸ–ಒಂದು ತಿಂಗಳೆಂದು ಕರಿಸುತ್ತದೆ. (ಮಾಸ)ಗಳಾದಪವು–ಕಾಲಸಾಂಕೇತಗಳು, ಮಾಸಪರಿಯಂತ ಈ ಪ್ರಕಾರ ಆಗೋದಾಯಿತು. ಮಾಸದ್ವಯವೆ–ಎರಡು ತಿಂಗಳು ಕೂಡಿದ ಕಾಲವೇ, ಋತು–ಒಂದು ಋತುಸಾಂಕೇತವಾದ ಕಾಲವಾಗುತ್ತದೆ. ಋತುತ್ರಯಗಳು–ಮೂರು ಋತುಗಳು ಕೂಡಿದರೆ, ಅಯನ–ಒಂದು ಅಯನಕಾಲವೆಂದು ಕರಿಸುತ್ತದೆ. ಅಯನದ್ವಯ–ಎರಡು ಅಯನಗಳು ಸೇರಿದರೆ, ಐದುವುವು–ಒಂದಾಗಿ ಸೇರಿದ ಕಾಲಕ್ಕೆ ಅದು, ಅಬ್ದ–

ಒಂದು ವರುಷಕಾಲವೆಂದು ಕರಿಸುತ್ತದೆ. ಈ ಪ್ರಕಾರ ಆದ ಒಂದು ವರುಷ ಮಾನುಷ ಮಾನದಿಂದ ಆದ ವರುಷವು, ಕೃತಾದಿ ಯುಗಗಳು–ನಾಲ್ಕು ಯುಗಗಳು, ದೇವಮಾನದಿ–ದೇವಮಾನದಿಂದ, ದ್ವಾದಶಸಹಸ್ರವರುಷಗಳು–ಹನ್ನೆರಡು ಸಾವಿರ ವರುಷಗಳು, ಅಹವು–ಆಗೋವಾಗತವೆ. ಅದನು ಪೇಳುವೆನು–ಅದರನ್ನ ಹೇಳತೇನೆ ಎಂತ ಹೇಳತಾರೆ.

**ಚತುಸ್ಸಾವಿರದೆಂಟುನೂರವು ।**
**ಕೃತಯುಗಕೆ ತ್ರಿಸಹಸ್ರ ಸಲೆಷಟ್ ।**
**ಶತವು ತ್ರೇತೆಗೆ ದ್ವಾಪರಕೆ ದ್ವಿಸಹಸ್ರನಾನೂರು ॥**
**ದಿತಿಜಪತಿ ಕಲಿಯುಗಕೆ ಸಾವಿರ ।**
**ಶತಗಳ ದ್ವಯ ಕೂಡಿ ಈ ದೇ ।**
**ವತೆಗಳಿಗೆ ಹನ್ನೆರಡುಸಾವಿರವಹವು ವರುಷಗಳು ॥ ೫೮ ॥**

ಇನ್ನೂ ಕಾಲಮಾನವಿಚಾರವೂನೂ, ದೇವಮಾನ ವರುಷಗಳೂನೂ ಹೇಳತಾರೆ.

ಚತುಸ್ಸಾವಿರದೆಂಟುನೂರು–ನಾಲ್ಕುಸಾವಿರದ ಎಂಟುನೂರು ದೇವಮಾನ ವರುಷಗಳು, ಹದಿನೇಳು ಲಕ್ಷ ಇಪ್ಪತ್ತೆಂಟುಸಾವಿರ ಮನುಷ್ಯಮಾನ ವರುಷಗಳು, ಅವು ಕೃತಯುಗಕೆ–ಆ ವರುಷಗಳು ಕೃತಯುಗಕ್ಕೆ ಆಗತವೆ. ತ್ರೇತೆಗೆ–ತ್ರೇತಾಯುಗಕ್ಕೆ, ತ್ರಿಸಹಸ್ರ ಸಲೆಷಟ್‌ಶತವು–ಮೂರುಸಾವಿರದ ಆರುನೂರು ದೇವಮಾನ ವರುಷಗಳು. ಹನ್ನೆರಡು ಲಕ್ಷ ತೊಂಭತ್ತಾರುಸಾವಿರ ಮನುಷ್ಯಮಾನ ವರುಷಗಳು, ದ್ವಾಪರಕೆ–ದ್ವಾಪರಯುಗಕ್ಕೆ, ದ್ವಿಸಹಸ್ರನಾನೂರು–ಎರಡುಸಾವಿರದ ನಾಲ್ಕುನೂರು ದೇವಮಾನ ವರುಷಗಳು, ಎಂಟುಲಕ್ಷ ಅರುವತ್ತುನಾಲ್ಕು ಸಾವಿರ ಮನುಷ್ಯಮಾನ ವರುಷಗಳು, ದಿತಿಜಪತಿ–ದಿತಿದೇವಿ ಪುತ್ರರಾದ ಅಸುರರು, ಇವರಿಗೆ ಪತಿಯಾದ, ಕಲಿಯುಗಕೆ–ಕಲಿಸಾಂಕೇತವಾದ ಕಲಿಅಭಿಮನ್ಯಮಾನವಾದ ಕಲಿಯುಗಕ್ಕೆ, ಸಾವಿರಶತಗಳ–ಒಂದುಸಾವಿರದ ಇನ್ನೂರು ದೇವಮಾನ ವರುಷಗಳು, ನಾಲ್ಕುಲಕ್ಷ ಮೂವತ್ತೆರಡುಸಾವಿರ ಮನುಷ್ಯಮಾನ ವರುಷಗಳು, ದ್ವಯ–ಈ ಯಾವತ್ತೂ ವರುಷಗಳು, ಕೂಡಿ–ಕೂಡಿ, ಹನ್ನೆರಡುಸಾವಿರವಹವು ವರುಷಗಳು–ಹನ್ನೆರಡುಸಾವಿರ ದೇವಮಾನ ವರುಷಗಳು ಆಗುತ್ತವೆ. ಇದಕ್ಕೆ ಮನುಷ್ಯಮಾನವರುಷಗಳು ನಲವತ್ತುಮೂರು ಲಕ್ಷ ಇಪ್ಪತ್ತುಸಾವಿರ. ಈ ಹನ್ನೆರಡು ಸಾವಿರ ದೇವಮಾನುಷ ವರುಷಗಳು, ಈ ದೇವತೆಗಳಿಗೆ–ಈ ಪೂರ್ವೋಕ್ತ ದೇವತೆಗಳಿಗೆ, ದೇವಮಾನದಿಂದ ಆಗೋವಾಗುತ್ತವೆ. ಮಾನುಷರ ಒಂದೂವರೆ ವರುಷ ದೇವತೆಗಳ ಒಂದು ದಿನ ; ಒಂದು ವರುಷದ ೩೬೦ ದಿನವನ್ನ ದೇವಮಾನ ವರುಷಗಳಿಗೆ ಹೆಚ್ಚಿಸಿದರೆ ಮಾನುಷಮಾನ ವರುಷಕ್ಕೆ ಸರಿ ಆಗುತ್ತದೆ.

**ಪ್ರಥಮಯುಗಕೇಳಧಿಕವರೆ ನಿಂ ।**
**ಶತಿಸುಲಕ್ಷಾಷ್ಟೋತ್ತರಶತ ನಿಂ ।**
**ಶತಿಸಹಸ್ರ ಮನುಷ್ಯಮಾನಾಬ್ದಗಳು ಷಣ್ಣವತಿ ॥**

**ಮಿತ ಸಹಸ್ರದ ಲಕ್ಷದ್ವಾದಶ ।**
**ದ್ವಿತಿಯ ತೃತಿಯಕೆ ಎಂಟುಲಕ್ಷದ ।**
**ಚತುಃಷಷ್ಠಿ ಸಹಸ್ರ ಕಲಿಗಿದರರ್ಧ ಚಿಂತಿಪುದು ॥ ೫೯ ॥**

ದೇವಮಾನ ವರುಷಗಳಿಗೆ ಮನುಷ್ಯಮಾನ ವರುಷಗಳು ಹೇಳತಾರೆ.

ಮನುಷ್ಯಮಾನ–ಮನುಷ್ಯಮಾನದಿಂದ, ಅಬ್ದಗಳು–ಕೃತಾದಿ ನಾಲ್ಕು ಯುಗಗಳ ದೇವಮಾನ ವರುಷಗಳಿಗೆ ಆಗತಕ್ಕ ಮಾನುಷ ವರುಷಗಳು, ಪ್ರಥಮ ಯುಗಕೆ–ಪ್ರಥಮ ಯುಗವಾದ ಕೃತಯುಗಕ್ಕೆ, ಅರೆವಿಂಶತಿ–ಹತ್ತುಲಕ್ಷ (ಇಪ್ಪತ್ತರಲ್ಲಿ ಅರ್ಧ), ಏಳಧಿಕವು–ಏಳುಲಕ್ಷ ಅಧಿಕ, ಸುಲಕ್ಷ–ಅಂತು ಸಮೀಚೀನವಾದ ಹದಿನೇಳುಲಕ್ಷ, ಉತ್ತರ–ಅಂತ್ಯದಲ್ಲಿ, ಶತ–ನೂರು (ಮೂರು ಸಂಖ್ಯಾಕವುಳ್ಳದ್ದು) ಇದರ ಹಿಂದೆ, ಅಷ್ಟ–ಎಂಟು ಸೇರಿ ಎಂಟುಸಾವಿರ ಆಗುತ್ತದೆ. ವಿಂಶತಿಸಹಸ್ರ–ಇಪ್ಪತ್ತುಸಾವಿರ ಅಂತೂ ಹದಿನೇಳುಲಕ್ಷದ ಇಪ್ಪತ್ತೆಂಟುಸಾವಿರ, ದ್ವಿತಿಯ–ಎರಡನೇದಾದ ತ್ರೇತಾಯುಗಕ್ಕೆ, ಲಕ್ಷದ್ವಾದಶ–ಹನ್ನೆರಡು ಲಕ್ಷ, ಷಣ್ಣವತಿ ಸಹಸ್ರ–ತೊಂಭತ್ತಾರುಸಾವಿರ, ಅಂತು ಹನ್ನೆರಡುಲಕ್ಷ, ತೊಂಭತ್ತಾರು ಸಾವಿರವು, ತೃತಿಯಕೆ–ತೃತೀಯ ಯುಗವಾದ ದ್ವಾಪರಯುಗಕ್ಕೆ, ಎಂಟುಲಕ್ಷದ ಚತುಃ ಷಷ್ಟಿಸಹಸ್ರ–ಎಂಟುಲಕ್ಷದ ಅರುವತ್ತುನಾಲ್ಕುಸಾವಿರ, ಕಲಿಗೆ–ನಾಲ್ಕನೇ ಯುಗವಾದ ಕಲಿಯುಗಕ್ಕೆ, ಇದರರ್ಧ–ದ್ವಾಪರಯುಗದ ವರುಷದೊಳಗೆ ಅರ್ಧವಾದ ನಾಲ್ಕುಲಕ್ಷದ ಮೂವತ್ತೆರಡುಸಾವಿರ ವರುಷಗಳು, ಮಿತ–ಈ ಮಿತವಾದ ವರುಷಗಳಿಂದ ನಾಲ್ಕು ಯುಗಗಳು ಯುಕ್ತವಾಗಿ ಅವೆ ಎಂದು, ಚಿಂತಿಪುದು–ಚಿಂತಿಸೋವರಾಗಬೇಕು.

**ಮೂರಧಿಕನಾಲ್ವತ್ತುಲಕ್ಷದ ।**
**ಲಾರುಮೂರೆರಡಧಿಕಸಾವಿರ ।**
**ಈರೆರಡು ಯುಗವರುಷ ಸಂಖ್ಯೆಯ ಗೈಯಲಿನಿತಹುದು ॥**
**ಸೂರಿ ಪೇಳ್ವಸೆ ಸಾವಿರದನಾ ।**
**ನ್ನೂರು ಮೂವತ್ತೆರಡುಕೋಟಿ ಸ ।**
**ರೋರುಹಾಸನಗಿದು ದಿವಸವೆಂಬರು ವಿಪಶ್ಚಿತರು ॥ ೬೦ ॥**

ಬ್ರಹ್ಮಮಾನ ಹೇಳತಾರೆ.

ನಾಲ್ವತ್ತುಲಕ್ಷದಲಿ–೪೦,೦೦,೦೦೦ ಮನುಷ್ಯಮಾನದಿಂದ ನಾಲ್ಕು ಯುಗದ ವರುಷಗಳು ಸೇರಿ ಆಗತಕ್ಕ ವರುಷಗಳು ಇವು, ಮೂರಧಿಕ–ಅಧಿಕ ಮೂರುಲಕ್ಷ, ಆರು ಮೂರು–ಹದಿನೆಂಟು, ಎರಡು–ಎರಡು, ಸಾವಿರ–ಸಾವಿರ, ಸೇರಿ ಇಪ್ಪತ್ತುಸಾವಿರ, ಅಧಿಕ–ನಾಲ್ವತ್ತುಮೂರುಲಕ್ಷದ ಮ್ಯಾಲೆ ಇಪ್ಪತ್ತುಸಾವಿರ ಅಧಿಕ ಸೇರಿಸಬೇಕು, ಅಂತು ೪೩,೨೦,೦೦೦. ಈರೆರಡು ಯುಗವರುಷ–ಕೃತಾದಿ ನಾಲ್ಕು ಯುಗದ ಮಾನುಷ ವರುಷಗಳು, ಸಂಖ್ಯೆಯ ಗೈಯಲು–ಮೊತ್ತ ಸಂಖ್ಯಾ ಮಾಡಿದರೆ, ಇನಿತಹುದು–ಈ

ಪ್ರಕಾರ, ನಾಲ್ವತ್ತುಮೂರುಲಕ್ಷದ ಇಪ್ಪತ್ತುಸಾವಿರದ ಸಂಖ್ಯಾ ವರುಷಗಳಿಂದ ಯುಕ್ತ ವಾಗಿದೆ. ಸಾವಿರದ–ಈ ನಾಲ್ಕು ಯುಗದ ವರುಷಗಳ ಮೊತ್ತವನ್ನು ಸಾವಿರದಿಂದ, ಸೂರಿ–ಜ್ಞಾನಿಗಳಾದವರು, ಪೆಚ್ಚಿಸೆ–ಹೆಚ್ಚಿಸಿದರೆ, ಅಂದರೆ ಗುಣಿಸಿದರೆ, ನಾನ್ನೂರು ಮೂವತ್ತೆರಡು ಕೋಟಿ–೪೩೨,೦೦,೦೦,೦೦೦ ವರುಷಗಳು, ಸರೋರುಹಾಸನಗೆ–ಬ್ರಹ್ಮ ದೇವರಿಗೆ, ಇದು–ಈ ವ್ಯಾಲೆ ಉದಹರಿಸಿದ ವರುಷಗಳು, ವಿಪಶ್ಚಿತರು–ಜ್ಞಾನಿಗಳಾದವರು, ದಿವಸವೆಂಬರು–ಬ್ರಹ್ಮಗೆ ಒಂದು ಹಗಲು ಎಂತ ಅನ್ನುತ್ತಾರೆ.

**ಶತಧೃತಿಗೆ ಈ ದಿವಸಗಳು ತ್ರಿಂ ।**
**ಶತಿಯು ಮಾಸದ್ವಾದಶಾಬ್ದವು ।**
**ಶತವೆರಡರೊಳು ಸರ್ವಜೀವೋತ್ಪತ್ತಿ ಸ್ಥಿತಿಲಯವು ॥**
**ಶ್ರುತಿಸ್ಮೃತಿಗಳು ಪೇಳುತಿಹುವ ।**
**ಚ್ಯುತಗೆ ನಿಮಿಷವಿದೆಂದು ಸುಖಶಾ ।**
**ಶ್ವತಗೆ ಪಾಸಟಿಯೆಂಬರೆ ಬ್ರಹ್ಮಾದಿ ದಿವಿಜರನು ॥ ೬೧ ॥**

ಪರಮಾತ್ಮಗೆ ನಿಮಿಷಕಾಲ ವಿಚಾರ ಹೇಳತಾರೆ.

ಶತಧೃತಿಗೆ – ಬ್ರಹ್ಮದೇವರಿಗೆ ಪೂರ್ವೋಕ್ತ ಹಗಲು ಪರಿಮಿತಿಯಿಂದ, ಅಷ್ಟೇ ಪರಿಮಿತಿಕಾಲ ರಾತ್ರಿ ಆಗಿ ಒಂದು ದಿವಸ, ಈ ದಿವಸಗಳು–ಈ ದಿನಗಳು, ತ್ರಿಂಶತಿಯು– ಮೂವತ್ತಾದರೆ, ಮಾಸ–ಒಂದು ತಿಂಗಳಾಗತದೆ. ದ್ವಾದಶ–ಇಂಥಾ ತಿಂಗಳು ಹನ್ನೆರ ಡಾದರೆ, ಅಬ್ದವು–ಒಂದು ವರುಷವಾಗತದೆ. ಶತವು–ಇಂಥಾ ವರುಷಗಳು ನೂರಾದರೆ, ಬ್ರಹ್ಮಗೆ ಆಯುಸ್ಸು ಸಮಾಪ್ತಿಯಾಗಿ ದೇಹತ್ಯಾಗ ಮಾಡತಾರೆ. ಎರಡರೊಳು–ಬ್ರಹ್ಮನ ನೂರು ವರುಷದಲ್ಲಿ, ಐವತ್ತು ವರುಷ ಪೂರ್ವಾರ್ಧವೆಂತಲೂ, ಐವತ್ತು ವರುಷ ಪರಾರ್ಧ ಎಂತಲೂ, ಈ ಎರಡರೊಳಗೆ, ಸರ್ವಜೀವೋತ್ಪತ್ತಿ – ಪೂರ್ವಾರ್ಧದಲ್ಲಿ ಸೂಕ್ಷ್ಮಶರೀರ ಗಳಿಂದ, ಅಂಡದ ಹೊರಗೆ ಸರ್ವಜೀವರ ಬ್ರಹ್ಮಾಂಡಸೃಷ್ಟಿ, ಪರಾರ್ಧದಲ್ಲಿ ಅಂಡದ ಒಳಗೆ ಬ್ರಹ್ಮದೇವರ ಸೃಷ್ಟಿ, ಸರ್ವಪ್ರಾಣಿಗಳಿಗೆ ಸ್ಥೂಲಶರೀರ, ಸೃಷ್ಟಿ ಸ್ಥಿತಿ–ಅವರವರ ಪಾಲನೆ ಮಾಡಿಸೋಣ, ಸಾಧನಮಾಡಿಸೋಣ, ಬ್ರಹ್ಮಾದಿ ದಿವಿಜರನು–ಈ ಪ್ರಕಾರ ಬ್ರಹ್ಮಾದಿ ಜೀವರನ್ನ ಸೃಷ್ಟಿ, ಸ್ಥಿತಿ, ಲಯವು–ಅಂತ್ಯದಲ್ಲಿ ಪ್ರಳಯ ಐದಿಸೋಣ, ಈ ಪ್ರಕಾರ ಪರಮಾತ್ಮ ನಡಸತಾನೆ, ಶ್ರುತಿಸ್ಮೃತಿಗಳು ಪೇಳುತಿಹುವು–ಎಂತ ಶ್ರುತಿಸ್ಮೃತಿಗಳು ಹೇಳತಾ ಅವೆ. ಅಚ್ಯುತಗೆ–ಈ ನೂರು ವರುಷಕಾಲವು ಚ್ಯುತಿರಹಿತನಾದ ಪರಮಾತ್ಮಗೆ, ನಿಮಿಷವಿದೆಂದು–ನಿಮಿಷಕಾಲವಿದೆಂದು ಹೇಳತದೆ. ಎಂದರೆ, ರೆಪ್ಪೆ ಮುಚ್ಚೋಣದರಿಂದ ಲಯ, ರೆಪ್ಪೆ ತೆಗಿಯೋಣದರಿಂದ ಸೃಷ್ಟಿ, ಅಂದರೆ ಇದಾದರೂ ಔಪಚಾರಿಕವೇ ಹೊರ್ತು ಪರಮಾತ್ಮಗೆ ಕಾಲನೇಮವಿಲ್ಲ. ಸುಖಶಾಶ್ವತಗೆ–ಸತತ ಸುಖಿಯಾದ ಶ್ರೀಶಗೆ, ಪಾಸಟಿಯೆಂಬರೆ–ಸೃಷ್ಟ್ಯಾದಿ ವ್ಯಾಪಾರಗಳಿಂದ ಆಯಾಸವಾಗಿ ಈ ಶ್ರಮಪರಿಹಾರಾರ್ಥ

ಪ್ರಳಯದಲ್ಲಿ ವಟಪತ್ರಶಾಯಿ ಅದನೆಂತ ಅನಬಾಹೋದೇ ? ಎಂದಿಗೂ ಅನ್ನಕೂಡದು. ನಿರ್ದೋಷನಾದ ಹರಿಗೆ ಸೃಷ್ಟ್ಯಾದಿ ಕಾರ್ಯಗಳು ಲೀಲ ಎಂತ ತಾತ್ಪರ್ಯ.

**ಆದಿಮಧ್ಯಾಂತಗಳು ಇಲ್ಲದ ।**
**ಮಾಧವಗಿದುಪಚಾರವೆಂದು ಋ ।**
**ಗಾದಿವೇದಪುರಾಣಗಳು ಪೇಳುವುವು ನಿತ್ಯದಲಿ ॥**
**ಮೋದಮಯನಾನುಗ್ರಹವ ಸಂ ।**
**ಪಾದಿಸಿ ರಮಾ ಬ್ರಹ್ಮ ರುದ್ರೇಂ ।**
**ದ್ರಾದಿಗಳು ತಮ್ಮ ತಮ್ಮ ಪದವಿಯನೈದಿ ಸುಖಿಸುವರು ॥ ೬೨ ॥**

ಪರಮಾತ್ಮಗೆ ಕಾಲನಿಯಮವಿಲ್ಲವೆಂತಲೂ, ಇವನ ಅನುಗ್ರಹ ಸಂಪಾದಿಸಿ ಬ್ರಹ್ಮಾದಿಗಳು ತಮ್ಮ ತಮ್ಮ ಪದ ಐದಿ ಸುಖಿಗಳಾಗಿ ಇದ್ದಾರೆಂತಲೂ ಹೇಳತಾರೆ.

ಆದಿಮಧ್ಯಾಂತಗಳು ಇಲ್ಲದ–ಕಾಲಾದಿ ಸರ್ವವಿಷಯದಲ್ಲೂ ಆದಿ ಮಧ್ಯ ಅಂತಗಳು ಇಲ್ಲದೇ ಶಶ್ವದೇಕಪ್ರಕಾರನಾಗಿ ಅಪರಿಚ್ಛಿನ್ನನಾಗಿ ಅಸದೃಶನಾಗಿ ಇರುವ ಸರ್ವೋತ್ತಮನಾದ ಲಕ್ಷ್ಮೀಪತಿಯಾದ, ಮಾಧವಗಿದು–ಪರಮಾತ್ಮಗೆ ಪೂರ್ವೋಕ್ತ ನಿಮಿಷಕಾಲ ಎಂತ ಹೇಳಿದ್ದು ಇದು, ಉಪಚಾರವೆಂದು–ಬರೀ ಔಪಚಾರಿಕವೆಂದು, ಅನಂತಾನಂತ ಬ್ರಹ್ಮಾಂಡಗಳ ಇಚ್ಛಾಮಾತ್ರದಿಂದ ನಾಶವೂ, ರಾವಣ ಕಂಸಾದಿ ದೈತ್ಯರನ್ನ ಸಂಹಾರ ಮಾಡಿದ್ದು ಮಹಾಮಹಿಮಾ ಎಂತಲೂ ಉಚ್ಚರಿಸೋಣ, ಹ್ಯಾಂಗೆ ಔಪಚಾರಿಕವೋ ಹಾಗೆ, ಬ್ರಹ್ಮನ ನೂರುವರುಷ ಆಯುಸ್ಸು, ದೇವರಿಗೆ ಒಂದು ನಿಮಿಷಕಾಲ ಎಂತ ಹೇಳೋದು ಕೇವಲ ಔಪಚಾರಿಕವೇ ಹೊರ್ತು, ಸತ್ಯವಲ್ಲ. ಪರಮಾತ್ಮಗೆ ಕಾಲ ನಿಯಮವಿಲ್ಲವೆಂತ, ಋಗಾದಿ – ಚತುರ್ವೇದ, ಪುರಾಣಗಳು – ಶ್ರೀ ವೇದವ್ಯಾಸರಿಂದ ವಿರಚಿತ ಸಮಗ್ರ ಪುರಾಣಗಳು, ನಿತ್ಯದಲಿ ಪೇಳುವುವು–ಪ್ರತಿದಿನದಲ್ಲೂ ಹೇಳೋವಾಗಿ ಅವೆ. ಮೋದಮಯನ–ಆನಂದಸ್ವರೂಪಿಯಾದ ಪರಮಾತ್ಮನ, ಇನ್ನು, ರಮಾ–ಲಕ್ಷ್ಮೀ ದೇವೇರು, ಈ ಉಭಯರ, ಅನುಗ್ರಹವ ಸಂಪಾದಿಸಿ–ಸರ್ವಪ್ರಕಾರದಿಂದಲೂ ಈ ಉಭಯರ ದಯವನ್ನ ಹೊಂದಿ ಸದ್ಗತಿ ಐದೋವರಾಗಿ ಇದ್ದಾರೆ. ದಾರೆಂದರೆ, ಬ್ರಹ್ಮ ರುದ್ರೇಂದ್ರಾದಿಗಳು–ಬ್ರಹ್ಮ, ರುದ್ರ, ಇಂದ್ರ, ಇನ್ನೂ ಸಮಸ್ತ ಮುಕ್ತಿಯೋಗ್ಯರು, ತಮ್ಮ ತಮ್ಮ ಪದವಿಯನೈದಿ–ಸ್ವಸ್ವಯೋಗ್ಯವಾದ ಸ್ಥಾನಗಳನ್ನು ಪಡದು, ಸುಖಿಸುವರು–ಸುಖ ಪಡೋವರಾಗಿದ್ದಾರೆ. ಆದ್ದರಿಂದ ಬ್ರಹ್ಮಾದಿ ಕ್ಷರಜೀವರಿಗೆ ಕಾಲ ನಿಯಮವೇ ಹೊರ್ತು ಅಕ್ಷರರಾದ ರಮಾದೇವೇರಿಗೂ, ಶ್ರೀಹರಿಗೂ ಕಾಲನೇಮವಿಲ್ಲ. ರಮಾದೇವೇರು ಪರಿಚ್ಛಿನ್ನರು, ದೇವರು ಅಪರಿಚ್ಛಿನ್ನನು, ಎಂತ ತಿಳಿದುಕೊಳ್ಳಬೇಕು ಎಂತ ತಾತ್ಪರ್ಯ.

**ಈ ಕಥಾಮೃತಪಾನಸುಖ ಸುವಿ ।**
**ವೇಕಿಗಳಿಗಲ್ಲದಲೆ ವೈಷಿಕ ।**
**ವ್ಯಾಕುಲ ಕುಚಿತ್ತರಿಗೆ ದೊರೆವುದೆ ಆವಕಾಲದಲಿ ॥**

**ಲೋಕವಾರ್ತೆಯ ಬಿಟ್ಟು ಇದನವ ।**
**ಲೋಕಿಸುತ ಮೋದಿಪರಿಗೊಲಿದು ಕೃ ।**
**ಪಾಕರ ಜಗನ್ನಾಥವಿಠ್ಠಲ ಕಾಯ್ವ ಕರುಣದಲಿ ॥ ೬೩ ॥**

ಅಯೋಗ್ಯರು ಇದರ ರಸಪಾನ ಮಾಡಲಾರರೆಂತಲೂ, ಈ ಕಾವ್ಯಾವಲೋಕನ ದಿಂದ ಪರಮಾತ್ಮ ರಕ್ಷಕನಾಗತಾನೆಂತಲೂ ಹೇಳತಾರೆ.

ಈ ಕಥಾಮೃತಪಾನ – ಈ ಕಾವ್ಯ ಹರಿಕಥಾಮೃತಸಾರ ಗ್ರಂಥಗತ ಶ್ರೀಹರಿ ಮಾಹಾತ್ಮ್ಯವೆಂಬೋ ಕಥಾಸಾಂಕೇತವಾದ ಅಮೃತಪಾನಮಾಡಿ, ಸುಖ–ಸುಖಪಡ ತಕ್ಕವರು, ಸುವಿವೇಕಿಗಳಿಗೆ–ಸಮಿಚೀನವಾದ ಜ್ಞಾನವಂತರಿಗೆ, ಅಲ್ಲದಲೆ–ಇವರಿಗಲ್ಲದಲೆ, ಇವರಲ್ಲದ, ಅನ್ಯ ಶಾಸ್ತ್ರಗಳು ಓದಿ, ವೈಷಿಕ–ವೈಷಮ್ಯಯುಕ್ತರಾಗಿ, ವಿಷಯಾಸಕ್ತರಾಗಿ ಪರಮಾತ್ಮನ್ನ ಮರೆತವರಾಗಿ, ವ್ಯಾಕುಲ–ಸರ್ವದಾ ಐಹಿಕ ಸುಖಾಪೇಕ್ಷೆಯಿಂದ ವ್ಯಸನ ಯುಕ್ತರಾದವರಿಗೆ, ಕುಚಿತ್ತರಿಗೆ–ಸರ್ವದಾ ಪಾಪಮಾರ್ಗದಲ್ಲಿ ಮನಸ್ಸುಳ್ಳವರಿಗೆ, ಆವ ಕಾಲದಲಿ–ದಾವ ಕಾಲದಲ್ಲಾದರೂ, ದೊರೆವುದೆ–ಈ ಅಮೃತಪಾನಸುಖ ದೊರಕಲಾರದು. ಲೋಕವಾರ್ತೆಯ ಬಿಟ್ಟು–ಲೋಕಸಂಬಂಧವಾದ ಮಾತಿನಲ್ಲಿ ಮನಸ್ಸು ಇಡದೆ ಬಿಟ್ಟು ಲೋಕವಾರ್ತಾಂತರ್ಗತ ಪರಮಾತ್ಮನಲ್ಲಿ, ಅನುಸಂಧಾನಪೂರ್ವಕ ಮನವಿಟ್ಟು, ಇದನ ವಲೋಕಿಸುತ – ಈ ಗ್ರಂಥವನ್ನ ಅವಲೋಕನಮಾಡತಾ, ಮೋದಿಪರಿಗೊಲಿದು – ಸಂತೋಷಪಡತಕ್ಕವರಿಗೆ ಪ್ರತ್ಯಕ್ಷನಾಗಿ, ಕೃಪಾಕರ–ಕೃಪಾಸಾಂಕೇತವಾದ ಕರದಿಂದ ಹಿಡಕೊಂಡು, ಜಗನ್ನಾಥವಿಠ್ಠಲ–ಜಗನ್ನಾಥ ಅಂದರೆ, ಜಗತ್ತಿಗೇ ಸ್ವಾಮಿಯಾದ ವಿಠಲ ಸಾಂಕೇತನಾದ ಪರಮಾತ್ಮ, ಕರುಣದಲಿ – ಅಂತಃಕರಣದಿಂದ ಸಂಸಾರ ಸಮುದ್ರ ದಾಟಿಸಿ, ಕಾಯ್ವ – ಸಂರಕ್ಷಣಮಾಡತಾನೆ. ತೃಣಜೀವರ ಆರಂಭಮಾಡಿ ಆಜಾನಜ ದೇವತೆಗಳ ಪರಿಯಂತ ಪ್ರತೀಕಾಲಂಬನರು, ತದನ್ಯರು ಅಪ್ರತೀಕಾಲಂಬನರು. ಪ್ರತೀಕಾ ಲಂಬನರು ಎಂದರೆ, ದೇಹಾಖ್ಯ ಪ್ರತೀಕದಲ್ಲಿ ಮಾತ್ರ ಭಗವದ್ದರ್ಶನವೂ, ತದನ್ಯರಿಗೆ ಸರ್ವತ್ರ ಭಗವದ್ದರ್ಶನವು; ಸ್ವರೂಪಾಪರೋಕ್ಷ, ಸ್ಥೂಲಾಪರೋಕ್ಷ ಎರಡಕ್ಕೂ ಒಂದೇ ನೇಮ.

**ಶ್ರೀಮತ್ಸತ್ಯಪರಾಯಣತೀರ್ಥಕರಕಮಲಸಂಜಾತಶ್ರೀಮತ್ಸಂಕರ್ಷಣ- ತೀರ್ಥವಿರಚಿತಾಯಾಂ ಶ್ರೀಮದ್ಧರಿಕಥಾಮೃತಸಾರಕನ್ನಡಭಾಷಾ- ಟೀಕಾಯಾಂ ಅಪರೋಕ್ಷತಾರತಮ್ಯಸಂಧಿವ್ಯಾಖ್ಯಾನಂ ಸಂಪೂರ್ಣಂ**

॥ ಶ್ರೀ ಕೃಷ್ಣಾರ್ಪಣಮಸ್ತು ॥

**ಕೆಲವು ಆಕ್ಷೇಪಗಳಿಗೆ ಸಮಾಧಾನ :–**

ಮೂರನೇ ಶ್ಲೋಕದಲ್ಲಿ ಏಳುವಿಧ ನಿರಂಶರ ಹೇಳೋದರಲ್ಲಿ – ೧. ನರೋತ್ತಮ ೨. ಜನಪ ಎಂತ ಪ್ರಯೋಗ ಮಾಡಿರೋಣದರಿಂದ ೧. ನರೋತ್ತಮ ಎಂದರೆ, ಮನುಷ್ಯೋತ್ತಮ. ೨. ಜನಪ, ಅರಸರು ಎಂತಲೇ ಅರ್ಥವಾಗುತ್ತದೆ. ಈ ಮೂರನೇ ಶ್ಲೋಕಗತ ನರೋತ್ತಮ, ಜನಪರ ಸಹಿತ ಏಳುವಿಧ ನಿರಂಶರಿಗೆ ಎಷ್ಟು ಬ್ರಹ್ಮಕಲ್ಪ ಸಾಧನವೆಂದರೆ, ನಲವತ್ತೇಳನೇ ಶ್ಲೋಕದಲ್ಲಿ ಹೇಳಿದ್ದಾರೆ. ಆ ಹೇಳೋದರಲ್ಲಿ :

೧. ಮಾನುಷ ಗಾಯಕರು, ೨. ನರಾಧಿಪರು ಎಂತ ಪ್ರಯೋಗ ಮಾಡಿರೋಣದ ರಿಂದ, ೧. ಮಾನುಷ ಗಾಯಕರು ಎಂದರೆ, ಮಾನುಷ ಗಂಧರ್ವರು ; ೨. ನರಾಧಿಪರು ಎಂದರೆ, ಮಾನುಷೋತ್ತಮರು. ನರಾಧಿಪರು ಎಂದರೂ, ನರೋತ್ತಮರು ಎಂದರೂ ಎರಡೂ ಏಕಾರ್ಥವಾಗಿ ಮಾನುಷೋತ್ತಮರೆಂದು ಕರಿಸುತ್ತಾರೆ.

ಮಾನುಷ ಗಾಯಕರು, ನರಾಧಿಪರ ಹೇಳೋಣದರಿಂದ ಮಧ್ಯಗತ ಜನಪರು ಅರ್ಥಾತ್ ಬಂದಂತಾಯಿತು. ಮಾನುಷ ಗಾಯಕರು, ನರಾಧಿಪರು ಎಂಬ ದಿಕ್ಪ್ರದರ್ಶನ ದಿಂದ ಪೂರ್ವೋಕ್ತ ಏಳುವಿಧ ಜೀವರೂ ಗ್ರಾಹ್ಯ. ಏಳುವಿಧ ಜೀವರಿಗೆ ಒಂದು ಬ್ರಹ್ಮಕಲ್ಪ ಸಾಧನ ಎಂತ ತಾತ್ಪರ್ಯ. ನರಾಧಿಪರೆಂದರೆ ಅರಸರಲ್ಲ, ಮೂರನೇ ಶ್ಲೋಕದಲ್ಲಿ ಏಳುವಿಧ ಜೀವರ ಹೇಳಿರೋಣದರಿಂದ ೪೭ನೇ ಶ್ಲೋಕದಲ್ಲಿ ದಿಕ್ಪ್ರದರ್ಶನಮಾಡೋವರಾಗಿದ್ದಾರೆ. ಮಾನುಷೋತ್ತಮರಿಗೆ ನೀಚರಾದ ಮಾನುಷರೆಂಬುವರು, ಕ್ಷತ್ರಿಯ, ವೈಶ್ಯ, ಶೂದ್ರ, ಕುಂಬಾರಾದಿ ನಾಲ್ಕುಲಕ್ಷ ಜಾತಿ ಅವರರು ಎಂತ ತಿಳಿಯಬೇಕು. ಏಳುವಿಧ ನಿರಂಶರಿಗೆ ಒಂದು ಕಲ್ಪಸಾಧನವಾದ್ದರಿಂದಲೇ ವಿಭಾಗಿಸಿ ಪ್ರತ್ಯೇಕ ಹೇಳಲಿಲ್ಲ. ಈ ಏಳುವಿಧರಿಗೆ ಒಂದುಸಾವಿರದ ಹದಿಮೂರು (೧೦೧೩) ಜನ್ಮ ಎಂಬುದು ಎಲ್ಲರಿಗೂ ಸಮ, ತದ್ವತ್, ಒಂದು ಬ್ರಹ್ಮಕಲ್ಪವೇ ಸಾಧನಾ ಎಂತ ತಾತ್ಪರ್ಯ.

---

# ತೃಣಾದಿ ಋಜುಜೀವರ ಪರಿಯಂತ ಭಗವದಪರೋಕ್ಷತಾರತಮ್ಯ ವಿವರ.

| ಸಂಖ್ಯೆ ೧ | ಜೀವರು ೨ | ಅಪರೋಕ್ಷ ಕಾಲ ಪರಿಮಿತಿ ೩ | ಭಗವದ್ದರ್ಶನಪ್ರಕಾಶದ ಪ್ರಮಾಣ ೪ | ಭಗವದ್ದರ್ಶನ ಪರಿಮಿತಿ ೫ | ದೇಹಕಾಂತಿ ವ್ಯಾಪ್ತಿ ಆಗುವ ದೂರ ೬ | ಉಪಾಸನಾ ಗುಣಗಳ ಸಂಖ್ಯಾ ೭ | ಬಿಂಬದರ್ಶನವಾಗುವ ಪರಿ (ರೀತಿ) ೮ |
|---|---|---|---|---|---|---|---|
| ೧ | ತೃಣಜೀವರು | ೧/೨ ಘಳಿಗಿ | ಸಣ್ಣ ಬತ್ತಿ ದೀಪದ ಕಾಂತಿ | ಒಂದು ನೆಲ್ಲು | ಹತ್ತು ಯೋಜನ | ಒಂದು | ಒಬ್ಬ ಬಿಂಬನ ಮಾತ್ರ ಕಾಣುತ್ತಾರೆ. ನ ದೇವಾಮಂಟಪ. |
| ೨ | ಕೀಟಾದಿ ಕ್ರಿಮಿಜೀವರು | ೩/೪ ಘಳಿಗಿ | ಧಮ್ಮ್ರಬತ್ತಿ ದೀಪದ ಕಾಂತಿ | ಒಂದು ಬೋರೆಹಣ್ಣು | ,, ,, | ಒಂದು | ,, ,, |
| ೩ | ವೃಕ್ಷ, ಮೃಗ ಜೀವರು | ೧ ಘಳಿಗಿ | ಹತ್ತು ಧಮ್ಮ್ರಬತ್ತಿ ದೀಪದ ಕಾಂತಿ | ಒಂದು ಅಂಗುಷ್ಠಾಗ್ರ | ಇಪ್ಪತ್ತು ,, | ಎರಡು | ,, ,, |
| ೪ | ಖಗ, ಪಶುಗಳು | ೧ ೩/೪ ಘಳಿಗಿ | ನೂರು ಬತ್ತಿ ದೀಪದ ಕಾಂತಿ | ,, | ನಲವತ್ತು ,, | ಮೂರು | ,, ,, |
| ೫ | ಶೂದ್ರಜೀವರು | ೧ ೧೩/೧೬ ಘಳಿಗಿ | ೧೩/೧೬ ಮಿಂಚಿನ ಕಾಂತಿ | ,, | ಎಂಭತ್ತು ,, | ಮೂರೂ ಕಾಲು | ಮಂಟಪದಿಂದ ಸಹಿತನಾದ ಬಿಂಬ |
| ೬ | ವೈಶ್ಯಜೀವರು | ೧ ೧೩/೧೬ ಘಳಿಗಿ | ೧೪/೧೬ ಮಿಂಚಿನ ಕಾಂತಿ | ,, | ನೂರಾಅರವತ್ತು ಯೋಜನ | ಮೂರೂವರೆ | ೧. ದೇವರು, ೨. ಮಂಟಪ, ೩. ಪೀಠದೇವತೆಗಳು, ೪. ಆವರಣದೇವತೆಗಳು, ೫. ಪದಸ್ಥ ದೇವತೆಗಳು, ೬. ಪದಸ್ಥರಲ್ಲದ ದೇವತೆಗಳು. |

| ೧ | ೨ | ೩ | ೪ | ೫ | ೬ | ೭ | ೮ |
|---|---|---|---|---|---|---|---|
| ೭ | ಕ್ಷತ್ರಿಯ ಜೀವರು | ೧ ೧೫/೧೬ ಘಳಿಗಿ | ೧೫/೧೬ ಮಿಂಚಿನ ಕಾಂತಿ | ಒಂದು ಅಂಗುಷ್ಠಾಗ್ರ | ಇನ್ನೂರಾನಲವತ್ತು ಯೋಜನ | ಮೂರೂ ಮುಕ್ಕಾಲು | ೧. ದೇವರು, ೨. ಮಂಟಪ, ೩. ಪೀಠದೇವತೆಗಳು, ೪. ಆವರಣದೇವತೆಗಳು, ೫. ಪದಸ್ಥ ದೇವತೆಗಳು, ೬. ಪದಸ್ಥರಲ್ಲದ ದೇವತೆಗಳು. |
| ೮ | ಮಾನುಷೋತ್ತಮ ಬ್ರಾಹ್ಮಣರು | ಎರಡು ಘಳಿಗಿ | ಒಂದು ಮಿಂಚಿನ ಕಾಂತಿ | ,, | ಮುನ್ನೂರಾಇಪ್ಪತ್ತು ಯೋಜನ | ನಾಲ್ಕು | ೧. ದೇವರು, ೨. ಮಂಟಪ, ೩. ಪೀಠದೇವತೆಗಳು, ೪. ಆವರಣದೇವತೆಗಳು, ೫. ಪದಸ್ಥ ದೇವತೆಗಳು, ೬. ಪದಸ್ಥರಲ್ಲದ ದೇವತೆಗಳು, ೭. ಸುಷುಮ್ನಾನಾಡಿ, ೮. ಸಪ್ತಕಮಲ, ೯. ಕಮಲಗತ ದೇವತೆಗಳು, ೧೦. ಕಮಲಗತ ದೇವತಾಂತರ್ಗತ ಭಗವದ್ರೂಪಗಳು. |
| ೯ | ಮಾನುಷ ಚಕ್ರವರ್ತಿಗಳು | ಮೂರು ಘಳಿಗಿ | ಹತ್ತು ಮಿಂಚಿನ ಕಾಂತಿ | ಒಂದು ಅಂಗುಷ್ಠ | ಆರುನೂರಾ ನಲವತ್ತು ಯೋಜನ | ಆರು | ಮಾನುಷೋತ್ತಮಬ್ರಾಹ್ಮಣರು ಕಾಣುವಂತೆ ಹತ್ತು ವಿಧ ಭಗವದ್ರೂಪಗಳನ್ನೂ, ೧೧. ಪ್ರಾದೇಶ, ೧೨. ಮೂಲೇಶ ಭಗವದ್ರೂಪಗಳನ್ನೂ, ಅಂತು ಹನ್ನೆರಡು ವಿಧ ಕಾಣುತ್ತಾರೆ. |
| ೧೦ | ಮಾನುಷ ಗಂಧರ್ವರು | ನಾಲ್ಕು ಘಳಿಗಿ | ಇಪ್ಪತ್ತು ಮಿಂಚಿನ ಕಾಂತಿ | ,, | ಒಂಭೈನೂರಅರವತ್ತು ಯೋಜನ | ಹತ್ತು | ಮಾನುಷಚಕ್ರವರ್ತಿಗಳೋಪಾದಿಯಲ್ಲೇ ಕಾಣುತ್ತಾರೆ. |

| ೧ | ೨ | ೩ | ೪ | ೫ | ೬ | ೭ | ೮ |
|---|---|---|---|---|---|---|---|
| ೧೧ | ದೇವ ಗಂಧರ್ವರು | ಆರುಘಳಿಗಿ | ಒಂದು ಸೂರ್ಯನ ಕಾಂತಿ | ಒಂದು ಅಂಗುಷ್ಠ | ಎಂಭತ್ನಾಲ್ಕುಸಾವಿರ ಯೋಜನ | ನೂರು | ಮಾನುಷಗಂಧರ್ವರಿಗಿಂತಲೂ ಅಧಿಕ ವಿಶೇಷ ಗುಣಗಳ ಕಾಣುತ್ತಾರೆ. |
| ೧೨ | ಚಿರಪಿತೃಗಳು | ಆರುಘಳಿಗಿ | ನೂರು ಸೂರ್ಯರ ಕಾಂತಿ | ,, | ಭುವರ್ಲೋಕ ಪರಿಯಂತ | ಹತ್ತು ಸಾವಿರ | ದೇವಗಂಧರ್ವರಿಗಿಂತಲೂ ಅಧಿಕ ವಿಶೇಷಗುಣಗಳ ಕಾಣುತ್ತಾರೆ. |
| ೧೩ | ಕೃಷ್ಣನ ಅಂಗ ಸಂಗಿಗಳಾದ ಗೋಪಿಕಾ ಸ್ತ್ರೀಯರು | ಏಳೂವರಿ ಘಳಿಗಿ | ಐದು ಸಾವಿರ ಸೂರ್ಯರ ಕಾಂತಿ | ,, | ಐವತ್ತು ಲಕ್ಷಯೋಜನ ಪರಿಯಂತ | ಒಂದು ಲಕ್ಷ | ಚಿರಪಿತೃಗಳಿಗಿಂತಲೂ ಅಧಿಕ ವಿಶೇಷಗುಣಗಳ ಕಾಣುತ್ತಾರೆ. |
| ೧೪ | ಅವಶಿಷ್ಟ ಆಜಾನಜರು, ಅಗ್ನಿಪುತ್ರರು | ಹತ್ತು ಘಳಿಗಿ | ಹತ್ತು ಸಾವಿರ ಸೂರ್ಯರ ಕಾಂತಿ | ,, | ಒಂದು ಕೋಟಿ ಯೋಜನ ಪರಿಯಂತ | ಒಂದು ಕೋಟಿ | ಕೃಷ್ಣನ ಅಂಗಸಂಗಿಗಳಾದ ಗೋಪಿಕಾಸ್ತ್ರೀಯರುಗಳಿಗಿಂತಲೂ ಅಧಿಕವಿಶೇಷ. ಆ ವಿಶೇಷಗಳ ವಿವರ :— ಇಡಾ, ಪಿಂಗಳಾ ನಾಡ್ಯಂತರ್ಗತ ಭಗವದ್ರೂಪಗಳನ್ನೂ, ಚತುರ್ವಿಂಶತಿ ತತ್ತ್ವದೇವತೆಗಳನ್ನೂ, ತದಂತರ್ಗತ ಭಗವದ್ರೂಪಗಳನ್ನೂ, ದೇಹಗತ ಸರ್ವನಾಡೀಗತ ಭಗವದ್ರೂಪಗಳನ್ನೂ ಕಾಣುತ್ತಾರೆ. |

| ೧ | ೨ | ೩ | ೪ | ೫ | ೬ | ೭ | ೮ |
|---|---|---|---|---|---|---|---|
| ೧೫ | ಪುಷ್ಕರಾರಭ್ಯ ಶತಸ್ಥ ದೇವಾಂತರ್ಗತ ಕರ್ಮಜರು | ಹದಿನೈದು ಘಳಿಗಿ | ಒಂದು ಕೋಟಿ ಸೂರ್ಯರ ಕಾಂತಿ | ಒಂದು ಅಂಗುಷ್ಠ | ಚತುರ್ದಶಲೋಕ ಪರಿಯಂತ | ಒಂದು ಅರ್ಬುದ | ವ್ಯಾಪ್ತಿದರ್ಶಕರು, ಅಂತರ್ಬಹಿಃ ಭಗವದಪರೋಕ್ಷಿಗಳು, ಸ್ವದೇಹದಲ್ಲೂ ಪರದೇಹದಲ್ಲೂ ಮಹಾವಿಶೇಷಗಳ ಕಾಣತಾರೆ. |
| ೧೬ | ಶತಸ್ಥರಾರಭ್ಯ ರುದ್ರದೇವರ ವರೆಗೆ (ಗರುಡ ಶೇಷರೂ ಗ್ರಾಹ್ಯ) | ಮೂವತ್ತು ಘಳಿಗಿ | ಒಂದು ಕೋಟಿ ಅರ್ಬುದ ಸೂರ್ಯರ ಕಾಂತಿ | ,, | ಶತಸ್ಥರಾರಭ್ಯ ಇಂದ್ರನ ವರೆಗಿನ ಜೀವರ ದೇಹ ಕಾಂತಿ ಇಪ್ಪತ್ತೈದು ಕೋಟಿ ಯೋಜನಪರಿಯಂತ ರುದ್ರಾದಿಜೀವರ (ಇಂದ್ರನವರೆಗೆ) ದೇಹಕಾಂತಿ ವ್ಯಾಪ್ತಿ ಅಂಡಖರ್ಪರದ ಪರಿಯಂತ | ಒಂದು ಖರ್ವಸಂಖ್ಯಾ | ಅಂತರ್ಬಹಿಃ ಮಹಾವಿಶೇಷಗಳ ಕಾಣುತ್ತಾರೆ. |
| ೧೭ | ಬ್ರಹ್ಮಾದಿ ಋಜುಗಳು | ಅರುವತ್ತು ಘಳಿಗಿ | ಒಂದು ಅನಂತ ಸೂರ್ಯರ ಕಾಂತಿ | ,, | ಅಂಡದ ಒಳಗೂ ಹೊರಗೂ (ತಮ್ಮ ದೇಹದಲ್ಲೂ) | ಅನಂತ ವೇದೋಕ್ತ ಅನಂತ | ಅಂಡದ ಒಳಗೂ ಹೊರಗೂ ಸರ್ವತ್ರ ಭಗವದ್ರೂಪಗಳ ಕಾಣುತ್ತಾರೆ. |

|| ಓಂ ಶ್ರೀ ಗುರುಭ್ಯೋ ನಮಃ ಹರಿಃ ಓಂ ||

# ಇಪ್ಪತ್ತನಾಲ್ಕನೇ ಸಂಧಿ

## ಬಿಂಬಪ್ರತಿಬಿಂಬ ಸಂಧಿ

**ಹರಿಕಥಾಮೃತಸಾರ ಗುರುಗಳ |**
**ಕರುಣದಿಂದಾಪನಿತು ಪೇಳುವೆ |**
**ಪರಮ ಭಗವದ್ಭಕ್ತರಿದನಾದರದಿ ಕೇಳುವುದು || ಪ ||**

**ಮೂಲ :**

**ಮುಕ್ತಬಿಂಬನು ತುರಿಯ ಜೀವ |**
**ನ್ಮುಕ್ತಬಿಂಬನು ವಿಶ್ವ ಭವ ಸಂ |**
**ಸಕ್ತಬಿಂಬನು ತೈಜಸನು ಅಸೃಜ್ಯರಿಗೆ ಪ್ರಾಜ್ಞ ||**
**ಶಕ್ತನಾದರು ಸರಿಯೆ ಸರ್ವೋ |**
**ದ್ರಿಕ್ತಮಹಿಮನು ದುಃಖಸುಖಗಳ |**
**ವ್ಯಕ್ತ ಮಾಡುತಲಿಪ್ಪ ಕಲ್ಪಾಂತದಲಿ ಬಪ್ಪರಿಗೆ || ೧ ||**

ಜೀವರ ಸ್ವರೂಪ ಅನುಸರಿಸಿದ ಅವಸ್ಥಾಚತುಷ್ಟಯಗಳಿಗೆ ಬಿಂಬ ದಾರೆಂದರೆ, ಅದರನ್ನ ಹೇಳತಾರೆ.

**ಟೀಕ :**

ಅಸೃಜ್ಯರಿಗೆ ಪ್ರಾಜ್ಞ–ಅಸೃಜ್ಯಜೀವರಾಶಿಗೆ ಪ್ರಾಜ್ಞ ; ಅಸೃಜ್ಯದಶಾ ಎಂಬುದು ಸರ್ವಪ್ರಾಣಿಗಳಿಗೆ ನಿದ್ರಾವಸ್ಥಾ ಎಂದರೆ, ಜೀವರ ಸ್ವರೂಪಕ್ಕೆ ನಿದ್ರಾವಸ್ಥಾ. ಅತ ಏವ ಈ ಸುಷುಪ್ತಾವಸ್ಥೆಗೆ ಪ್ರಾಜ್ಞನಾಮಕ ಪರಮಾತ್ಮ ಬಿಂಬ, ಭವಸಂಸಕ್ತಬಿಂಬನು ತೈಜಸನು– ಸುಷುಪ್ತರಾದ ಅಸೃಜ್ಯಜೀವರಾಶಿಯೊಳಗಿಂದ ಸೃಷ್ಟಿಗೆ ತೆಗೆದ ಜೀವರಿಗೆ ವೈಷಮ್ಯ ಐದಿ ಸೋಣೇ ತದಾರಭ್ಯ, ಜೀವನ್ಮುಕ್ತಾವಸ್ಥಾ ಐದೋ ಪರಿಯಂತ ಜೀವರ ಸ್ವರೂಪಕ್ಕೆ ಸ್ವಪ್ನಾವಸ್ಥೆ; ಆ ಪರಿಯಂತ ಭವಸಂಸಕ್ತನಾಗಿ ಇರ್ತಾನೆ. ಭವಸಂಸಕ್ತಾವಸ್ಥಾನೇ ಜೀವನ ಸ್ವರೂಪಕ್ಕೆ ಸ್ವಪ್ನಾವಸ್ಥಾ. ಅತಏವ ಈ ಸ್ವಪ್ನಾವಸ್ಥೆಗೆ ತೈಜಸನು ಬಿಂಬ. ತೈಜಸನ ಕಾರ್ಯವೆಂಬುದು ಸ್ವಪ್ನ. 'ಇದೂ' ಎಂಬುದೇ ವರ್ತಮಾನಸ್ಥಿತಿಕಾಲವು, ಜೀವನ್ಮುಕ್ತ ಬಿಂಬನು ವಿಶ್ವ–ಜೀವನ್ಮುಕ್ತರಿಗೆ ಬಿಂಬ, ವಿಶ್ವನು. ವಿಶ್ವನು ಜಾಗ್ರದವಸ್ಥಾ ಪ್ರೇರಕನು.

ಆದ್ದರಿಂದ ಜೀವನ್ಮುಕ್ತಾವಸ್ಥಾ ಜೀವರಿಗೆ ಜಾಗ್ರದವಸ್ಥಾ. ಈ ಅವಸ್ಥಾಭೋಗ, ಮಹ ರಾದ ಲೋಕಗಳಲ್ಲಿ ಮಾಡತಾನೆ. ಈ ಅವಸ್ಥಾಭೋಗ ಎಂಥಾದ್ದೆಂದರೆ ಲಿಂಗಭಂಗ ಇಲ್ಲ; ಭೂಮಿಯಲ್ಲಿ ಜನನವೂ ಇಲ್ಲ; ಮುಕ್ತಿಗೆ ಸದೃಶವಾದದ್ದು. ಅತಏವ, ಇಂಥಾ ಜಾಗ್ರ ದವಸ್ಥಾಕ್ಕೆ ವಿಶ್ವ, ಬಿಂಬನು. ಮುಕ್ತಬಿಂಬನು ತುರಿಯ–ಅನಂತರ ಲಿಂಗದೇಹದಿಂದ ಮುಕ್ತನಾಗಿ, ಸ್ವರೂಪಾನಂದವನ್ನ ಭೋಗ ಮಾಡತಕ್ಕ ಅವಸ್ಥಾಕ್ಕೆ ತುರಿಯನಾಮಕ ವಾಸುದೇವ, ಬಿಂಬ. ಲಿಂಗ, ದೇಹತ್ಯಾಗಸಾಂಕೇತದಿಂದ ಮರಣಾವಸ್ಥಾ ಎಂತ ಕರಿಸೋ ದಾಗತದೆ. ಈ ಅವಸ್ಥಾಕ್ಕೆ ವಾಸುದೇವ ಬಿಂಬನಾಗಿದ್ದಾನೆ. ಪ್ರಾಜ್ಞಗೆ ಹೃದಯಾಕಾಶ ಗತ ತಮೋಗುಣಸ್ಥಾನ; ತೈಜಸಗೆ, ಕಂಠಗತ ರಜೋಗುಣಸ್ಥಾನ; ವಿಶ್ವಗೆ ನೇತ್ರಗತ ಸತ್ತ್ವಗುಣಸ್ಥಾನ; ತುರ್ಯಗೆ, ಶಿರಗತ ದ್ವಾದಶದಳಕಮಲ ಮಧ್ಯದಲ್ಲಿ ಸ್ಥಾನ; ಈ ನೇಮ, ಸ್ವರೂಪ, ಬಾಹ್ಯ ಎರಡರಲ್ಲಿ ಒಂದೇ ಪ್ರಕಾರ; ಆಯಾ ಅವಸ್ಥಾಗಳು, ಆಯಾ ಭಗವದ್ರೂಪಗಳು, ಆಯಾ ಕಾರ್ಯಗಳ ನಡೆಸೋವಾಗತವೆ; ಮರಣಾವಸ್ಥಾ ಸಹಿತ ಅವಸ್ಥಾಚತುಷ್ಟಯಗಳೆಂದು ತಿಳಿಯಬೇಕು; ರಾಶಿ ಆರಂಭ ಮಾಡಿ, ಮುಕ್ತಿ ಪರಿಯಂತ ಇದೇ ನೇಮ. ಸರ್ವೋದ್ರಿಕ್ತಮಹಿಮನು–ಸರ್ವಶ್ರೇಷ್ಠನಾದ, ಅಸದೃಶ ವಾದ ಮಹಿಮೋಪೇತನಾದ, ಬಿಂಬರೂಪೀ ಪರಮಾತ್ಮನು, ಶಕ್ತನಾದರು ಸರಿಯೆ– ಜೀವರ, ಸೃಷ್ಟಿಗೆ ತಾರದೇನೇ ಮುಕ್ತಿ ಕೊಡೋದಕ್ಕೆ ಶಕ್ತನಾದ ಕಾಲಕ್ಕೂ, ತನ್ನ ಸತ್ಯಸಂಕಲ್ಪಾನುಸಾರ, ಕಲ್ಪಾಂತದಲಿ ಬಪ್ಪರಿಗೆ–ಬ್ರಹ್ಮಪ್ರಳಯಾನಂತರ ರಾಶಿಯಿಂದ ಸೃಷ್ಟಿಗೆ ಬರತಕ್ಕವರಿಗೆ ಗುಣವೈಷಮ್ಯ ಐದಿಸಿ ಸ್ಥೂಲ ದೇಹಗಳ ಕೊಟ್ಟು ಅನಾದಿಕರ್ಮ ವನ್ನನುಸರಿಸಿ, ದುಃಖ ಸುಖಗಳ–ತ್ರಿವಿಧರಾದ ಸರ್ವಪ್ರಾಣಿಗಳಿಗೆ ದುಃಖ, ಸುಖ, ದ್ವಂದ್ವ ಗಳ, ವ್ಯಕ್ತಮಾಡುತಲಿಪ್ಪ–ತಜ್ಜನ್ಯ ಫಲಗಳ ಭೋಗಕ್ಕೆ ವ್ಯಕ್ತಮಾಡಿ ಕೊಡತಾ ಜೀವಾಂತರ್ಗತದಲ್ಲಿ ಬಿಂಬನಾಗಿ ಇದ್ದಾನೆ.

ಪ್ರಮಾಣ:–"ಮುಕ್ತಾನಾಂ ಬಿಂಬರೂಪಸ್ತು ತುರ್ಯೋ ವಿಶ್ವೋऽಪರೋಕ್ಷಿಣಾಂ । ಸಂಸಾರಿಣಾಂ ತೈಜಸಶ್ಚ ಸೃಜ್ಯಾನಾಂ ಪ್ರಾಜ್ಞ ಉಚ್ಯತೇ" ॥ ಇತಿ ಸಾರಸಂಗ್ರಹೇ

**ಅನ್ನನಾಮಕ ಪ್ರಕೃತಿಯೊಳಗ ।**
**ಚ್ಛಿನ್ನನಾಗಿಹ ಪ್ರಾಜ್ಞನಾಮದಿ ।**
**ಸೊನ್ನೊಡಲ ಮೊದಲಾದವರೊಳನ್ನಾದ ತೈಜಸನು ॥**
**ಅನ್ನದಾಂಬುದನಾಮ* ವಿಶ್ವನು ।**
**ಭಿನ್ನನಾಮ ಕ್ರಿಯೆಗಳಿಂದಲಿ ।**
**ತನ್ನೊಳಗೆ ತಾ ರಮಿಪ ಪೂರ್ಣಾನಂದ ಜ್ಞಾನಘನ ॥ ೨ ॥**

ಸೃಷ್ಟಿಮಾಡಿದ ಜೀವರ ಸಂರಕ್ಷಣಾರ್ಥ ಅನ್ನೋದಕಾದಿಗಳಲ್ಲಿ ಬಿಂಬನಾಗಿದ್ದು ತದ್ದ್ವಾರಾ ರಕ್ಷಿಸತಾನೆ ಎಂತ ಹೇಳತಾರೆ.

---

* "ಅನ್ನದಾಂಬುಜನಾಭ" ಎಂತಲೂ ಕೆಲವು ಪಾಠಗಳಿದ್ದು ತದನುಸಾರದ ವ್ಯಾಖ್ಯಾನಗಳಿವೆ.

ಪ್ರಕೃತಿಯೊಳಗೆ – ಜೀವರಿಗೆ ಆಹಾರಭೂತವಾದ ಜಡಪ್ರಕೃತಿ ಸಾಂಕೇತವಾದ, ಅನ್ನೋದಕಾದಿಗಳಲ್ಲಿ ಪ್ರಕೃತಿಸಾಂಕೇತರಾದ ರಮಾದೇವೇರ ಅಂತರ್ಗತನಾಗಿ, ಅನ್ನ ನಾಮಕ–ತತ್ತಚ್ಛಬ್ದವಾಚ್ಯನಾಗಿ, ಅನ್ನೋದಕನಾಮಕನಾಗಿ, ಪ್ರಾಜ್ಞ-ಪ್ರಾಜ್ಞನಾಮಕ ಪರಮಾತ್ಮ, ನಾಮದಿ–ನಾನಾವಿಧ ಜೀವರಿಗೆ ಯೋಗ್ಯವಾದ ನಾನಾವಿಧ ಅನ್ನದೊಳು ನಾನಾವಿಧ ಅನ್ನನಾಮದಿಂದ ಕರಿಸುತ್ತ, ಅಚ್ಛಿನ್ನನಾಗಿಹ–ಭಿನ್ನವಿಲ್ಲದೆ ಅವಿಯೋಗನಾಗಿ ಆಯಾ ಅನ್ನಾದಿಗಳಿಗೆ ಬಿಂಬನಾಗಿದ್ದಾನೆ. ಮತ್ತು ಭಿನ್ನಭಿನ್ನರಾದ ನಾನಾವಿಧ ಜೀವರ ಸ್ಥೂಲದೇಹಗತರಾದ, ಸೊನ್ನೊಡಲ–ಹಿರಣ್ಯಗರ್ಭನಾದ ಬ್ರಹ್ಮದೇವರು, ಮೊದಲಾದವರೊಳು–ಮೊದಲಾದ ತತ್ತ್ವದೇವತೆಗಳೊಳಗೆ, ತೈಜಸನು–ತೈಜಸನಾಮಕ ಪರಮಾತ್ಮ ಇದ್ದವನಾಗಿ, ಆಯಾ ತತ್ತ್ವೇಶರ ದ್ವಾರಾ, ಆಯಾ ದೇಹಾಧಿಷ್ಠಿತರಾದ ಜೀವರ ದ್ವಾರಾ, ಅನ್ನಾದ–ಪರಸ್ಪರ ಅನ್ನೋದಕಾದಿಗಳ ಕೊಡುತ್ತಾ, ಕೊಡಿಸುತ್ತಾ ಇರೋವನಾಗಿದ್ದಾನೆ. ಅನ್ನದ–ಅನ್ನ ಕೊಡತಕ್ಕ ಕ್ರಿಯಾರೂಪವಾದ ಕರ್ಮದಲ್ಲಿ ಅನ್ನದ ಎಂಬ ನಾಮದಿಂದಲೂ, ಅಂಬುದ–ಉದಕ ಕೊಡತಕ್ಕ ಕ್ರಿಯಾರೂಪವಾದ ಕರ್ಮದಲ್ಲಿ ಅಂಬುದ ಎಂಬ ನಾಮದಿಂದಲೂ, ನಾಮ–ಇತ್ಯಾದಿ ಅನೇಕ ನಾಮಗಳಿಂದಲೂ, ವಿಶ್ವನು–ವಿಶ್ವನಾಮಕ ಪರಮಾತ್ಮನು, ಕ್ರಿಯೆಗಳಿಂದಲಿ–ಭಿನ್ನಭಿನ್ನವಾದ ಕ್ರಿಯಾಗಳಿಂದ, ಭಿನ್ನನಾಮ–ಭಿನ್ನ ಭಿನ್ನ ನಾಮದಿಂದ ಕರಿಸುತ್ತ ಕ್ರಿಯಾರೂಪದಿಂದ ಪರಸ್ಪರ ಅನ್ನೋದಕಾದಿಗಳ ಅಧಿಷ್ಠಾನಗಳ ದ್ವಾರಾ, ಕೊಡಿಸುತ್ತ, ಜೀವರಿಗೆ ಭೋಜನಮಾಡಿಸುತ್ತ, ಅವರ ತೃಪ್ತಿ ಪಡಿಸುತ್ತ ಸ್ಥೂಲದೇಹಗಳ ರಕ್ಷಿಸುತ್ತಾನೆ. ದೇಹಾಂತರ್ಗತ ತಾನಾದರೋ, ಘನ–ಗಂಭೀರವಾದ ನಿಬಿಡೀಭೂತವಾದ ವ್ಯಾಪ್ತಿಯುಳ್ಳ ಪರಮಾತ್ಮ, ಜೀವರ ದೇಹದಲ್ಲಿ ಭೋಜನಪದಾರ್ಥಗಳಲ್ಲಿ ತದಾಕಾರದಿಂದ ವ್ಯಾಪ್ತವಾದ ರೂಪಗಳಿಂದ ಇದ್ದು ತನ್ನ, ಪೂರ್ಣ–ಅತ್ಯಂತ ಪೂರ್ಣಗಳಾದ, ಆನಂದ ಜ್ಞಾನ–ಸಂತೋಷವೇನು, ಜ್ಞಾನವೇನು, ಇವುಗಳಿಂದ ತನ್ನ ಸ್ವಾಖ್ಯಗಳ ತಾನು ಭುಂಜಿಸಿ, ತನ್ನೊಳಗೆ ತಾ ರಮಿಪ–ಆಯಾ ಅಧಿಷ್ಠಾನಗಳೊಳಗೆ ಇರತಕ್ಕ ತನ್ನ ರೂಪಗಳ ಕೂಡ ತಾನು ರಮಿಸುತ್ತಾನೆ. ತದನ್ಯ ಜೀವಭುಕ್ತ ಜಡಭೋಜನದ್ರವ್ಯಗಳ ತಾನು ಭೋಜನ ಮಾಡೋದಿಲ್ಲ. ಈ ಪ್ರಕಾರ ಸರ್ವಕ್ಕೂ ಬಿಂಬನಾಗಿದ್ದಾನೆಂತ ತಾತ್ಪರ್ಯ.

**ಬೂದಿಯೊಳಗಡಗಿಪ್ಪನಳನೋ ।**
**ಪಾದಿ ಚೇತನ ಪ್ರಕೃತಿಯೊಳ ।**
**ನ್ನಾದನನ್ನಾಹ್ವಯದಿ ಕರೆಸುವ ಬ್ರಹ್ಮ ಶಿವರೂಪಿ ॥**
**ಓದನಪ್ರದ ವಿಷ್ಣು ಪರಮಾ ।**
**ಹ್ಲಾದವೀವುತ ತೃಪ್ತಿಪಡಿಸುವ ।**
**ಗಾಧಮಹಿಮನ ಚಿತ್ರಕರ್ಮವನಾವ ಬಣ್ಣಿಸುವ ॥ ೩ ॥**

ಶ್ರೀಪರಮಾತ್ಮನ ಚಿತ್ರಕರ್ಮವ ದಾರೂ ವರ್ಣಿಸಲಾರರು ಎಂದು ಹೇಳುತಾರೆ.

ಚೇತನ–ಸರ್ವಪ್ರಾಣಿಗಳು, ಪ್ರಕೃತಿಯೊಳು–ಜೀವರು ಧರಿಸಿದ ಜಡಪ್ರಕೃತ್ಯಾತ್ಮಕ ಸ್ಥೂಲದೇಹಗಳು, ಈ ಎರಡರ ಒಳಗೆ, ಬೂದಿಯೊಳಗೆ–ಬೂದಿಯೊಳಗೆ, ಅಡಗಿಪ್ಪ–ಹೊರಗೆ ಕಾಣದೇ ಅಡಗಿರತಕ್ಕ, ಅನಳನೋಪಾದಿ–ಅಗ್ನಿಯೋಪಾದಿಯಲ್ಲಿ ಅಡಗಿದ್ದಾನೆ. ಓದನ – ಪಚನಾದಿಗಳಿಂದ ಸಿದ್ಧಮಾಡಿದ ಅನ್ನವನ್ನ, ಪ್ರದ – ಪಾತ್ರದಲ್ಲಿ ಬಡಿಸಿ, 'ಕೃಷ್ಣಾರ್ಪಣ' ಎಂತ ಕೊಡಲ್ಪಟ್ಟ ಅನ್ನೋದಕದೊಳಗೆ, ಶಿವರೂಪಿ – ರುದ್ರರೂಪೀ ಪರಮಾತ್ಮ, ಅನ್ನಾಹ್ವಯದಿ–ಅನ್ನ ಶಬ್ದದಿಂದಲೂ, ಅನ್ನ–'ಕೃಷ್ಣಾರ್ಪಣ' ಎಂತ ಕೊಡಲ್ಪಟ್ಟ ಅನ್ನವನ್ನ, ಅದನು–ಭಕ್ಷಣಮಾಡೋಕ್ರಿಯಾರೂಪವಾದ ಕರ್ಮದಲ್ಲಿ ಇದ್ದು, ಬ್ರಹ್ಮ–ಬ್ರಹ್ಮರೂಪೀ ಪರಮಾತ್ಮ, ಅನ್ನಾದ ನಾಮದಿಂದಲೂ, ಕರೆಸುವ–ಕರಿಸುತ್ತಾನೆ. ವಿಷ್ಣು–ವಿಷ್ಣುರೂಪೀ ಪರಮಾತ್ಮ, ಭೋಜನದ್ರವ್ಯ ಭಕ್ಷಣಮಾಡಿದ್ದು ಉದರಪ್ರವೇಶಾನಂತರ ತದ್ದ್ವಾರಾ, ಪರಮಾಹ್ಲಾದವೀವುತ–ಅತ್ಯಂತ ಸಂತೋಷವನ್ನು ಕೊಡುತ್ತಾ, ಕ್ಷುತ್ತು ನಿವಾರಣಮಾಡಿ, ತೃಪ್ತಿಪಡಿಸುವ–ತೃಪ್ತಿಪಡಿಸುವ ವಿಷ್ಣು, ತೃಪ್ತ್ಯಂತರ್ಗತನಾಗಿ ತೃಪ್ತಿಶಬ್ದವಾಚ್ಯನಾಗಿ ಇರೋವನಾಗಿದ್ದಾನೆ. ಅಗಾಧಮಹಿಮನ–ಆದ್ಯಂತರಹಿತವಾದ, ಮಹಿಮೋಪೇತನಾದ ಶ್ರೀ ಪರಮಾತ್ಮನ, ಚಿತ್ರಕರ್ಮವನು–ಅತ್ಯಂತವಾದ ನಾನಾ ವಿಚಿತ್ರವಾದ ಕರ್ಮಗಳ, ಆವ ಬಣ್ಣಿಸುವ–ದಾರು ವರ್ಣಿಸ್ಯಾರು! ಅಂದರೆ, ರಮಾ ಬ್ರಹ್ಮಾದಿಗಳು ಕೂಡಾ ವರ್ಣಿಸಲಾರರು ಎಂತ ತಾತ್ಪರ್ಯ.

**ನಾದ ಭೋಜನ ಶಬ್ದದೊಳು ಬಿಂ ।**
**ದೋದನೋದಕದೊಳಗೆ ಘೋಷನು ।**
**ವಾದದೊಳು ಶಾಂತಾಖ್ಯ ಜಠರಾಗ್ನಿಯೊಳು ಇರುತಿಪ್ಪ ॥**
**ವೈದಿಕಸುಶಬ್ದದೊಳು ಪುತ್ರ ಸ ।**
**ಹೋದರಾನುಗರೊಳತಿಶಾಂತನ ।**
**ಪಾದಕಮಲನವರತ ಚಿಂತಿಸು ಈ ಪರಿಯಲಿಂದ ॥ ೪ ॥**

ಭೋಜನಾರಭ್ಯ ಭೋಜನಾಂತವರಿಗೂ ಅನುಸಂಧಾನ ವಿಚಾರವನ್ನ ಹೇಳತಾರೆ.

ನಾದ – ನಾದನಾಮದಿಂದ ವಾಚ್ಯನಾದ ಪರಮಾತ್ಮ, ಭೋಜನ–ಭೋಜನ ಮಾಡೋಕಾಲದಲ್ಲಿ, ಶಬ್ದದೊಳು–ಬೇಕಾದ ಭೋಜನದ್ರವ್ಯಗಳ ಬೇಡತಕ್ಕ ವರ್ಣಾತ್ಮಕ ಶಬ್ದದಲ್ಲಿ ಇರೋವನಾಗಿದ್ದಾನೆ, ಓದನ–ಭೋಜನಮಾಡತಕ್ಕ ಪ್ರತಿ ಪ್ರತೀ ತುತ್ತುಗಳಲ್ಲಿ, ಉದಕವ–ಕುಡಿಯುವ, ಪ್ರತಿ ಪ್ರತೀ ಗುಟುಕು ಉದಕದಲ್ಲಿ, ಒಳಗೆ–ಈ ಎರಡರ ಒಳಗೆ, ಬಿಂದು–ಬಿಂದುನಾಮದಿಂದ ವಾಚ್ಯನಾದ ಪರಮಾತ್ಮ ಇದ್ದಾನೆ. ಘೋಷ–ಘೋಷನಾಮವಾಚ್ಯನಾದ ಪರಮಾತ್ಮ, ಅನುವಾದದೊಳು – ಭೋಜನಕಾಲದಲ್ಲಿ ಭಗವದ್ಗುಣಗಳ ಅನುವಾದ ಮಾಡತಕ್ಕ ಮಾತುಗಳಲ್ಲಿ ಇದ್ದಾನೆ. ಶಾಂತಾಖ್ಯ–ಶಾಂತ ನಾಮದಿಂದ ಪ್ರಸಿದ್ಧನಾದ ಪರಮಾತ್ಮ, ಜಠರಾಗ್ನಿಯೊಳು ಇರುತಿಪ್ಪ – ದೇಹಗತ ಅನ್ನಾದಿಗಳ ಪಚನಮಾಡತಕ್ಕ ಜಠರಾಗ್ನಿಯೊಳಗೆ ಇದ್ದಾನೆ, ಭೋಜನದ್ರವ್ಯಗಳಿಂದ

ಜಠರಾಗ್ನಿಯನ್ನ ಶಾಂತಮಾಡಿ ಕ್ಷುತ್ತುನಿವಾರಣೆ ಮಾಡತಾನೆ, ವೈದಿಕ ಸುಶಬ್ದದೊಳು– ಲೋಕವಾರ್ತೆ ವ್ಯತಿರಿಕ್ತವಾದ ವೈದಿಕಸಂಬಂಧವಾದ ಭಗವದ್ಭಕ್ತರ ಮಹಿಮಾ, ಹಾಂಗೆ ಹರಿನಾಮೋಚ್ಚಾರಣರೂಪವಾದ ಸಮೀಚೀನವಾದ ಶಬ್ದದೊಳು, ಪುತ್ರ ಸಹೋದರಾ ನುಗರೊಳು–ಭೋಜನಕಾಲದಲ್ಲಿ ಸಹಪಙ್ಕ್ತಿಭೋಕ್ತೃಗಳಾದ ಮಗ, ತಮ್ಮ ಮೊದಲಾದ ಇನ್ನೂ, ಇವರ ಅನುಸರಿಸಿದ ಅನೇಕ ಮಂದಿಯಲ್ಲಿ, ಅತಿಶಾಂತನ–ಅತಿಶಾಂತನಾಮಕ ಪರಮಾತ್ಮನ್ನ ಅನುಸಂಧಾನದಿಂದ ತಿಳಿಯಬೇಕು, ಈ ಪರಿಯಲಿಂದ – ಈ ಕ್ರಮದಿಂದ ಭಗವದ್ರೂಪಗಳ ತಿಳಿದವನಾಗಿ, ಅನವರತ–ನಿರಂತರ ಭೋಜನಕಾಲದಲ್ಲಿ ಭಗವದ್ರೂಪ ಗಳ, ಪಾದಕಮಲ–ಪಾದಕಮಲವನ್ನು, ಚಿಂತಿಸು–ಚಿಂತನಾಮಾಡತಾ ಇರಬೇಕೆಂತ ತಾತ್ಪರ್ಯ.

**ವೇದಮಾನಿ ರಮಾನುಪಾಸ್ಯ ಗು ।**
**ಣೋದಧಿ ಗುಣತ್ರಯ ವಿವರ್ಜಿತ ।**
**ಸ್ವೋದರಸ್ಥಿತ ನಿಖಿಳ ಬ್ರಹ್ಮಾಂಡಾದ್ವಿಲಕ್ಷಣನು ॥**
**ಸಾಧುಸಮ್ಮತವೆನಿಸುತಿಹ ನಿಷು ।**
**ಸೀದಗಣಪತಿಯೆಂಬ ಶ್ರುತಿ ಪ್ರತಿ ।**
**ಪಾದಿಸುವದನವರತವನ ಗುಣ ಪ್ರಾಂತಗಾಣದಲೆ ॥ ೫ ॥**

ಶ್ರೀಪರಮಾತ್ಮನ ಮಹಿಮಾವನ್ನು ಹೇಳತಾರೆ.

ವೇದಮಾನಿ–ವೇದಾಭಿಮಾನಿಯಾದ, ರಮಾ–ಲಕ್ಷ್ಮೀದೇವೇರಿಂದ, ಅನುಪಾಸ್ಯ– ಉಪಾಸನಾಕ್ಕೆ ಮೀರಿದ ಅಂದರೆ, ರಮಾದೇವೇರಿಗೂ ಅಸಾಧ್ಯವಾದ, ಗುಣೋದಧಿ– ತನಗೆ ಅಭಿನ್ನವಾದ ಗುಣಸಮುದ್ರವುಳ್ಳವ, ಗುಣತ್ರಯವಿವರ್ಜಿತ–ಪ್ರಾಕೃತ ಗುಣತ್ರಯ ಗಳಿಂದ ಶೂನ್ಯನಾದವ, ಸ್ವೋದರಸ್ಥಿತ–ತನ್ನ ಉದರಸ್ಥಿತವಾದ, ನಿಖಿಳಬ್ರಹ್ಮಾಂಡಾತ್– ಸಮಸ್ತವಾದ ಅನಂತಾನಂತ ಬ್ರಹ್ಮಾಂಡಗಳಿಗಿಂತ, ವಿಲಕ್ಷಣನು–ಭಿನ್ನನಾಗಿ, ವಿಲಕ್ಷಣ ನಾಗಿ ಇರತಕ್ಕವನು, ಸಾಧುಸಮ್ಮತವು–ಸಜ್ಜನರಾದ ಭಗವದ್ಭಕ್ತರಿಗೆ ಸಮ್ಮತನಾದವನು ಎಂತಲೂ, ನಿಷುಸೀದ ಗಣಪತಿಯು–"ನಿಷುಸೀದ ಗಣಪತೇ", ಎಂಬ ಶ್ರುತಿ–ಎನತಕ್ಕ ವೇದವಾಕ್ಯ, ಅನವರತ–ನಿರಂತರದಲ್ಲೂ, ಅವನ ಗುಣ–ಆ ಪರಮಾತ್ಮನ ಗುಣ, ಪ್ರಾಂತಗಾಣದೆ–ಅಂತ ಕಾಣದೆ, ಪ್ರತಿಪಾದಿಸುವುದು–ಆದ್ಯಂತರಹಿತನೆಂದು, ಪ್ರತಿಪಾದನ ಮಾಡತಾ ಅದೆ, ಎನಿಸುತಿಹ–ಅನಂತವೇದಗಳಿಂದ ಇಂಥಾ ಸರ್ವೋತ್ತಮನೆಂದೆನಿಸುತ್ತಾ ಸರ್ವರಿಗೂ, ಬಿಂಬನಾಗಿ ಸರ್ವತ್ರ ವ್ಯಾಪ್ತನಾಗಿ ಇದ್ದಾನೆಂತ ತಾತ್ಪರ್ಯ.

**ವಿಶೇಷಾರ್ಥ :**–ಬ್ರಹ್ಮಾಂಡ ಎಂದರೆ,

ಅಚೇತನಾದ್ಯತಸ್ತ್ವಂಡಾತ್ ಬ್ರಹ್ಮ ಸಮಜನಿ ಸ್ಫುಟಂ ॥
ಅತೋ ಬ್ರಹ್ಮಾಂಡಮಿತ್ಯಾಹುಃ ವಿರಾಟ್‌ಬ್ರಹ್ಮಪ್ರಕಾಶನಾತ್ ॥

ಇತೀ ಭಾಗವತೇ ತೃತೀಯಸ್ಕಂಧೇ.

"ನಿಷುಸೀದ ಗಣಪತೇ" ಎಂಬ ಶ್ರುತ್ಯರ್ಥವು ಬರೆಯಲ್ಪಡುತ್ತದೆ :

ನಿಷುಸೀದ ಗಣಪತೇ ಗಣೇಷು ತ್ವಾಮಾಹುರ್ವಿಪ್ರತಮಂ ಕವೀನಾಮ್ ।
ನ ಋತೇ ತ್ವತ್ಕ್ರಿಯತೇ ಕಿಂಚನಾರೇ ಮಹಾಮರ್ಕಂ ಮಘವನ್ ಚಿತ್ರಮರ್ಚ ||

ಇದಕ್ಕೆ ಅರ್ಥ :–

ಗಣಪತೇ–ನಮ್ಮ ಇಂದ್ರಿಯಗಳಿಗೆ ಸ್ವಾಮಿಯಾದವನೇ, ಗಣೇಷು–ಇಂದ್ರಿಯ ಸಮೂಹಗಳಲ್ಲಿ, ತ್ವಾಂ–ನಿನ್ನನ್ನೇ (ಜ್ಞಾನಿಗಳಾದವರು), ವಿಪ್ರತಮಂ–ವಿಶೇಷವಾಗಿ, ಛಂದಾಗಿ ಶ್ರೇಷ್ಠನಾದವನು ಎಂತ, ಆಹುಃ–ಹೇಳತಾರೆ. ಕವೀನಾಂ–ಜ್ಞಾನಿಗಳಲ್ಲಿ, ನಿಷುಸೀದ–ವ್ಯಾಪಿಸಿಕೊಂಡಿರುವ ಅಥವಾ ಅಂತರ್ಯಾಮಿಯಾಗಿರುವ, ಮಘವನ್–ಐಶ್ವರ್ಯವಂತನೇ, ನ ಋತೇ ತ್ವತ್ – ನಿನ್ನ ಹೊರತು, ಆರೇ – ದೂರದಲ್ಲಿ ಆದರೂ, ಸಮೀಪದಲ್ಲಿ ಆದರೂ, ಕಿಂಚನ–ಒಂದು ಕಾರ್ಯವಾದರೂ, ನ ಕ್ರಿಯತೇ–ಮಾಡಲ್ಪಡೋದಿಲ್ಲ, ಮಹಾಮರ್ಕಂ–ದೊಡ್ಡವನಾದಂಥಾ ಪ್ರಕಾಶಸ್ವರೂಪನಾದಂಥಾ, ಚಿತ್ರಂ–ಆಶ್ಚರ್ಯನಾದಂಥಾ (ತ್ವಮೇವ ಎಂಬ ಪದ ಅಧ್ಯಾಹಾರಮಾಡಿಕೊಂಡು) ನಿನ್ನನ್ನು, ನಿನಗೆ ನೀನೇವೇ, ಅರ್ಚ–ಪೂಜಾಮಾಡಿಕೋಬೇಕು ಎಂತ ತಾತ್ಪರ್ಯ. ಇದು, ಭಾಗವತ ದಶಮಸ್ಕಂಧ ಉತ್ತರಾರ್ಧ ಶ್ರುತಿಗೀತಾ ಸಪ್ತಮ ಶ್ಲೋಕದ ತಾತ್ಪರ್ಯ.

**ಕರೆಸುವನು ಮಾಯಾರಮಣ ತಾ ।**
**ಪುರುಷರೂಪದಿ ತ್ರಿಸ್ಥಳಗಳೊಳು ।**
**ಪರಮ ಸತ್ಪುರುಷಾರ್ಥದ ಮಹತ್ತತ್ತ್ವದೊಳಗಿದ್ದು ॥**
**ಸರಸಿಜಭವಾಂಡಸ್ಥಿತ ಸ್ತ್ರೀ ।**
**ಪುರುಷ ತನ್ಮಾತ್ರಗಳ ಏಕೋ ।**
**ತ್ತರದಶೇಂದ್ರಿಯಗಳ ಮಹಾಭೂತಗಳ ನಿರ್ಮಿಸಿದ ॥ ೬ ॥**

ಶ್ರೀಪರಮಾತ್ಮ ಅಂಡದ ಹೊರಗೆ ಮಾಡಿದ ಸೃಷ್ಟಿರೂಪವಾದ ಮಹಾತ್ಮೆಗಳ ಹೇಳತಾರೆ.

ಪುರುಷ – ಪುರುಷಶಬ್ದವಾಚ್ಯನಾದ, ಮಾಯಾರಮಣ – ಮಾಯಾನಾಮಕ ಲಕ್ಷ್ಮೀದೇವೇರಿಗೆ ಪತಿಯಾದ ಶ್ರೀ ವಾಸುದೇವರೂಪಿಯಾದ, ತಾ–ತಾನು, ರೂಪದಿ–ಸೃಷ್ಟಿಗೆ ಕಾರಣನಾದ ವಾಸುದೇವರೂಪ ವ್ಯತಿರಿಕ್ತವಾದ ಶ್ವೇತದ್ವೀಪಗತ ವಾಸುದೇವ ರೂಪದಿಂದ, ಕರೆಸುವನು–ಮುಕ್ತಿಯೋಗ್ಯರಾದ, ಲಿಂಗಭಂಗರಾದ ಪ್ರಾಣಿಗಳ ಇಚ್ಛಾವರಣ ಅಪಸರಣಮಾಡಿ ಅವರವರ ಸ್ವರೂಪಾನಂದ ವ್ಯಕ್ತಮಾಡಿ ಭೋಗಕ್ಕೆ ಕೊಡತಕ್ಕವನೆಂದು ಕರಿಸುವನು. ಈ ಪ್ರಕಾರ ಕರಿಸಿ ಇಚ್ಛಾವರಣ ಅಪಸರಣಮಾಡಿ, ಸತ್–ಭಗವದ್ಭಕ್ತರಾದ ಸಜ್ಜನರಿಗೆ, ತ್ರಿಸ್ಥಳಗಳೊಳು–ಶ್ವೇತದ್ವೀಪ, ಅನಂತಾಸನ, ವೈಕುಂಠ, ಈ ಮೂರು ಸ್ಥಾನಗಳೊಳು, ಪರಮ–ಅತ್ಯಂತ ಶ್ರೇಷ್ಠವಾದ, ಅರ್ಥ–ಪ್ರಯೋಜನಗಳಾದ ನಾನಾ ಪ್ರಕಾರ ಮುಕ್ತವಿಹಾರ ಪ್ರಯೋಜನಗಳನ್ನು, ದ–ಕೊಡತಕ್ಕವನು, ಪುರುಷ–

ಎರಡನೇದಾದ ಪುರುಷಸಾಂಕೇತವಾದ, ಸೃಷ್ಟಿಗೆ ಕಾರಣವಾದ, ನಾರಾಯಣರೂಪದಿಂದ ಅಭಿವ್ಯಕ್ತವಾದ ವಾಸುದೇವರೂಪದಿಂದ, ಮಹತ್ತತ್ತ್ವದೊಳಗಿದ್ದು–ಮಹತ್ತತ್ತ್ವದೊಳಗಿದ್ದು, ತದ್ದ್ವಾರಾ ವೈಕಾರಿಕ, ತೈಜಸ, ತಾಮಸಭೇದದಿಂದ ಯುಕ್ತವಾದ ಅಹಂಕಾರ ತತ್ತ್ವವ ಸೃಜಿಸಿ, ಆ ಅಹಂಕಾರತತ್ತ್ವದ್ವಾರಾ, ಏಕೋತ್ತರ ದಶೇಂದ್ರಿಯಗಳ–ಹನ್ನೊಂದು ಇಂದ್ರಿಯಗಳ ಎಂದರೆ ೧. ವೈಕಾರಿಕ ಅಹಂಕಾರದಿಂದ ಮನೋಇಂದ್ರಿಯ, ೨. ತೈಜಸ ಅಹಂಕಾರದಿಂದ ಪಂಚ ಜ್ಞಾನೇಂದ್ರಿಯಗಳು, ಪಂಚ ಕರ್ಮೇಂದ್ರಿಯಗಳು, ಅಂತು ಹನ್ನೊಂದು ಇಂದಿಯಗಳ, ತನ್ಮಾತ್ರ ಮಹಾಭೂತಗಳ–ತಾಮಸ ಅಹಂಕಾರದಿಂದ ಶಬ್ದ, ಸ್ಪರ್ಶ, ರಸ, ರೂಪ, ಗಂಧ ಎಂಬ ಪಂಚತನ್ಮಾತ್ರಗಳು, ತದ್ದ್ವಾರಾ ಪೃಥಿವ್ಯಾದಿ ಪಂಚ ಮಹಾಭೂತಗಳು, ಸರಸಿಜಭವಾಂಡ–ಪೂರ್ವೋಕ್ತ ಅಹಂಕಾರತತ್ತ್ವದಿಂದ ಸೃಷ್ಟವಾದ ಪಂಚಮಹಾಭೂತಗಳಿಂದ ಬ್ರಹ್ಮಾಂಡ, ಸ್ಥಿತ–ಬ್ರಹ್ಮಾಂಡದ ಒಳಗೆ, ಹೊರಗೆ ವಿದ್ಯಮಾನಗಳಾದ, ಸ್ತ್ರೀಪುರುಷ – ಸ್ಥೂಲದೇಹದಿಂದ ಸಹಿತರನ್ನಾಗಿ ಸ್ತ್ರೀ ಪುರುಷ ಜೀವರಗಳ, ನಿರ್ಮಿಸಿದ–ನಿರ್ಮಾಣಮಾಡೋವನಾದ.

**ವಿಶೇಷಾರ್ಥ :**–ವಾಸುದೇವರೂಪದಿಂದ ಮಹತ್ತತ್ತ್ವ ಸೃಷ್ಟಿ, ತದ್ದ್ವಾರಾ ಅಹಂಕಾರತತ್ತ್ವ; ಸಂಕರ್ಷಣರೂಪದಿಂದ ಪಂಚ ಮಹಾಭೂತಾದಿಗಳ ಸೃಷ್ಟಿ; ಪ್ರದ್ಯುಮ್ನರೂಪದಿಂದ ಅಂಡದ ಹೊರಗೆ ಅರ್ಧನಾರೀರೂಪನಾಗಿ ಎಡಭಾಗವಾದ ಅರ್ಧನಾರೀರೂಪದಿಂದ ಸ್ತ್ರೀಯರ, ಬಲಭಾಗವಾದ ಅರ್ಧ ಪುರುಷರೂಪದಿಂದ ಪುರುಷರ ಸೃಷ್ಟಿ ಮಾಡಿ, ಅನಿರುದ್ಧರೂಪದಿಂದ ಬ್ರಹ್ಮಾಂಡಾಂತರ್ಗತ ಸ್ತ್ರೀಪುರುಷರುಗಳಿಗೆ ಸ್ಥೂಲದೇಹಗಳ ಕೊಡೋವನಾದ ಎಂತ ತಾತ್ಪರ್ಯ.

**ಈ ಶರೀರಿಗೆ ಪುರುಷ ತ್ರಿಗುಣದಿ ।**
**ಶ್ರೀಸಹಿತ ತಾನಿದ್ದು ಜೀವರಿ ।**
**ಗಾಶ ಲೋಭಾಜ್ಞಾನ ಮದ ಮತ್ಸರ ಕುಮೋಹ ಕ್ಷುಧ ॥**
**ಹಾಸ ಹರುಷ ಸುಷುಪ್ತಿ ಸ್ವಪ್ನಪಿ ।**
**ಪಾಸ ಜಾಗ್ರತಿ ಜನ್ಮ ಸ್ಥಿತಿ ಮೃತಿ ।**
**ದೋಷ ಪುಣ್ಯ ಜಯಾಪಜಯ ದ್ವಂದ್ವಗಳ ಕಲ್ಪಿಸಿದ ॥ ೭ ॥**

ಸ್ಥೂಲದೇಹದಿಂದ ಅಂಡದೊಳಗೆ ಸೃಜ್ಯರಾದ ಪ್ರಾಣಿಗಳಿಗೆ, ಅನುಭವಕ್ಕೆ ಕೊಟ್ಟದ್ದರನ್ನ ಹೇಳತಾರೆ.

ಈ ಶರೀರಿಗೆ–ವಿದ್ಯಮಾನ ಸ್ಥೂಲದೇಹಧಾರಿಯಾದ ಜೀವನಿಗೆ, ತ್ರಿಗುಣದಿ–ಅನಾದಿಯಿಂದ ವಿದ್ಯಮಾನವಾದ ತ್ರಿಗುಣಾತ್ಮಕ ಲಿಂಗಶರೀರದಲ್ಲಿ, ಅನಾದಿಯಿಂದ ವಿದ್ಯಮಾನಗಳಾದ ಆಶಾಲೋಭಾದಿಗಳಲ್ಲಿ, ಪುರುಷ–ಸೃಷ್ಟಿಗೆ ಕಾರಣವಾದ ಪುರುಷ ನಾಮಕ ವಾಸುದೇವ, ಶ್ರೀಸಹಿತ–ತನ್ನ ಪತ್ನಿಯಾದ ಮಾಯಾದೇವಿಯಿಂದ ಸಹಿತನಾಗಿ,

ತಾನಿದ್ದು–ತಾನು ಇರೋವನಾಗಿ, ಜೀವರಿಗೆ–ಪ್ರಾಣಿಗಳಿಗೆ, ಆಶ ಲೋಭಾಜ್ಞಾನ–ಆಶಾ, ಲೋಭ, ಅಜ್ಞಾನ, ಮದ ಮತ್ಸರ ಕುಮೋಹ–ಮದ, ಮತ್ಸರ, ಕುತ್ಸಿತವಾದ ಮೋಹ, ಕ್ಷುಧ ಹಾಸ ಹರುಷ– ಹಸಿವಿ, ನಗು, ಸಂತೋಷ, ಸುಷುಪ್ತಿ ಸ್ವಪ್ನ ಪಿಪಾಸ–ನಿದ್ರಾ, ಸ್ವಪ್ನ, ನೀರಡಿಕೆ, ಜಾಗ್ರತಿ ಜನ್ಮ ಸ್ಥಿತಿ–ಎಚ್ಚರಿಕೆ, ಜನನ, ಬದುಕಿ ಇರೋಣ, ಮೃತಿ ದೋಷ ಪುಣ್ಯ–ಮರಣ, ಪಾಪಕರ್ಮ, ಪುಣ್ಯಕರ್ಮ, ಜಯಾಪಜಯ–ಜಯ, ಅಪ ಜಯ, ದ್ವಂದ್ವಗಳ ಕಲ್ಪಿಸಿದ–ಏತಾದೃಶವಾದ ಉಭಯ ವಿಧಗಳ ಕಲ್ಪಿಸಿ ಸೃಷ್ಟಿಮಾಡಿದ. ಸ್ಥೂಲದೇಹದ್ವಾರಾ ಪ್ರಾಣಿಗಳಿಗೆ ಭೋಗಕ್ಕೆ ಕೊಡೋವನಾದ ಎಂತ ತಾತ್ಪರ್ಯ.

**ತ್ರಿವಿಧ ಗುಣಮಯ ದೇಹ ಜೀವಕೆ ।**
**ಕವಚದಂದದಿ ತೊಡಿಸಿ ಕರ್ಮ ।**
**ಪ್ರವಹದೊಳು ಸಂಚಾರಮಾಡಿಸುತಿಪ್ಪ ಜೀವರನ ॥**
**ಕವಿಸಿ ಮಾಯಾರಮಣ ಮೋಹವ ।**
**ಭವಕೆ ಕಾರಣನಾಗುವನು ಸಂ ।**
**ಶ್ರವಣ ಮನನವ ಮಾಳ್ಪರಿಗೆ ಮೋಚಕನೆನಿಸುತಿಪ್ಪ ॥ ೮ ॥**

ಬಂಧಕನು, ಮೋಚಕನು ಪರಮಾತ್ಮನೆಂದು ಹೇಳತಾರೆ.

ತ್ರಿವಿಧ– ಮೂರು ಪ್ರಕಾರರಾದ, ಜೀವಕೆ–ಸೃಷ್ಟಿಗೆ ಯೋಗ್ಯರಾದ, ಪ್ರತಿ ಪ್ರತೀ ಜೀವಕ್ಕೆ. ಕವಚದಂದದಿ–ಜೀವಾಕಾರವಾಗಿ ಕವಚದೋಪಾದಿಯಲ್ಲಿ ಇರತಕ್ಕ, ಅನಾದಿ ಯಿಂದ ಒಣಗಿದ ಗಜ್ಜಿಗಕಾಯಿಂಬೊಳಗೆ ಇರುವ ಬೀಜಕ್ಕೂ, ಆ ಬೀಜದ ಮ್ಯಾಲಿನ ಆವರಣಕ್ಕೂ ಸಂಬಂಧವಿಲ್ಲದೆ, ಅವಕಾಶದಿಂದ ಸಹಿತವಾಗಿ ಇರೋಪಾದಿಯಲ್ಲಿ ಜೀವರಿಗೆ ಲಿಂಗದೇಹಾಖ್ಯ ಆವರಣ, ಆ ಸಂಬಂಧವಾಗಿ ಸಾವಕಾಶದಿಂದ ಸಹಿತವಾಗಿ ಅನಾದಿ ಯಿಂದ ಇರೋದಾಗಿ ಅದೆ. ಅಂಥಾ, ಗುಣಮಯ–ತ್ರಿಗುಣಾತ್ಮಕವಾದ, ದೇಹ–ಅನಾದಿ ಲಿಂಗದೇಹ, ತೊಡಿಸಿ–(ಗುಣ ವೈಷಮ್ಯದಿಂದ ನಿರವಕಾಶದಿಂದ ಸಂಬಂಧಮಾಡಿ ಎಂತ ತಾತ್ಪರ್ಯ), ಈ ಪ್ರಕಾರ ತೊಡಿಸಿ ನಂತರ ಸ್ಥೂಲದೇಹಗಳ ಕೊಟ್ಟು, ಕರ್ಮಪ್ರವಹ ದೊಳು–ಲಿಂಗಗತ ಅನಾದಿಕರ್ಮ ವ್ಯಕ್ತಮಾಡಿ ತದ್ದ್ವಾರಾ ಜನಿತಗಳಾದ ಆಗಾಮಿ ಸಂಚಿ ತಾಖ್ಯಕರ್ಮಪ್ರವಾಹದೊಳು, ಜೀವರನ–ಯಾವತ್ತೂ ಪ್ರಾಣಿಗಳ, ಸಂಚಾರ ಮಾಡಿಸು ತಿಪ್ಪ–ಸಂಚಾರ ಮಾಡಿಸುತ್ತಾ ಇರೋವನಾಗಿದ್ದಾನೆ. ಮಾಯಾರಮಣ–ಮಾಯಾಪತಿ ವಾಸುದೇವ, ಮೋಹವ–ನಶ್ವರವಾದ ಐಹಿಕ ವಿಷಯದಲ್ಲಿ ಜೀವರಿಗೆ ಮೋಹವನ್ನು, ಕವಿಸಿ–ಸುತ್ತಿಸಿ, ತನ್ನಲ್ಲಿ ವಿರಕ್ತಿ, ಸಂಸಾರದಲ್ಲಿ ರಕ್ತಿ ಉಂಟುಮಾಡಿದ್ದರಿಂದ, ಭವಕೆ– ಪ್ರಾಣಿಗಳು ಅಹಂ ಮಮತಾಖ್ಯ ಸಂಸಾರಕ್ಕೆ ವಶರಾಗಿ ಭ್ರಮಿಸೋವರಾಗಿದ್ದಾರೆ; ಕಾರಣನಾಗುವನು–ಏತಾದೃಶವಾದ ಬಂಧಕ್ಕೆ, ಇದರ ಪರಿಹಾರಕ್ಕೆ ಕಾರಣನಾಗೋವನಾಗ ತಾನೆ. ಸಂಶ್ರವಣ–ತನ್ನ ಮಾಹಾತ್ಮ್ಯ, ಸಮೀಚೀನರಾದ ಗುರುಗಳಿಂದ ಶ್ರವಣವೇನು,

ಮನನವ—ಆ ಶ್ರವಣ ಮಾಡಿದ್ದರನ್ನ ಮನನವೇನು, ಅದರನ್ನ ಅನುಷ್ಠಾನಕ್ಕೆ ತರೋಣ ವೇನು, ಮಾಳ್ಪರಿಗೆ—ಈ ಪ್ರಕಾರ ಮಾಡತಕ್ಕವರಿಗೆ, ಮೋಚಕನೆನಿಸುತಿಪ್ಪ–ಸಂಸಾರಾಖ್ಯ ಬಂಧನ ಪರಿಹಾರಮಾಡಿ ಮೋಕ್ಷವನ್ನು ಕೊಡೋವನಾಗತಾನೆ, ಎಂತ ತಾತ್ಪರ್ಯ.

**ಸಾಶನಾಹ್ವಯ ಸ್ತ್ರೀ ಪುರುಷರೊಳು ।**
**ವಾಸವಾಗಿಹನೆಂದರಿದು ವಿ ।**
**ಶ್ವಾಸಪೂರ್ವಕ ಭಜಿಸಿ ತೋಷಿಸು ಸ್ವಾವರೋತ್ತಮರ ॥**
**ಕ್ಲೇಶನಾಶನ ಅಚಲಗಳೊಳು ಪ್ರ ।**
**ಕಾಶಿಸುತಲಿಹನಶನರೂಪೋ ।**
**ಪಾಸನವ ಮಾಳ್ಪರಿಗೆ ತೋರ್ಪನು ತನ್ನ ನಿಜರೂಪ ॥ ೯ ॥**

ತನ್ನ ಅಪರೋಕ್ಷ ದಾರಿಗೆ ಕೊಡತಾನೆಂದರೆ, ಅದರನ್ನ ಈ ಶ್ಲೋಕದಲ್ಲಿ ಹೇಳತಾರೆ.

ಸಾಶನ—ಅಶನಾದಿ ಆಹಾರಗಳಿಂದ ಸಹಿತವಾದ ಸ್ಥೂಲದೇಹಗತ ಬಿಂಬರೂಪೀ ಪರಮಾತ್ಮ, ಆಹ್ವಯ—'**ಸಾಶನ**' ಎಂಬ ನಾಮದಿಂದ ಕರಿಸುತ್ತ, ಸ್ತ್ರೀಪುರುಷರೊಳು—ಸ್ಥೂಲದೇಹಧಾರಿಗಳಾದ ಗಂಡಸರು ಮತ್ತು ಹೆಂಗಸರಲ್ಲಿ, ವಾಸವಾಗಿಹನೆಂದರಿದು—ಆವಾಸನಾಗಿ ಇದ್ದಾನೆಂತ ತಿಳಿದವನಾಗಿ, ವಿಶ್ವಾಸಪೂರ್ವಕ – ಅತ್ಯಂತವಾಗಿ ಸ್ನೇಹ ಪೂರ್ವಕ ಧ್ಯಾನೋಪಾಸನಾದಿಗಳಿಂದ, ಭಜಿಸಿ ತೋಷಿಸು—ಭಜನಾಮಾಡಿ ಸಂತೋಷಿ ಸೋವನಾಗು, ಸ್ವಾವರೋತ್ತಮರ—ಅವರವರ ಯೋಗ್ಯತಾನುಸಾರವಾಗಿ, ಭಜನಾ ಮಾಡಿದ ಸ್ವಾವರಜೀವರ, ಉತ್ತಮಜೀವರ, ಕ್ಲೇಶನಾಶನ – ಸಂಸಾರ ದುಃಖವನ್ನ ನಾಶನ ಮಾಡೋವನಾಗತಾನೆ. ಅಚಲಗಳೊಳು—ಭೇದಭೇದಾದಿಗಳಿಂದ ರಹಿತವಾಗಿ ಚಲನರೂಪದಿಂದ ಯುಕ್ತರಾದ ಜೀವರ ಸ್ವರೂಪದೇಹದೊಳು, ಅನಶನರೂಪ—ಜೀವನ ಸ್ವರೂಪ ಪ್ರಾಕೃತಅಶನದಿಂದ ರಹಿತವಾದದ್ದು, ಆದ್ದರಿಂದ ತದಂತರ್ಗತ ಬಿಂಬಗೆ **ಅನಶನ** ಎಂತನಾಮ. ಇಂಥಾ ಜೀವಾಂತರ್ಗತದಲ್ಲಿ ಬಿಂಬನಾದ ಅನಶನರೂಪ, ಪ್ರಕಾಶಿಸುತಲಿಹ—ಪ್ರಕಾಶಮಾನವಾಗತಾ ಇದ್ದಾನೆ. ಉಪಾಸನವ ಮಾಳ್ಪರಿಗೆ—ಇಂಥಾ ರೂಪವನ್ನ ಉಪಾಸನ ಮಾಳ್ಪರಿಗೆ ತನ್ನ ನಿಜರೂಪ—ನಿಜವಾದ ಜೀವನಾದ ತನ್ನ ಸ್ವರೂಪಾಂತರ್ಗತ ಬಿಂಬರೂಪೀ ಪರಮಾತ್ಮ, ಜೀವಾಕಾರವಾದ ತನ್ನ ರೂಪ, ತೋರ್ಪನು—ಪ್ರತ್ಯಕ್ಷದಿಂದ ತೋರಿಸೋವ ನಾಗತಾನೆ. ದೇಹಾಂತರ್ಗತ **ಸಾಶನ** ರೂಪೋಪಾಸನವೂ, ಜೀವಾಂತರ್ಗತ **ಅನಶನ** ರೂಪೋಪಾಸನವೂ, ಹೇಳಿದಂತಾಯಿತು.

ಪ್ರಮಾಣ :— " ತತೋ ವಿಶ್ವಂ ವ್ಯಾಕ್ರಮತ್ಸಾಶನಾನಶನೇ ಅಭಿ " ಎಂಬ ಪುರುಷ ಸೂಕ್ತದ ಅರ್ಥ.

**ಪ್ರಕಾರಾಂತರ ಚಿಂತಿಸುವದೀ ।**
**ಪ್ರಕೃತಿಯೊಳು ವಿಶ್ವಾದಿರೂಪವ ।**
**ಪ್ರಕಟಮಾಳ್ಪೆನು ಯಥಾಮತಿಯೊಳು ಗುರುಕೃಪಾಬಲದಿ ॥**
**ಮುಕುರನಿರ್ಮಿತ ಸದನದೊಳು ಪೊಗೆ ।**
**ಸ್ವಕಿಯ ರೂಪವ ಕಾಂಬ ತೆರದಲಿ ।**
**ಅಕುಟಿಲಾತ್ಮ ಚರಾಚರದಿ ಸರ್ವತ್ರ ತೋರುವನು ॥ ೧೦ ॥**

ಬ್ಯಾರೆ ಪ್ರಕಾರ ಚಿಂತನಾಕ್ರಮ ಹೇಳತಾರೆ.

ಈ ಪ್ರಕೃತಿಯೊಳು—ಲಿಂಗದೇಹಾಖ್ಯ ಈ ಪ್ರಕೃತಿಯಲ್ಲಿ ಪ್ರಕಾರಾಂತರ, ಚಿಂತಿಸುವುದು—ಭಗವದ್ರೂಪಗಳ ಮತ್ತೊಂದು ಪ್ರಕಾರ ಚಿಂತಿಸೋವರಾಗಬೇಕು, ಚಿಂತಿಸತಕ್ಕ ಭಗವದ್ರೂಪಗಳಾದ, ವಿಶ್ವಾದಿ ರೂಪವ—ವಿಶ್ವಾದಿ ಎಂಟು ರೂಪಗಳ, ಗುರುಕೃಪಾಬಲದಿ—ಗುರುಗಳ ಅಂತಃಕರಣಬಲದಿಂದ, ಯಥಾಮತಿಯೊಳು—ಬುದ್ಧಿಗೆ ತೋರಿದಷ್ಟು, ಪ್ರಕಟಮಾಳ್ಪೆನು—ವಿಸ್ತಾರವಾಗಿ ಹೇಳತೇನು, ಮುಕುರನಿರ್ಮಿತ ಸದನದೊಳು—ಕನ್ನಡಿಯಿಂದ ನಿರ್ಮಿತವಾದ ಮನಿಯನ್ನ ಒಬ್ಬ ಪುರುಷ, ಪೊಗೆ—ಪ್ರವೇಶಮಾಡಿದರೆ, ಸ್ವಕಿಯ ರೂಪವ ಕಾಂಬ ತೆರದಲಿ—ಪ್ರವೇಶಮಾಡಿದ ಪುರುಷನ ರೂಪ ಅನೇಕ ದರ್ಪಣಗಳಲ್ಲಿ, ಅನೇಕ ರೂಪಗಳ ಕಾಣೋವನಾಗತಾನೆ. ಇದರೋಪಾದಿಯಲ್ಲಿ, ಅಕುಟಿಲಾತ್ಮ—ದೋಷದೂರನಾದ ಪರಮಾತ್ಮನು, ಚರಾಚರದಿ—ಸ್ಥಾವರ ಜಂಗಮ ಸರ್ವಾಧಿಷ್ಠಾನದಲ್ಲಿ, ಸರ್ವತ್ರ ತೋರುವನು—ಅನೇಕರೂಪಗಳಿಂದ ಕಾಣಿಸೋವನಾಗತಾನೆ, ಎಂತ ತಾತ್ಪರ್ಯ.

**ಪರಿಚ್ಛೇದತ್ರಯ ಪ್ರಕೃತಿಯೊಳ ।**
**ಗಿರುತಿಹನು ವಿಶ್ವಾದಿರೂಪವ ।**
**ಧರಿಸಿ ಆತ್ಮಾದಿತ್ರಿರೂಪವ ಈಷಣತ್ರಯದಿ ॥**
**ಸುರುಚಿ ಜ್ಞಾನಾತ್ಮ ಸ್ವರೂಪದಿ ।**
**ತುರಿಯನಾಮಕ ವಾಸುದೇವನ ।**
**ಸ್ಮರಿಸು ಮುಕ್ತಿಸುಖಪ್ರದಾಯಕನೀತನಹುದೆಂದು ॥ ೧೧ ॥**

ಹತ್ತನೇ ಶ್ಲೋಕದಲ್ಲಿ ಹೇಳಿದ ಲಿಂಗದೇಹದ ವಿಚಾರ ಸವಿಸ್ತಾರವಾಗಿ ಹೇಳತಾರೆ.

ಪರಿಚ್ಛೇದತ್ರಯ—ಜೀವನಮ್ಯಾಲೆ ಮೂರು ಆವರಣದಿಂದ ಯುಕ್ತವಾದ, ಪ್ರಕೃತಿಯೊಳಗೆ—ಪ್ರಕೃತಿಸಾಂಕೇತವಾದ ಗುಣತ್ರಯಾತ್ಮಕ ಅನಾದಿಲಿಂಗಶರೀರಾಖ್ಯ ಸತ್ತ್ವಾದಿ ಗುಣತ್ರಯಗಳೊಳಗೆ, ವಿಶ್ವಾದಿರೂಪವ—ಆದಿಶಬ್ದದಿಂದ ವಿಶ್ವ, ತೈಜಸ, ಪ್ರಾಜ್ಞ, ಈ ಮೂರು ರೂಪಗಳೂ ಗ್ರಾಹ್ಯ. ೧. ವಿಶ್ವ, ಸತ್ತ್ವಗುಣದಲ್ಲಿ; ೨. ತೈಜಸ, ರಜೋಗುಣದಲ್ಲಿ; ೩. ಪ್ರಾಜ್ಞ, ತಮೋಗುಣದಲ್ಲಿ. ಆತ್ಮಾದಿ ತ್ರಿರೂಪವ—ಆದಿ ಶಬ್ದದಿಂದ ಆತ್ಮ,

ಅಂತರಾತ್ಮ, ಪರಮಾತ್ಮ, ಈ ಮೂರು ರೂಪಗಳೂ ಗ್ರಾಹ್ಯ. ಈ ಮೂರು ರೂಪಗಳೂ, ಈಷಣತ್ರಯದಿ–ಲಿಂಗದೇಹಗತಗಳಾದ, ೪. ದಾರೇಷಣ, ಆತ್ಮ; ೫. ವಿತ್ತೇಷಣ, ಅಂತರಾತ್ಮ; ೬. ಪುತ್ರೇಷಣ, ಪರಮಾತ್ಮ, ಈ ಮೂರರಲ್ಲಿ ಮೂರು ರೂಪಗಳು. ಸುರುಚಿ – ಸಮೀಚೀನವಾದ ಕಾಂತಿಸಂಪನ್ನನಾದ, ಸ್ವರೂಪದಿ – ಜೀವನ ಸ್ವರೂಪದಲ್ಲಿ, ಜ್ಞಾನಾತ್ಮ–೭. ಜ್ಞಾನಾತ್ಮಕನಾದ ಪರಮಾತ್ಮ, ಮುಕ್ತಿಸುಖಪ್ರದಾಯಕನು–ಮೋಕ್ಷ ಪ್ರದಾಯಕನಾದ, ತುರಿಯನಾಮಕ ವಾಸುದೇವನ–೮. ತುರ್ಯನಾಮಕ ವಾಸುದೇವನ, ಸ್ಮರಿಸು–ಆಯಾ ಅಧಿಷ್ಠಾನಗಳಲ್ಲಿ ಆಯಾ ಭಗವದ್ರೂಪಗಳ ಸ್ಮರಣಮಾಡೋವನಾಗ ಬೇಕು. ಧರಿಸಿ–ಈ ಪ್ರಕಾರ ಗುಣಪೂರ್ಣನಾದ ಪರಮಾತ್ಮ, ವಿಶ್ವಾದಿ ಎಂಟು ರೂಪಗಳ ಧರಿಸಿ, ಇರುತಿಹನು–ಪೂರ್ವೋಕ್ತ ಸ್ಥಾನಗಳಲ್ಲಿ ಇರೋವನಾಗಿ ಇದ್ದಾನೆ. ಈತನಹುದೆಂದು–ಆಯಾ ಭಗವದ್ರೂಪಗಳ ಸ್ಮರಣೆ ಮಾಡೋಣದರಿಂದ, ಅದದು ಆಯಾ ಭಗವದ್ರೂಪಗಳ ದ್ವಾರಾ ಅಜ್ಞಾನ ಪರಿಹಾರವಾಗತದೆ. ಅನಂತರ ವಾಸುದೇವ ಲಿಂಗಭಂಗ ಐದಿಸಿ ಸ್ವರೂಪಸುಖ ವ್ಯಕ್ತಮಾಡತಕ್ಕವನೆಂದು ತಿಳಿಯೋವನಾಗಬೇಕೆಂತ ತಾತ್ಪರ್ಯ.

**ಕಮಲಸಂಭವಜನಕ ಜಡಜಂ ।**
**ಗಮರೊಳಗೆ ನೆಲೆಸಿದ್ದು ಕ್ರಮ ವ್ಯ ।**
**ತ್ಕ್ರಮದಿ ಕರ್ಮವ ಮಾಡಿ ಮಾಡಿಸುತಿಪ್ಪ ಬೇಸರದೆ ॥**
**ಕ್ಷಮ ಕ್ಷಾಮ ಕ್ಷಮೀಹನಾಹ್ವಯ ।**
**ಸುಮನಸಾಸುರರೊಳಗೆ ಅಹಂ ।**
**ಮಮನ ಮಮ ಎಂದೀ ಉಪಾಸನೆಗೈವ ಪ್ರಾಂತದಲಿ ॥ ೧೨ ॥**

ಸ್ವರೂಪದಂತೆ ಉಪಾಸನಮಾಡಿಸತಕ್ಕ ಭಗವದ್ರೂಪಗಳ ಹೇಳತಾರೆ.

ಕಮಲಸಂಭವಜನಕ–ಬ್ರಹ್ಮದೇವರ ತಂದಿಯಾದ ವಾಸುದೇವ, ಜಡಜಂಗಮ ರೊಳಗೆ–ತ್ರಿವಿಧ ಜೀವರು, ಜಡಜೀವರು ಇವರೊಳಗೆ, ನೆಲೆಸಿದ್ದು–ಸ್ವರೂಪದಲ್ಲಿ, ಬಾಹ್ಯ ಸ್ಥೂಲದೇಹದಲ್ಲಿ ಬಿಂಬನಾಗಿದ್ದು, ಕ್ರಮ–ಸ್ವರೂಪಸ್ವಭಾವದ ಕ್ರಮವನ್ನು ತಪ್ಪಿಸಿ, ವ್ಯತ್ಕ್ರಮದಿ–ತ್ರಿಗುಣಾತ್ಮಕ ಲಿಂಗದೇಹದ ಕಾರಣದಿಂದ ಸ್ವರೂಪಕ್ಕೆ ಅನ್ಯಥಾವಾದ, ಕರ್ಮವ–ಅನಾದಿಕರ್ಮಕ್ಕೆ ಅನುಸಾರಿಯಾದ ಕರ್ಮವ, ಮಾಡಿ ಮಾಡಿಸುತಿಪ್ಪ– ಸ್ಥೂಲದೇಹಾಂತರ್ಗತನಾಗಿ ಇದ್ದು ಸ್ಥೂಲದೇಹೇಂದ್ರಿಯಗಳ ದ್ವಾರಾ, ಬಿಂಬಕ್ರಿಯಾ ದ್ವಾರಾ ತಾನು ಮಾಡಿ ಮಾಡಿಸೋವನಾಗತಾ ಇರುತ್ತಾನೆ. ತ್ರಿವಿಧಜೀವರು ಏತಾದೃಶ ವಾದ ಪಾಪ ಪುಣ್ಯ ಕರ್ಮಗಳ ಮಾಡತಾರೆ, ಇದರಲ್ಲಿ ವ್ಯತ್ಯಾಸವಿಲ್ಲ. ಅವರವರ ಜ್ಞಾನದಲ್ಲಿ ಮಾತ್ರವೇ ವ್ಯತ್ಯಾಸ ಇರತದೆ. ಬೇಸರದೆ–ಈ ಪ್ರಕಾರ ಕರ್ಮ ಮಾಡಿಸೋ ದರಲ್ಲಿ ಬಿಂಬಗೆ ಬ್ಯಾಸರಿಕೆ ಇಲ್ಲ. ಪ್ರಾಂತದಲಿ – ಸಾಧನ ಪರಿಪಕ್ವವಾಗಿ ಅವರವರ ಲಿಂಗಭಂಗ ಐದಿಸತಕ್ಕ ಕಾಲದಲ್ಲಿ ಅವರವರ ಯೋಗ್ಯತಾನುಸಾರ ಆಯಾ ಜೀವರ ಸ್ಥೂಲ

ದೇಹದಲ್ಲಿ ಅಂತರ್ಗತನಾಗಿ, ಸುಮನಸ–ಬ್ರಹ್ಮಾದಿ ತೃಣಾಂತ ಮುಕ್ತಿಯೋಗ್ಯರಲ್ಲಿ, ಕ್ಷಮ–ಕ್ಷಮಸಾಂಕೇತನಾದ ಪರಮಾತ್ಮ, ಮಮನ–ನಾನು ಈಶ್ವರಗೆ ದಾಸನಾದವ, ಸರ್ವ ಚರಾಚರ ಪದಾರ್ಥಗಳು ಈಶ್ವರಂದು, ನನ್ನದಲ್ಲ ಎಂಬ ಜ್ಞಾನವೂ, ಅಸುರರೊಳಗೆ–ಕಲಿ ಆರಂಭಮಾಡಿ ತೃಣಾಂತ ದೈತ್ಯರೊಳಗೆ, ಕ್ಷಾಮ–ಕ್ಷಾಮಸಾಂಕೇತನಾದ ಪರಮಾತ್ಮ ಇದ್ದು, ಅಹಂ–ನಾನು ಬ್ರಹ್ಮ, ಜಗನ್ಮಿಥ್ಯಾ ಎಂಬ ಜ್ಞಾನವೂ, ಕ್ಷಮೀಹನ–ಅಸುರರಾದ ನಿತ್ಯಸಂಸಾರಿಗಳಲ್ಲಿ ಕ್ಷಮೀಹನನಾಮಕ ಪರಮಾತ್ಮ ಇದ್ದು, ಮಮ–ದ್ರವ್ಯ, ಧಾನ್ಯ, ಪಶು, ಪುತ್ರಾದಿಗಳು ಶಾಶ್ವತ. ಬುದ್ಧಿ, ಈಶ್ವರಜ್ಞಾನವಿಲ್ಲದೆ ನನ್ನದೂ ಎಂಬ ಜ್ಞಾನವೂ, ಎಂದೀ ಉಪಾಸನೆಗೈವ–ಈ ಪ್ರಕಾರ ತ್ರಿವಿಧ ಜೀವಗತ, ತ್ರಿವಿಧ ರೂಪನಾದ ಪರಮಾತ್ಮ ಜೀವರ ಅನಾದಿಸ್ವರೂಪಯೋಗ್ಯತಾನುಸಾರ, ಅಹಂ, ಮಮನ, ಮಮ ಎಂಬ ಈ ಪ್ರಕಾರ ಪರಮಾತ್ಮ ಬಿಂಬಕ್ರಿಯಾದ್ವಾರಾ ಉಪಾಸನೆಗೈವುತ ತದ್ದ್ವಾರಾ ಜೀವನು ಉಪಾಸನೆಗೈವ ಎಂತ ಅರ್ಥ. ಆಶ್ರಯ–ಬಿಂಬರೂಪೀ ಪರಮಾತ್ಮ ಪೂರ್ವೋಕ್ತ ನಾಮಗಳಿಂದ ಜ್ಞಾನ ವ್ಯಕ್ತಮಾಡತಾನೆಂತ ತಾತ್ಪರ್ಯ.

**ಈ ಸಮಸ್ತ ಜಗತ್ತು ಈಶಾ ।**
**ವಾಸ್ಯವೆನಿಪುದು ಕಾರ್ಯರೂಪವು ।**
**ನಾಶವಾದರು ನಿತ್ಯವೇ ಸರಿ ಕಾರಣ ಪ್ರಕೃತಿ ॥**
**ಶ್ರೀಶಗೆ ಜಡಪ್ರತಿಮೆಯೆನಿಪುದು ।**
**ಮಾಸದೊಮ್ಮೆಗು ಸನ್ನಿಧಾನವು ।**
**ವಾಸವಾಗಿಹ ನಿತ್ಯ ಶಾಲಿಗ್ರಾಮದೋಪಾದಿ ॥ ೧೩ ॥**

ಕಾರಣಪ್ರಕೃತಿಗೆ ನಾಶವಿಲ್ಲ ಎಂತ ಹೇಳತಾರೆ.

ಈ ಸಮಸ್ತ ಜಗತ್ತು–ಈ ವರ್ತಮಾನ ಕಾರ್ಯರೂಪವಾದ ಜಗತ್ತು, ಈಶಾವಾಸ್ಯವೆನಿಪುದು–ದೇವರಿಂದ ಆವಾಸವಾದದ್ದು ಎಂತ ಎನಿಸುತ್ತದೆ. "ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್" ಎಂಬ ಈಶಾವಾಸ್ಯ ಉಪನಿಷತ್ತು ಪ್ರಮಾಣ. ಕಾರ್ಯರೂಪವು–ಕಾರ್ಯಾತ್ಮನಾ ಇರತಕ್ಕ ಈ ಜಗತ್ತು, ನಾಶವಾದರು–ಪ್ರಳಯಕಾಲದಲ್ಲಿ ನಾಶವಾದರೂ, ಕಾರಣ ಪ್ರಕೃತಿ–ಈ ಕಾರ್ಯಕ್ಕೆ ಉಪಾದಾನಕಾರಣವಾದ ಪ್ರಕೃತಿ, ನಿತ್ಯವೇ ಸರಿ–ನಿತ್ಯವಾಗೇ ಇರುತ್ತದೆ, ನಿಶ್ಚಯ ಅಂದರೆ, ಈ ಕಾರ್ಯರೂಪವಾದ ಜಗತ್ತೇ ನಾಶಾನಂತರ ಇದೇ ಕಾರಣಾತ್ಮನಾ ಇದ್ದು, ಮತ್ತು ಉತ್ತರೋತ್ತರ ಕಾರ್ಯಾತ್ಮನಾ ಪರಿಣಮಿಸುತ್ತದೆ ಎಂತ ಅರ್ಥ. ಏತಾದೃಶವಾದ ಕಾರಣ, ಪ್ರಕೃತಿ, ಶ್ರೀಶಗೆ–ಲಕ್ಷ್ಮೀಪತಿಯಾದ ಶ್ರೀ ನಾರಾಯಣ ದೇವರಿಗೆ, ಜಡಪ್ರತಿಮೆಯನಿಪುದು–ನಿತ್ಯವಾದ ಜಡಪ್ರತಿಮಾ ಎಂತ ಕರಿಸುತ್ತದೆ. ನಿತ್ಯವಾದ ಜಡಾಧಿಷ್ಠಾನವೂ, ಮಾಸದೊಮ್ಮೆಗು–ಅನಾದ್ಯನಂತ ಕಾಲಕ್ಕೂ ದಾವಕಾಲದಲ್ಲೂನೂ ನಾಶವಾಗೋದಿಲ್ಲ, ನಿತ್ಯವಾಗೇ ಇರತದೆ. ಇದರಲ್ಲಿ,

ವಾಸವಾಗಿಹ–ಶ್ರೀಪರಮಾತ್ಮ ಆವಾಸನಾಗಿ ಇದ್ದಾನೆ. ಸನ್ನಿಧಾನವು– ಇದರಲ್ಲಿ ಪರಮಾತ್ಮನ ಸನ್ನಿಧಾನವೆಂಬುದು, ಶಾಲಿಗ್ರಾಮದೋಪಾದಿ–ಶಾಲಿಗ್ರಾಮದಲ್ಲಿ ನಿತ್ಯ ಸನ್ನಿಧಾನವು ಹ್ಯಾಂಗಿರತದೋ, ಅದರಂತೆ, ನಿತ್ಯ–ಸದಾ ಬ್ರಹ್ಮಾಂಡದಲ್ಲಿ ಪರಮಾತ್ಮನ ವಿಭೂತಿ ರೂಪಸನ್ನಿಧಾನ, ಸಾಕಾರ ಸಾವಯವದಿಂದ ಇರುತ್ತದೆ ಎಂತ ತಾತ್ಪರ್ಯ.

**ಏಕಾನೇವಾದ್ವಿತಿಯ ರೂಪಾ ।**
**ನೇಕ ಜೀವರೊಳಿದ್ದು ತಾ ಪ್ರ ।**
**ತ್ಯೇಕ ಕರ್ಮವ ಮಾಡಿ ಮೋಹಿಸುತಿಪ್ಪ ತಿಳಿಸದಲೆ ॥**
**ಮೂಕ ಬಧಿರಾಂಧಾದಿ ನಾಮಕ ।**
**ಈ ಕಳೇವರದೊಳಗೆ ಕರೆಸುವ ।**
**ಮಾಕಳತ್ರನ ಲೌಕಿಕ ಮಹಾಮಹಿಮೆಗೇನೆಂಬೆ ॥ ೧೪ ॥**

ಶ್ರೀ ಪರಮಾತ್ಮನ ಮಾಹಾತ್ಮ್ಯ ಹೇಳತಾರೆ.

ಏಕಮೇವ – ಈ ಪೂರ್ವೋಕ್ತಪ್ರಕಾರ ಪರಮಾತ್ಮ ಒಬ್ಬನೇವೇ, ಅದ್ವಿತಿಯ ರೂಪ–ಇವಗೆ ಸರಿಯಾದವರು ಇನ್ನೊಬ್ಬರೂನೂ ಇಲ್ಲದವ, 'ಏಕಮೇವಾದ್ವಿತೀಯಂ ಬ್ರಹ್ಮ' ಎಂಬ ಶ್ರುತ್ಯರ್ಥ, ಅನೇಕ ಜೀವರೊಳಿದ್ದು–ಈ ಪರಮಾತ್ಮ ಅನಂತರಾದ ಜೀವರಲ್ಲಿ ಅನೇಕ ರೂಪಗಳಿಂದ ಅಂತರ್ಗತನಾಗಿ ಇದ್ದು, ತಾ–ಬಿಂಬರೂಪನಾದ ತಾನು, ಪ್ರತ್ಯೇಕ ಕರ್ಮವ–ಸ್ವರೂಪಕ್ಕೆ ಅನ್ಯವಾದ ಜಡಕರ್ಮವ, ಪ್ರತ್ಯೇಕವಾದ ಸ್ಥೂಲದೇಹದೊಳಿದ್ದು, ತಿಳಿಸದಲೆ–ದೇಹಗತರಾದ ಜೀವರಿಗೆ ಪರಮಾತ್ಮನಾದ ತಾನು ಮಾಡತೇನೆಂಬೋದು ತಿಳಿಸಧಾಂಗೆ, *ಮಾಡಿ ಮಾಡಿಸುತಿಪ್ಪ–ತಾನು ಮಾಡಿ, ಜೀವರಿಂದ ಮಾಡಿಸುತ್ತಾ, ದೇಹೇಂದ್ರಿಯಾದಿಗಳಲ್ಲಿ ಇರೋವನಾಗಿದ್ದಾನೆ. ಈ ಕಳೇವರದೊಳಗೆ–ಈ ಸ್ಥೂಲ ದೇಹದೊಳಗೆ ತದಾಕಾರನಾಗಿದ್ದು, ಮೂಕ–ಮೂಕ ಎಂತಲೂ, ಬಧಿರ–ಕಿವುಡ ಎಂತಲೂ, ಅಂಧ–ಕುರುಡ ಎಂತಲೂ, ಆದಿ ನಾಮಕ–ಇವೇ ಮೊದಲಾದ ನಾಮಕನಾಗಿ, ಕರೆಸುವ–ಕರಿಸೋವನಾಗತಾನೆ. ದೇವರೇನು, ಜೀವರೇನು, ಈ ಉಭಯರೂ, ಮೂಕ, ಬಧಿರ, ಅಂಧರಲ್ಲ. ಅನಾದ್ಯನಂತಕಾಲಕ್ಕೂ ಎಲ್ಲಾ ಜೀವರಿಗೆ 'ಕರ್ಮವಶಾತ್' ಅಂಗ ನ್ಯೂನವಾದ ನಾನಾ ದೇಹಗಳು ಬರುತ್ತವೆ. ತದ್ಗತನಾದ ಜೀವ, ಪರಮಾತ್ಮ ಇವರು ಅಧಿಷ್ಠಾನವನ್ನನುಸರಿಸಿ ಆಯಾ ನಾಮುಗಳಿಂದ ಕರಿಸತಾರೆ, ಮಾಕಳತ್ರನ–ಲಕ್ಷ್ಮೀಪತಿಯಾದ ಶ್ರೀ ಪರಮಾತ್ಮನ, ಲೌಕಿಕಮಹಾಮಹಿಮೆಗೇನೆಂಬೆ–ಲೋಕಾಧಿಷ್ಠಾನದಲ್ಲಿ ಪ್ರತ್ಯಕ್ಷನಾಗಿ ಕಣ್ಣಿಗೆ ಕಾಣುವಂತೆ ಮಾಡತಕ್ಕ ಲೋಕಕ್ಕೆ ಅನುಸರಿಸಿದ ಮಹಾತ್ಮ್ಯ ಇಂಥಾದ್ದು, ಎಂತ ನಿರ್ಧಾರಕ್ಕೆ ಶಕ್ಯವಲ್ಲದ ಮಹಿಮೆಗಳಿಗೆ ಏನೆಂತ ಹೇಳಲಿ ಎಂದರೆ, ಪರಮಾತ್ಮನ ಮಹಿಮಾ ಅಸದೃಶವಾದದ್ದು ಎಂತ ತಾತ್ಪರ್ಯ.

* 'ಮಾಡಿ ಮೋಹಿಸುತಿಪ್ಪ' ಎಂದು ಪದ್ಯದಲ್ಲಿದ್ದು, – ಮಾಡಿ ಮಾಡಿಸುತಿಪ್ಪ' ಎಂಬುವಕ್ಕೆ ವ್ಯಾಖ್ಯಾನವಿದೆ.

**ಲೋಕಬಂಧುರ್ಲೋಕನಾಥ ವಿ ।**
**ಶೋಕ ಭಕ್ತರ ಶೋಕನಾಶನ ।**
**ಶ್ರೀ ಕರಾರ್ಚಿತ ಸೋಕದಂದದಲಿಪ್ತ ಸರ್ವರೊಳು ॥**
**ಸಾಕುವನು ಸಜ್ಜನರ ಪರಮ ಕೃ**
**ಪಾಕರೇಶ ಪಿನಾಕಿಸನ್ನುತ ।**
**ಸ್ವೀಕರಿಸುವಾನತರು ಕೊಟ್ಟ ಸಮಸ್ತ ಕರ್ಮಗಳ ॥ ೧೫ ॥**

ಶ್ರೀ ಪರಮಾತ್ಮನ ಮಾಹಾತ್ಮ್ಯ ಹೇಳತಾರೆ.

ಲೋಕಬಂಧುಃ–ಶ್ರೀ ಪರಮಾತ್ಮ ಲೋಗರಿಗೆ ಬಾಂಧವನಾದವ, ಲೋಕನಾಥ–ಸರ್ವರಿಗೂ ಯಜಮಾನನಾದವ, ವಿಶೋಕ–ಹೋಗಲ್ಪಟ್ಟ ದುಃಖಗಳುಳ್ಳವ, ಭಕ್ತರ ಶೋಕನಾಶನ–ತನ್ನ ಭಕ್ತರ ದುಃಖಗಳ ನಾಶನಮಾಡತಕ್ಕವ. ಶ್ರೀಕರಾರ್ಚಿತ–ಲಕ್ಷ್ಮೀ ದೇವೇರ ಕೈಗಳಿಂದ ಪೂಜಿತನಾದವ, ಸರ್ವರೊಳು–ಸಮಸ್ತ ಚರಾಚರ ಅಧಿಷ್ಠಾನಗಳಲ್ಲಿ ಇದ್ದವನಾಗಿ, ಸೋಕದಂದದಲಿಪ್ತ–ದಾವುದಕ್ಕೂ ಸಂಬಂಧವಾಗದೆ ನಿರ್ಲಿಪ್ತನಾಗಿದ್ದಾನೆ. ಸಾಕುವನು ಸಜ್ಜನರ–ಮುಕ್ತಿಯೋಗ್ಯರನ್ನ ಸರ್ವಪ್ರಕಾರದಿಂದಲೂ ರಕ್ಷಿಸುತ್ತಾನೆ. ಪರಮ ಕೃಪಾಕರೇಶ–ಇವರಲ್ಲಿ ಅತ್ಯಂತವಾದ ಅಂತಃಕರಣ ಮಾಡತಕ್ಕ ಸ್ವಾಮಿಯಾದವನು ಪಿನಾಕಿಸನ್ನುತ–ರುದ್ರದೇವರಿಂದ ಛಂದಾಗಿ ಸ್ತುತ್ಯನಾದವನು, ಆನತರು ಕೊಟ್ಟ–ಇಂಥಾ ಪರಮಾತ್ಮ, ತನ್ನ ಸರ್ವೋತ್ತಮನೆಂದು ತಿಳಿದು ಛಂದಾಗಿ ವಂದನಾ ಮಾಡತಕ ಭಕ್ತರು ಕೊಟ್ಟಂಥಾ, ಸಮಸ್ತ ಕರ್ಮಗಳ–ಎಲ್ಲಾ ದ್ವಂದ್ವಕರ್ಮಗಳ, ಸ್ವೀಕರಿಸುವ–ತಾನು ಸ್ವೀಕಾರಮಾಡತಾನೆಂತ ತಾತ್ಪರ್ಯ.

**ಆಹಿತ ಪ್ರತಿಮೆಗಳೆನಿಸುವುವು ।**
**ದೇಹ ಗೇಹಾಪತ್ಯ ಸತಿ ಧನ ।**
**ಲೋಹ ಕಾಷ್ಠ ಶಿಲಾ ಮೃದಾತ್ಮಕವಾದ ದ್ರವ್ಯಗಳು ॥**
**ಸ್ನೇಹದಲಿ ಪರಮಾತ್ಮ ಎನಗಿ ।**
**ತ್ತೀಹನೆಂದರಿದನುದಿನದಿ ಸ ।**
**ಮ್ಮೋಹಕೊಳಗಾಗದಲೆ ಪೂಜಿಸು ಸರ್ವನಾಮಕನ ॥ ೧೬ ॥**

ಶ್ರೀಪರಮಾತ್ಮನ್ನ ಈ ಪ್ರಕಾರ ತಿಳಿದು ಪೂಜಿಸಬೇಕೆಂದು ಹೇಳತಾರೆ.

ಆಹಿತ – ವಿಭೂತಿ ಸಂಧಿಯಲ್ಲಿ ಹೇಳಿದ ದಶವಿಧ ವಿಭೂತಿಗಳೊಳಗೆ, ಆಹಿತ ವಿಭೂತಿ ಇರತಕ್ಕ ಅಧಿಷ್ಠಾನಸಾಂಕೇತಗಳಾದ, ದೇಹ–ತನ್ನ ದೇಹವೇನು, ಗೇಹ–ಮನಿ, ಅಪತ್ಯ–ಪುತ್ರರು ಅಥವಾ ಸಮಸ್ತರಾದ ಬಂಧುಗಳು, ಸತಿ–ಹೆಂಡತಿ, ಧನ–ದ್ರವ್ಯ, ಲೋಹ–ಬಂಗಾರ ಮೊದಲಾದ ಆಭರಣಗಳು, ಶಿಲಾ–ನವರತ್ನಗಳು, ಕಾಷ್ಠ–ಉದ್ಯಾನ

ವನಗಳು, ಮೃದಾತ್ಮಕವಾದ–ಭೂಮಿ ಮೊದಲಾದ, ದ್ರವ್ಯಗಳು–ಏತಾದೃಶವಾದ ಅನೇಕ ಪದಾರ್ಥಗಳು, ಪ್ರತಿಮೆಗಳೆನಿಸುವ್ರವು–ಶ್ರೀಪರಮಾತ್ಮಗೆ ಪ್ರತಿಮೆಗಳೆಂತ ಕರಿಸೋವಾಗ ತವೆ. ಇವ್ರುಗಳಲ್ಲಿ ಪರಮಾತ್ಮನ ಆಹಿತವಿಭೂತಿ ಇರೋದಾಗಿ ಅದೆ. ದ್ರವ್ಯಗಳು–ಈ ಪದಾರ್ಥಗಳು ತನ್ನವು ಎಂತ ತಿಳಿಯದೆ, ಇವು ಯಾವತ್ತೂ ಶ್ರೀಪರಮಾತ್ಮಂದು, ನನ್ನದಲ್ಲ ಎಂತ ತಿಳಿದು ಇವ್ರುಗಳಲ್ಲಿ ಕೇವಲ ಮಮತೆ ತೊರೆದು ಅಂದರೆ, ಮಮತೆ ಮಾಡದೇ, ಪರಮಾತ್ಮ ಎನಗಿತ್ತಿಹನೆಂದು–ದೇವರು ನನಗೆ ಸಾಧನೋದ್ದೇಶದಿಂದ ಕೊಡೋವನಾಗಿದ್ದಾನೆಂತಲೂ ಅದರಲ್ಲಿ ಆಹಿತವಿಭೂತಿ ಶ್ರೀಪರಮಾತ್ಮ ಆವಾಸನಾಗಿ ದ್ದಾನೆಂತ ತಾನು, ಅರಿದು–ತಿಳಿದವನಾಗಿ, ಸ್ನೇಹದಲಿ–ಇವ್ರುಗಳಲ್ಲಿ ದೇವರ ಸನ್ನಿಧಾನ ಇದೆಯೆಂತ ತಿಳಿದು ಅವಿಚ್ಛಿನ್ನ ಸ್ನೇಹ ಬೆಳೆಸುತ್ತಾ, ಸಮ್ಮೋಹಕೊಳಗಾಗದಲೆ–ಇವ್ರುಗಳಲ್ಲಿ ವಿಶೇಷ ಮಮತಾ ಮಾಡದೇ ಅವ್ರುಗಳಿಗೆ ನೀನು ವಶನಾಗದೆ ಛಂದಾಗಿ ಮೋಹವನ್ನು ದೂರಮಾಡಿ ನಿರ್ಲಿಪ್ತನಾಗಿ ಸಂಚಾರಮಾಡುತ್ತಾ, ಅನುದಿನದಿ – ಪ್ರತಿದಿನದಲ್ಲೂ, ಸರ್ವನಾಮಕನ–ದಾರಾಪುತ್ರಾದಿ ಪೂರ್ವೋಕ್ತ ಸರ್ವಾಧಿಷ್ಠಾನದಲ್ಲಿ ಇರತಕ್ಕ ತತ್ತನ್ನಾ ಮಕನಾದ ಶ್ರೀಪರಮಾತ್ಮನ, ಪೂಜಿಸು–ಪೂಜಾದಿ ಉಪಚಾರಗಳ ಮಾಡೋವನಾಗು ಎಂತ ಅರ್ಥ. ಇದರಿಂದ "ಇಷ್ಟಂ ದತ್ತಂ ಹುತಂ ಜಪ್ತಂ ಪೂರ್ತಂ ಯಚ್ಚಾತ್ಮನಃ ಪ್ರಿಯಂ । ದಾರಾನ್ ಸುತಾನ್ ಪ್ರಿಯಾನ್ ಪ್ರಾಣಾನ್ ಪರಸ್ಮೈ ಸನ್ನಿವೇದಯೇತ್" ಎಂಬ ಶ್ಲೋಕಾರ್ಥ ವಿವರಿಸಿದಂತಾಯಿತು.

**ಶ್ರೀತರುಣಿವಲ್ಲಭಗೆ ಜೀವರು ।**
**ಚೇತನ ಪ್ರತಿಮೆಗಳು ಓತ ।**
**ಪ್ರೋತನಾಗಿದ್ದೆಲ್ಲರೊಳು ವ್ಯಾಪಾರ ಮಾಡುತಿಹ ॥**
**ಹೋತ ಸರ್ವೇಂದ್ರಿಯಗಳೊಳು ಸಂ ।**
**ಪ್ರೀತಿಯಿಂದುಂಡುಣಿಸಿ ವಿಷಯು ನಿ ।**
**ವ್ರಾತ ದೇಶಗ ದೀಪದಂದದಲಿಪ್ಪ ನಿರ್ಭಯದಿ ॥ ೧೭ ॥**

ಶ್ರೀಪರಮಾತ್ಮನ ಮಾಹಾತ್ಮ್ಯವನ್ನ ಹೇಳತಾರೆ.

ತರುಣಿ – ನಿತ್ಯಯೌವನೆಯರಾದ, ಶ್ರೀವಲ್ಲಭಗೆ – ಲಕ್ಷ್ಮೀದೇವೇರ ಪತಿಯಾದ ಪರಮಾತ್ಮಗೆ, ಜೀವರು–ಸರ್ವಪ್ರಾಣಿಗಳು, ಚೇತನಪ್ರತಿಮೆಗಳು–ಚಲಪ್ರತಿಮಾ ಎಂತ ಕರಿಸೋವರಾಗತಾರೆ. ತದನ್ಯಗಳು, ಜಡ ಪ್ರತಿಮಾ ಎಂತ ತಾತ್ಪರ್ಯ. ಎಲ್ಲರೊಳು– ಸಮಸ್ತರಾದ ತ್ರಿವಿಧ ಜೀವರೊಳು ಬಿಂಬನಾಗಿ, ಓತಪ್ರೋತನಾಗಿದ್ದು–ತಂತುಗಳಿಂದ ಪಟದೋಪಾದಿಯಲ್ಲಿ ಎಂದರೆ, ವಸ್ತ್ರದೃಷ್ಟಾಂತ ದಾರಗಳೋಪಾದಿಯಲ್ಲಿ ಜೀವಾಂತರ್ಗತ, ಸ್ಥೂಲದೇಹಾಂತರ್ಗತದಲ್ಲಿ ಇದ್ದವನಾಗಿ, ಹೋತ – ಹೋತನಾಮಕ ಪರಮಾತ್ಮ, ಸರ್ವೇಂದ್ರಿಯಗಳೊಳು – ಸಮಸ್ತ ಇಂದ್ರಿಯಗಳಲ್ಲಿ, ವ್ಯಾಪಾರ ಮಾಡುತಿಹ – ಕಾರ್ಯ ಮಾಡೋವನಾಗಿದ್ದಾನೆ. ಸಂಪ್ರೀತಿಯಿಂದ–ಅತ್ಯಂತ ಪ್ರೀತಿಪೂರ್ವಕ, ವಿಷಯು –

ಇಂದ್ರಿಯಜನ್ಯ ವಿಷಯುಗಳ, ಉಂಡುಣಿಸಿ–ತನ್ನ ಸ್ವಾಖ್ಯಗಳ ತಾನು ಸ್ವೀಕರಿಸಿ, ತದನ್ಯ ಜೀವಯೋಗ್ಯಗಳ (ಜೀವಭುಕ್ತಗಳ), ಜೀವರಿಗೆ ಉಣಿಸಿದವನಾಗಿ, ನಿರ್ಭಯದಿ–ತಾನು ಭಯರಹಿತನಾಗಿ, ನಿರ್ವಾತದೇಶಗ–ಗಾಳಿ ಬಾರದೆ ಇದ್ದ ಪ್ರದೇಶದಲ್ಲಿ ಇರುವ, ದೀಪ ಪಂದದಲಿ–ದೀಪ ಹ್ಯಾಂಗೆ ಚಲನರಹಿತವಾಗಿ ಇರುವುದೋ ತದ್ವತ್, ಸರ್ವಾಧಿಷ್ಠಾನ ಗಳಲ್ಲಿ, ಇಪ್ಪ–ಇರುತ್ತಾನೆ, ಅಂದರೆ, ಸರ್ವತ್ರ ವ್ಯಾಪ್ತನಾದ ಪರಮಾತ್ಮಗೆ, ಅಧಿಷ್ಠಾನ ಗಳಿಗೆ ಛೇದ, ಭೇದ, ಭಯಾದಿಗಳು ಬಂದರೂ, ತದ್ಗತ ಶ್ರೀಪರಮಾತ್ಮ ನಿರ್ಭೀತನಾಗಿ ನಿರ್ಲಿಪ್ತನಾಗಿ, ನಿಶ್ಚಂಚಲನಾಗಿ ಇರುತ್ತಾನೆ ಎಂತ ತಾತ್ಪರ್ಯ.

**ಭೂತ ಸೋಕಿದ ಮಾನವನು ಬಹು ।**
**ಮಾತನಾಡುವ ತೆರದಿ ಮಹದ ।**
**ದ್ಭೂತ ವಿಷ್ಣ್ವಾವೇಶದಿಂದಲಿ ವರ್ತಿಪುದು ಜಗವು ॥**
**ಕೈತವೋಕ್ತಿಗಳಲ್ಲ ಶೇಷ ಫ ।**
**ಣಾತಪತ್ರಗೆ ಜೀವಪಂಚಕ ।**
**ವ್ರಾತವೆಂದಿಗು ಭಿನ್ನಪಾದಾಹ್ವಯದಿ ಕರೆಸುವುದು ॥ ೧೮ ॥**

ಶ್ರೀ ಪರಮಾತ್ಮನ ಮಾಹಾತ್ಮ್ಯ ಹೇಳತಾರೆ.

ಭೂತ ಸೋಕಿದ ಮಾನವನು–ಪಿಶಾಚಾವೇಶದಿಂದ ಯುಕ್ತನಾದ ಮನುಷ್ಯನು, ಬಹುಮಾತನಾಡುವತೆರದಿ– ತನ್ನ ನಿಜಯೋಗ್ಯತಾಕ್ಕೆ ಮೀರಿದ ಅನೇಕ ಮಾತುಗಳ ಆಡೋವನಾಗತಾನೆ. ಇದರೋಪಾದಿಯಲ್ಲಿ, ಜಗವು–ಈ ಬ್ರಹ್ಮಾಂಡದಲ್ಲಿ ವಿದ್ಯಮಾನ ರಾದ ತ್ರಿವಿಧ ಜೀವರು, ಮಹದದ್ಭೂತ–ಅತ್ಯಂತ ಅದ್ಭುತನಾದ ಭೂತಸಾಂಕೇತನಾದ, ವಿಷ್ಣ್ವಾವೇಶದಿಂದಲಿ–ಶ್ರೀ ಪರಮಾತ್ಮನ ವಿಭೂತಿರೂಪ ಆವೇಶದಿಂದ, ವರ್ತಿಪುದು– ಪ್ರವರ್ತಿಸುತ್ತಾ ಇರೋದಾಗಿ ಅದೆ. ಕೈತವೋಕ್ತಿಗಳಲ್ಲ–ಈ ಮಾತುಗಳು ಅಪದ್ಧವಲ್ಲ, ನಿಶ್ಚಯವು. ಶೇಷಫಣ–ಶೇಷದೇವರ ಫಣವೇ, ಆತಪತ್ರಗೆ–ಶ್ವೇತಛತ್ರಿಯಾಗಿ ಉಳ್ಳ ಶ್ರೀಪರಮಾತ್ಮಗೆ, ಜೀವಪಂಚಕವ್ರಾತವು – ಐದು ಜೀವರ ಸಮೂಹ, ಎಂದರೆ, ೧. ಋಜುಗಣರು, ೨. ರುದ್ರಾದಿ ಶೇಷಶತಸ್ಥಾಂತ, ೩. ಕರ್ಮಜರು ಪುಷ್ಕರಾಂತ, ೪. ಆಜಾನಜರು ದೇವಗಂಧರ್ವಾಂತ, ೫. ನಿರಂಶರು, ತೃಣಾಂತ. ಏತಾದೃಶ ಐದು ವಿಧ ಜೀವರ ಸಮೂಹವೂನೂ ತಮೋಯೋಗ್ಯರು, ನಿತ್ಯಸಂಸಾರಿಗಳೂನೂ, ಎಂದಿಗೂ– ಅನಾದ್ಯನಂತಕಾಲಕ್ಕೂ, ಭಿನ್ನಪಾದಾಹ್ವಯದಿ–ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂತ ನಾಲ್ಕುಪಾದಸಾಂಕೇತನಾಮದಿಂದ, ಕರಿಸುವುದು – ಕರಿಸೋದಾಗತದೆ ಎಂತ ತಾತ್ಪರ್ಯ.

**ದಿವಿಯೊಳಿಪ್ಪವು ಮೂರು ಪಾದಗ ।**
**ಳವನಿಯೊಳಗಿಹುದೊಂದು ಈ ವಿಧ ।**
**ಕವಿಭಿರೀಡಿತ ಕರೆಸುವ ಚತುಷ್ಪಾತು ತಾನೆಂದು ॥**

**ಇವನ ಪಾದಚತುಷ್ಟಯುಗಳನು ।**
**ಭವಕೆ ತಂದು ನಿರಂತರದಿ ಉ ।**
**ದ್ಧವನ ಸಖ ಸರ್ವಾಂತರಾತ್ಮಕನೆಂದು ಸ್ಮರಿಸುತಿರು ॥ ೧೯ ॥**

ಶ್ರೀ ಪರಮಾತ್ಮನ ಮಾಹಾತ್ಮ್ಯ ಹೇಳತಾರೆ.

ದಿವಿಯೊಳಿಪ್ಪವು ಮೂರು ಪಾದಗಳು – ೧. ಅನಿರುದ್ಧ, ೨. ಪ್ರದ್ಯುಮ್ನ, ೩. ಸಂಕರ್ಷಣ, ೪. ವಾಸುದೇವ ಅಂತ ನಾಲ್ಕು ರೂಪಗಳು, ನಾಲ್ಕು ಪಾದಸಾಂಕೇತಗಳು. ಈ ನಾಲ್ಕು ರೂಪಗಳು ದಿವಿಸಾಂಕೇತದಿಂದ, ೧. ಶ್ವೇತದ್ವೀಪ, ೨. ಅನಂತಾಸನ, ೩. ವೈಕುಂಠ, ಏತಾದೃಶ ಸ್ಥಾನತ್ರಯದೊಳು, ಮೂರು ಪಾದವಾದ ವಾಸುದೇವಾದಿ ಪ್ರದ್ಯುಮ್ನಾಂತ ಮೂರು ಭಗವದ್ರೂಪಗಳು ಇರೋವಾಗಿ ಅವೆ. ಅವನಿಯೊಳಗಿಹುದು ಒಂದು–ಬ್ರಹ್ಮಾಂಡದ ಒಳಗೆ ಭೂಲೋಕಾದಿಗಳು ಇರತಕ್ಕದ್ದು, ಅನಿರುದ್ಧರೂಪ ಒಂದು, ಇದು ಒಂದು ಪಾದ, ಅಂತು ನಾಲ್ಕು ಪಾದ ಸರಿ ಆಯಿತು. ಪ್ರಮಾಣ :– "ತ್ರಿಪಾದಸ್ಯಾಮೃತಂ ದಿವಿ ತ್ರಿಪಾದೂರ್ಧ್ವಮುದೈತ್ಪುರುಷಃ" ಎಂಬ ಶ್ರುತ್ಯರ್ಥ ಮೃತ್ಯುವಿನಿಂದ ರಹಿತರಾದ ಜೀವರು ಇರತಕ್ಕ ದಿವಿಸಾಂಕೇತವಾದ ಶ್ವೇತದ್ವೀಪಾದಿಗಳು, ಪಾದೋಸ್ಯ ಇಹಾಭವತ್, ಒಂದು ಪಾದ ಇಹಲೋಕದಲ್ಲಿ ಇರೋದಾಗಿ ಅದೆ. ಸಾಧನಸ್ಥಾನ ಒಂದು, ಮುಕ್ತಸ್ಥಾನಗಳು ಮೂರು, ಅಂತು ನಾಲ್ಕು ಸ್ಥಾನಗಳು. ಈ ವಿಧ–ಈ ಪ್ರಕಾರ, ಕವಿಭಿರೀಡಿತ–ಜ್ಞಾನಿಗಳಿಂದ ಸ್ತುತ್ಯನಾದ ಪರಮಾತ್ಮ, ಚತುಷ್ಪಾತು ತಾನೆಂದು – ನಾಲ್ಕು ಸ್ಥಾನಗತ ಜೀವರುಗಳ ರಕ್ಷಿಸತಕ್ಕವನೆಂದು, ಕರೆಸುವ–ಕರೆಸೋವನಾಗತಾನೆ. ಇವನ–ಗುಣಪೂರ್ಣನಾದ ಶ್ರೀ ನಾರಾಯಣನ, ಅಂಶಗಳಾದ, ಪಾದಚತುಷ್ಟಯುಗಳ–ಪಾದಸಾಂಕೇತ ನಾಲ್ಕು ಭಗವದ್ರೂಪಗಳ, ವ್ಯಾಪಾರಾದಿಗಳ, ನಿರಂತರದಿ–ಪ್ರತಿದಿನದಲ್ಲೂ, ಅನುಭವಕೆ ತಂದು–ಧ್ಯಾನೋಪಾಸನಾದಿಗಳಿಗೆ ತಂದುಕೊಂಡು, ಉದ್ಧವನ ಸಖ–ಪರಮಭಕ್ತನಾದ ಉದ್ಧವಗೆ ಸ್ನೇಹಿತನಾದ ಶ್ರೀಕೃಷ್ಣನು, ಸರ್ವಾಂತರಾತ್ಮಕನೆಂದು–ಸರ್ವಜೀವರ ಸ್ವರೂಪದಲ್ಲಿ ಅಂತರ್ಯಾಮಿಯಾಗಿದ್ದಾನೆಂತ, ಸ್ಮರಿಸುತಿರು–ಮಾಹಾತ್ಮ್ಯ ಜ್ಞಾನಪೂರ್ವಕ ಸುದೃಢಸ್ನೇಹದಿಂದ ಸ್ಮರಣೆಮಾಡೋವನಾಗಬೇಕು ಎಂತ ತಾತ್ಪರ್ಯ.

**ವಂಶ ಬಾಗಲು ಬೆಳೆಯೆ ಕಂಡು ನ ।**
**ರಾಂಶದಲಿ ಶೋಭಿಪುದು ಬಾಗದ ।**
**ವಂಶ ಪಾಶದಿ ಕಟ್ಟೆ ಏರುವ ಡೊಂಬ ಮಸ್ತಕಕೆ ॥**
**ಕಂಸಮರ್ದನ ದಾಸರಿಗೆ ನಿ ।**
**ಸ್ಸಂಶಯದಿ ವಂದಿಸದೆ ನಾ ವಿ ।**
**ದ್ವಾಂಸನೆಂದಹಂಕರಿಸೆ ಭವಗುಣದಿಂದ ಬಂಧಿಸುವ ॥ ೨೦ ॥**

ಭಗವದ್ಭಕ್ತರಿಗೆ ವಂದನ ಮಾಡದವಗೆ ಆಗತಕ್ಕ ಫಲ ಹೇಳತಾರೆ.

ವಂಶ–ಅಡವಿಯಲ್ಲಿ ಬೆಳೆದ, ವಾರೆ ಎನ್ನತಕ್ಕ ಬಿದಿರು, ಬಾಗಲು–ಸೊಟ್ಟಾಗಿ ಬಗ್ಗಿದ್ದಾಗಿ, ಬೆಳೆಯೆ–ಬೆಳೆದಿರತಕ್ಕ ಬಿದರನ್ನ, ಕಂಡು–ನೋಡಿದವರಾಗಿ, ಜನರು ಅದರನ್ನ ತಂದು 'ಆಂದೋಳಿಕ' ಎನ್ನತಕ್ಕ ಪಲ್ಲಕ್ಕಿಗೆ ಹಾಕತಾರೆ. ಆ ಪಲ್ಲಕ್ಕಿಗೆ ಹಾಕಿದ ಬಿದಿರು, ನರಾಂಶದಲಿ ಶೋಭಿಪುದು–ಪಲ್ಲಕ್ಕಿ ಹೊರತಕ್ಕ ಮನುಷ್ಯರ ಭುಜದಲ್ಲಿ ಶೋಭಿಸೋದಾಗ ತದೆ, ಆ ಬಿದಿರು ಬಗ್ಗಿ ಸೊಟ್ಟಾಗಿದ್ದ ಪ್ರಯುಕ್ತ. ಬಾಗದ ವಂಶ–ಬಗ್ಗದೇನೇ ಸರಿಯಾಗಿ ಋಜುತರವಾಗಿ ಬೆಳೆದು ಇರತಕ್ಕ ಬಿದಿರನ್ನ ತಂದವನಾಗಿ, ಡೊಂಬ–ಡೊಂಬನಾದವನು, ಪಾಶದಿ ಕಟ್ಟಿ–ತಾನು ಆಟ ಆಡೋ ನಿಮಿತ್ತವಾಗಿ ನಾಲ್ಕು ಪಾರ್ಶ್ವದಲ್ಲಿ, ಈ ಬಿದರನ್ನ ಕದಲದಂತೆ ಹಗ್ಗಗಳಿಂದ ಕಟ್ಟಿ ನಿಲ್ಲಿಸಿ, ಏರುವ ಮಸ್ತಕಕೆ-ಅದರ ಶಿಖರದಲ್ಲಿ ಏರಿ ಕೂತು ಆಟಗಳ ಆಡತಾನೆ. ತದ್ವತ್, ಭಗವದ್ಭಕ್ತರಿಗೆ ವಂದನಾದಿಗಳ ಮಾಡಿ ಶಿರಬಾಗಿದವ ದೇವತೆಗಳಿಂದ ಮಾನ್ಯನಾಗಿ ಪಲ್ಲಕ್ಕಿಗೆ ಹಾಕಿದ ಬಿದಿರಿನೋಪಾದಿಯಲ್ಲಿ ಇಹದಲ್ಲಿ ಉತ್ತಮನು ಎಂತ ಕರಿಸತಾನೆ. ಹಾಂಗಿಲ್ಲದೇ, ಕಂಸಮರ್ದನದಾಸರಿಗೆ–ಸೋದರಮಾವ ನಾದ ಕಂಸನ್ನ ಸಂಹಾರ ಮಾಡಿದ ಶ್ರೀ ಕೃಷ್ಣನಿಗೆ, ಪ್ರೀತಿವಿಷಯರಾದ ಭಗವದ್ಭಕ್ತರಿಗೆ, ನಿಸ್ಸಂಶಯದಿ ವಂದಿಸವೆ–ಕಾಪಟ್ಯರಹಿತನಾಗಿ ನಮಸ್ಕಾರಗಳ ಮಾಡದೆ, ನಾ ವಿದ್ವಾಂಸ ನೆಂದು ಅಹಂಕರಿಸೆ–ನಾನು ಪಂಡಿತನು ಎಂತ ಅಹಂಕಾರಯುಕ್ತನಾದರೆ, ಭವಗುಣದಿಂದ ಬಂಧಿಸುವ–ಡೊಂಬನೋಪಾದಿಯಲ್ಲಿ ಬಿದರನ್ನ ಹಗ್ಗಗಳಿಂದ ಕಟ್ಟಿದೋಪಾದಿಯಲ್ಲಿ ದೇವರು ಅಹಂ ಎಂಬ ಜ್ಞಾನವಿಶಿಷ್ಟನಾದವಗೆ ಎಂದಿಗೂ ಮೋಚನ ಇಲ್ಲದ ಸಂಸಾರದಲ್ಲಿ ಇಟ್ಟು ದುಃಖಪಡಸತಾ ಇರುತ್ತಾನೆ. (ಗುಣ ಎಂದರೆ ಹಗ್ಗ ಎಂತ ತಾತ್ಪರ್ಯ.)

**ಜ್ಯೋತಿರೂಪಗೆ ಪ್ರತಿಮೆಗಳು ಸಾಂ ।**
**ಕೇತಿಕಾರೋಪಿತ ಸುಪೌರುಷ ।**
**ಧಾತು ಸಪ್ತಕ ಧೈರ್ಯ ಶೌರ್ಯೌದಾರ್ಯ ಚಾತುರ್ಯ ॥**
**ಮಾತು ಮಾನ ಮಹತ್ತ್ವ ಸಹನ ಸು ।**
**ನೀತಿ ನಿರ್ಮಲದೇಶ ಬ್ರಾಹ್ಮಣ ।**
**ಭೂತ ಪಂಚಕ ಬುದ್ಧಿ ಮೊದಲಾದಿಂದ್ರಿಯಸ್ಥಾನ ॥ ೨೧ ॥**

ಶ್ರೀ ಪರಮಾತ್ಮನಿಗೆ ಅಧಿಷ್ಠಾನಗಳಾದ ಪ್ರತಿಮಾಸ್ಥಾನಗಳು ದಾವುವೆಂದರೆ, ಹೇಳತಾರೆ.

ಜ್ಯೋತಿರೂಪಗೆ–ಜ್ಞಾನಸ್ವರೂಪಿಯಾದ ಪರಮಾತ್ಮಗೆ, ಪ್ರತಿಮೆಗಳು–ಪ್ರತಿಮೆಗಳೋಪಾದಿಯಲ್ಲಿ, ಆರೋಪಿತ–ಆರೋಪಿತದಿಂದ, ಸಾಂಕೇತಿಕ–ಸಾಂಕೇತಿಕಗಳಾದದ್ದು, ಸುಪೌರುಷ–ನಿರ್ದುಷ್ಟವಾದ ಶ್ರೀ ವೇದವ್ಯಾಸದೇವರಿಂದ ರಚಿತವಾದ ಪೌರುಷೇಯವಾದ ಪುರಾಣಗಳು, ಧಾತುಸಪ್ತಕ–ತ್ವಗಾದಿ ಸಪ್ತಧಾತುಗಳಿಂದ ಯುಕ್ತವಾದ ಸ್ಥೂಲಶರೀರ, ಮಹತ್ತ್ವ–ಶ್ರೇಷ್ಠವಾದ ಅವ್ಯಕ್ತತತ್ತ್ವ ಆರಂಭಮಾಡಿ ಅಹಂಕಾರತತ್ತ್ವದವರೆಗೂ ತತ್ತ್ವತ್ರಯಗಳು. ಬುದ್ಧಿ ಮೊದಲಾದ – ಬುದ್ಧಿಯೇ ಮೊದಲಾದ ಮನೋವೃತ್ತಿಗಳು,

ಇಂದ್ರಿಯ–ದಶೇಂದ್ರಿಯಗಳು, ಭೂತಪಂಚಕ–ತನ್ಮಾತ್ರಸಹಿತ ಪೃಥಿವ್ಯಾದಿ ಪಂಚಭೂತ ಗಳು, ಧೈರ್ಯ–ಮನೋಧರ್ಮಗಳಾದ ಧೈರ್ಯ, ಶೌರ್ಯ–ಪರಾಕ್ರಮ, ಔದಾರ್ಯ–ದಾತೃತ್ವ, ಚಾತುರ್ಯ–ಬುದ್ಧಿಕುಶಲತೆ, ಮಾತು–ಲೋಕಕ್ಕೆ ಸಮ್ಮತವಾದ ವಚನಗಳು, ಮಾನ–ಗೌರವ, ಸಹನ–ಶಮದಮಾದಿ ಸಂಪತ್ತು, ಸುನೀತಿ–ವೇದಶಾಸ್ತ್ರಾನುಸಾರಿ ಯಾದ, ಸಮೀಚೀನವಾದ ನೀತಿ, ನಿರ್ಮಲದೇಶ–ಕಶ್ಮಲರಹಿತವಾದ ಪರಿಶುದ್ಧಸ್ಥಳ, ಬ್ರಾಹ್ಮಣ–ಬ್ರಹ್ಮಜ್ಞಾನಿಯಾದ ಬ್ರಾಹ್ಮಣ, ಮೊದಲಾದ–ಇವುಗಳೇ ಇನ್ನೂ ಯೋಗ್ಯ ವಾಗಿ ಇರತಕ್ಕ, ಸ್ಥಾನ–ಸ್ಥಾನಗಳು, ಎಂದರೆ, ಸನ್ನಿಧಾನವಿಶೇಷವಾಗಿ ಇರತಕ್ಕ ಸ್ಥಾನ ಗಳೆಂದು ಅರ್ಥ. ಮುಖ್ಯವಾಗಿ ಸಾಧನಗಳು ಆಗಬೇಕಾದರೆ, ಈ ಪೂರ್ವೋಕ್ತಗಳಿಂದಲೇ ಆಗಬೇಕು. ಅತ ಏವ, ಜ್ಯೋತಿರೂಪನಾದ ಶ್ರೀಹರಿಗೆ ಇವುಗಳು ಮುಖ್ಯಾಧಿಷ್ಠಾನ ಗಳೆಂದು ತಾತ್ಪರ್ಯ.

**ಜೀವರಾಶಿಯೊಳಮೃತ ಶಾಶ್ವತ ।**
**ಸ್ಥಾವರಗಳೊಳು ಸ್ಥಾಣುನಾಮಕ ।**
**ನಾವಕಾಲದಲಿಪ್ಪನಜಿತಾನಂತನೆಂದೆನಿಸಿ ॥**
**ಗೋವಿದಾಂಪತಿ ಗಾಯನಪ್ರಿಯ ।**
**ಸಾವಯವ ಸಾಹಸ್ರನಾಮ ಪ ।**
**ರಾವರೇಶ ಪವಿತ್ರಕರ್ಮ ವಿಪಶ್ಚಿತನು ಸಾಮ ॥ ೨೨ ॥**

ಶ್ರೀ ಪರಮಾತ್ಮನ ಮಾಹಾತ್ಮ್ಯ ಹೇಳತಾರೆ.

ಅಮೃತ–ಮೃತರಹಿತವಾದ, ಜೀವರಾಶಿಯೊಳು–ಸೃಜ್ಯಾಸೃಜ್ಯ ಜೀವರ ಸಮೂಹ ದೊಳು, ಶಾಶ್ವತ–ಅವಿಯೋಗನಾಗಿ, ಶಾಶ್ವತನಾಗಿರುತ್ತಾನಾದ್ದರಿಂದ ಶ್ರೀ ಪರಮಾತ್ಮ 'ಶಾಶ್ವತ' ಎಂತ ಕರಿಸತಾನೆ. ಸ್ಥಾವರಗಳೊಳು–ಸ್ಥಾವರಸಾಂಕೇತವಾದ ಪಂಚಭೂತಾತ್ಮಕ ಸ್ಥಾವರಗಳಿಂದ ನಿರ್ಮಿತವಾದ ಸ್ಥೂಲಶರೀರಗಳೊಳು, 'ಸ್ಥಾಣು' ಎಂಬ ನಾಮದಿಂದ ಕರಿಸತಾನೆ. ಆವಕಾಲದಲಿಪ್ಪ–ಜೀವರಲ್ಲಿ ಉಪಾದಾನ ಮೂಲಜಡಪ್ರಕೃತಿಯಲ್ಲಿ ಅನಾದಿ ಕಾಲದಿಂದ ಇದ್ದಾನೆ. ಈ ಪ್ರಕಾರ ಇರುವಂಥಾ, ಸ್ಥಾಣುನಾಮಕನು–ಪೂರ್ವೋಕ್ತ ಪ್ರಕೃತಿನಿರ್ಮಿತ ದೇಹದಲ್ಲಿದ್ದು ಸ್ಥಾಣುನಾಮಕನೆಂದು ಕರಿಸತಾನೆ. ಅಜಿತಾನಂತ ನೆಂದೆನಿಸಿ–ಅನ್ಯರಿಂದ ತಾನು ಸೋಲದೇ ಅಪರಿಚ್ಛಿನ್ನಪರಾಕ್ರಮಿ ಎಂತೆನಿಸಿ, ಇನ್ನೂ ಎಂಥಾವನೆಂದರೆ, ಗೋವಿದಾಂಪತಿ–ವೇದಾರ್ಥಗಳ ನಿರ್ದೋಷವಾಗಿ ತಿಳಿದವರಿಗೆ ಯಜ ಮಾನನಾದವನು, ಗಾಯನಪ್ರಿಯ–ತನ್ನ ಮಾಹಾತ್ಮ್ಯವನ್ನ ಗಾನಮಾಡತಕ್ಕವರಿಗೆ ಪ್ರೀತನಾದವನು, ಸಾವಯವ–ಸರ್ವಾಧಿಷ್ಠಾನದಲ್ಲಿ "ಸರ್ವತಃ ಪಾಣಿಪಾದಾಭ್ಯಾಂ" ಎಂಬ ವಚನಾನುಸಾರ ತನ್ನ ಸಾಕಾರರೂಪದಿಂದ ಅಂತರ್ಯಾಮಿಯಾಗಿ ಇರತಕ್ಕವ, ಸಾಹಸ್ರನಾಮ–ಅನಂತನಾಮ ಉಳ್ಳವ, ಪರಾವರೇಶ – ಪರ–ಬ್ರಹ್ಮಾದಿಗಳಿಗೆ, ವರ–

ಉತ್ತಮರಾದ ರಮಾದೇವೇರಿಗೆ, ಈಶ–ಸ್ವಾಮಿಯಾದವ, ಪವಿತ್ರಕರ್ಮ–ತನ್ನ ಭಕ್ತರ ಪಾಪಗಳ ಪರಿಹಾರಮಾಡತಕ್ಕ ಶುದ್ಧವಾದ ವ್ಯಾಪಾರವುಳ್ಳವ, ವಿಪಶ್ಚಿತನು–ಜ್ಞಾನ ಸ್ವರೂಪಿಯಾದವ, ಸಾಮ–"ವೇದಾನಾಂ ಸಾಮವೇದೋಸ್ಮಿ" ಎಂಬ ವಚನಾನುಸಾರ ಸಾಮಗಾನಪ್ರಿಯನಾದವನು ಎಂತ ತಾತ್ಪರ್ಯ.

**ಮಾಧವನ ಪೂಜಾರ್ಥವಾಗಿ ನಿ ।**
**ಷೇಧಕರ್ಮವ ಮಾಡಿ ಧನ ಸಂ ।**
**ಪಾದಿಸಲು ಸತ್ಪುಣ್ಯಕರ್ಮಗಳೆನಿಸಿಕೊಳುತಿಹುವು ॥**
**ಸ್ವೋದರಂಭರಣಾರ್ಥ ನಿತ್ಯದಿ ।**
**ಸಾಧುಕರ್ಮವ ಮಾಡಿದರು ಸರಿ ।**
**ಐದುವನು ದೇಹಾಂತರವ ಸಂದೇಹವಿನಿತಿಲ್ಲ ॥ ೨೩ ॥**

ದೇವಬ್ರಾಹ್ಮಣರ ಪೂಜಾರ್ಥವಾಗಿ ನಿಷೇಧಕರ್ಮವನ್ನು ಆಚರಿಸಬಹುದೆಂದು ಹೇಳುತಾರೆ.

ಮಾಧವನ ಪೂಜಾರ್ಥವಾಗಿ – ಶ್ರೀ ಪರಮಾತ್ಮನ, ಅವನ ಭಕ್ತರ ಆರಾಧನ ಮಾಡೋ ಉದ್ದಿಶ್ಯದಿಂದ, ಅಂದರೆ ಉದ್ದಿಶ್ಯವಾಗಿ, ನಿಷೇಧಕರ್ಮವ ಮಾಡಿ–ಅಂದರೆ, ಬ್ರಾಹ್ಮಣರಿಗೆ ನಿಷಿದ್ಧವಾದ ಕೃಷಿ, ವ್ಯಾಪಾರವೇನು, ಕ್ಷಾತ್ರಧರ್ಮ ವ್ಯಾಪಾರವೇನು, ಈ ಕಾರ್ಯಗಳ ಮಾಡಿ, ಇದರಲ್ಲಿ ಶುದ್ಧವಾಗಿ ಪ್ರಾಣಿಹಿಂಸೆ ಮೊದಲಾದ ಅಕೃತ್ಯ ಮಾಡ ಧಾಂಗೆ, ಧನ ಸಂಪಾದಿಸಲು–ದ್ರವ್ಯಾರ್ಜನೆ ಮಾಡಲು, ಸತ್ಪುಣ್ಯಕರ್ಮಗಳೆನಿಸಿಕೊಳು ತಿಹುವು–ಈ ಕಾರ್ಯಗಳು ಪುಣ್ಯಕರ್ಮಗಳಾಗುತ್ತವೆ. ಹ್ಯಾಂಗೆಂದರೆ, ಈ ದ್ರವ್ಯ ಗಳಿಂದ ಶ್ರೀ ಪರಮಾತ್ಮನ್ನ, ಅವನ ಭಕ್ತರ ಪೂಜಾದಿಗಳ, ಅಹಂಮಮತಾರಹಿತನಾಗಿ ಶ್ರೀಶಪ್ರೇರಣಾನುಸಾರ ಮಾಡುತ್ತೇನೆಂಬ ಜ್ಞಾನವಿರುತ್ತದೆ. ಆದಕಡಿಯಿಂದಲೂ ಕೊಡು ವವನು, ತೆಗೆದುಕೊಂಬುವನು ಶ್ರೀ ಪರಮಾತ್ಮನು ಎಂತ ಜ್ಞಾನವಿರುವುದರಿಂದಲೂ, ಈ ಕಾರ್ಯಗಳು ಪುಣ್ಯಕರ್ಮಗಳೇ ಆಗಿ ಮಹಾಫಲಕ್ಕೆ ಕಾರಣವಾಗತವೆ. ಸ್ವೋದರಂ ಭರಣಾರ್ಥ ನಿತ್ಯದಿ–ಸದಾ ಕೇವಲ ಸಂಸಾರದಲ್ಲಿ ಲೋಲನಾಗಿ, ಅಹಂಮಮತಾಜ್ಞಾನ ಯುಕ್ತನಾಗಿ ಡಾಂಭಿಕತನದಿಂದ ಜನಮೆಚ್ಚಿಗೆಗಾಗಿ, ದೇವರಲ್ಲಿ, ಭಗವದ್ಭಕ್ತರಲ್ಲಿ ಉದಾಸೀನ ಜ್ಞಾನದಿಂದ, ತನ್ನ ಪತ್ನೀಪುತ್ರಾದಿಗಳೂ, ತಾನೂ ಬದುಕಬೇಕೆಂಬ ಕೇವಲ ಕಪಟದಿಂದ ಯುಕ್ತನಾಗಿ, ಸಾಧುಕರ್ಮವ ಮಾಡಿದರು ಸರಿ – ವೇದೋಕ್ತಾನುಸಾರ ನಿರ್ಬಂಧವಾಗಿ ಭಗವತ್ಪೂಜಾ ಜಪತಪಾದಿಗಳು ಮಾಡಿ, ಬಹಿಃ ಸಜ್ಜನರ ನಟನೆಯಂತೆ ತೋರುತ್ತ, ದ್ರವ್ಯಾರ್ಜನೆಮಾಡಿ ಸಾಧನಮಾಡಿದರೆ, ಐದುವನು ದೇಹಾಂತರವ–ಇದ ರಿಂದ ನರಕಾದ್ಯನರ್ಥಗಳು ಅನುಭವಿಸಿ ಮತ್ತೂ ಜನ್ಮಗಳು ಧರಿಸಿ ದುಃಖಪಡುತ್ತಾ ಇರತಾನೆ, ಸಂದೇಹವಿನಿತಿಲ್ಲಾ – ಆದಕಡಿಯಿಂದ ಈ ವಿಷಯಕ್ಕೆ ಸಂದೇಹವಿಲ್ಲೆಂತ ತಾತ್ಪರ್ಯ.

**ವಿಶೇಷಾರ್ಥ :**–ನಿಷೇಧ ಕರ್ಮವ ಮಾಡಿ ಎಂದರೆ, ಬ್ರಾಹ್ಮಣಗೆ ಹೇಳಿರುವ ವಿಧಿಗಳೊಳಗೆ ಮುಖ್ಯವಾಗಿ ಮಾಡತಕ್ಕದ್ದರನ್ನ ಮಾಡದೇ, ನಿಷಿದ್ಧ ಪದಾರ್ಥಗಳ ಭೋಜನ, ಅಗಮ್ಯಾಗಮನ ಮೊದಲಾದ್ದು ಮಾಡಿ ಭಗವದಾರಾಧನ ಮಾಡಧಾಂಗೆ, ಸ್ನಾನ ಪೂಜಾದಿಗಳು ತಪ್ಪಿದರೂನೂ ಪರಮಾತ್ಮನಲ್ಲಿ, ತದ್ಭಕ್ತರಲ್ಲಿ, ದ್ವೇಷ, ಉದಾಸೀನ ವಿಲ್ಲದೇ ಸಂಸಾರಿಕ ಧರ್ಮದಿಂದ ಇರುವದೂನೂ, "ವೃದ್ಧೌ ಚ ಮಾತಾಪಿತರೌ ಪುತ್ರಾಃ ಕೇವಲಬಾಲಿಶಾಃ । ಅಪ್ಯಕಾರ್ಯಶತಂ ಕೃತ್ವಾ ಭರ್ತವ್ಯಾ ಮನುರಬ್ರವೀತ್ ॥ ಎಂಬ ಪ್ರಮಾಣಾನುಸಾರದ ಅರ್ಥದಿಂದ ಅನುಸಂಧಾನಯುಕ್ತನಾಗಿ ಪ್ರವರ್ತಿಸಬೇಕು ಎಂತ ತಾತ್ಪರ್ಯ.

**ಅಪಗತಾಶ್ರಯ ಎಲ್ಲರೊಳಗಿ ।**
**ದ್ದುಪಮನೆನಿಪಾನುಪಮರೂಪನು ।**
**ಶಫರಕೇತನಜನಕ ಮೋಹಿಪ ಮೋಹಕನ ತೆರದಿ ॥**
**ತಪನಕೋಟಿಸಮಪ್ರಭಾಸಿತ ।**
**ವಪುವೆನಿಪ ಕೃಷ್ಣಾದಿ ರೂಪಕ ।**
**ವಿಪಗಳಂತುಂಡುಣಿಪ ಸರ್ವತ್ರದಲಿ ನೆಲೆಸಿದ್ದು ॥ ೨೪ ॥**

ಶ್ರೀ ಪರಮಾತ್ಮನ ಮಾಹಾತ್ಮ್ಯ ಹೇಳತಾರೆ.

ಶಫರಕೇತನಜನಕ–ಮತ್ಸ್ಯಧ್ವಜನಾದ ಮನ್ಮಥನ ತಂದಿಯಾದ, ಅಪಗತಾಶ್ರಯ–ಅನ್ಯಾಧೀನನಲ್ಲದಂಥಾ, ಅನುಪಮರೂಪನು – ಉಪಮಾನರಹಿತವಾದ ಸೌಂದರ್ಯ ವಾದ ರೂಪ, ಆಕಾರವುಳ್ಳವನಾದ ಶ್ರೀ ಪರಮಾತ್ಮ, ಎಲ್ಲರೊಳಗಿದ್ದು–ಸರ್ವಜೀವರ ಸ್ವರೂಪದಲ್ಲಿ, ಬಾಹ್ಯಸ್ಥೂಲದೇಹೇಂದ್ರಿಯಾದಿಗಳಲ್ಲಿ ಇದ್ದು, ಉಪಮನೆನಿಪ–ತಾನು ಆಯಾ ಅಧಿಷ್ಠಾನದನುಸಾರ ಅದಕ್ಕೆ ಸರಿಯಾಗಿ ತದಾಕಾರ ತನ್ನಾಮದಿಂದ ಇರತಕ್ಕವನು ಎಂತೆನಿಸಿ, ಮೋಹಕನ ತೆರದಿ – ವೇಷಧಾರಿಯಾದ ಪುರುಷ ಮೋಹಪಡಿಸುವಂತೆ, ಮೋಹಿಪ–ಜೀವರನ್ನ ಮೋಹಪಡಿಸತಾನೆ ಹೊರತು, ತಾನು ವೇಷಧಾರಿಯಾದ ಪುರುಷ ನಂತೆ ಆನಂದಪೂರ್ಣನಾಗಿರುತ್ತಾನೆ. ತಪನಕೋಟಿಸಮಪ್ರಭ–ಅನಂತ ಸೂರ್ಯಪ್ರಕಾಶ ಯುಕ್ತನಾದ, ರಕ್ತವರ್ಣವಿಶಿಷ್ಟನಾದ ಮೂಲರೂಪೀ ನಾರಾಯಣ ೧, ಸಿತವಪುವೆನಿಪ–ಈ ನಾರಾಯಣನಿಂದ ಅಭಿವ್ಯಕ್ತಿಯಾದ ಅಭಿನ್ನವಾದ ಶುಭ್ರವರ್ಣವಿಶಿಷ್ಟವಾದ ವಾಸುದೇವರೂಪ ೨, ಕೃಷ್ಣಾದಿರೂಪಕ–ಸ್ವರ್ಣವರ್ಣ ಸಂಕರ್ಷಣರೂಪ ೩, ಪೀತವರ್ಣ ಪ್ರದ್ಯುಮ್ನರೂಪ ೪, ಕೃಷ್ಣವರ್ಣ ಅನಿರುದ್ಧರೂಪ ೫, ಈ ರೀತ್ಯಾ ಪಂಚರೂಪಗಳಿಂದ ದೇಹದಲ್ಲಿ ಇದ್ದವನಾಗಿ, ವಿಪಗಳಂತೆ–ಪಕ್ಷಿಗಳಂತೆ, ಅಂದರೆ, ಪಕ್ಷಿಗಳು ತಾವು ತಾವು ಭುಜಿಸತಕ್ಕ ಪದಾರ್ಥಗಳನ್ನು ತಾವು ತೊಗೊಂಡು ತಮ್ಮ ಪಿಳ್ಳಿಗಳ ಭಾಗ ಅವವುಗಳ ಬಾಯಿವಳಗೆ ಇಟ್ಟು ತಿನಿಸೋವಾಗತವೆ. ಇದರಂತೆ, ಸರ್ವತ್ರದಲಿ ನೆಲೆಸಿದ್ದು–ಸರ್ವ ಪ್ರಾಣಿಗಳ ಸ್ಥೂಲದೇಹ, ಇಂದ್ರಿಯಗಳಲ್ಲಿ ಅಂತರ್ಯಾಮಿಯಾಗಿದ್ದು, ಉಂಡುಣಿಪ–ತನ್ನ

ಸ್ವಾಖ್ಯಗಳ ತಾನು ಸ್ವೀಕರಿಸಿ, ಜೀವಯೋಗ್ಯವಾದದ್ದರನ್ನ ಜೀವರಿಗೆ ಉಣಿಸತಾನೆ, ಎಂತ ತಾತ್ಪರ್ಯ.

**ಅಡವಿಯೊಳು ಬಿತ್ತದಲೆ ಬೆಳೆದಿಹ ।**
**ಗಿಡದ ಮೂಲಿಕೆ ಸಕಲ ಜೀವರ ।**
**ಒಡಲೊಳಿಪ್ಪಾಮಯವ ಪರಿಹರಗೈಸುವಂದದಲಿ ॥**
**ಜಡಜಸಂಭವಜನಕ ತ್ರಿಜಗ ।**
**ದ್ವಡೆಯ ಸಂತೈಸೆನಲು ಅವರಿ ।**
**ದ್ದೆಡೆಗೆ ಬಂದೊದಗುವನು ಭಕ್ತರ ಭಿಡೆಯ ಮೀರದಲೆ ॥ ೨೫ ॥**

ಶ್ರೀ ಪರಮಾತ್ಮನ ಮಾಹಾತ್ಮ್ಯವನ್ನೇ ಹೇಳತಾರ.

ಅಡವಿಯೊಳು ಬಿತ್ತದಲೆ ಬೆಳೆದಿಹ–ಅರಣ್ಯದಲ್ಲಿ ಒಬ್ಬರಿಂದಲೂ ಬಿತ್ತದಲೇ ತನ್ನ ಸ್ವೇಚ್ಛಾನುಸಾರ ಬೆಳದಿರುವ, ಗಿಡದ ಮೂಲಿಕೆ–ಗಿಡದ ಮೂಲಕೀನ ತಂದು ವ್ಯಾಧಿಗ್ರಸ್ಥನಾದವ ಸೇವನ ಮಾಡಿದರೆ, ಪರಿಹರಗೈಸುವಂದದಲಿ–ರೋಗ ಪರಿಹಾರ ಆಗೋಪಾದಿಯಲ್ಲಿ, ಜಡಜಸಂಭವಜನಕ–ಕಮಲೋದ್ಭವನಾದ ಬ್ರಹ್ಮದೇವರ ತಂದಿಯಾದವ, ಗಿಡದ ಮೂಲಿಕೆ ಸದೃಶನಾದವ, ಸಕಲಜೀವರ ಒಡಲೊಳಿಪ್ಪ–ಸಮಸ್ತ ಜೀವರಾದ ಭಕ್ತರ ಸಮೂಹದಲ್ಲಿ ಇರತಕ್ಕ, ಆಮಯವ–ಅಹಂಮಮತ, ಕಾಮಕ್ರೋಧಾದಿ ರೋಗಗಳ, ಅಡವಿಯಿಂದ ಮೂಲಿಕಿ ತಂದು, ರಸಪಾನಕ್ಕೆ ಸದೃಶವಾಗಿ ಮೂಲಿಕಿಸದೃಶನಾದ, ತ್ರಿಜಗದ್ವಡೆಯ– ಚತುರ್ದಶಭುವನಕ್ಕೆ ಸ್ವಾಮಿಯಾದ ಶ್ರೀ ಪರಮಾತ್ಮನ್ನ ಹೃದಯಾಕಾಶಕ್ಕೆ ತಂದು ಅವನ ಪಾದಮಹಾತ್ಮ್ಯ ಎಂಬ ರಸಪಾನಮಾಡಿ, ಸಂತೈಸೆನಲು–ಸಂರಕ್ಷಣ ಮಾಡೆನಲು, ಅಹಂ, ಮಮತಾ, ಕಾಮಕ್ರೋಧಾದಿ ರೋಗಗಳ ಪರಿಹಾರಮಾಡಿ, ಭಕ್ತರ ಭಿಡೆಯ ಮೀರದಲೆ–ಭಕ್ತರ ದಾಕ್ಷಿಣ್ಯ ಮೀರಧಾಂಗೆ, ಅವರಿದ್ದೆಡೆಗೆ–ಅವರು ಉಪಾಸನ ಮಾಡತಕ್ಕ ಪ್ರತಿಮಾಂತರ್ಗತನಾಗಿ ಅಥವಾ ಅವರ ಮನಸ್ಸಿಗೆ ಸಮೀಪವಾಗಿನ್ನು, ಬಂದೊದಗುವನು–ಪ್ರತ್ಯಕ್ಷನಾಗಿ ಉದ್ಧಾರ ಮಾಡುವನು ಎಂತ ತಾತ್ಪರ್ಯ,

**ಶ್ರೀನಿಕೇತನ ತನ್ನವರ ದೇ ।**
**ಹಾನುಬಂಧಿಗಳಂತೆ ಅನ್ನವ ।**
**ಧಾನದಲಿ ನೆಲೆಸಿಪ್ಪ ಸರ್ವದ ಸಕಲ ಕಾಮದನು ॥**
**ಏನು ಕೊಟ್ಟದು ಭುಂಜಿಸುತ ಮ ।**
**ದ್ದಾನೆಯಂದದಿ ಸಂಚರಿಸು ಮ ।**
**ತ್ತೇನು ಬೇಡದೆ ಭಜಿಸುತಿರು ಅವನಂಘ್ರಿಕಮಲಗಳ ॥ ೨೬ ॥**

ಪೂರ್ವೋಕ್ತ ಶ್ರೀ ಪರಮಾತ್ಮನ್ನ ನಿಷ್ಕಾಮನಾಗಿ ಐಹಿಕ ವಿಷಯಗಳ ಅಪೇಕ್ಷಿಸದೆ, ಭಜಿಸುತಿರು ಎಂತ ಹೇಳತಾರೆ.

ಶ್ರೀನಿಕೇತನ–ಅಪರೋಕ್ಷಿಗಳಾದ ತನ್ನ ಭಕ್ತರನ್ನ, ಶ್ರೀ–ಶ್ರೀದೇವೇರಿಂದ ಅಭಿಮನ್ಯ ಮಾನವಾದ, ನಿಕೇತನ–ವೈಕುಂಠಾಖ್ಯ ಮನಿಯಲ್ಲಿ, ಲಿಂಗಭಂಗಾನಂತರದಲ್ಲಿಟ್ಟು, ಸರ್ವದ–ಸದಾಸರ್ವಕಾಲದಲ್ಲಿ ಅವರವರ ಸ್ವರೂಪಯೋಗ್ಯತಾನುಸಾರ ಸ್ವರೂಪಾನಂದಗಳ ಉಣಿಸುತ್ತಾ, ಸಕಲ ಕಾಮುದನು–ಮುಕ್ತರಾದವರು ತಮ್ಮ ತಮ್ಮ ಯೋಗ್ಯತಾನುಸಾರ ಕಾಮನಾ ಮಾಡಿದ್ದು, ಸ್ಥಿತಿಕಾಲದ ಕಾಮನಾ ವ್ಯರ್ಥ ಮಾಡಿದಂತೆ ಮಾಡದೆ, ಕಾಮಿತ ಗಳ ಕೊಡುತ್ತಾ, ಅವ್ಯವಧಾನದಲಿ ನೆಲೆಸಿಪ್ಪ–ವ್ಯವಧಾನ ಸಾಂಕೇತದಿಂದ ವಿಯೋಗ ರಹಿತನಾಗಿ, ಬಿಂಬನಾಗಿ, ಆವಾಸನಾಗಿದ್ದು ಮತ್ತು ಅವ್ಯವಧಾನದಲ್ಲಿ ಸಾವಕಾಶ ವಿಲ್ಲದೇನೇ ಕಾಮಿತಗಳ ಕೊಡುತ್ತಾ, ತನ್ನವರ–ತನ್ನ ಭಕ್ತರ, ದೇಹಾನುಬಂಧಿಗಳಂತೆ– ಸ್ಥಿತಿಕಾಲದಲ್ಲಿ ದೇಹಾನುಬಂಧಿಗಳಾದ ತತ್ತ್ವಾಭಿಮಾನಿ ದೇವತಾರೂಪಗಳಿಂದ ದೇಹೇಂದ್ರಿಯಾದಿಗಳ ರಕ್ಷಿಸುತಿರುತ್ತಾನೆ; ಪ್ರಾಕೃತ ದೇಹಾನುಬಂಧಿಗಳೆಂತಲೂ ತಾತ್ಪರ್ಯವೆ. ಇಂಥಾ ಪರಮಾತ್ಮ, ಏನು ಕೊಟ್ಟದು ಭುಂಜಿಸುತ – ಸುಖವೋ, ದುಃಖವೋ, ಏನು ಕೊಡತಾನೋ ಅದರನ್ನ ಜ್ಞಾನ, ಭಕ್ತಿ, ವೈರಾಗ್ಯಪೂರ್ವಕ ಭುಂಜಿಸುತ್ತಾ, ಮತ್ತೇನು ಬೇಡದೆ–ತದ್ವ್ಯತಿರಿಕ್ತ ಮತ್ತೇನೂ ಬೇಡದೆ, ಜ್ಞಾನ, ಭಕ್ತಿ, ವೈರಾಗ್ಯಗಳ ಮಾತ್ರ ಬೇಡುತ್ತಾ, ಅವನಂಘ್ರಿಕಮಲಗಳ–ಶ್ರೀ ಪರಮಾತ್ಮನ ಪಾದಕಮಲದ್ವಂದಗಳ, ಭಜಿಸು ತಿರು–ಭಜನೆಮಾಡುತ್ತಿರು, ಮದ್ದಾನೆಯಂದದಿ ಸಂಚರಿಸು–ನಿರ್ಲಿಪ್ತನಾಗಿ ಮದಹಿಡಿದ ಆನಿಯೋಪಾದಿಯಲ್ಲಿ, ನಿರ್ಭಯದಿ ಸಂಚರಿಸು, ಶ್ರೀ ಪರಮಾತ್ಮ ಸಂರಕ್ಷಿಸತಾನೆಂತ ತಾತ್ಪರ್ಯ.

**ಬೇಡದಲೆ ಕೊಡುತಿಪ್ಪ ಸುರರಿಗೆ ।**
**ಬೇಡಿದರೆ ಕೊಡುತಿಹನು ನರರಿಗೆ ।**
**ಬೇಡಿ ಬಳಲುವ ದೈತ್ಯರಿಗೆ ಕೊಡನೊಮ್ಮೆ ಪುರುಷಾರ್ಥ ॥**
**ಮೂಢರನುದಿನ ಧರ್ಮ ಕರ್ಮವ ।**
**ಮಾಡಿದರು ಸರಿ ಅಹಿಕಫಲಗಳ ।**
**ನೀಡಿ ಉನ್ಮತ್ತರನು ಮಾಡಿ ಮಹಾನಿರಯವೀವ ॥ ೨೭ ॥**

ಪರಮಾತ್ಮನ ಮಾಹಾತ್ಮ್ಯ ಹೇಳತಾರೆ.

ಪುರುಷಾರ್ಥ–ಕ್ಷರಪುರುಷರಾದ ಮುಕ್ತಿಯೋಗ್ಯ, ತಮೋಯೋಗ್ಯ, ನಿತ್ಯಸಂಸಾರಿ ಗಳೆಂತ ತ್ರಿವಿಧಪುರುಷರು. ಇವರಲ್ಲಿ ಮುಕ್ತಿಯೋಗ್ಯರಲ್ಲಿ ೧. ದೇವತೆಗಳು, ೨. ಸಾಂಶರು, ೩. ಮಾನುಷರು, ೪. ನಿರಂಶರು ಅಂತ ನಾಲ್ಕು ವಿಧ. ಈ ನಾಲ್ಕು ವಿಧ ಪುರುಷರಿಗೆ ಸುಖಪ್ರಯೋಜನವಾದ ಸ್ವರ್ಗ, ಸುಖವೆಂತ ತಾತ್ಪರ್ಯ. ಈ ಸ್ವರ್ಗಸುಖವೆಂಬುದು, ಸುರರಿಗೆ–ಬ್ರಹ್ಮಾದಿ ದೇವಗಂಧರ್ವಾಂತ ದೇವತೆಗಳಿಗೆ, ಅವರವರ ಯೋಗ್ಯತಾನುಸಾರ, ಬೇಡದಲೆ ಕೊಡುತಿಪ್ಪ–ಪ್ರಯತ್ನಮಾಡಿ ಬೇಡಿಸಿಕೊಳ್ಳದೇನೇ ಕೊಡುವ ಅಂದರೆ, ಪರ ಮಾತ್ಮ ಕೊಡತಾ ಇರತಾನೆ. ಹ್ಯಾಂಗೆಂದರೆ, ಸ್ವರ್ಗಲೋಕ ದೇವತಾಭೋಗಾರ್ಥ,

ದೇವತೆಗಳ ಪ್ರಾರ್ಥನಾ ಇಲ್ಲದೇನೇ, ಭೋಗಸಾಧನಗಳಾದ ಕಾಮಧೇನ್ವಾದಿಗಳ ಸಹಿತ ಆದಿಯಲ್ಲೇ ಸೃಷ್ಟಿಮಾಡೋವನಾಗಿ, ದೇವತೆಗಳಿಗೆ ಆಲಯುವನ್ನಾಗಿ ಮಾಡಿ, ಅಲ್ಲಿ ಆವಾಸರನ್ನಾಗಿ ಮಾಡಿ ಭೋಗ ಪಡಸತಾ ಇದ್ದಾನೆ. ಅತ ಏವ, ಸ್ವರ್ಗಸುಖ ಸುರರಿಗೆ ಬೇಡಿಸಿಕೊಳ್ಳದೇನೇ ಕೊಡತಾ ಇರತಾನೆ. ದಾವ ಕಾಲದಲ್ಲಿ ದಾವ್ರುಮ ತಮಗೆ ಯೋಗ್ಯ ತಾನುಸಾರ ಇಚ್ಛಾಮಾಡತಾರೋ, ಆದರನ್ನ ಕಾಮಧೇನ್ವಾದಿಗಳ ದ್ವಾರಾ ಕೊಡತಾ ಇರತಾನೆ. ನರರಿಗೆ–ಮುಕ್ತಿಯೋಗ್ಯರಾದ ನರರಿಗೆ, ಬೇಡಿದರ ಕೊಡುತಿಹನು–ಜ್ಯೋತಿ ಷ್ಟೋಮಾದಿ ಯಜ್ಞಮೂಲಕವಾಗಿ ದೇವರನ್ನ ಪ್ರಾರ್ಥಿಸಿದರ ಕೊಡತಾ ಇರತಾನೆ. ಬೇಡಿ ಬಳಲುವ–ಸ್ವರ್ಗಸುಖಕ್ಕಾಗಿ ಜ್ಯೋತಿಷ್ಟೋಮಾದಿ ಯಜ್ಞಗಳ ಮಾಡಿ ಪ್ರಯಾಸ ಪಡುವಂಥ, ದೈತ್ಯರಿಗೆ–ಭಗವದ್ದ್ವೇಷಿಗಳಾದ ಅಸುರರಿಗೆ, ಕೊಡನೊಮ್ಮೆ–ಕದಾಚಿತ್, ಒಂದು ಕಾಲದಲ್ಲಿ ಆದರೂ ಕೊಡೋದಿಲ್ಲ. ಮೂಢರು–ಮೂಢಜ್ಞಾನಿಗಳಾದ, ಮಿಶ್ರ ಜ್ಞಾನಿಗಳಾದ ನಿತ್ಯಸಂಸಾರಿಗಳು, ಅನುದಿನ–ಪ್ರತಿದಿನದಲ್ಲೂ, ಧರ್ಮ ಕರ್ಮವ ಮಾಡಿ ದರು ಸರಿ–ಸ್ವರ್ಗಸುಖಕ್ಕಾಗಿ ಧರ್ಮವೇನು, ಕರ್ಮವೇನು, ಮಾಡಿದ ಕಾಲಕ್ಕೂ, ಅಹಿಕ ಫಲಗಳ ನೀಡಿ–ಆ ಕರ್ಮಕ್ಕೆ ಐಹಿಕಫಲಗಳ ಕೊಟ್ಟು, ಸ್ವರ್ಗಫಲ ಕೊಡದೇನೆ, ಉನ್ಮತ್ತ ರನು ಮಾಡಿ–ಐಹಿಕಫಲಗಳಿಂದ ಉನ್ಮತ್ತರನ್ನಾಗಿ ಮಾಡಿ, ತದ್ದ್ವಾರಾ ಪಾಪಾಭಿವೃದ್ಧಿ ಮಾಡಿ, ಮಹಾನಿರಯವೀವ–ದೊಡ್ಡದಾದ ನರಕಸುಖ ಕೊಡೋವನಾಗತಾನೆ. ಇದರಿಂದ ಸ್ವರ್ಗಸುಖ, ಮುಕ್ತಿಯೋಗ್ಯರಿಗೆ ಮಾತ್ರವೆಂತ ತಾತ್ಪರ್ಯ.

**ತರಣಿ ಸರ್ವತ್ರದಲಿ ಕಿರಣವ ।**
**ಹರಹಿ ತತ್ತದ್ವಸ್ತುಗಳನನು ।**
**ಸರಿಸಿ ಅದರದರಂತೆ ಛಾಯುವ ಕಂಗೊಳಿಪ ತೆರದಿ ॥**
**ಅರಿಧರಾಜಾನೇಜ ಜಗದೊಳ ।**
**ಗಿರುವ ಛಾಯಾತಪನೆನಿಸಿ ಸಂ ।**
**ಕರುಷಣಾಹ್ವಯ ಅವರವರ ಯೋಗ್ಯತೆಗಳಂತಿಪ್ಪ ॥ ೨೮ ॥**

ಪೂರ್ವೋಕ್ತಪ್ರಕಾರ ಸ್ವರ್ಗಸುಖ ಕೆಲವರಿಗೆ ಕೊಟ್ಟು, ಕೆಲವರಿಗೆ ಕೊಡವೇ ಇರೋಣದರಿಂದ ದೇವರಿಗೆ ವೈಷಮ್ಯ ಇಲ್ಲೆಂದು ಹೇಳತಾರೆ.

ತರಣಿ–ಸೂರ್ಯನು, ಕಿರಣವ–ತನ್ನ ಕಿರಣಗಳ, ಸರ್ವತ್ರದಲಿ–ಸರ್ವಪ್ರದೇಶದಲ್ಲಿ, ಹರಹಿ–ಹರವಿದವನಾಗಿ, ಅದರಲ್ಲಿ, ವಜ್ರ, ಕೆಂಪು, ನೀಲಿ, ಇವುಗಳಲ್ಲಿ ಹರವಿದ ಕಿರಣ ಗಳು, ತತ್ತದ್ವಸ್ತುಗಳನುಸರಿಸಿ–ಆಯಾ ವಸ್ತುಗಳಾದ ವಜ್ರಾದಿಗಳಲ್ಲಿ ಸ್ವಾಭಾವಿಕವಾಗಿ ಭಿನ್ನ ಭಿನ್ನಗಳಾಗಿ ಇರತಕ್ಕ ತೇಜಸ್ಸನ್ನ ಅನುಸರಿಸಿ, ಅದರದರಂತೆ–ಆದರದರ ತೇಜಸ್ಸಿ ನಂತೆ, ಛಾಯುವ–ಛಾಯೆಗಳು ಬಹಿಃ ಅಭಿವ್ಯಕ್ತಿಯಾಗಿ ಭಿನ್ನಭಿನ್ನವಾಗಿ, ಕಂಗೊಳಿಪ ತೆರದಿ–ಕಣ್ಣಿಗೆ ಕಾಣೋದಾಗತದೆ; ಸೂರ್ಯನ ಕಿರಣದಲ್ಲಿ ದೋಷವಿಲ್ಲ, ಆಯಾ

ವಸ್ತುಗಳಲ್ಲಿ ಪೂರ್ವೋಕ್ತಪ್ರಕಾರ, ತ್ರಿವಿಧಪ್ರಕಾರ ಇರೋದಾಗಿ ಅದೆ. ಇದರೋಪಾದಿಯಲ್ಲಿ, ಅರಿಧರಾಜಾನೇಜ – ಅರಿ–ಚಕ್ರಾಯುಧವನ್ನು, ಧರ–ಧರಿಸಿದಂತಾ, ಅಜ*– ಉತ್ಪತ್ತಿಶೂನ್ಯನಾದಂಥಾ, ಅನೇಜ – ದುರ್ಬಲದಿಂದ ಪ್ರಾಪ್ತವಾಗತಕ್ಕ ಕಂಪನಾದಿ ದೋಷದಿಂದ ದೂರನಾದಂಥಾ ಪರಮಾತ್ಮ, ಆಯಾ ಜೀವರುಗಳ ಸ್ವರೂಪಗಳೆಂಬೋ, ತ್ರಿವಿಧವಾದ ವಜ್ರಾದಿಗಳಲ್ಲಿ ಸೂರ್ಯಸದೃಶನಾಗಿದ್ದು, ಆಯಾ ಜೀವರ ಅನಾದಿ ಸ್ವಭಾವವನ್ನನುಸರಿಸಿ ಅವರವರಿಗೆ ಭೋಗಕ್ಕೆ ಯೋಗ್ಯವಾದ ಫಲಗಳ ವ್ಯಕ್ತಮಾಡಿ ಕೊಡತಾನಾದ್ದರಿಂದ ಸೂರ್ಯ ಹ್ಯಾಂಗೆ ವೈಷಮ್ಯರಹಿತನೋ ತದ್ವತ್, ಪರಮಾತ್ಮ ವೈಷಮ್ಯರಹಿತನು. ಜಗದೊಳಗಿರುವ–ತ್ರಿವಿಧ ಜೀವರೊಳಗೆ ಇರುವ, ಛಾಯಾತಪನೆನಿಸಿ– ಛಾಯಾ–ನೆರಳು, ಆತಪನೆನಿಸಿ–ಬಿಸಿಲು, ಛಾಯಾತಪನೆಂತ ಎರಡು ನಾಮದಿಂದ ಕರಿಸಿಬಿಂಬನಾಗಿದ್ದಾನೆ. ಸಂಸಾರವೆಂಬೋ ಬಿಸಿಲಿನ ತಾಪದಿಂದ ಸಹಿಸಲಾರದವರು, ಛಾಯಾಸಾಂಕೇತನಾದ ಪರಮಾತ್ಮನ ಆಶ್ರಯಮಾಡಿದರೆ ಪೂರ್ವೋಕ್ತ ತಾಪ ಪರಿಹಾರವಾಗತದೆ. ಹಾಂಗಲ್ಲದೆ ಪೂರ್ವೋಕ್ತ ತಾಪದಿಂದ ಯುಕ್ತನಾದವನು, ತನ್ನ ದೇಹಛಾಯಾವನ್ನೇ ತಾನು ಆಶ್ರಯಮಾಡಿ, ತಾಪ ಪರಿಹಾರಮಾಡಿಕೋತೇನೆಂದು ಪ್ರಯತ್ನಮಾಡಿದವಗೆ, ಛಾಯಾ ಅನುಕೂಲಿಸದೆ ಬಿಸಿಲಿನಿಂದ ದುಃಖಿತನಾಗತಾನೆ. ಭಗವದ್ಭಕ್ತರು ಪರಮಾತ್ಮನ್ನ ಆಶ್ರಯಮಾಡಿದವರು. ತದನ್ಯರು ಅಲ್ಲವಾದ್ದರಿಂದ, ಭಗವದ್ಭಕ್ತರಿಗೆ ಛಾಯಾರೂಪನಾಗಿಯೂ, ತದನ್ಯರಿಗೆ ಆತಪನಾಗಿಯೂ ಇದ್ದಾನೆ. ಇದು ಅಧಿಕಾರಿಗಳ ಅನಾದಿ ಸ್ವರೂಪಸ್ವಭಾವದೋಷ, ಈಶ್ವರಂದು ಅಲ್ಲ. ಸಂಕರುಷಣಾಹ್ವಯ–ಸಂಕರ್ಷಣರೂಪೀ ಪರಮಾತ್ಮ, ಅವರವರ–ಆಯಾ ಜೀವರುಗಳ, ಯೋಗ್ಯತೆಗಳಂತೆ–ಈಶ್ವರನಿಂದ ರಚಿತವಲ್ಲದ ಅನಾದಿಯಾದ, ಭಿನ್ನಭಿನ್ನವಾದ ಯೋಗ್ಯತೆಗಳೋಪಾದಿಯಲ್ಲಿ, ಇಷ್ಟ–ಫಲಗಳ ಕೊಡೋವನಾಗತಾನೆ ಎಂತ ತಾತ್ಪರ್ಯ.

**ಈ ವಿಧದಿ ಸರ್ವತ್ರ ಲಕುಮೀ ।**
**ಭೂ ವನಿತೆಯರ ಕೂಡಿ ತನ್ನ ಕ ।**
**ಳಾವಿಶೇಷಗಳೆಲ್ಲ ಕಡೆಯಲಿ ತುಂಬಿ ಸೇವ್ಯತಮ ॥**
**ಸೇವಕನು ತಾನೆನಿಸಿ ಮಾಯಾ ।**
**ದೇವಿರಮಣ ಪ್ರವಿಷ್ಟರೂಪಕ ।**
**ಸೇವೆ ಮಾಳ್ಪ ಶರಣ್ಯ ಶಾಶ್ವತಕರುಣಿ ಕಮಲಾಕ್ಷ ॥ ೨೯ ॥**

ಈ ವಿಧದಿ–ಈ ಪೂರ್ವೋಕ್ತ ಮುಕ್ತಿಯೋಗ್ಯಾದಿ ತ್ರಿವಿಧರಿಂದ ಇರತಕ್ಕ, ಸರ್ವತ್ರ– ಅಸೃಜ್ಯ, ಸೃಜ್ಯ, ಮುಕ್ತ ಈ ಸರ್ವತ್ರದಲ್ಲಿ ಇರತಕ್ಕ ಪ್ರಾಣಿಗಳಲ್ಲಿ, ಲಕುಮೀ ಭೂ–

* ಕೆಲವು ವ್ಯಾಖ್ಯಾನಕಾರರು 'ಏಜ' ಎಂಬ ಪಾಠಾಂತರವನ್ನನುಸರಿಸಿ ಅದಕ್ಕೆ ಕಂಪನಾದಿ ದೋಷ ಉಳ್ಳ ಚೇತನ ಎಂತ ಅರ್ಥ ಬರೆದಿದ್ದಾರೆ.

ಶ್ರೀದೇವೇರು, ಭೂದೇವೇರು. ವನಿತೆಯರ ಕೂಡಿ—ಉಭಯರಾದ ತನ್ನ ಪತ್ನೇರ ಕೂಡಿ ಕೊಂಡು ಜೀವಾಂತರ್ಗತನಾಗಿ ಬಿಂಬನಾಗಿ ಇದ್ದು, ಸೇವ್ಯತಮ – ಸೇವಾಮಾಡಿಸಿ ಕೊಂಬೋವರ ಒಳಗೆ ಸರ್ವೋತ್ತಮನೆನಿಸಿಕೊಂಬ. ಪ್ರವಿಷ್ಟರೂಪಕ ಮಾಯಾದೇವಿ ರಮಣ—ಮಾಯಾದೇವೇರ ಪತಿಯಾದ ವಾಸುದೇವ, ತನ್ನ ಕಳಾವಿಶೇಷಗಳ—ತನ್ನ ಅಂಶ ರೂಪಗಳ, ಅಂದರೆ, ಸೃಷ್ಟಿಪ್ರಾರಂಭದಲ್ಲಿ ಆಯಾ ಜೀವರ ಸ್ವರೂಪದ ಆಕಾರದಂತೆ ಅಂಶ ರೂಪಗಳ ಧರಿಸಿ ಆಯಾ ಜೀವರಲ್ಲಿ ಪ್ರವಿಷ್ಟನಾಗೋವನಾಗಿದ್ದಾನೆ. ಅತ ಏವ, ಪ್ರವಿಷ್ಟ ನಾಮಕನೆಂದು ಕರಿಸಿದ. ಈ ಪ್ರಕಾರ ತನ್ನ ಕಳಾವಿಶೇಷಗಳ, ಎಲ್ಲ ಕಡೆಯಲಿ ತುಂಬಿ— ಅಂಡದ ಹೊರಗೆ, ಅಂಡದ ಒಳಗೆ, ವೈಕುಂಠಾದಿಗಳಲ್ಲಿ, ಈ ಎಲ್ಲಾ ಕಡಿಯಲ್ಲಿ, ವಿದ್ಯಮಾನ ವಾದ ಜೀವರಲ್ಲಿ ಪೂರ್ಣಮಾಡಿ, ಸೇವಕನು ತಾನೆನಿಸಿ—ನಿತ್ಯ ಬಿಂಬನಾದ, ಜೀವಾಂತರ್ಗತ ನಾದ ತನ್ನ ರೂಪಕ್ಕೆ ತಾನೇ ಸೇವಕನೆನಿಸಿ, ಸೇವೆ ಮಾಳ್ಪ—ಸೇವಾ ಮಾಡೋವನಾಗತಾನೆ. ಶರಣ್ಯ—ಬಿಂಬರೂಪವೇನು, ಪ್ರವಿಷ್ಟವಾದ ವಾಸುದೇವರೂಪವೇನು, ಎರಡೂ ಪರಸ್ಪರ ಅಭೇದಗಳು, ರಮಾಬ್ರಹ್ಮಾದಿಗಳಿಂದ ಶರಣ್ಯರೂಪಗಳು, ಕಮಲಾಕ್ಷ – ಕಮಲದಳ ದೋಪಾದಿಯಲ್ಲಿ ನೇತ್ರಗಳುಳ್ಳ ಬಿಂಬನ್ನ, ಈ ಪ್ರಕಾರ ತಿಳಿದು ಧ್ಯಾನೋಪಾಸನಾದಿಗಳ ಮಾಡಿದರೆ, ಅವರಲ್ಲಿ, ಶಾಶ್ವತಕರುಣಿ—ಶಾಶ್ವತವಾದ ಕರುಣಾ ಮಾಡೋವನಾಗತಾನೆ. ಇದರಂತೆ ಸ್ಥೂಲದೇಹದಲ್ಲೂ ಸಹ ಸಮನ್ವಯಮಾಡಿಕೊಳ್ಳಬೇಕೆಂತ ತಾತ್ಪರ್ಯ.

**ಪ್ರಣವಕಾರಣ ಕಾರ್ಯ ಪ್ರತಿಪಾ ।**
**ದ್ಯನು ಪರಾತ್ಪರ ಚೇತನಾಚೇ ।**
**ತನ ವಿಲಕ್ಷಣನಂತಸತ್ಕಲ್ಯಾಣ ಗುಣಪೂರ್ಣ ॥**
**ಅನುಪಮನುಪಾಸಿತ ಗುಣೋದಧಿ ।**
**ಅನಘ ಅಜಿತಾನಂತ ನಿಷ್ಕಿಂ।**
**ಚನಜನಪ್ರಿಯ ನಿರ್ವಿಕಾರ ನಿರಾಶ್ರಯಾವ್ಯಕ್ತ ॥ ೩೦ ॥**

ಶ್ರೀ ಪರಮಾತ್ಮನ ಮಹಿಮಾ ಹೇಳತಾರೆ.

ಪ್ರಣವಕಾರಣ—ಅಕಾರಾದಿ ವರ್ಣೋತ್ಪತ್ತಿಗೂ, ಮಹಾಮಂತ್ರಗಳ ಉತ್ಪತ್ತಿಗೂ, ಪೌರುಷೇಯಗಳಾದ ಇತಿಹಾಸ ಪುರಾಣಾದಿಗಳ ಉತ್ಪತ್ತಿಗೂ, ಗಾಯತ್ರೀ, ವೇದಗಳ ಅಭಿವ್ಯಕ್ತಿಗೂ, ಪ್ರಣವ ಎನತಕ್ಕ ಓಂಕಾರ, ಮಾತೃಸ್ಥಾನವಾಗಿ ಮೂಲಕಾರಣವಾದುದು, ಕಾರ್ಯ—ಪೂರ್ವೋಕ್ತಗಳೆಲ್ಲ ಪ್ರಣವಕಾರಣದಿಂದ, ಕಾರ್ಯರೂಪವಾಗಿ, ನಿಮಿತ್ತಕಾರಣ ನಾದ ಶ್ರೀ ಪರಮಾತ್ಮನಿಂದ ಪರಿಣಮಿಸಿದ್ದು, ಈ ಕಾರ್ಯಕಾರಣಗಳಿಂದ ಗುಣಪೂರ್ಣ ನಾದ ಪರಮಾತ್ಮ, ಪರಾತ್ಪರ—ಅನ್ಯರಾದ ಲಕ್ಷ್ಮೀದೇವೇರ ವ್ಯಾಪ್ತಿಗಿಂತಲೂ, ಅದರ ಆಚೇಲಿ ಕೂಡ ಅಪರಿಚ್ಛಿನ್ನ ವ್ಯಾಪ್ತಿ ಉಳ್ಳವನು, ಸ್ವರಮಣನು. ಚೇತನಾಚೇತನವಿಲಕ್ಷಣ— ರಮಾಬ್ರಹ್ಮಾದಿ ಚೇತನರಿಗಿಂತಲೂ, ಅಚೇತನಗಳಾದ ಜಡಗಳಿಗಿಂತಲೂ ವಿಲಕ್ಷಣ ನಾದವ, ಅನಿರ್ವಾಚ್ಯನು. ಅನಂತಸತ್ಕಲ್ಯಾಣಗುಣಪೂರ್ಣ – ಅಪರಿಚ್ಛಿನ್ನಗಳಾದ,

ನಿರ್ದುಷ್ಟಗಳಾದ, ಮಂಗಳಕರಗಳಾದ ಗುಣಗಳಿಂದ ಪರಿಪೂರ್ಣನು. ಅನುಪಮನು–ಉಪಮಾರಹಿತನಾದವನು, ಉಪಾಸಿತ – ರಮಾಬ್ರಹ್ಮಾದಿಗಳಿಂದ ಉಪಾಸನವಾಡಿಸಿ ಕೊಳ್ಳತಕ್ಕವನು, ಗುಣೋದಧಿ–ಇವರುಗಳು ಪಾರಗಾಣದೇ ಈಜುತ್ತಾ ಇರತಕ್ಕ ಗುಣ ಸಮುದ್ರ ಉಳ್ಳವನು. ಅನಘ–ಅಸ್ವತಂತ್ರಾದಿ ದೋಷವರ್ಜಿತನಾದವನು, ಅಜಿತ–ಅನ್ಯರಿಂದ ಜಯಿಸೋದಕ್ಕೆ ಅಶಕ್ಯನಾದವನು, ಅನಂತ – ಅಂತರಹಿತನಾದವನು, ನಿಷ್ಕಿಂಚನಜನಪ್ರಿಯು–ಕಿಂಚನ–ದ್ರವ್ಯ, ದೇವತಾವಿತ್ತ, ಜ್ಞಾನ; ದೈತ್ಯವಿತ್ತ, ಅಜ್ಞಾನ; ಮಾನುಷವಿತ್ತ, ಪ್ರಾಕೃತವಿತ್ತ. ದೈತ್ಯವಿತ್ತ ಸಾಂಕೇತವಾದ ಪಾಪಾಖ್ಯವಿತ್ತದಿಂದ ನಿಷ್ಕಿಂಚನವಾದ ಸ್ವರೂಪಸ್ವಭಾವವುಳ್ಳವರಾದ ಮುಕ್ತಿಯೋಗ್ಯ ಜನರಿಗೆ ಪ್ರಿಯನಾದ ವನು, ನಿರ್ವಿಕಾರ–ಸರ್ವತ್ರವ್ಯಾಪ್ತನಾಗಿದ್ದಕಾಲಕ್ಕೂ ತದ್ವಿಕಾರಶೂನ್ಯನು, ನಿರಾಶ್ರಯು–ಪರಾಧೀನನಲ್ಲದವನು, ಅವ್ಯಕ್ತ – ಸಾಕಲ್ಯೇನ ದಾರಿಂದಲೂ, ವ್ಯಕ್ತನಲ್ಲದವನು, ಪ್ರತಿಪಾದ್ಯನು–ಸರ್ವರಿಗೂ, ಸಕಲಕ್ಕೂ ಯಜಮಾನನು ಎಂತ ತಾತ್ಪರ್ಯ.

**ಗೋಪ ಭೀಯ ಭವಾಂಧಕಾರಕೆ ।**
**ದೀಪವೊದಗೆ ಸಕಲ ಸುಖಸದ ।**
**ನೋಪರಿಗ್ರಹವೆನಿಸುತಿಪ್ಪುದು ಹರಿಕಥಾಮೃತವು ॥**
**ಗೋಪತಿ ಜಗನ್ನಾಥವಿಠಲ ಸ ।**
**ಮೀಪದಲಿ ನೆಲೆಸಿದ್ದು ಭಕ್ತರ ।**
**ನಾಪವರ್ಗರ ಮಾಡುವನು ಮಹದುಃಖಭವದಿಂದ ॥ ೩೧ ॥**

ಇನ್ನೂ ಪರಮಾತ್ಮನ ಮಹಿಮೆ ಹೇಳತಾರೆ.

ಗೋಪ–ಗೋ–ವೇದಗಳು, ವೇದೋಕ್ತಾನುಸಾರ ಪರಮಾತ್ಮ ಸರ್ವೋತ್ತಮ ನೆಂದು ಉಪಾಸನಮಾಡತಕ್ಕ ಭಕ್ತರ, ಪ–ಪರಿಪಾಲನಮಾಡತಕ್ಕವನು, ಭೀಯ–ತದ್ವ್ಯತಿರಿಕ್ತವಾಗಿ ತಿಳಿದವರಿಗೆ ನಾನಾವಿಧವಾದ ನರಕಭಯದಿಂದ ದುಃಖಗಳ ಐದಿಸತಕ್ಕ ವನು, ಭವಾಂಧಕಾರಕೆ ದೀಪವು–ಸಂಸಾರರೂಪವಾದ ಅಂಧಕಾರಕ್ಕೆ ದೀಪಸದೃಶನಾದ ವನು, ಅಂದರೆ, ಜನನಮರಣಾಖ್ಯ ಅಂಧಕಾರಕ್ಕೆ ತನ್ನ ಅಪರೋಕ್ಷಾಖ್ಯ ದೀಪದಿಂದ ಅಂಧಕಾರ ಪರಿಹಾರಕನು, ಒದಗೆ–ಏತಾದೃಶನಾದ ಶ್ರೀ ಪರಮಾತ್ಮ ಪ್ರತ್ಯಕ್ಷನಾಗಿ ಒದಗಿದರೆ, ಸಕಲಸುಖಸದನ–ಸಮಸ್ತವಾದ ಸುಖಗಳಿಗೆ ಗೃಹರೂಪವಾದ, ಉಪರಿಗ್ರಹವು–ಸತ್ಯಲೋಕದ ಮ್ಯಾಲೆ ಇರತಕ್ಕ ಗ್ರಹಸಾಂಕೇತವಾದ ವೈಕುಂಠಲೋಕ, ಎನಿಸುತಿಪ್ಪುದು–ಭೂಲೋಕದಲ್ಲಿ ವಿದ್ಯಮಾನವಾದ ಭರತಖಂಡವೇ ತದ್ವತ್ ಎನಿಸುತಿಪ್ಪುದು, ಹರಿಕಥಾ ಮೃತವು–ವೈಕುಂಠಲೋಕದಲ್ಲಾದರೂ ಹರಿಕಥಾಮೃತಪಾನ ಸುಖವೇ ಹೊರ್ತು, ಬ್ಯಾರೆ ಸುಖವಿಲ್ಲ. ಆ ಸುಖ ಭೂಲೋಕದಲ್ಲಿ ಆದರೆ, ಅದೇ ವೈಕುಂಠ ಎಂತ ಎನಿಸೋದಾಗತದೆ. ಗೋಪತಿ–ವೇದಪ್ರತಿಪಾದ್ಯನಾದ ಶ್ರೀ ಪರಮಾತ್ಮ, ಜಗನ್ನಾಥವಿಠಲ–ಜಗತ್ತಿಗೇ ಸ್ವಾಮಿ ಯಾದ ಶ್ರೀ ನಾರಾಯಣದೇವರು, ಸಮೀಪದಲಿ ನೆಲಸಿದ್ದು – ಮನೋಇಂದ್ರಿಯಕ್ಕೆ

ಸಮೀಪದಲ್ಲಿ ಪ್ರತ್ಯಕ್ಷನಾಗಿದ್ದು, ಭಕ್ತರನ—ಈ ಗ್ರಂಥಾನುಸಾರ ಅನುಷ್ಠಾನಮಾಡತಕ್ಕ ಭಕ್ತರ, ಮಹದುಃಖಭವದಿಂದ—ಅತಿಶಯವಾದ, ದುಃಖಕರವಾದ ಸಂಸಾರಭವದಿಂದ ದೂರಮಾಡಿ, ಅಪವರ್ಗರ ಮಾಡುವನು—ಮೋಹ ಹೊಂದದವರನ್ನಾಗಿ ಮಾಡುವನು. ಅಂಥಾ ಆನಂದವನ್ನೂ, ಲಿಂಗಭಂಗಾತ್ಪೂರ್ವದಲ್ಲೇ ತನ್ನ ಅಪರೋಕ್ಷವನ್ನೂ ಐದಿಸತಾನೆ ಎಂತ ತಾತ್ಪರ್ಯ.

**ಶ್ರೀಮತ್ಸತ್ಯಪರಾಯಣತೀರ್ಥಕರಕಮಲಸಂಜಾತಶ್ರೀಮತ್ಸಂಕರ್ಷಣ-ತೀರ್ಥವಿರಚಿತಾಯಾಂ ಶ್ರೀಮದ್ಧರಿಕಥಾಮೃತಸಾರಕನ್ನಡಭಾಷಾ-ಟೀಕಾಯಾಂ ಬಿಂಬಪ್ರತಿಬಿಂಬಸಂಧಿವ್ಯಾಖ್ಯಾನಂ ಸಂಪೂರ್ಣಂ.**

|| ಶ್ರೀ ಕೃಷ್ಣಾರ್ಪಣಮಸ್ತು ||

|| ಓಂ ಶ್ರೀ ಗುರುಭ್ಯೋ ನಮಃ ಹರಿಃ ಓಂ ||

# ಇಪ್ಪತ್ತೈದನೆಯ ಸಂಧಿ

## ಆರೋಹಣತಾರತಮ್ಯ ಸಂಧಿ

**ಹರಿಕಥಾಮೃತಸಾರ ಗುರುಗಳ ।**
**ಕರುಣದಿಂದಾಪನಿತು ಪೇಳುವೆ ।**
**ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥ ಪ ॥**

**ಭಕ್ತರೆನಿಸುವ ದಿವ್ಯ ಪುರುಷರ ।**
**ಉಕ್ತಿ ಲಾಲಿಸಿ ಪೇಳ್ದ ಮುಕ್ತಾ ।**
**ಮುಕ್ತ ಜೀವರ ತಾರತಮ್ಯವ ಮುನಿಪ ಶಾಂಡಿಲ್ಯ ॥ ಸಂಧಿ ಸೂಚನೆ ॥**

ಪಾಪವಿಮುಕ್ತರಾದ ಭಗವದನುಗ್ರಹಕ್ಕೆ ಪಾತ್ರರಾದ ಪುರುಷರಿಂದ ಪ್ರಶ್ನಿತರಾದ ಶಾಂಡಿಲ್ಯರು ಹೇಳಿದ ಮುಕ್ತಾಮುಕ್ತಜೀವರ ತಾರತಮ್ಯವಿಷಯಕ ಪುರಾಣಾರ್ಥವನು ಈ ಸಂಧಿಯಲ್ಲಿ ನಿರೂಪಿಸುತ್ತಾರೆ.

**ಮೂಲ :**

**ಸ್ಥಾವರರ ನೋಡಲ್ಕೆ ತೃಣ ಕ್ರಿಮಿ ।**
**ಜೀವರುತ್ತಮ ಕ್ರಿಮಿಗಳಿಂದಲ ।**
**ಜಾವಿ ಗೋ ಗಜ ವ್ಯಾಘ್ರ ಸಿಂಹಗಳಿಂದ ಶೂದ್ರಾದಿ ॥**
**ಮೂವರುತ್ತಮ ಕರ್ಮಕರು ಭೂ ।**
**ದೇವರುತ್ತಮ ಕರ್ಮಿ ನೋಡಲು ।**
**ಕೋವಿದೋತ್ತಮ ಕವಿಗಳಿಂದಲಿ ಕ್ಷಿತಿಪರುತ್ತಮರು ॥ ೧ ॥**

**ಅವತಾರಿಕಾ :—** ೨೪ ನೇ ಸಂಧಿಯಲ್ಲಿ ಹೀಂಗೆ ಪೂರ್ವೋಕ್ತ ಸರ್ವ ಸಮರ್ಪಣ ಮಾಡತಕ್ಕವರು ಮುಕ್ತಿಯೋಗ್ಯ ತೃಣಾಂತ ಬ್ರಹ್ಮದೇವರವರಿಗೂ ತಾರತಮ್ಯೋಪೇತರು. ಆದ್ದರಿಂದ ಮುಕ್ತಿಯಲ್ಲಿಯೂ ಸಹ ತಾರತಮ್ಯವೆಂದು ವಾಯುಪುರಾಣಾರ್ಥವನ್ನು ಹೇಳತಾರೆ. ಪಾಪಜನ್ಮಮುಕ್ತರಾದ ದಿವ್ಯಪುರುಷರ ಪ್ರಶ್ನವೆಂಬ ಮಾತನ್ನ ಲಾಲಿಸಿ ಮುಕ್ತಾಮುಕ್ತಜೀವರಲ್ಲಿ ಸಹ, ತಾರತಮ್ಯ ಉಂಟೆಂದು ಶಾಂಡಿಲ್ಯಋಷಿಗಳು ಹೇಳಿದ ಪುರಾಣಾರ್ಥವನ್ನು ಈ ಸಂಧಿಯಲ್ಲಿ ಹೇಳತಾರೆ.

ಶುದ್ಧಜಡಗಳು ಮೊದಲುಮಾಡಿ ಮಾನುಷಚಕ್ರವರ್ತಿಗಳ ಪರ್ಯಂತ ತಾರತಮ್ಯ ಹೇಳತಾರೆ.

**ಟೀಕಾ :**

ಸ್ಥಾವರರ– ೧ನೇ ಕಕ್ಷದ ಚೇತನರಹಿತವಾದ ಶುದ್ಧಜಡಗಳ, ನೋಡಲ್ಕೆ–ಈ ಶುದ್ಧ ಜಡಗಳಿಂದಲೂ, ತೃಣ– ೨ನೇ ಕಕ್ಷದವರಾದ ತೃಣಜೀವರು ಉತ್ತಮರು, ಕ್ರಿಮಿ ಜೀವರುತ್ತಮ– ೩ನೇ ಕಕ್ಷದವರಾದ ಇವರು ತೃಣಜೀವರಿಗಿಂತಲೂ ಕ್ರಿಮಿಜೀವರುತ್ತ ಮರು, ಕ್ರಿಮಿಗಳಿಂದಲಿ–ಈ ಕ್ರಿಮಿಜೀವರಿಗಿಂತಲೂ, ಅಜ–೪ ನೇ ಕಕ್ಷದವರಾದ ಮ್ಯಾಕಿ ಜೀವರುಗಳು ಉತ್ತಮರು. ಅವಿ– ೫ ನೇ ಕಕ್ಷ. ಈ ಮ್ಯಾಕಿಗಳಿಗಿಂತಲೂ, ಕುರಿಜೀವರು ಉತ್ತಮರು. ಗೋ–೬ ನೇ ಕಕ್ಷ. ಕುರಿಜೀವರಿಗಿಂತಲೂ ಆಕಳುಜೀವರು ಉತ್ತಮರು. ಗಜ– ೭ ನೇ ಕಕ್ಷ. ಈ ಆಕಳುಜೀವರಿಗಿಂತಲೂ ಗಜಜೀವರು ಉತ್ತಮರು. ವ್ಯಾಘ್ರ– ೮ ನೇ ಕಕ್ಷ. ಈ ಗಜಜೀವರಿಗಿಂತಲೂ ವ್ಯಾಘ್ರಜೀವರು ಉತ್ತಮರು. ಸಿಂಹ–೯ ನೇ ಕಕ್ಷ. ವ್ಯಾಘ್ರಜೀವರಿಗಿಂತಲೂ ಸಿಂಹಜೀವರು ಉತ್ತಮರು. ಸಿಂಹಗಳಿಂದ– ಈ ಸಿಂಹ ಜೀವರಿಗಿಂತಲೂ, ಶೂದ್ರಾದಿ– ೧೦ ನೇ ಕಕ್ಷ. ಶೂದ್ರಜೀವರು ಉತ್ತಮರು. ಮೂವರು ತ್ತಮ– ೧೧ ನೇ ಕಕ್ಷ. ಮೂವರುತ್ತಮರು ಎಂದರೆ, ಈ ಶೂದ್ರಜೀವರಿಗಿಂತಲೂ ೧೧ನೇ ಕಕ್ಷದವರಾದ ವೈಶ್ಯ ಜೀವರು ಉತ್ತಮರು. ಕರ್ಮಕರು–೧೨ನೇ ಕಕ್ಷದವರು. ಕ್ಷತ್ರಿಯ ಜೀವರು. ಈ ವೈಶ್ಯಜೀವರಿಗಿಂತಲೂ ಕ್ಷತ್ರಿಯಜೀವರು ಉತ್ತಮರು. ಭೂ ದೇವರು– ೧೩ ನೇ ಕಕ್ಷದ ಬ್ರಾಹ್ಮಣರು, ಈ ಕ್ಷತ್ರಿಯಜೀವರಿಗಿಂತಲೂ ಉತ್ತಮರು. ಈ ಬ್ರಾಹ್ಮಣ ರೊಳಗೆ ತಾರತಮ್ಯ, ಉತ್ತಮ–ಜ್ಞಾನಕ್ಕಿಂತಲೂ ಕರ್ಮವೇ ಅಧಿಕವಾಗುಳ್ಳ ಅಧಿಕ ಕರ್ಮಾಸಕ್ತನಾದ ಭೂದೇವ ಎಂದರೆ, ಬ್ರಾಹ್ಮಣ ಉತ್ತಮ. ಕರ್ಮಿ ನೋಡಲು ಕೋವಿದೋತ್ತಮ– ೧೪ ನೇ ಕಕ್ಷ. ಕರ್ಮಾಸಕ್ತರಾದ ಬ್ರಾಹ್ಮಣನಿಗಿಂತಲೂ ಜ್ಞಾನ ಪ್ರಾಚುರ್ಯವಾದ ಕೋವಿದಸಾಂಕೇತನಾದ ಜ್ಞಾನಿಯಾದ ಬ್ರಾಹ್ಮಣ ಉತ್ತಮ. ಕವಿ ಗಳಿಂದಲಿ ಕ್ಷಿತಿಪರುತ್ತಮರು – ಜ್ಞಾನಪ್ರಾಚುರ್ಯರಾದ ಭೂದೇವರಿಗಿಂತಲೂ ೧೫ನೇ ಕಕ್ಷದ ಮಾನುಷಚಕ್ರವರ್ತಿಗಳು ಉತ್ತಮರು, ಎಂತ ತಾತ್ಪರ್ಯ.

**ಧರಣಿಪರ ನೋಡಲ್ಕೆ ನರ ಗಂ ।**
**ಧರ್ವರುತ್ತಮ ದೇವಗಂಧ ।**
**ರ್ವರ ಗಣೋತ್ತಮರಿವರಿಗಿಂತ ಶತೋನಶತಕೋಟಿ ॥**
**ಪರಮಋಷಿಗಳು ಅಪ್ಸರ ಸ್ತ್ರೀ ।**
**ಯರು ಸಮಾನರು ಇವರಿಗಿಂತಲಿ ।**
**ಚಿರಪಿತೃಗಳುತ್ತಮರು ಚಿರನಾಮಕ ಪಿತೃಗಳಿಂದ ॥ ೨ ॥**

ಮಾನುಷಗಂಧರ್ವರ ಆರಂಭಮಾಡಿ ಚಿರಪಿತೃಗಳ ಪರಿಯಂತ ತಾರತಮ್ಯವನ್ನ ಹೇಳತಾರೆ.

ಧರಣಿಪರ ನೋಡಲ್ಕೆ – ಪೂರ್ವೋಕ್ತ ೧೫ ನೇ ಕಕ್ಷದ ಮಾನುಷಚಕ್ರವರ್ತಿಗಳ ನೋಡಲಾಗಿ, ನರಗಂಧರ್ವರುತ್ತಮ–೧೬ನೇ ಕಕ್ಷದ ಮಾನುಷಗಂಧರ್ವರು ಉತ್ತಮರು. ದೇವಗಂಧರ್ವರ ಗಣೋತ್ತಮರು–೧೭ನೇ ಕಕ್ಷದ ದೇವಗಂಧರ್ವಗಣದವರು ಉತ್ತಮರು. ಇವರಿಗಿಂತ–ಈ ದೇವಗಂಧರ್ವರಿಗಿಂತ, ಶತೋನಶತಕೋಟಿ ಪರಮಋಷಿಗಳು–೧೮ ನೇ ಕಕ್ಷದ ನೂರು ಕಡಿಮೆ ನೂರುಕೋಟಿ ಋಷಿಗಳು ಉತ್ತಮರು. ಪರಮಶಬ್ದದಿಂದ ಊನ ಎಂತ ಹೇಳತಕ್ಕ ನೂರು ಋಷಿಗಳು ಉತ್ತಮರು, ಉತ್ತಮಕಕ್ಷದಲ್ಲಿ ಸೇರಿದವ ರೆಂದು ತಾತ್ಪರ್ಯ. ಅಪ್ಸರಸ್ತ್ರೀಯರು ಸಮಾನರು–ಕೇಚನ ಅಪ್ಸರ ಸ್ತ್ರೀಯರು ಶತೋನ ಶತಕೋಟಿ ಋಷಿಗಳಿಗೆ ಸಮಾನರು. ಇವರು ದೇವಗಂಧರ್ವರಿಂದ ಉತ್ತಮರು. ಇವರಿಗಿಂತಲಿ ಚಿರಪಿತೃಗಳುತ್ತಮರು – ೧೯ ನೇ ಕಕ್ಷ ಶತೋನಶತಕೋಟಿ ಋಷಿಗಳು ಮತ್ತು ಕೇಚನ ಅಪ್ಸರರಿಗಿಂತಲೂ, ಚಿರಪಿತೃಗಳು ಉತ್ತಮರು. ಚಿರನಾಮಕ ಪಿತೃ ಗಳಿಂದ–ಈ ಚಿರಪಿತೃಗಳಿಗಿಂತ ಉತ್ತಮರು ದಾರೆಂದರೆ, ಅವರನ್ನ ಮುಂದೆ ಹೇಳತಾರೆ.

**ಎರಡೈದು ಎಂಭತ್ತು ಋಷಿ ತುಂ ।**
**ಬರಶತೋರ್ವಶಿಯಪ್ಸರಸ್ತ್ರೀ ।**
**ಯರು ಶತಾಜಾನಜರು ಉತ್ತಮ ಚಿರಪಿತೃಗಳಿಂದ ॥**
**ವರರು ಊರ್ವಶಿಗಿಂತ ವೈಶ್ವಾ ।**
**ನರನ ಸುತರೀರೆಂಟು ಸಾವಿರ ।**
**ಹರದೆಯರೊಳುತ್ತಮ ಕಶೇರ್ಯಪ್ಪತ್ತುನಾಲ್ಕುಜನ ॥ ೩ ॥**

ಚಿರಪಿತೃಗಳನಂತರ ತಾರತಮ್ಯ ಹೇಳತಾರೆ.

ಎರಡೈದು ಎಂಭತ್ತು ಋಷಿ–ಮ್ಯಾಲೆ ಶತೋನಶತಕೋಟಿ ಋಷಿಗಳ ಹೇಳಿದ್ದಾರೆ. ಅದರಲ್ಲಿ ಊನ ಎಂತ ಹೇಳಿದ ನೂರು ಋಷಿಗಳು ದಾವ ಕಕ್ಷದಲ್ಲಿ ಸೇರಿದ್ದಾರೆಂದರೆ, ಎರಡೈದು ಅಂದರೆ ಹತ್ತು, ಎಂಭತ್ತು–ಎಂಭತ್ತು. ಅಂತು ತೊಂಭತ್ತುಮಂದಿ ಋಷಿಗಳು ಉತ್ತಮರು, ಆದ್ದರಿಂದ ಉತ್ತಮಕಕ್ಷದವರಾದ ೧೯ ನೇ ಕಕ್ಷದ ಕರ್ಮಜರಲ್ಲಿ ಸೇರಿದ್ದಾರೆ. ಉಳಿದ ಹತ್ತುಮಂದಿ ಋಷಿಗಳು ತೊಂಭತ್ತು ಋಷಿಗಳಿಗೆ ಉತ್ತಮರಾದ್ದರಿಂದ, ಕರ್ಮಜ ಕಕ್ಷದ ಮ್ಯಾಲಿನ ಕಕ್ಷಕ್ಕೆ ಸೇರಿದ್ದಾರೆ. ಅವರು ದಾರೆಂದರೆ, ಸಪ್ತಋಷಿಗಳು ೭, ನಾರದಋಷಿ ೧, ಭೃಗು ೧, ವಿಶ್ವಾಮಿತ್ರ ೧, ಅಂತು ನೂರು ಸರಿ ಆಯಿತು. ಈ ನೂರುಮಂದಿ ಋಷಿಗಳು ಹೋಗತಾ ಉಳಿದವರು ಮ್ಯಾಲೆ ತಾರತಮ್ಯದಲ್ಲಿ ಬಂದಿದ್ದಾರೆ. ತುಂಬುರಶತ–ತುಂಬುರನೇ ಮೊದಲಾದ ಗಂಧರ್ವರು ನೂರುಮಂದಿ. ಇವರಲ್ಲಿ ಕರ್ಮಜ ರಲ್ಲಿ ಸೇರಿದವರು ಎಂಟು ಮಂದಿ ತುಂಬುರಾದಿಗಳು ಹೋಗತಾ ಉಳಿದವರು ತೊಂಭತ್ತೆರಡು ಮಂದಿ ಗಂಧರ್ವರು. ಊರ್ವಶಿಯಪ್ಸರಸ್ತ್ರೀಯರು ಶತ–ಊರ್ವಶೀ ಮೊದಲಾದ ಅಪ್ಸರ ಸ್ತ್ರೀಯರು ನೂರುಮಂದಿ. ಇವರಲ್ಲಿ ಕರ್ಮಜರಲ್ಲಿ ಸೇರಿದವರು ಊರ್ವಶೀ ಮೊದಲಾದ ಅಪ್ಸರರು ತೊಂಭತ್ತೆರಡುಮಂದಿ ಹೋಗತಾ ಉಳಿದವರು ಎಂಟುಮಂದಿ ಅಪ್ಸರರು,

ಚಿರಪಿತೃಗಳಿಂದ–೧೯ ನೇ ಕಕ್ಷದವರಾದ ಚಿರಪಿತೃಗಳಿಗಿಂತಲೂ, ಉತ್ತಮ–ಉತ್ತಮರು, ೨೦ನೇ ಕಕ್ಷದವರು. ಇವರು ದಾರೆಂದರೆ, ೯೨ ಮಂದಿ ಪೂರ್ವೋಕ್ತ ಅವಶಿಷ್ಟ (ಉಳಿದ) ಗಂಧರ್ವರು, ೮ ಮಂದಿ ಪೂರ್ವೋಕ್ತ ಅವಶಿಷ್ಟರಾದ ಅಪ್ಸರ ಸ್ತ್ರೀಯರು, ಅಂತೂ ನೂರುಮಂದಿ. ಇನ್ನು ಇವರಿಗೆ ಸಮಾನರು ಅನೇಕಮಂದಿ. ಇವರು ಯಾವನ್ಮಂದಿ ಚಿರಪಿತೃಗಳಿಗೆ ಉತ್ತಮರು. ಅವರರು–೨೦ ನೇ ಕಕ್ಷದವರಾದ ನೂರುಮಂದಿಗಿಂತ ಚಿರ ಪಿತರು ಅವರಕಿಂತ ಅರ್ಥ. (ಊರ್ವಶೀ)ಗಿಂತ–೨೧ನೇ ಕಕ್ಷದವರಾದ ನೂರುಮಂದಿಗಿಂತ, ವೈಶ್ವಾನರನ ಸುತರು–ಅಗ್ನಿಪುತ್ರರಾದ, ಈರೆಂಟುಸಾವಿರ–ಹದಿನಾರುಸಾವಿರ, ಹರದೆಯ ರೊಳು–ಈ ಕೃಷ್ಣಪತ್ನೀರಾದ ೧೬,೦೦೦ ಮಂದಿ ಒಳಗೆ, ಉತ್ತಮ–ಉತ್ತಮರಾದವರು, ಕರ್ಶೇರ್ಯಪ್ಪತ್ತುನಾಲ್ಕುಜನ–೨೨ ನೇ ಕಕ್ಷದ ಕರ್ಶೇರು ಆರಂಭಮಾಡಿ ಎಪ್ಪತ್ತುನಾಲ್ಕುಜನ ಉತ್ತಮರು, ಆಜಾನಜರು – ದೇವಗಂಧರ್ವರಾರಭ್ಯ ಶತೋನಶತಕೋಟಿ ಋಷಿಗಳ ಪರಿಯಂತ ಅನಾಖ್ಯಾತ ಆಜಾನಜರು, ಹದಿನಾರುಸಾವಿರ ಗೋಪಿಕಾಸ್ತ್ರೀಯರು, ಆಖ್ಯಾತ ಆಜಾನಜರು. ಈ ಎರಡರಲ್ಲಿ ಬಹುಮಂದಿ ಆಜಾನಜರು ಇದ್ದಾರೆ. ಮ್ಯಾಲೆ ವಿವರಿಸಿದ್ದು, ದಿಕ್ಪ್ರದರ್ಶನ ಎಂತ ತಾತ್ಪರ್ಯ.

**ಸರಿಯೆನಿಪರು ವ್ರಜೌಕಸ ಸ್ತ್ರೀ ।**
**ಯರು ಸುರಾಸ್ಯಾತ್ಮಜರಿಗೆ ಪು ।**
**ಷ್ಕರನು ಕರ್ಮಪ ಪುಷ್ಕರನಿಗೆ ಶನೈಶ್ಚರುತ್ತಮನು ॥**
**ತರಣಿಜನಿಗುತ್ತಮಳುಷಾಶ್ವಿನಿ ।**
**ಸುರರರಸಿಗುತ್ತಮ ಜಲಪ ಬುಧ ।**
**ಶರಧಿಜಾತ್ಮಜಗುತ್ತಮ ಸ್ವಹದೇವಿಯೆನಿಸುವಳು ॥ ೪ ॥**

ವ್ರಜೌಕಸ–ವೃಂದಾವನಗ್ರಾಮಸ್ಥ ಮನಿಗಳಲ್ಲಿರತಕ್ಕ, ಸ್ತ್ರೀಯರು–ಜಾರತನದಿಂದ ಕೃಷ್ಣಾಂಗಸಂಗ ಮಾಡಿದ ಸ್ತ್ರೀಯರು, ಸರಿಯೆನಿಪರು–ಕರ್ಶೇರು ಮೊದಲಾದ ಎಪ್ಪತ್ತು ನಾಲ್ಕು (೭೪) ಜನಗಳಿಗೆ ಸಮಾನರು ಎಂತ ಕರಿಸುವರು. ಸುರಾಸ್ಯಾತ್ಮಜರಿಗೆ–ಅಗ್ನಿ ಪುತ್ರರಾದ ೧೬,೦೦೦ ಮಂದಿಗೆ, ಕರ್ಮಪ–ಕರ್ಮಾಭಿಮಾನಿಯಾದ, ಪುಷ್ಕರನು–೨೩ನೇಕಕ್ಷದ ಪುಷ್ಕರನು ಉತ್ತಮನು. ಪುಷ್ಕರನಿಗೆ–ಈ ಪುಷ್ಕರನಿಗಿಂತಲೂ, ಶನೈಶ್ಚರುತ್ತ ಮನು–೨೪ ನೇ ಕಕ್ಷದವನಾದ ಶನಿರಾಯನು ಉತ್ತಮನು. ತರುಣಿಜನಿಗುತ್ತಮಳು ಉಷಾ–ಈ ಸೂರ್ಯಪುತ್ರ ಶನಿರಾಯಗೆ ಉಷಾದೇವಿಯು ಉತ್ತಮಳು. ಅಶ್ವಿನಿಸುರ ರರಸಿಗೆ–ಅಶ್ವಿನೀ ದೇವತೆಗಳ ಹೆಂಡತಿಯಾದ, ೨೫ ನೇ ಕಕ್ಷದವಳಾದ ಉಷಾದೇವಿಗೆ, ಜಲಪ ಬುಧ–೨೬ನೇ ಕಕ್ಷದ ಜಲಾಭಿಮಾನಿಯಾದ ಬುಧನು, ಉತ್ತಮ–ಉತ್ತಮನು. ಶರಧಿಜ–ಸಮುದ್ರೋದ್ಭವನಾದ ಚಂದ್ರ, ಆತ್ಮಜಗೆ–ಚಂದ್ರನ ಪುತ್ರನಾದ ಬುಧಗೆ, ಸ್ವಹ ದೇವಿಯು–೨೭ನೇ ಕಕ್ಷದವಳಾದ ಸ್ವಾಹಾದೇವಿಯು, ಉತ್ತಮಳು ಎನಿಸುವಳು–ಉತ್ತ ಮಳು ಎಂತ ಕರಿಸೋವಳಾಗತಾಳೆ ಎಂತ ತಾತ್ಪರ್ಯ.

**ಅನಳಭಾರ್ಯಳಿಗಿಂತನಾಖ್ಯಾ ।**
**ತನಿಮಿಷರನಾಖ್ಯಾತರಿಂದಲಿ ।**
**ಘನಪ ಪರ್ಜನ್ಯಾನಿರುದ್ಧನ ಸ್ತ್ರೀ ಉಷಾದೇವಿ ॥**
**ದ್ಯುನದಿ ಸಂಜ್ಞಾ ಶಾಮಲಾ ರೋ ।**
**ಹಿಣಿಗಳಾರ್ವರು ಸಮರನಾಖ್ಯಾ ।**
**ತನಿಮಿಷೋತ್ತಮರಿವರಿಗಿಂತಲಿ ನೂರು ಕರ್ಮಜರು ॥ ೫ ॥**

ಅನಾಖ್ಯಾತ ದೇವತೆಗಳಾರಭ್ಯ ಕರ್ಮಜರ ಪರಿಯಂತ ತಾರತಮ್ಯವನ್ನ ಹೇಳತಾರೆ.

ಅನಳಭಾರ್ಯಳಿಗಿಂತ – ಅಗ್ನಿಭಾರ್ಯ ಸ್ವಾಹಾದೇವಿಗಿಂತಲೂ, ಅನಾಖ್ಯಾತ ನಿಮಿಷರು– ೨೮ ನೇ ಕಕ್ಷದ ಅನಾಖ್ಯಾತ ದೇವತೆಗಳು ಉತ್ತಮರು. ಅನಾಖ್ಯಾತರಿಂದಲಿ– ಈ ಅನಾಖ್ಯಾತ ದೇವತೆಗಳಿಗಿಂತಲೂ, ಘನಪ ಪರ್ಜನ್ಯ– ಮೇಘಾಭಿಮಾನಿಯಾದ ಪರ್ಜನ್ಯ, ಅನಿರುದ್ಧನ ಸ್ತ್ರೀ ಉಷಾದೇವಿ–ಅನಿರುದ್ಧನ ಪತ್ನಿ ಉಷಾದೇವಿ, (ವಿರಾಟ್ ಎಂತ ನಾಮಾಂತರ ಉಂಟು). ದ್ಯುನದಿ–ವರುಣನ ಪತ್ನಿ ಭಾಗೀರಥೀದೇವೇರು, ಸಂಜ್ಞಾ–ಸಂಜ್ಞಾದೇವೇರು, ಶಾಮಲಾ–ಶಾಮಲಾದೇವೇರು, ರೋಹಿಣಿಗಳಾರ್ವರು–ರೋಹಿಣೀ ದೇವೇರು, ಅಂತು ಆರುಮಂದಿಗಳು, ೨೯ ನೇ ಕಕ್ಷದವರು, ಸಮರು–ಸಮಾನರು, ಅನಾಖ್ಯಾತ–ಅನಾಖ್ಯಾತರಾದ, ಅನಿಮಿಷೋತ್ತಮರು–ದೇವತಿಗಳಿಂದ ಉತ್ತಮರು. ಇವರಗಿಂತಲಿ–ಈ ಆರು ಮಂದಿಗಿಂತಲೂ, ಕರ್ಮಜರು– ೩೦ ನೇ ಕಕ್ಷದವರಾದ ಕರ್ಮಜರು, ನೂರು–ನೂರುಮಂದಿ ಪ್ರಿಯವ್ರತಾದಿರಾಯರುಗಳು ಉತ್ತಮರು ಎಂತ ತಾತ್ಪರ್ಯ.

**ಪೃಥು ನಹುಷ ಶಶಿಬಿಂದು ಪ್ರೀಯ ।**
**ವ್ರತ ಪರೀಕ್ಷಿತ ನೃಪರು ಭಾಗೀ ।**
**ರಥಿಯ ನೋಡಲ್ಕಧಿಕ ಬಲ್ಯಾದಿಂದ್ರ ಸಪ್ತಕರು ॥**
***ಪಿತೃಗಳೆಂಟೆಂಟಧಿಕವಪ್ಸರ ।**
**ಸತಿಯರೀರ್ಬೈದೊಂದು ಮನುಗಳು ।**
**ದಿತಿಜಗುರು ಚ್ಯಾವನ ಉಚಥ್ಯರು ಕರ್ಮಜರು ಸಮರು ॥ ೬ ॥**

ಇನ್ನೂ ೩೦ ನೇ ಕಕ್ಷದ ಕರ್ಮಜರಾದ ನೂರುಮಂದಿ ರಾಜರು ಮೊದಲಾದವರ ವಿಚಾರ ಹೇಳತಾರೆ.

* ವ್ಯಾಖ್ಯಾನದಲ್ಲಿ ಚಿರಪಿತೃಗಳು ಏಳು ಮಂದಿ ಎಂತ ಇದ್ದು, 'ಪಿತೃಗಳೆಂಟು' ಎಂದು ಶ್ಲೋಕದಲ್ಲಿದೆ. 'ಪಿತೃಗಳೇಳೆಂಟಧಿಕ' ಎಂಬ ಒಂದು ಪಾಠಾಂತರ ವರದೇಂದ್ರ ಪ್ರಕಾಶನ ಪಂಚರತ್ನ ಪ್ರಕಾಶಿಕೆಯಲ್ಲಿದೆ. (ಭಾಗ ೫–ಪುಟ ೨೧೧೩)

ಪೃಥು ನಹುಷ ಶಶಿಬಿಂದು ಪ್ರೀಯವ್ರತ ಪರೀಕ್ಷಿತ–ಪೃಥುರಾಯ, ನಹುಷರಾಯ, ಶಶಿಬಿಂದುರಾಯ, ಪ್ರಿಯವ್ರತರಾಯ, ಪರೀಕ್ಷಿತರಾಯ, ನೃಪರು–ಇವರೇ ಮೊದಲಾದ ಅರಸರು ನೂರುಮಂದಿ, ಬಲ್ಯಾದಿಂದ್ರಸಪ್ತಕರು–ಬಲಿಯೇ ಮೊದಲಾದ ಏಳು ಮಂದಿ ಇಂದ್ರರು, ಪಿತೃಗಳು–ಚಿರಪಿತೃಗಳು ಏಳು ಮಂದಿ, ಅಪ್ಸರಸತಿಯರು–ಅಪ್ಸರಸ್ತ್ರೀಯರು ನೂರು ಮಂದಿಯೊಳಗೆ, ಎಂಟು ಮಂದಿ ಹೋಗತಾ, ತೊಂಭತ್ತೆರಡು ಮಂದಿ, (ಎಂಟು ಮಂದಿ ಆಜಾನಜರಲ್ಲಿ ಸೇರಿದ್ದಾರೆ). ಅಧಿಕವು – ೯೨ ಮಂದಿ ಅಪ್ಸರರು, ೮ ಮಂದಿ ಗಂಧರ್ವರು, ಇವರು ಆಜಾನಜರಲ್ಲಿ ಪಠಿತರಾದವರು. ಎಂಟು–ಗಂಧರ್ವರು ಎಂಟು ಮಂದಿ, ಇವರು ಆಜಾನಜರಲ್ಲಿ ಪಠಿತರಾದವರು ಅವರು ತಾರತಮ್ಯದಲ್ಲಿ ಅಧಿಕರಾದವರಾದ್ದರಿಂದ ಆಜಾನಜರಲ್ಲಿ ನ್ಯೂನ ಮಾಡಿ ಕರ್ಮಜರಲ್ಲಿ ಸೇರಿಸಲ್ಪಟ್ಟಿದೆ. ಈರೈದೊಂದು ಮನುಗಳು–ಮನುಗಳು ಹನ್ನೊಂದು ಮಂದಿ, ದಿತಿಜಗುರು–ದೈತ್ಯಗುರುಗಳಾದ ಶುಕ್ರಾಚಾರ್ಯರು, ಚ್ಯಾವನ ಉಚಥ್ಯರು–ಚ್ಯಾವನ ಋಷಿಗಳು ಉಚಥ್ಯ ಋಷಿಗಳು ಇವರೇ ಮೊದಲಾದ ಋಷಿಗಳು ೯೦ ಮಂದಿ. ಇನ್ನೂ ಅನೇಕ ಮಂದಿ, ಸಮರು– ಸಮಾನರು, ಕರ್ಮಜರು–ಈ ಯಾವತ್ತೂ ಮಂದಿ ಕರ್ಮಜರು ಎಂತ ಅರ್ಥ. ಭಾಗೀರಥಿಯ ನೋಡಲ್ಕೆ–ಪೂರ್ವೋಕ್ತ ಗಂಗಾ ಪರ್ಜನ್ಯಾದಿ ಆರು ಮಂದಿಗಿಂತಲೂ, ಅಧಿಕ–ಅಧಿಕರು ಎಂತ ತಾತ್ಪರ್ಯ.

**ಧನಪ ವಿಷ್ವಕ್ಸೇನ ಗಣಪಾ ।**
**ಶ್ವಿನಿಗಳೆಂಭತ್ತೈದು ಶೇಷರಿ ।**
**ಗೆಣೆಯೆನಿಸುವರು ಮಿತ್ರ ತಾರಾ ನಿರಋತಿ ಪ್ರವಹಿ ॥**
**ಗುಣಗಳಿಂದೈದಧಿಕ ಎಂಭ ।**
**ತ್ತೆನಿಪ ಶೇಷರಿಗುತ್ತಮರು ಸ ।**
**ನ್ಮುನಿ ಮರೀಚಿ ಪುಲಸ್ತ್ಯ ಪುಲಹ ಕ್ರತು ವಸಿಷ್ಠಮುಖ ॥ ೭ ॥**

ಶತಸ್ಥರಾರಂಭಮಾಡಿ ಸಪ್ತಋಷಿಗಳ ಪರಿಯಂತ ತಾರತಮ್ಯವನ್ನ ಹೇಳತಾರೆ.

ಧನಪ–ಕುಬೇರ, ವಿಷ್ವಕ್ಸೇನ–ವಾಯುಪುತ್ರ ವಿಷ್ವಕ್ಸೇನ, ಗಣಪ–ವಿಘ್ನೇಶ್ವರ, ಅಂತು ಮೂರುಮಂದಿ, ಅಶ್ವಿನಿಗಳೆಂಭತ್ತೈದು–ಪೂರ್ವೋಕ್ತರು ಮೂರುಮಂದಿ ಅಲ್ಲದೆ ಅಶ್ವಿನೀದೇವತೆಗಳೇ ಮೊದಲಾದವರು ಎಂಭತ್ತೈದು ಮಂದಿ, ಈ ಶತಸ್ಥರೊಳಗೆ ಉತ್ತಮ ಕಕ್ಷದವರು ಹೋಗತಾ ಉಳಿದವರು. ಇವರೊಳಗೆ ಅವರಕಕ್ಷದಲ್ಲಿ ಸೇರಿದವರು ಇಬ್ಬರು ಹೋಗತಾ ಎಂಭತ್ತುಮೂರುಮಂದಿ ಬಾಕಿ ಉಳಿದವರು. ಶೇಷರಿಗೆ–ಶೇಷ ಉಳಿದ ಈ ೮೩ ಜನಕ್ಕೆ, ಎಣೆಯೆನಿಸುವರು–೩೧ ನೇ ಕಕ್ಷದವರು ಧನಪಾದಿಗಳು ಮೂರುಮಂದಿ, ಶೇಷಶತಸ್ಥರು ಎಂಭತ್ತುಮೂರು ಜನರು, ಅಂತು ಎಂಭತ್ತಾರು ಜನರು ಸಮಾನರೆನಿಸುವರು ; ಇವರು ಕರ್ಮಜರಿಗೆ ಉತ್ತಮರೆಂದು ತಾತ್ಪರ್ಯ. ಉಕ್ತಶೇಷರು, ಎಂಭತ್ತೈದು ಜನ ೩೧ನೇ ಕಕ್ಷದವರು ತದವರಕಕ್ಷದವರು; ಇಬ್ಬರು, ಅಂತು ೮೫ ಮಂದಿ.

ಐದಧಿಕ ಎಂಭತ್ತೆನಿಪ ಶೇಷರಿಗೆ–ಈ ಎಂಭತ್ತೈದು ಶೇಷಶತಸ್ಥರಾದವರಿಗೆ, ಮಿತ್ರ ತಾರಾ ನಿರಋತಿ ಪ್ರವಹಿ–೩೨ ನೇ ಕಕ್ಷ ಮಿತ್ರನಾಮಕ ಸೂರ್ಯ, ತಾರಾದೇವೇರು, ನಿರಋತಿ, ಪ್ರವಹಪತ್ನಿ ಪ್ರಾವಹೀ, ಈ ನಾಲ್ವರು, ಗುಣಗಳಿಂದ–ಕೆಲವು ಗುಣಗಳಿಂದ, ಉತ್ತಮರು–ಶ್ರೇಷ್ಠರು, ಸನ್ಮುನಿ–೩೩ ನೇ ಕಕ್ಷ ಸಮೀಚೀನವಾದ ಜ್ಞಾನ, ಭಕ್ತಿ, ವೈರಾಗ್ಯಯುಕ್ತರಾದ, ಋಷಿಗಳಾದ, ಮರೀಚಿ ಪುಲಸ್ತ್ಯ ಪುಲಹ – ಮರೀಚಿಋಷಿಗಳು, ಪುಲಸ್ತ್ಯ ಋಷಿಗಳು, ವಸಿಷ್ಠ ಋಷಿಗಳು, ಮುಖ–ಮೊದಲಾದ ಐದು ಋಷಿಗಳು ಇವರಲ್ಲದೆ, ಇದೇ ಕಕ್ಷದವರ ಅವಶಿಷ್ಟ, ಮುಂದಿನ ಶ್ಲೋಕದಲ್ಲಿ ಹೇಳತಾರೆ.

**ಅತ್ರಿ ಅಂಗಿರರೇಳು ಬ್ರಹ್ಮನ ।**
**ಪುತ್ರರಿವರಿಗೆ ಸಮರು ವಿಶ್ವಾ ।**
**ಮಿತ್ರ ವೈವಸ್ವತರು ಈಶಾವೇಶ ಬಲದಿಂದ ॥**
**ಮಿತ್ರಗಿಂತುತ್ತಮರು ಸ್ವಾಹಾ ।**
**ಭರ್ತೃ ಭೃಗುವು ಪ್ರಸೂತಿ ವಿಶ್ವಾ ।**
**ಮಿತ್ರ ಮೊದಲಾದವರಿಗಿಂತಲಿ ಮೂವರುತ್ತಮರು ॥ ೮ ॥**

ಮೂವತ್ತಮೂರನೇ ಕಕ್ಷ ಅವಶಿಷ್ಟವೂ, ಮೂವತ್ತುನಾಲ್ಕನೇ ಕಕ್ಷದವರ ವಿಚಾರವೂ ಹೇಳತಾರೆ.

ಅತ್ರಿ–೩೩ ನೇ ಕಕ್ಷದಲ್ಲಿ ಅವಶಿಷ್ಟರಾದವರು ಮ್ಯಾಲಿನ ಶ್ಲೋಕದಲ್ಲಿ ಉಕ್ತರು. ಅತ್ರಿ ಋಷಿಗಳು, ಅಂಗಿರರು–ಅಂಗೀರಸ ಋಷಿಗಳು, ಏಳು–ಅಂತು ಏಳು ಜನ ಋಷಿಗಳು, ಬ್ರಹ್ಮನ ಪುತ್ರರು–ಬ್ರಹ್ಮದೇವರಿಗೆ ಪುತ್ರರಾದಂಥಾವರು. ಇವರಿಗೆ–ಈ ಏಳುಮಂದಿ ಋಷಿಗಳಿಗೆ, ಸಮರು – ಸಮಾನರಾದವರು, ವಿಶ್ವಾಮಿತ್ರ – ವಿಶ್ವಾಮಿತ್ರಋಷಿಗಳು, ವೈವಸ್ವತರು–ವೈವಸ್ವತರು, ಅಂತು ಇಬ್ಬರು, ಸಪ್ತಋಷಿಗಳಿಗೆ ಸಮಾನರು. ಇವರಿಬ್ಬರು ಸಹಿತವಾಗಿ ೯೦ ಮಂದಿ, ೩೩ ನೇ ಕಕ್ಷದವರು. ವಿಶ್ವಾಮಿತ್ರ ವೈವಸ್ವತ ಇವರಿಬ್ಬರು, ಈಶಾವೇಶಬಲದಿಂದ–ಪರಮಾತ್ಮನ ಆವೇಶದಿಂದ ಯುಕ್ತರು. ಮಿತ್ರಗಿಂದುತ್ತಮರು–ಇವರು ೯ ಮಂದಿ ಮಿತ್ರಾದಿಗಳಿಗಿಂತಲೂ ಉತ್ತಮರು. ಸ್ವಾಹಾಭರ್ತೃ–೩೪ ನೇ ಕಕ್ಷದವರಾದ ಅಗ್ನಿದೇವರು, ಭೃಗುವು–ಭೃಗು ಋಷಿಗಳು, ಪ್ರಸೂತಿ–ದಕ್ಷಪತ್ನಿ ಪ್ರಸೂತಿ ದೇವೇರು, ಮೂವರು – ಈ ಮೂರುಮಂದಿ, ವಿಶ್ವಾಮಿತ್ರ ಮೊದಲಾದವರಿಗಿಂತಲಿ – ವಿಶ್ವಾಮಿತ್ರಾದಿ ಒಂಭತ್ತುಮಂದಿಗಿಂತಲೂ, ಉತ್ತಮರು–ಉತ್ತಮರು ಎಂತ ತಾತ್ಪರ್ಯ.

**ನಾರದೋತ್ತಮನಗ್ನಿಗಿಂತಲಿ ।**
**ವಾರಿನಿಧಿ ಪಾದೋತ್ತಮನು ಯಮ ।**
**ತಾರಕೇಶ ದಿವಾಕರರು ಶತರೂಪರುತ್ತಮರು ॥**

**ವಾರಿಜಾಪ್ತನಿಗಿಂತ ಪ್ರವಹ ।**
**ಮಾರುತೋತ್ತಮ ಪ್ರವಹಗಿಂತಲಿ ॥**
**ಮಾರಪುತ್ರನಿರುದ್ಧ ಗುರು ಮನು ದಕ್ಷ ಶಚಿ ರತಿಯು ॥ ೯ ॥**

೩೫ ನೇ ಕಕ್ಷದಾರಭ್ಯ ೩೯ ನೇ ಕಕ್ಷದವರೆಗೂ ತಾರತಮ್ಯ ಹೇಳತಾರೆ.

ಅಗ್ನಿಗಿಂತಲಿ–೩೪ ನೇ ಕಕ್ಷದ ಅಗ್ನ್ಯಾದಿ ಮೂರುಮಂದಿಗಿಂತಲೂ, ನಾರದೋತ್ತಮನು–೩೫ ನೇ ಕಕ್ಷದ ನಾರದಋಷಿ ಉತ್ತಮನು. ವಾರಿನಿಧಿ–೩೬ ನೇ ಕಕ್ಷದವರಾದ, ವರುಣದೇವರು, ನಾರದಋಷಿಗಿಂತಲೂ, ಪಾದೋತ್ತಮನು – ಪಾದಗುಣದಿಂದ ಉತ್ತಮನು. ಯಮ–೩೭ ನೇ ಕಕ್ಷದವರಾದ ೧. ಯಮದೇವರು, ತಾರಕೇಶ–೨. ಅಶ್ವಿನ್ಯಾದಿ ನಕ್ಷತ್ರಗಳಿಗೆ ಈಶನಾದ ಚಂದ್ರದೇವರು, ದಿವಾಕರರು–೩. ವಿವಸ್ವಾನ್ನಾಮಕ ಸೂರ್ಯದೇವರು, ಶತರೂಪರು–೪. ಸ್ವಾಯಂಭುವಮನುಪತ್ನಿ ಶತರೂಪಾದೇವೇರು. ಈ ನಾಲ್ಕುಮಂದಿ, ಉತ್ತಮರು–ಪೂರ್ವೋಕ್ತ ವರುಣನಿಗಿಂತಲೂ, ಉತ್ತಮರು. ಪ್ರವಹ ಮಾರುತ – ೩೮ ನೇ ಕಕ್ಷದವರಾದ ಪ್ರವಹವಾಯುದೇವರು, ವಾರಿಜಾಪ್ತನಿಗಿಂತ–ಪೂರ್ವೋಕ್ತ ವಿವಸ್ವಾನ್ನಾಮಕ ಸೂರ್ಯಾದಿ ನಾಲ್ಕುಮಂದಿಗಳಿಗಿಂತಲೂ, ಉತ್ತಮ–ಉತ್ತಮರಾದವರು. ಪ್ರವಹಗಿಂತಲಿ–ಈ ಪೂರ್ವೋಕ್ತ ಪ್ರವಹ ವಾಯುದೇವರಿಗಿಂತಲೂ, ಮಾರಪುತ್ರನಿರುದ್ಧ – ೩೯ ನೇ ಕಕ್ಷದವರಾದ ಕಾಮಪುತ್ರ ಅನಿರುದ್ಧ ೧, ಗುರು–ಬೃಹಸ್ಪತ್ಯಾಚಾರ್ಯರು ೨, ಮನು–ಸ್ವಾಯಂಭುವಮನು ೩, ದಕ್ಷ–ದಕ್ಷಪ್ರಜೇಶ್ವರ ೪, ಶಚಿ–ಇಂದ್ರದೇವರ ಪತ್ನಿ ಶಚೀದೇವೇರು ೫, ರತಿಯು–ಮನ್ಮಥನ ಪತ್ನಿ ರತೀದೇವೇರು ೬, ಅಂತು ಈ ಆರು ಜನರು.

**ಆರು ಜನರುಗಳಿಂದಲಾಹಂ ।**
**ಕಾರಿಕಪ್ರಾಣೋತ್ತಮಖಿಳಶ ।**
**ರೀರಮಾನಿ ಪ್ರಾಣಗಿಂತಲಿ ಕಾಮ ಇಂದ್ರರಿಗೆ ॥**
**ಗೌರಿ ವಾರುಣಿ ಖಗಪರಾಣಿಗೆ ।**
**ಶೌರಿ ಮಹಿಷಿಯರೊಳಗೆ ಜಾಂಬವ ।**
**ತೀ ರಮಾಯುತಳಾದ ಕಾರಣ ಅಧಿಕಳೆನಿಸುವಳು ॥ ೧೦ ॥**

೪೦ ನೇ ಕಕ್ಷಾರಭ್ಯ ೪೩ ನೇ ಕಕ್ಷದವರಿಗೂ ಹೇಳತಾರೆ.

ಆರುಜನರುಗಳಿಂದಲಿ – ೩೯ ನೇ ಕಕ್ಷದವರಾದ ಕಾಮಪುತ್ರ ಅನಿರುದ್ಧಾದಿ ೬ ಜನರಿಗಿಂತಲೂ, ಆಹಂಕಾರಿಕಪ್ರಾಣ – ೪೦ ನೇ ಕಕ್ಷದವರಾದ ಆಹಂಕಾರಿಕಪ್ರಾಣದೇವರು, ಉತ್ತಮ–ಉತ್ತಮರು. ಅಖಿಳಶರೀರಮಾನಿ–ಸಮಸ್ತ ಪ್ರಾಣಿಗಳ ಶರೀರ ಅಭಿಮಾನಿಯಾದ, ೪೦ನೇ ಕಕ್ಷದವರಾದ, ಪ್ರಾಣಗಿಂತಲಿ–ಆಹಂಕಾರಿಕ ಪ್ರಾಣದೇವರಿಗಿಂತಲೂ, ಕಾಮ ಇಂದ್ರರಿಗೆ–೪೧ನೇ ಕಕ್ಷದ ಇಂದ್ರದೇವರು, ಕಾಮದೇವರು ಇವರಿಬ್ಬರೂ

ಉತ್ತಮರು. ಗೌರಿ ವಾರುಣಿ ಖಗಪರಾಣಿಗೆ–೪೨ ನೇ ಕಕ್ಷದವರಾದ ರುದ್ರದೇವರ ಪತ್ನಿ ಪಾರ್ವತೀದೇವೇರು ೧, ಶೇಷಪತ್ನಿ ವಾರುಣೀದೇವೇರು ೨, ಗರುಡದೇವರ ಪತ್ನಿ ಸೌಪರ್ಣೀ ದೇವೇರು ೩, ಈ ಮೂರುಮಂದಿ ಉತ್ತಮರು. ಈ ಮೂರುಮಂದಿಗಿಂತಲೂ, ಶೌರಿ ಮಹಿಷಿಯರ–೪೩ ನೇ ಕಕ್ಷದವರಾದ ಕೃಷ್ಣಪತ್ನೇರಾದ ನೀಲಾದಿ ಷಣ್ಮಹಿಷಿಯರು ಉತ್ತಮರು. ಒಳಗೆ–ಈ ನೀಲಾದಿ ಆರುಮಂದಿ ಒಳಗೆ, ಜಾಂಬವತೀ–ಜಾಂಬವತೀ ದೇವೇರು, ರಮಾಯುತಳಾದ ಕಾರಣ–ಲಕ್ಷ್ಮೀ ಆವೇಶ ಅಧಿಕವಾಗಿರೋಕಾರಣದಿಂದ, ಅಧಿಕಳೆನಿಸುವಳು–ಶ್ರೇಷ್ಠರೆಂದು ಕರಿಸಿಕೊಳ್ಳಲ್ಪಟ್ಟಿದ್ದಾರೆ ಎಂತ ತಾತ್ಪರ್ಯ.

**ಹರ ಫಣಿಪ ವಿಹಗೇಂದ್ರ ಮೂವರು ।**
**ಹರಿಮಡದಿಯರಿಗುತ್ತಮರು ಸೌ ।**
**ಪರಣಿಪತಿಗುತ್ತಮರು ಭಾರತಿ ವಾಣಿ ಈರ್ವರಿಗೆ ॥**
**ಮರುತ ಬ್ರಹ್ಮರು ಉತ್ತಮರು ಇಂ ।**
**ದಿರೆಯು ಪರಮೋತ್ತಮಳು ಲಕ್ಷ್ಮಿಗೆ ।**
**ಸರಿಯೆನಿಸುವವರಿಲ್ಲವೆಂದಿಗು ದೇಶಕಾಲದೊಳು ॥ ೧೧ ॥**

೪೪ ನೇ ಕಕ್ಷಾರಭ್ಯ ೪೭ ನೇ ಕಕ್ಷದವರಿಗೂ ಹೇಳತಾರೆ.

ಹರ–೪೪ ನೇ ಕಕ್ಷದವರಾದ ರುದ್ರದೇವರು ೧, ಫಣಿಪ–ಸರ್ಪಶ್ರೇಷ್ಠರಾದ ಶೇಷ ದೇವರು ೨, ವಿಹಗೇಂದ್ರ–ಪಕ್ಷಿಶ್ರೇಷ್ಠರಾದ ಗರುಡದೇವರು ೩, ಮೂವರು–ಈ ಮೂರು ಮಂದಿಗಳು, ಹರಿಮಡದಿಯರಿಗುತ್ತಮರು – ಶ್ರೀ ಪರಮಾತ್ಮನ ಪತ್ನೇರಾದ ೪೩ನೇ ಕಕ್ಷದವರಾದ ನೀಲಾದಿ ಆರುಮಂದಿಗಿಂತಲೂ ಉತ್ತಮರು. ಸೌಪರಣಿಪತಿಗುತ್ತಮರು– ಈ ಪೂರ್ವೋಕ್ತ ಗರುಡಾದಿ ಮೂರುಮಂದಿಗಿಂತಲೂ ಉತ್ತಮರು ದಾರೆಂದರೆ, ಭಾರತಿ ವಾಣಿ–೪೫ನೇ ಕಕ್ಷದವರಾದ ಭಾರತೀದೇವೇರು, ವಾಣೀದೇವೇರು, ಇವರಿಬ್ಬರೂ ಉತ್ತಮರು, ಈರ್ವರಿಗೆ–ಈ ಭಾರತೀದೇವೇರು ಸರಸ್ವತೀದೇವೇರು ಇವರಿಗಿಂತಲೂ, ೪೬ನೇ ಕಕ್ಷದವರಾದ, ಮರುತ ಬ್ರಹ್ಮರುತ್ತಮರು–ವಾಯುದೇವರು ೧, ಬ್ರಹ್ಮದೇವರು ೨, ಇವರಿಬ್ಬರು ಉತ್ತಮರು. ಇಂದಿರೆಯು–೪೭ ನೇ ಕಕ್ಷದವರಾದ ಲಕ್ಷ್ಮೀದೇವೇರು, ಪರಮೋತ್ತಮಳು–೪೬ ನೇ ಕಕ್ಷದವರಾದ ಬ್ರಹ್ಮ ವಾಯುಗಳಿಗಿಂತಲೂನೂ, ಅಸ್ವತಂತ್ರ ಚೇತನರೊಳಗೆ ಇರುವ ಸರ್ವರಿಗೂನೂ ಅತ್ಯಂತ ಶ್ರೇಷ್ಠರು. ಲಕ್ಷ್ಮಿಗೆ ಸರಿಯೆನಿಸುವವ ರಿಲ್ಲವು–ಶ್ರೀ ಪರಮಾತ್ಮನ ವ್ಯತಿರಿಕ್ತ ಈ ರಮಾದೇವೇರಿಗೆ ಸಮಾನರೆನಿಸತಕ್ಕವರು ದಾರು ಇಲ್ಲ. ದೇಶಕಾಲದೊಳು–ದಾವ ದೇಶದಲ್ಲೂ, ದಾವಕಾಲದಲ್ಲೂ, ಎಂದಿಗೂ–ಅನಾದ್ಯ ನಂತಕಾಲಕ್ಕೂ ಇಲ್ಲ ಎಂತ ತಾತ್ಪರ್ಯ.

**ಶ್ರೀ ಮುಕುಂದನ ಮಹಿಳೆ ಲಕುಮಿ ಮ ।**
**ಹಾಮಹಿಮೆಗೇನೆಂಬೆ ಬ್ರಹ್ಮೇ ।**
**ಶಾಮರೇಂದ್ರರ ಸೃಷ್ಟಿ ಸ್ಥಿತಿ ಲಯಗೈಸಿ ಅವರವರ ॥**

**ಧಾಮುಗಳ ಕಲ್ಪಿಸಿಕೊಡುವಳಜ ।**
**ರಾಮರಣಳಾಗಿದ್ದು ಸರ್ವ ।**
**ಸ್ವಾಮಿ ಮಮ ಗುರುವೆಂದುಪಾಸನೆ ಮಾಳ್ಪಳಚ್ಯುತನ ॥ ೧೨ ॥**

ಲಕ್ಷ್ಮೀದೇವೇರ ಮಾಹಾತ್ಮ್ಯ ಹೇಳತಾರೆ.

ಶ್ರೀ ಮುಕುಂದನ ಮಹಿಳೆ – ಕಾಂತಿಸಂಪನ್ನನಾದ, ಮೋಕ್ಷಪ್ರದನಾದ ಶ್ರೀ ಪರಮಾತ್ಮನ ಪತ್ನಿಯಾದ ನಿತ್ಯಮುಕ್ತರಾದ, ಲಕುಮಿ–ಲಕ್ಷ್ಮೀದೇವೇರ, ಮಹಾಮಹಿಮೆಗೇನೆಂಬೆ–ಅತ್ಯಂತ ಶ್ರೇಷ್ಠವಾದ ಮಾಹಾತ್ಮ್ಯಗೆ ಏನಂತ ಹೇಳಲಿ, ಎಂದರೆ ಆಶ್ಚರ್ಯಕರವಾದ ಮಹಿಮೋಪೇತರೆಂದು ತಾತ್ಪರ್ಯ. ಈ ರಮಾದೇವೇರು, ಬ್ರಹ್ಮೇಶಾಮರೇಂದ್ರರ–ಬ್ರಹ್ಮರುದ್ರೇಂದ್ರಾದಿ ಸಮಸ್ತರನ್ನ, ಸೃಷ್ಟಿ–ಶ್ರೀರೂಪದಿಂದ ಸೃಷ್ಟಿ, ಸ್ಥಿತಿ–ಭೂರೂಪದಿಂದ ಪಾಲನಿ, ಲಯ–ದುರ್ಗಾರೂಪದಿಂದ ಲಯ ಅಂದರೆ ನಾಶ, ಗೈಸಿ–ಮಾಡಿದವರಾಗಿ ಲಯಾಂತದಲ್ಲಿ ವಿರಜಾರೂಪರಾದ ತಾವು ತಮ್ಮಲ್ಲಿ ಸ್ನಾನಮಾಡೋ ಮಾತ್ರದಿಂದ ಲಿಂಗಭಂಗ ಐದಿಸಿ, ಅನಂತರ, ಅವರವರ–ಆಯಾ ಲಿಂಗಭಂಗರಾದ, ಜೀವರ ಆವಾಸಕ್ಕೆ ಯೋಗ್ಯವಾದ, ಧಾಮುಗಳ ಕಲ್ಪಿಸಿ–ಪ್ರಳಯೋದಕದಲ್ಲಿ ಮುಳುಗಿರುವ ಧಾಮತ್ರಯಗಳ ಉದಕರಹಿತವಾಗಿ ಮಾಡಿ, ಅಭಿವ್ಯಕ್ತಿರೂಪದಿಂದ ಕಲ್ಪನಮಾಡಿ, ಕೊಡುವಳು–ಅವರವರಿಗೆ ಯೋಗ್ಯ ಪ್ರದೇಶಗಳ ಆವಾಸಕ್ಕಾಗಿ ಕೊಡುವರು ; ಅಂತಃಪ್ರೇರಕನಾದ ತಮ್ಮ ಬಿಂಬನ ಆಜ್ಞಾದಿಂದ ಎಂತ ತಾತ್ಪರ್ಯ. ಅಜರಾಮರಣಳಾಗಿದ್ದು–ಅನಾದ್ಯನಂತಕಾಲದಿಂದಲೂ ಜನನಮರಣಗಳ ಹೊಂದತಕ್ಕ ದೇಹಶೂನ್ಯರಾಗಿದ್ದು, ಅಚ್ಯುತನ–ನಾಶರಹಿತನಾದ ತಮ್ಮ ಪತಿಯಾದ ನಾರಾಯಣದೇವರ, ಸರ್ವಸ್ವಾಮಿ–ಸರ್ವ ಚರಾಚರಕ್ಕೇನು, ತಮಗೇನು, ಎಲ್ಲಕ್ಕೂ ಸ್ವಾಮಿ ಎಂತಲೂ, ಮಮ ಗುರುವೆಂದು–ಸಾಕ್ಷಾತ್ತಾಗಿ ತಮಗೆ ಗುರುವೆಂತಲೂ, ಉಪಾಸನೆ ಮಾಳ್ಪಳು–ಉಪಾಸನಾಮಾಡೋವರಾಗುತ್ತಾರೆ. ಏತಾದೃಶ ಮಹಾಮಹಿಮೋಪೇತರಾದವರು ಶ್ರೀ ಲಕ್ಷ್ಮೀದೇವೇರು ಎಂತ ತಾತ್ಪರ್ಯ.

**ಈಸು ಮಹಿಮೆಗಳುಳ್ಳ ಲಕುಮಿ ಪ ।**
**ರೇಶನಾನಂತಾಂಶ ಗುಣದೊಳು ।**
**ಲೇಶಲೇಶಕೆ ಸರಿಯೆನಿಸಳಾವಾವ ಕಾಲದಲಿ ॥**
**ದೇಶಕಾಲಾತೀತ ಲಕುಮಿಗೆ ।**
**ಕೇಶವನ ವಕ್ಷಸ್ಥಳವೇ ಅವ ।**
**ಕಾಶವಾಯಿತು ಇವನ ಮಹಿಮೆ ವ್ಯಾಪ್ತಿಗೆಣೆಯುಂಟೆ ॥ ೧೩ ॥**

ಇನ್ನೂ ಲಕ್ಷ್ಮೀದೇವೇರ ಮಹಿಮಾ ಹೇಳತಾರೆ.

ಈಸು ಮಹಿಮೆಗಳುಳ್ಳ ಲಕುಮಿ – ಇಷ್ಟು ಮಹಿಮೆಗಳಿಂದ ಯುಕ್ತರಾದ ಲಕ್ಷ್ಮೀದೇವೇರು, ಪರೇಶನ-ಬ್ರಹ್ಮಾದಿಗಳಿಗಿಂತಲೂ, ತಮಗಿಂತಲೂ ಅನ್ಯನಾದ ತಮ್ಮ ಪತಿಯಾದ

ಶ್ರೀ ನಾರಾಯಣದೇವರ, ಅನಂತಾಂಶಗುಣದೊಳು–ಒಂದು ಗುಣದೊಳು ಅನಂತಾಂಶ, ಈ ಅನಂತಾಂಶ ಗುಣದೊಳು, ಲೇಶಲೇಶಕೆ–ಅನಂತಾನಂತಭಾಗ ಮಾಡಲಾಗಿ, ಆ ಭಾಗ ದೊಳಗೆ, ಲೇಶದೊಳಗೆ ಲೇಶಭಾಗವಾದ ಗುಣಕ್ಕೆ, ಆವಾವ ಕಾಲದಲಿ–ಸದಾ ಸರ್ವಕಾಲ ದಲ್ಲೂ, ಸರಿಯೆನಿಸಳು–ಸಮಾನರೆಂತ ಎನಿಸೋದಿಲ್ಲ. ದೇಶಕಾಲಾತೀತ–ಲಕ್ಷ್ಮ್ಯಾತ್ಮಕ ದೇಶ, ಲಕ್ಷ್ಮ್ಯಾತ್ಮಕ ಕಾಲ ಎರಡರಿಂದ ಅತೀತನಾದ, ಗುಣಪೂರ್ಣನಾದ, ಕೇಶವನ ವಕ್ಷಸ್ಥಳವೇ – ಬ್ರಹ್ಮ ರುದ್ರಾದಿ ದೇವತೆಗಳಿಗೆ ಸ್ವಾಮಿಯಾದ ಶ್ರೀ ನಾರಾಯಣದೇವರ ಹೃದಯಪ್ರದೇಶವೇ, ಲಕುಮಿಗೆ–ಲಕ್ಷ್ಮೀದೇವೇರಿಗೆ, ಅವಕಾಶವಾಯಿತು–ಆವಾಸಕ್ಕೆ ಯೋಗ್ಯವಾದ ಅವಕಾಶಸ್ಥಾನವಾಯಿತು. ಈ ದೃಷ್ಟಾಂತದಿಂದ ಏಕದೇಶವ್ಯಾಪ್ತರು ರಮಾದೇವೇರು ಎಂದು ತಾತ್ಪರ್ಯ. ಇವನ ಮಹಿಮೆ–ಈ ಪರಮಾತ್ಮನ ಮಹಿಮೆಗೆ, ವ್ಯಾಪ್ತಿಗೆ–ವ್ಯಾಪ್ತಿಗೆ, ಎಣೆಯುಂಟೆ–ಆದ್ಯಂತಗಳು ಇಲ್ಲ ಎಂತಲೂ, ರಮಾದೇವೇರ ಮಹಿಮೆಗೆ, ವ್ಯಾಪ್ತಿಗೆ ಆದ್ಯಂತಗಳುಂಟು ಎಂತಲೂ ತಾತ್ಪರ್ಯ.

**ಒಂದು ರೂಪದೊಳಂದವಯವದೊ ।**
**ಳೊಂದು ರೋಮದೊಳೊಂದು ದೇಶದಿ ।**
**ಪೊಂದಿಕೊಂಡಿಹರಜಭವಾದಿ ಸಮಸ್ತ ಜೀವಗಣ ॥**
**ಸಿಂಧು ಸಪ್ತದ್ವೀಪ ಮೇರು ಸು ।**
**ಮಂದರಾದ್ರ್ಯಾದಿಗಳು ಬ್ರಹ್ಮ ಪು ।**
**ರಂದರಾದಿ ಸಮಸ್ತಲೋಕ ಪರಾಲಯಗಳೆಲ್ಲ ॥ ೧೪ ॥**

ಶ್ರೀ ಪರಮಾತ್ಮನ ಮಾಹಾತ್ಮ್ಯ ಹೇಳತಾರೆ. ೪೮ ನೇ ಕಕ್ಷ ಶ್ರೀ ಪರಮಾತ್ಮ ರಮಾದೇವೇರಿಗಿಂತ ಉತ್ತಮನು. ಇವನ ಮಹಿಮೆ ಎಂಥಾದ್ದೆಂದರೆ :

ಒಂದುರೂಪದೊಳು–ಅನಂತಾನಂತರೂಪಗಳೊಳಗೆ ಒಂದು ರೂಪ ; ಆ ಒಂದು ರೂಪದೊಳಗೆ ವಿದ್ಯಮಾನವಾದ, ಒಂದವಯವದೊಳು–ಒಂದು ಅವಯವ ; ಈ ಒಂದು ಅವಯವದಲ್ಲಿ ವಿದ್ಯಮಾನವಾದ, ಒಂದು ರೋಮದೊಳು–ಒಂದು ರೋಮ ; ಈ ರೋಮದಲ್ಲಿ ಅವಕಾಶರೂಪವಾದ ವಿಸ್ತಾರವಾದ ಪ್ರದೇಶವಿಶೇಷ ; ಆ ಪ್ರದೇಶವಿಶೇಷ ದಲ್ಲಿ, ಒಂದು ದೇಶದಿ–ಒಂದಾನೊಂದು ಏಕದೇಶವಾದ ಪ್ರದೇಶದಲ್ಲಿ, ಅಜಭವಾದಿ– ಬ್ರಹ್ಮರುದ್ರೇಂದ್ರಾದಿ ಮೊದಲಾದ, ಸಮಸ್ತ ಜೀವಗಣ–ಯಾವತ್ತೂ ಜೀವಗಣಗಳು, ಪೊಂದಿಕೊಂಡಿಹರು – ಆಶ್ರಯಮಾಡಿಕೊಂಡು ಇದ್ದಾರೆ. ಇವರಲ್ಲದೆ, ಸಿಂಧು – ಸಪ್ತಸಮುದ್ರಗಳು, ಸಪ್ತದ್ವೀಪ–ಜಂಬೂಪ್ಲಕ್ಷಾದಿ ಸಪ್ತದ್ವೀಪಗಳು, ಮೇರುಸುಮಂದ ರಾದಿ–ಸಮಿಾಚೀನವಾದ ಸ್ವರ್ಣಾತ್ಮಕ ಮೇರುಪರ್ವತವೇನು, ಮಂದರಪರ್ವತವೇನು, ಇವೇ ಮೊದಲಾದ, ಅದ್ರಿಗಳು–ಅನೇಕವಿಧವಾದ ಪರ್ವತಗಳು, ಬ್ರಹ್ಮ ಪುರಂದರಾದಿ– ಬ್ರಹ್ಮದೇವರು, ಇಂದ್ರದೇವರು, ಇವರೇ ಮೊದಲಾದವರು, ಆವಾಸರಾಗಿರತಕ್ಕ, ಸಮಸ್ತ ಲೋಕ–ಭೂರ್ಭುವ ಸ್ವರ್ಗಾದಿ ಸಮಸ್ತವಾದ ಹದಿನಾಲ್ಕು ಲೋಕಗಳೇನು, ಇನ್ನೂ,

ಪರಾಲಯುಗಳೆಲ್ಲ – ಅನ್ಯವಾದ ವೈಕುಂಠಾದಿ ಆಲಯತ್ರಯಗಳೇನು, ಇವುಗಳೆಲ್ಲಾ ರೋಮಗತ ಅವಕಾಶದಲ್ಲಿ ಒಂದು ಪ್ರದೇಶದಲ್ಲಿ ಇರೋವಾಗಿ ಅವೆ.

**ಸರ್ವದೇವೋತ್ತಮನು ಸರ್ವಗ ।**
**ಸರ್ವಗುಣಸಂಪೂರ್ಣ ಸರ್ವದ ।**
**ಸರ್ವತಂತ್ರಸ್ವತಂತ್ರ ಸರ್ವಾಧಾರ ಸರ್ವಾತ್ಮ ॥**
**ಸರ್ವತೋಮುಖ ಸರ್ವನಾಮಕ ।**
**ಸರ್ವಜನಸಂಪೂಜ್ಯ ಶಾಶ್ವತ ।**
**ಸರ್ವಕಾಮದ ಸರ್ವಸಾಕ್ಷಿಗ ಸರ್ವಜಿತ್ಸರ್ವ ॥ ೧೫ ॥**

ಶ್ರೀ ಪರಮಾತ್ಮನ ಮಹಿಮಾವನ್ನೇ ಹೇಳತಾರೆ.

ಸರ್ವದೇವೋತ್ತಮನು–ಸರ್ವದೇವತೆಗಳಿಗಿಂತಲೂ ಶ್ರೇಷ್ಠನಾದವನು, ಸರ್ವಗ– ಈ ದೇವರು ಸರ್ವತ್ರ ವ್ಯಾಪ್ತನಾಗಿರತಕ್ಕವನು, ಸರ್ವಗುಣಸಂಪೂರ್ಣ–ಸಮಸ್ತ ಕಲ್ಯಾಣ ಗುಣಗಳಿಂದ ಛಂದಾಗಿ ಪೂರ್ಣನಾಗಿರತಕ್ಕವನು. ಸರ್ವದ–ಸರ್ವಪ್ರಾಣಿಗಳ ಮನೋ ಭೀಷ್ಟರೂಪವಾದ ಲಿಂಗದೇಹ ನಾಶಮಾಡಿ ಸ್ವರೂಪಸುಖ ಕೊಡತಕ್ಕವನು. ಸರ್ವತಂತ್ರ ಸ್ವತಂತ್ರ–ಅನ್ಯಾಧೀನನಲ್ಲದ ಸರ್ವಸ್ವಾತಂತ್ರ್ಯವುಳ್ಳವನು. ಸರ್ವ ಚರಾಚರ ವ್ಯಾಪಾರಗಳ ನಡಿಸತಕ್ಕವನು. ಸರ್ವಾಧಾರ–ಸರ್ವಕ್ಕೂ ಆಧಾರಭೂತನಾದಂಥಾವನು, ಸರ್ವಾತ್ಮ– ಸರ್ವಾಧಿಷ್ಠಾನದಲ್ಲಿ ತದಾಕಾರದಿಂದ ಶರೀರವುಳ್ಳವನು, ಸರ್ವತೋಮುಖ–ಸರ್ವತ್ರ ಪಾಣಿಪಾದಾದ್ಯವಯುವಗಳಿಂದ ಅಂತರ್ಯಾಮಿಯಾಗಿ ಇರತಕ್ಕವನು. ಸರ್ವನಾಮಕ– "ನಾಮಾನಿ ಸರ್ವಾಣಿ ಯಮಾವಿಶಂತಿ" ಇತ್ಯುಕ್ತಪ್ರಕಾರ ಸರ್ವಶಬ್ದವಾಚ್ಯನು. ಸರ್ವಜನಸಂಪೂಜ್ಯ–ಸಮಸ್ತರಿಂದಲೂ ಛಂದಾಗಿ ಪೂಜ್ಯನಾದವನು. ಶಾಶ್ವತ–ಸರ್ವ ಪದಾರ್ಥದಲ್ಲಿ ಅಂತರ್ಗತನಾಗಿ ಅವಿಯೋಗನಾಗಿ ಶಾಶ್ವತನಾಗಿರತಕ್ಕವನು. ಸರ್ವ ಕಾಮದ–ತನ್ನ ಭಕ್ತರಿಗೆ ಸಮಸ್ತ ಇಷ್ಟಾರ್ಥಗಳ ಕೊಡತಕ್ಕವನು. ಸರ್ವಸಾಕ್ಷಿಗ– ಸರ್ವಪ್ರಾಣಿಗಳ ಸಾಕ್ಷೀಂದ್ರಿಯಕ್ಕೆ ಗೋಚರನಾಗತಕ್ಕವ. ಮಾಡತಕ್ಕ ದ್ವಂದ್ವಕರ್ಮ ಗಳಿಗೆ ಸಾಕ್ಷೀಭೂತನಾಗಿರತಕ್ಕವನು. ಸರ್ವಜಿತ್–ಸರ್ವ ಚರಾಚರಗಳ ಜಯಿಸಿದವ, ಎಂದರೆ ಪರಾಜಿತನಾಗದವ, ಸರ್ವ–ಸೃಷ್ಟ್ಯಾದಿ ಅಷ್ಟಕರ್ತೃತ್ವ ಉಳ್ಳ ಶ್ರೀ ಪರಮಾತ್ಮ ನೆಂದು ತಾತ್ಪರ್ಯ.

**ತಾರತಮ್ಯಾರೋಹಣವ ಬರೆ ।**
**ದಾರು ಪಠಿಸುವರವರ ಲಕ್ಷ್ಮೀ ।**
**ನಾರಸಿಂಹ ಸಮಸ್ತ ದೇವಗಣಾಂತರಾತ್ಮಕನು ॥**

**ಪೂರೈಸುವ ಮನೋರಥಂಗಳ ।**
**ಕಾರುಣಿಕ ಕೈವಲ್ಯದಾಯಕ ।**
**ದೂರಗೈಪ ಸಮಸ್ತದುರಿತವ ವಿಗತಭಯಶೋಕ ॥ ೧೬ ॥**

ಈ ತಾರತಮ್ಯವ ಪಠಿಸೋಣದರಿಂದ ಫಲವನ್ನ ಹೇಳತಾರೆ.

ವ್ಯುತ್ಕ್ರಮವಾಗಿ ಅವರೋಹಣಕ್ರಮದಿಂದ ಹೇಳಿದ, ಹಾಗೂ, ಆರೋಹಣವ–ಆರೋಹಣಕ್ರಮದಿಂದ ಹೇಳಿದ, ತಾರತಮ್ಯ–ತಾರತಮ್ಯಾತ್ಮಕ ಈ ಸಂಧಿಯನ್ನ, ಆರು–ದಾರಾದರೇ, ಬರೆದು–ಲೇಖನಮಾಡಿ, ಪಠಿಸುವರು–ಆದರದಿಂದ ಪಠನಮಾಡುವರೋ, ಅವರ–ಅಂಥಾವರನ್ನ, ಲಕ್ಷ್ಮೀನಾರಸಿಂಹ–ಲಕ್ಷ್ಮೀಸಮೇತನಾದ ಶ್ರೀ ನೃಸಿಂಹದೇವರು, ಸಮಸ್ತದೇವಗಣಾಂತರಾತ್ಮಕನು–ಸಮಸ್ತರಾದ ದೇಹಗತ ತತ್ತ್ವದೇವತಾಗಣದ ಅಂತರ್ಗತದಲ್ಲಿ ತದಾತ್ಮಕನಾಗಿದ್ದು, ಇಂಥಾ ನೃಸಿಂಹದೇವರು, ಮನೋರಥಂಗಳ–ತತ್ತ್ವದೇವತೆಗಳ ದ್ವಾರಾ, ಅಧಿಕಾರಿಗಳ ಇಂದ್ರಿಯಜಯರೂಪವಾದ ಮನೋರಥಂಗಳ, ಪೂರೈಸುವ–ಪೂರ್ಣಮಾಡುವನು. ಕಾರುಣಿಕ–ಸಮಸ್ತಕ್ಕೂ ನಿಮಿತ್ತಕಾರಣನಾದ ಶ್ರೀ ಪರಮಾತ್ಮ, ಸಮಸ್ತದುರಿತವ ದೂರಗೈಪ–ಸಮಸ್ತ ಪಾಪಗಳ ನಾಶಮಾಡುವ, ವಿಗತಭಯಶೋಕ–ಇಂಥಾ ತನ್ನ ಭಕ್ತರನ್ನು ಹೋಗಲ್ಪಟ್ಟ ಭಯಶೋಕರನ್ನಾಗಿ ಮಾಡಿ, ಕೈವಲ್ಯದಾಯಕ–ಅವರಿಗೆ ತನ್ನ ಸಂದರ್ಶನ ಕೊಟ್ಟು ಮೋಕ್ಷಸ್ಥಾನವನ್ನು ಐದಿಸಿ ಸುಖಪಡಸತಾನೆಂತ ತಾತ್ಪರ್ಯ.

**ಪ್ರಣತಕಾಮದನಂಘ್ರಿ ಸಂದರು ।**
**ಶನದಪೇಕ್ಷೆಗಳುಳ್ಳವಗೆ ನಿ ।**
**ಚ್ಚಣಿಕೆಯೆನಿಪುದು ಜಡ ಮೊದಲು ಬ್ರಹ್ಮಾಂತ ತರತಮವು ॥**
**ಮನವಚನದಿಂ ಸ್ಮರಿಸುವರ ಭವ ।**
**ವನಧಿ ಶೋಷಿಸಿ ಪೋಗುವುದು ಕಾ ।**
**ರಣವೆನಿಸುವುದು ಜ್ಞಾನ ಭಕ್ತಿ ವಿರಕ್ತಿ ಸಂಪದಕೆ ॥ ೧೭ ॥**

ಇನ್ನೂ ಫಲಸ್ತುತಿಯನ್ನೇ ಹೇಳತಾರೆ.

ಪ್ರಣತಕಾಮದನ–ಅಷ್ಟಾಂಗಪೂರ್ವಕ ನಮಸ್ಕಾರ ಮಾಡುವ ಭಕ್ತರಿಗೆ ಇಷ್ಟಗಳ ಕೊಡುವಂಥಾ ಶ್ರೀ ಪರಮಾತ್ಮನ, ಅಂಘ್ರಿ–ಪಾದಗಳ, ಸಂದರುಶನದಪೇಕ್ಷೆಗಳುಳ್ಳವಗೆ–ಛಂದಾಗಿ ನೋಡಬೇಕು ಎಂತ ಇಚ್ಛಾವುಳ್ಳ ಅಧಿಕಾರಿಗಳಿಗೆ, ನಿಚ್ಚಣಿಕೆಯೆನಿಪುದು–ಮ್ಯಾಲೆಮ್ಯಾಲೆ ಏರಿಹೋಗತಕ್ಕ ನಿಚ್ಚಣಿಕೆಯಂತ ಕರಿಸೋದಾಗತದೆ. ದಾವುದು ಎಂದರೆ, ಜಡ ಮೊದಲು ಬ್ರಹ್ಮಾಂತ– ಶುದ್ಧ ಜಡ ಆರಂಭಮಾಡಿ ಗುಣಪೂರ್ಣನಾದ ಬ್ರಹ್ಮಶಬ್ದವಾಚ್ಯನಾದ ಶ್ರೀ ಪರಮಾತ್ಮನವರಿಗೂ ಹೇಳಿದಂಥಾ, ತರತಮವು–ತಾರತಮ್ಯ ಎಂತ ತಾತ್ಪರ್ಯ. ಮನವಚನದಿಂ ಸ್ಮರಿಸುವರ–ಈ ತಾರತಮ್ಯವಿಷಯವನ್ನ ಮನಸಾ ವಾಚಾ ಸ್ಮರಣೆ ಮಾಡುವಂಥಾ ಭಕ್ತರ, ಭವವನಧಿ ಶೋಷಿಸಿ ಪೋಗುವುದು – ಸಂಸಾರವೆಂಬ

ಸಮುದ್ರಗತ ದುಃಖವೆಂಬ ಜಲ, ಶೋಷಿಸಿ ಹೋಗೋದಾಗತದೆ. ಇನ್ನೂ, ಜ್ಞಾನ ಭಕ್ತಿ ವಿರಕ್ತಿ–ಜ್ಞಾನ, ಭಕ್ತಿ, ವೈರಾಗ್ಯವೆಂಬ, ಸಂಪದಕೆ–ಐಶ್ವರ್ಯಕ್ಕೆ, ಕಾರಣವೆನಿಸುವುದು–ಕಾರಣವೆಂತ ಕರಿಸೋದಾಗತದೆ ಎಂತ ತಾತ್ಪರ್ಯ.

**ಅನಳನೊಳು ಹೋಮಿಸುವ ಹರಿ ಚಂ ।**
**ದನವೆ ಮೊದಲಾದದರ ಸೂವಾ ।**
**ಸನೆಯು ಪ್ರತ್‌ಪ್ರತ್ಯೇಕ ತೋರ್ಪುದು ಎಲ್ಲ ಕಾಲದಲಿ ॥**
**ದನುಜ ಮಾನವ ದಿವಿಜರವರವ ।**
**ರನುಚಿತೋಚಿತಕರ್ಮ ವೃಜಿನಾ ।**
**ರ್ದನನು ವ್ಯಕ್ತಿಯ ಮಾಳ್ಪ ತ್ರಿಗುಣಾತೀತ ವಿಖ್ಯಾತ ॥ ೧೮ ॥**

ಶ್ರೀ ಪರಮಾತ್ಮನಿಗೆ ವೈಷಮ್ಯ ಇಲ್ಲೆಂದು ಹೇಳತಾರೆ.

ಅನಳನೊಳು–ಅಗ್ನಿಯಲ್ಲಿ, ಹೋಮಿಸುವ–ಹೋಮಮಾಡತಕ್ಕ ಹರಿಚಂದನವೆ–ಸುಗಂಧಯುಕ್ತವಾದ ದ್ರವ್ಯಗಳೇನು, ಮೊದಲಾದ–ತದನ್ಯಗಳಾದ, ದುರ್ಗಂಧಯುಕ್ತಗಳಾದ ದ್ರವ್ಯಗಳೇನು, ಇವೇ ಮೊದಲಾದ ದ್ರವ್ಯಗಳು ಯಾವತ್ತೂ ಅಗ್ನಿಯೊಳಗೆ ಹೋಮಿಸಿದರೆ, ಆ ಅಗ್ನಿ ಆದವನು, ಅದರ–ಆಯಾ ಪದಾರ್ಥಗತ ಅದರದರ, ಸೂವಾಸನೆಯು–ಸುವಾಸನೆಗಳೇನು, ದುರ್ವಾಸನೆಗಳೇನು, ಅಭಿವ್ಯಕ್ತಿ ಮಾಡತಾನೆ. ಅದರಿಂದ, ಪ್ರತ್ ಪ್ರತ್ಯೇಕ ತೋರ್ಪುದು–ಬಾಹ್ಯದಲ್ಲಿ ಪ್ರಜರಿಗೆ ಅದರದರ ವಾಸನಿ ಬ್ಯಾರೆ ಬ್ಯಾರೆ ತೋರೋದಾಗತದೆ. ಇದರೋಪಾದಿಯಲ್ಲಿ ಅಗ್ನಿಸದೃಶನಾದ ಪರಮಾತ್ಮ ಸುಗಂಧ ದುರ್ಗಂಧ ಸದೃಶ ಸ್ವಭಾವರಾದ ಜೀವರೆಂಬ ದ್ರವ್ಯಗಳು, ಎಲ್ಲ ಕಾಲದಲಿ–ಸದಾ ಸರ್ವ ಕಾಲದಲ್ಲಿ, ಜೀವಾಂತರ್ಗತನಾದ, ಅವಿಯೋಗನಾದ, ಅಗ್ನಿಸದೃಶನಾದ, ಬಿಂಬರೂಪಿಯಾದ ಪರಮಾತ್ಮ, ದನುಜ–ದುರ್ಗಂಧೋಪೇತವಾದ ದೋಷಗುಣವುಳ್ಳ ಅಸುರರು, ತಮೋಯೋಗ್ಯರು, ಮಾನವ–ಸುಗಂಧ ದುರ್ಗಂಧೋಪೇತರಾದ ನಿತ್ಯಸಂಸಾರಿಗಳು, ದಿವಿಜರ – ಸುಗಂಧೋಪೇತರಾದ ದೇವತೆಗಳ, ಮುಕ್ತಿಯೋಗ್ಯರ, ಅವರವರನುಚಿತೋಚಿತಕರ್ಮ–ಅವರವರ ಸ್ವರೂಪಸ್ವಭಾವಕ್ಕೆ ಅನುಸರಿಸಿದ ಅನುಚಿತೋಚಿತ ಕರ್ಮರೂಪವಾದ ಗಂಧಗಳ, ವೃಜಿನಾರ್ದನನು–ಬಾಹ್ಯಪಾಪಗಳ ಪರಿಹರಿಸತಕ್ಕ ಪರಮಾತ್ಮನು, ವ್ಯಕ್ತಿಯ ಮಾಳ್ಪ–ಇದ್ದದ್ದರನ್ನ ವ್ಯಕ್ತಮಾಡತಾನೆ. ತ್ರಿಗುಣಾತೀತ–ಶ್ರೀ ಪರಮಾತ್ಮನಾದ ತಾನು ಪ್ರಾಕೃತಗುಣತ್ರಯಗಳಿಂದ ಅತೀತನಾದವನು, ವಿಖ್ಯಾತ–ಸರ್ವೋತ್ತಮನೆಂದು ವಿಶೇಷಾಕಾರನಾಗಿ ಹೊಗಳಿಸಿಕೊಳ್ಳಲ್ಪಟ್ಟವನು. ಅಗ್ನಿಗೆ ವೈಷಮ್ಯ ದಾವರೀತಿಯಿಂದ ಇಲ್ಲವೋ ತದ್ವತ್. ಪರಮಾತ್ಮ ವೈಷಮ್ಯದಿಂದ ದೂರನಾದವನು ಎಂತ ತಾತ್ಪರ್ಯ.

**ಭಕ್ತವತ್ಸಲ ಭಾಗ್ಯಪುರುಷ ವಿ ।**
**ವಿಕ್ತ ವಿಶ್ವಾಧಾರ ಸರ್ವೋ ।**
**ದ್ರಿಕ್ತ ದೋಷವಿದೂರ ದುರ್ಗಮ ದುರ್ವಿಭಾವ್ಯ ಸ್ವಹಿ ॥**

**ಶಕ್ತ ಶಾಶ್ವತ ಸಕಲ ವೇದೈ ।**
**ಕೋಕ್ತ ಮಾನದ ಮಾನ್ಯ ಮಾಧವ ।**
**ಸೂಕ್ತ ಸೂಕ್ಷ್ಮ ಸ್ಥೂಲ ತ್ರಿಜಗನ್ನಾಥವಿಠ್ಠಲನು ॥ ೧೯ ॥**

ಶ್ರೀ ಪರಮಾತ್ಮನ ಮಹಿಮೆ ಹೇಳುತಾರೆ.

ಭಕ್ತವತ್ಸಲ–ಸ್ವರೂಪಸ್ವಭಾವದಲ್ಲಿ ಭಕ್ತಿ ಉಳ್ಳವರಲ್ಲಿ ಕೇವಲ ಆದರವುಳ್ಳವನು, ಭಾಗ್ಯ–ಪೂರ್ಣ ಐಶ್ವರ್ಯೋಪೇತನಾದವನು, ಪುರುಷ–ಕ್ಷರಾಕ್ಷರ ಪುರುಷರುಗಳಿಗೆ ಶ್ರೇಷ್ಠನಾದವನು, ವಿವಿಕ್ತ–ನಿರ್ಲಿಪ್ತ, ಸ್ವರಮಣನಾದವನು, ವಿಶ್ವಾಧಾರ–ಚರಾಚರ ಜಗತ್ತಿಗೆ ಆಧಾರನಾದವನು, ಸರ್ವೋದ್ರಿಕ್ತ–ಸರ್ವಶ್ರೇಷ್ಠನಾದವನು, ದೋಷವಿದೂರ–ನಿರ್ದೋಷನಾದವನು, ದುರ್ಗಮ–ನಾಕಲ್ಯೇನ ತಿಳಕೊಂಬೋದಕ್ಕೆ ಸಾಧ್ಯನಲ್ಲದವನು, ದುರ್ವಿಭಾವ್ಯ–ಇಂಥಾವನೆಂದು ಭಾವನಾ ಮಾಡೋದಕ್ಕೆ ಅಶಕ್ಯನಾದವನು, ಸ್ವಹಿ–ತನ್ನಿಂದ ತಾನೇ ಪ್ರಸಿದ್ಧನಾದವನು, ಶಕ್ತ–ಸರ್ವಶಕ್ತಿಯುಳ್ಳವನು, ಶಾಶ್ವತ–ನಿತ್ಯನಾದವನು, ಸಕಲ ವೇದೈಕೋಕ್ತ–ಸರ್ವ ವೇದಗಳಿಂದ ಸರ್ವೋತ್ತಮ ಇವನೊಬ್ಬನೇ ಎಂದು ಹೇಳಿಸಿಕೊಳ್ಳಲ್ಪಟ್ಟವನು, ಮಾನದ–ತನ್ನ ನಂಬಿದವರಿಗೆ ದೇವತೆಗಳಿಂದ ಮರ್ಯಾದಾ ಕೊಡಿಸತಕ್ಕವನು, ಮಾನ್ಯ–ಭಕ್ತರಿಂದ ಪೂಜಿತನಾದವನು, ಮಾಧವ–ಶ್ರೀ ಲಕ್ಷ್ಮೀದೇವೇರಿಗೆ ಪತಿಯಾದವನು, ಸೂಕ್ತ–ಪುರುಷಸೂಕ್ತಪ್ರತಿಪಾದ್ಯನಾದವನು, ಸೂಕ್ಷ್ಮ ಸ್ಥೂಲ–ಅತಿ ಸೂಕ್ಷ್ಮವಾಗಿ ಇರತಕ್ಕ ಜೀವನಲ್ಲಿ, ಅಂತರ್ಯಾಮಿಯಾಗಿ ಸೂಕ್ಷ್ಮದಿಂದ ಇರತಕ್ಕವನು. ಬ್ರಹ್ಮಾಂಡಾಕಾರನಾಗಿ ದೊಡ್ಡ ಆಕಾರದಿಂದ ಸ್ಥೂಲವಾಗಿರತಕ್ಕವನು, ಬೃಹದಾಕಾರನಾಗಿ, ತ್ರಿಜಗನ್ನಾಥವಿಠ್ಠಲನು–ತ್ರಿ ಶಬ್ದದಿಂದ ಹದಿನಾಲ್ಕು ಲೋಕವೂ ಗ್ರಾಹ್ಯ. ಈ ಹದಿನಾಲ್ಕು ಲೋಕಕ್ಕೆ ಸ್ವಾಮಿಯಾದ ವಿಠ್ಠಲನಾಮಕನಾದ ಶ್ರೀ ಪರಮಾತ್ಮನು ಎಂತ ತಾತ್ಪರ್ಯ.

**ಶ್ರೀಮತ್ಸತ್ಯಪರಾಯಣತೀರ್ಥಕರಕಮಲಸಂಜಾತಶ್ರೀಮತ್ಸಂಕರ್ಷಣ-ತೀರ್ಥವಿರಚಿತಾಯಾಂ ಶ್ರೀಮದ್ಧರಿಕಥಾಮೃತಸಾರಕನ್ನಡಭಾಷಾ-ಟೀಕಾಯಾಂ ಆರೋಹಣತಾರತಮ್ಯಸಂಧಿವ್ಯಾಖ್ಯಾನಂ ಸಂಪೂರ್ಣಂ**

॥ ಶ್ರೀ ಕೃಷ್ಣಾರ್ಪಣಮಸ್ತು ॥